# ಓದುಗರಲ್ಲಿ

ಇದು ನನ್ನ ಮೊದಲ ಪ್ರಯತ್ನ; ನನ್ನ ಮೊದಲ ಕೃತಿ. ಕೂಸು ಮೊದಲ ಅಡಿಯಿಡುವಾಗ ತಪ್ಪಡಿಯಿಟ್ಟು ಜೋಲಿ ಹೋಗುವುದುಂಟು. ಆಗ ತಾಯಿ ಯಾದವಳು ಆಸರೆಯಾಗಿ ಬಂದು, ಜೋಲಿ ಹಿಡಿದು ಮುಂದಕ್ಕೆ ನಡೆಯಿಸುವು ದುಂಟು. ಹಾಗೆ ಸಹೃದಯ ರಸಿಕರು ಈ ಕೃತಿ ನನ್ನ ಮೊದಲ ಹೆಜ್ಜೆ ಎನ್ನುವ ದೃಷ್ಟಿಯಿಂದಲೇ ತೋರಿಬರಬಹುದಾದ ನ್ಯೂನ್ಯಾತಿರೇಕಗಳನ್ನು ಅನುಕಂಪ ಭಾವದಿಂದ ಎತ್ತಿ ತೋರಿಸಿ ಸಾಹಿತ್ಯ-ಶಿಶುವಾದ ನನ್ನನ್ನು ಮುಂದೆ ನಡೆಯಿಸ ಬೇಕೆಂದು ಪ್ರಥಮತಃ ಬೇಡಿಕೊಳ್ಳುತ್ತೇನೆ. ಈ ಕಥೆಯನ್ನು ಸಮಗ್ರ ಓದಿದ ರಸಿಕರು ಪರವಾಗಿಲ್ಲ ಎಂದರೆ ಸಾಕು, ನನ್ನ ಶ್ರಮ ಸಫಲವಾಲಯಿತೆಂದು ಭಾವಿಸುವೆ.

ಹೆಂಗುಸಾದ ಸರೂ ತನ್ನ ಕೈಹಿಡಿದ ಪತಿಗಾಗಿ ಎಂತಹ ತ್ಯಾಗ, ಎಂತಹ ಬಲಿದಾನವನ್ನು ಮಾಡಲು ಸಿದ್ಧಳಾಗುತ್ತಾಳೆ; ಪತಿಯಲ್ಲಿ ತನ್ನ ಆತ್ಮಾರ್ಪಣೆ ಮಾಡಿಕೊಳ್ಳುವುದರಲ್ಲಿ ಅದೆಂತಹ ಸುಖ, ಸಂತೋಷ, ಮನಶ್ಶಾಂತಿ ಪಡೆಯು ತ್ತಾಳೆ; ತನಗೆ ತಿಳಿಯದೆಯೇ ಆದರ್ಶವನ್ನು ಜೀವನದಲ್ಲಿ ತಂದು ಹೇಗೆ ಬೆರೆಸು ತ್ತಾಳೆ, ಹೇಗೆ ಸಾಧಿಸುತ್ತಾಳೆ, ಕೊನೆಯಲ್ಲಿ ಹೇಗೆ ಸಿದ್ಧಿಯನ್ನು ಪಡೆಯು ತ್ತಾಳೆ; ಎಲ್ಲದಕ್ಕೂ ತಳಪಾಯವಾಗಿರುವ ಆತ್ಮವಿಶ್ವಾಸದಿಂದಲೇ ನಿರ್ಬಲನಾದ ತನ್ನ ಪತಿ ಮಾಧವನನ್ನು ಹೇಗೆ ಮಾನವನನ್ನಾಗಿ ಮಾರ್ಪಡಿಸುತ್ತಾಳೆ ಎನು ವುದನ್ನೆ ಯಥಾವತ್ತಾಗಿ, ಯಥಾವತ್ತಾದ ಜೀವನಚಿತ್ರನಿರೂಪಣದ ಶೈಲಿ ಯಿಂದಲೇ ತೋರಿಸಲು ಇಲ್ಲಿ ಹವಣಿಸಿದ್ದೇನೆ.

ಈಗಿನ ಕಾಲದ 'ಆಧುನಿಕ' ಯುವತಿಯರಿಗೆ ನನ್ನ ಸರೂ ಮಾಡಿದುದು ಸರಿಯೆನಿಸಲಿಕ್ಕೂ ಇಲ್ಲ. 'ನಾವು ಸರಿಸಮಾನಸ್ಕರು, ಗಂಡಸರಿಗಿಂತ ಯಾವುದ ರಲ್ಲೂ ಹಿಂದುಳಿದಿಲ್ಲ' ಎನ್ನುವ ಮನೋಭಾವನೆಯನಿಟ್ಟುಕೊಂಡ ಅವರಿಗೆ 'ಪತಿ' ಎಂದರೆ 'ದೇವರು' ಎಂದು ತಿಳಿದು, ಅವನ ಎಲ್ಲಾ ಅಭಿಲಾಷೆಗಳನ್ನು ನೆರವೇರಿಸುವುದಕ್ಕೆ ಕಂಕಣಬದ್ಧಳಾಗಿ ನಿಂತಿರುವ ದಾಸಿಯಂತೆ ಸರೂ ನಡೆ ಯುವುದು ಬಹುಶಃ ಅವರಿಗೆ ಹಿಡಿಯಲಿಕ್ಕಿಲ್ಲೆಂದು, ಅವರ ಕಾಲದವಳೇ ಆದ ನನ್ನ ಎಣಿಕೆಯಿದೆ. ನನ್ನ ಎಣಿಕೆ ತಪ್ಪಿದ್ದರೂ ಇರಬಹುದು ಅವರ ದೃಷ್ಟಿ ಯಿಂದ. ಪೂರ್ವಾಚಾರಪ್ರತಿಷ್ಠಿತದೃಷ್ಟಿಯಿದ್ದವಳು ಎಂದು ನನ್ನನ್ನು ಮೂದ ಲಿಸಲೂಬಹುದು. ನಾನು ಕಂಡದ್ದೇ ಸತ್ಯ, ಇನ್ನೊಬ್ಬರದು ಅಸತ್ಯ ಎನ್ನುವ 'ಅಹಂ' ನನಗೇನೂ ಇಲ್ಲ. ಕಾಲ ಸತ್ಯದ ಎಲ್ಲ ಮುಖಗಳಿಗೂ ಕನ್ನಡಿಯಾಗಿದೆ.

ಯಾವ ಕಾಲದಲ್ಲಿ ಯಾರಿಗೆ ಯಾವ ಸತ್ಯದ ಮುಖ ಕಾಣುತ್ತದೋ ಯಾರು ಬಲ್ಲರು? ಅದು ಏನೇ ಇರಲಿ, ಆತ್ಮವಿಶ್ವಾಸ ಒಂದಿದ್ದರೆ ಹೆಂಗುಸು ಯಾವುದನ್ನು ಬೇಕಾದರೂ ಮಾಡಬಲ್ಲಳು ಎನ್ನುವ ನಂಬಿಕೆ ನನಗಿದೆ. ಸರೂವಿನಂತಹ ಪತ್ನಿ, ಸರೂವಿನಂತಹ ಅತ್ತೆ, ವಿಜಯ-ಹೇಮಾರಂತಹ ಮಗ-ಸೊಸೆಯರು ಇರುವ ಮನೆ ಸುಖ-ಸ್ವರ್ಗದ ನಂದನವಾಗುತ್ತದೆ. ಅದೇ ಜಾನಕೀಬಾಯಿಯಂತಹ ಅತ್ತೆ, ಮಾಧವನಂತಹ ಮಗನಾದರೆ ಆ ಮನೆ ಸಜೀವ ನರಕವಾಗುತ್ತದೆ. ಆ ಚಿತ್ರ, ಈ ಚಿತ್ರ ಹತ್ತಿರ ಹತ್ತಿರ ಇಟ್ಟು ತೋರಿಸುವುದೇ ಈ ಪ್ರಪಂಚದ ರೀತಿ ಯಾಗಿರಬೇಕು. ಸರೂವಿನ ಕರುಣಕಥೆ ಓದಿ, ಅವಳಿಗಾಗಿ ನೀವು ಒಮ್ಮೆ ಯಾದರೂ ಮರುಕದ, ಅನುಕಂಪದ, ಕರುಣೆಯ ಒಂದು ಹನಿ ಮಿಡಿದರೆ ಸಾಕು, ನಾನು ಧನ್ಯೆ.

ಏನೋ ತುಂಬಿದಂತೆನಿಸುತ್ತದೆ ಬರೆಯಲು ಕುಳಿತಾಗ. ಇನ್ನೇನು ಎಲ್ಲ ವನ್ನೂ ಬರೆದುಬಿಡುತ್ತೇನೆ ಎನ್ನಿಸುತ್ತದೆ ಯೋಚಿಸಿದಾಗ. ಆದರೆ ಬರೆಯುವು ದಕ್ಕೆ ಕಾಗದದ ಮೇಲೆ ಕೈಯಿಟ್ಟಾಗ 'ಸ್ವಿಚ್ ಆಫ್'(Switch off) ಮಾಡಿದ ಯಂತ್ರದಂತೆ ನಿಂತೇಬಿಡುತ್ತದೆ ಕೈ ಅಲ್ಲಿಯೇ. ಒಂದು ಅಕ್ಷರವೂ ಮೂಡುವು ದಿಲ್ಲ. ತುಂಬಿದ ಹೃದಯ ಹಾಗೆಯೇ ತುಂಬಿಯೇ ಉಳಿಯುತ್ತದೆ. ಏನು ಮಾಡು ವುದಕ್ಕೂ ತೋಚುವುದಿಲ್ಲ. ಶ್ರೀ. ಜಿ.ಬಿ. ಜೋಶಿಯವರು, ಒಂದೆರಡು ಮಾತು ಗ್ರಂಥಕ್ಕೆ ಮೊದಲು ಬರೆದು ಕೊಡಲು ಹೇಳಿದ್ದರಿಂದ, ಬರೆದು ಕೊಡಬೇಕು ಎನ್ನುವ ಶಿಷ್ಟಸಂಪ್ರದಾಯಕ್ಕೆಸೋತು, ಬರೆಯಲೇಬೇಕೆಂಬ ಹಟದಿಂದ ಹಾಗೂ ಹೀಗೂ ಪರದಾಡಿ ಪರಚಾಡಿ, ತೋಚಿದ್ದನ್ನು ಬರೆದಿದ್ದೇನೆ. ಅದು ಎಷ್ಟರ ಮಟ್ಟಿಗೆ ಸಫಲವಾಗಿದೆಯೋ ಏನೋ ನನಗೇ ನಂಬಿಕೆಯಿಲ್ಲ. ಅದರಲ್ಲಿ ಕೊರತೆ ಬಿದ್ದುದನ್ನೆಲ್ಲ ರಸಿಕರಾದ ಓದುಗರೇ ತುಂಬಿಕೊಳ್ಳಬೇಕಾಗಿ ಬೇಡುತ್ತೇನೆ.

ನನ್ನ ಈ ಮೊದಲ ಬರೆವಣಿಗೆಯನ್ನು ತಿದ್ದಿ ಸರಿಪಡಿಸಿ, ಈ ರೂಪಕ್ಕೆ ತಂದು ಪ್ರಕಟಿಸಿ ಬೆಳಕಿಗೆ ತಂದ ಕಾರ್ಯ ಶ್ರೀ. ಜಿ. ಬಿ. ಜೋಶಿಯವರದ್ದು. ಈ ನೆರವಿಗಾಗಿ ಅವರಿಗೆ ನಾನು ಚಿರಋಣಿಯಾಗಿದ್ದೇನೆ.

ಬೆಂಗಳೂರು

೨೬-೧-೧೯೫೫. — ಚಂಪಕಮಾಲಾ

# ಮುನ್ನುಡಿ

ಕಾದಂಬರಿ, ಸಾಹಿತ್ಯದ ಅತ್ಯಂತ ಲೋಕಪ್ರಿಯ ರೂಪಗಳಲ್ಲೊಂದಾಗಿದೆ. ಅದರ ಫಲವಾಗಿ ಕನ್ನಡದಲ್ಲಿ ಇತ್ತೀಚೆಗೆ ಕಾದಂಬರಿಗಳ ಅತಿಪ್ರಸರಣವಾಗಿ ಅವುಗಳ ಬೆಲೆಯೂ ಇಳಿಮುಖವಾಗತೊಡಗಿದೆ. ತನಗಿರುವ ಲೋಕಪ್ರಿಯತೆ ಯನ್ನು ಕಾಯ್ದುಕೊಳ್ಳಲು ಅದು ಹಲವು ವೇಷಗಳನ್ನು ತೊಡಲೇಬೇಕಾಗಿದೆ. ಕತೆ ಹೇಳುವ ರೀತಿ, ಭಾಷೆ, ಶೈಲಿ ಇವೆಲ್ಲವುಗಳು ಬಹು ವೇಗದಿಂದ ಮಾರ್ಪಾಡು ಹೊಂದುತ್ತಿವೆ. ಇತ್ತೀಚಿನ ಹತ್ತಾರು ವರ್ಷಗಳಲ್ಲಿ ಕಾದಂಬರಿಯ ಬಾಹ್ಯ ಸ್ವರೂಪ ಸಾಕಷ್ಟು ಬದಲಾವಣೆ ಹೊಂದಿದೆ. ಆದರೆ ಈ ಬದಲಾವಣೆಯ ಹಿಂದೆ ತರ್ಕಶುದ್ಧತೆಯಾಗಲಿ, ಸಂಪ್ರದಾಯ ನಿರ್ಮಾಣದ ಲವಲವಿಕೆಯಾಗಲಿ ಕಂಡುಬರುವದಿಲ್ಲ. ಜನರ ಅಭಿರುಚಿಗೆ ತಕ್ಕಂತೆ ಕಾದಂಬರಿಗಳನ್ನು ಕೊಡ ಹೋಗಿ, ಸಾಹಿತಿ ಜನತೆಯ ಅಭಿರುಚಿಯನ್ನು ಚಂಚಲಗೊಳಿಸಿದ್ದಾನೆ. ಜನರ ಕುತೂಹಲವನ್ನು ತಣಿಸಲೆಂದು ಬರೆದ ಸಾಹಿತ್ಯ ಈಗ ಅವರ ಕುತೂಹಲವನ್ನೇ ಹಾಳುಮಾಡಿದೆ. ಇಂಥ ಸಮಯದಲ್ಲಿ ಸರಳವಾದ ಒಂದು ಕೃತಿ ಮನಸ್ಸನ್ನು ಅರಳಿಸಬಲ್ಲದು.

ಗೃಹದೇವತೆ ಅಂಥ ಒಂದು ಸರಳವಾದ ಕತೆ. ಇದರಲ್ಲಿ ವಿಶೇಷ ಆಕರ್ಷ ಕತೆಯಾಗಲಿ, ನಾವೀನ್ಯವಾಗಲಿ ಇಲ್ಲ. ಹೆಣ್ಣುಬಾಳಿನ ಸುಖ-ದುಃಖಗಳ ಕತೆ ಯೊಂದರ ವಾಸ್ತವಿಕ ನಿರೂಪಣೆ ಇಲ್ಲಿ ಇದೆ. ಈ ಕತೆಗೆ ಕೇಂದ್ರ ವ್ಯಕ್ತಿ ಸರೂ. ಗಂಡನನ್ನೇ ದೇವರೆಂದು ನಂಬಿ, ಆ ಗಂಡ ವಿವೇಕರಹಿತನಾಗಿ ಬೇರೊಬ್ಬ ಳನ್ನು ಮೋಹಿಸಿ, ಮತಾಂತರ ಹೊಂದಿ ಬಾಳನ್ನೆಲ್ಲ ವಿಷಮಯವನ್ನಾಗಿ ಮಾಡಿ ದರೂ, ತನ್ನ ಶ್ರದ್ಧೆ-ವಿವೇಕಗಳಲ್ಲಿಯೇ ನಂಬುಗೆಯಿಟ್ಟು ಬಾಳನ್ನು ನಡೆಸಿದ ಸಂಗತಿಯೇ ಇಲ್ಲಿಯ ಮುಖ್ಯ ಕಥಾವಸ್ತು. ಕತೆಯ ಹಿನ್ನೆಲೆ, ಪರಿಸರ, ಬೆಳ ವಣಿಗೆಗಳೇ ಇಲ್ಲಿ ಮುಖ್ಯವಾದ್ದರಿಂದ, ಪಾತ್ರಸೃಷ್ಟಿಯಲ್ಲಾಗಲಿ, ಸನ್ನಿವೇಶ ರಚನೆಯಲ್ಲಾಗಲಿ ಚಮತ್ಕಾರ ಅಷ್ಟೊಂದು ಕಂಡುಬರುವದಿಲ್ಲ. ಸರೂನ ಪಾತ್ರವೇ ಇಲ್ಲಿ ಪ್ರಧಾನತೆಯನ್ನು ಪಡೆದು ನಮ್ಮ ಮನಸ್ಸನ್ನು ತುಂಬುತ್ತದೆ. ಸರೂ ಸಂಪ್ರದಾಯದಲ್ಲಿ ಬೆಳೆದು ಬಂದ ಹೆಣ್ಣು. ಬಾಲ್ಯದಲ್ಲಿ ತಾಯಿ ಗಂಡ

ನನ್ನೇ ದೇವರೆಂದು ಆರಾಧಿಸು ಎಂದು ಹೇಳಿದ ಮಾತು ಕೊನೆಯ ವರೆಗೂ ಅವಳ ಜೀವನವನ್ನು ರೂಪಿಸುತ್ತದೆ. ಅತ್ತೆಯ ತೊಡೆಯಲ್ಲಿ ಮಲಗಿ ಅವಳು ಕೇಳಿದ ಕತೆ ಸಾವಿತ್ರಿಯದು. ಅವಳು ನಂಬಿದ ಸಂಪ್ರದಾಯ, ಹುಟ್ಟಿದ ಮನೆ ಎರಡೂ ಅವಳಿಗೆ ದುಃಖವನ್ನೆದುರಿಸಲು ಸಹನೆಯನ್ನು ತಂದು ಕೊಟ್ಟಿವೆ. ಚಿಕ್ಕಂದಿನಲ್ಲಿಯೇ ಗಂಡನನ್ನು ಕಳೆದುಕೊಂಡ ರಂಗಮ್ಮನ ವ್ಯರ್ಥ ಜೀವನ, ತಾಯಿಯ ಸಾವು, ಅವಿವೇಕಿಯಾದ ಗಂಡನ ಕೈಯಲ್ಲಿ ಸತ್ಯ ಮರಣವನ್ನನು ಭವಿಸುವ ಕಮಲಳ ದಾರುಣ ವ್ಯಥೆ ಇವು ಹುಡುಗಿಯಾಗಿದ್ದಾಗಲೇ ಸರೂಳ ಮೇಲೆ ಮರೆಯಲಾರದ ಪರಿಣಾಮವನ್ನುಂಟುಮಾಡಿವೆ. ಅವಳಿಗೆ ಗೊತ್ತಿಲ್ಲ ದೆಯೇ ದೈವ, ಅವಳ ಜೀವನದ ರೂಪರೇಷೆಗಳನ್ನು ನಿರ್ಣಯಿಸಿದೆ. ಅವಳ ಮನಸ್ಸಿನಲ್ಲಿ ಯಾವ ಬಯಕೆಗಳ ಸೆಳೆತಕ್ಕೂ ಎಡೆಯಿಲ್ಲ. ಇದ್ದ ಒಂದೆರಡು ಆಸೆ-ಆಕಾಂಕ್ಷೆಗಳೂ ಅತ್ತೆಯ ಮನೆಯ ತಾಪದಿಂದ ಸುಟ್ಟು ಹೋಗುತ್ತವೆ. ಈ ನಿರ್ಲಿಪ್ತತೆ ಇರುವಾಗಲೇ ಸರೂ ಹೆಣ್ಣಿಗೆ ಅಸಾಧ್ಯವಾದ ತ್ಯಾಗಕ್ಕೆ ಸಿದ್ಧಳಾಗು ತ್ತಾಳೆ. ಗಂಡ ಮಾಧೂ ಲೂಸಿಯೊಂದಿಗೆ ಮದುವೆಯಾದಾಗ ಬೇಡವೆನ್ನುವ ದಿಲ್ಲ; ಮನೆಗೆ ಕರೆತಂದರೂ ಸುಮ್ಮನಿರುತ್ತಾಳೆ. ಮುಂದೆ ಮಗನ ಕಲ್ಯಾಣ ಕ್ಕಾಗಿ ಆ ಮನೆಯನ್ನೇ ಬಿಡುತ್ತಾಳೆ. ಪಶ್ಚಾತ್ತಾಪದಗ್ಧನಾದ ಮಾಧೂ ತಿರುಗಿ ಅವಳೆಡೆಗೆ ಬಂದರೂ ಅವಳಲ್ಲಿ ಯಾವ ರೀತಿಯ ಪ್ರತೀಕಾರಭಾವನೆಯೂ ಇಲ್ಲ. ಹೀಗೆ ಒಂದು ಉದಾತ್ತ ಜೀವನದ ವಿವಿಧ ವಿವರಗಳ ನಿರೂಪಣೆ ಈ ಕತೆ ಯಲ್ಲಿದೆ. ಕತೆ ಹೇಳುವ ರೀತಿ ನೇರವಾಗಿದೆ, ಶೈಲಿ ಸರಳವಾಗಿದೆ. ಪಾತ್ರ ಸೃಷ್ಟಿ ನಿಜ ಜೀವನದಿಂದಲೇ ಎತ್ತಿಕೊಂಡಷ್ಟು ಸಹಜವಾಗಿದೆ. ಸನ್ನಿವೇಶ ರಚನೆಯಲ್ಲಿ ವಿಶೇಷ ಚಮತ್ಕೃತಿ ಇಲ್ಲದಿದ್ದರೂ ಒಂದೆರಡು ಕಡೆ, ಭಾವನೆಯ ಉತ್ಕಟತೆಯಿಂದ ಅವು ಚಿತ್ತವೇಧಕವಾಗಿವೆ. ಲೂಸಿ ಮಾಧೂ ಮದುವೆ ಯಾದಾಗ, ಸರೂ ಅವರಿಗೆ ಉಡುಗೊರೆ ಕೊಟ್ಟು ಮರಳುವಾಗ ಎಚ್ಚರದಪ್ಪಿ ಬೀಳುವ ಸನ್ನಿವೇಶ ನಿಜವಾಗಿಯೂ ಹೃದಯವನ್ನು ಕಲಕುತ್ತದೆ. ಒಟ್ಟಿನಲ್ಲಿ ಇದು ಹೊಸ ಬಗೆಯ ಕ್ರಾಂತಿಕಾರಕ ಕಾದಂಬರಿಯಾಗದಿದ್ದರೂ, ಜೀವನದ ಅನುಭವವನ್ನೂ, ಸುಖ-ದುಃಖಗಳನ್ನೂ, ಋಜುಮಾರ್ಗದ ಶುಚಿಯನ್ನೂ, ಅಂತಃ ಕರಣದ ಉತ್ಕಟತೆಯನ್ನೂ ಪ್ರಾಮಾಣಿಕವಾಗಿ ಚಿತ್ರಿಸುವ ಒಂದು ಉತ್ತಮ ಕೃತಿ ಯಾಗಿದೆ.

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಲೇಖಕಿಯರು ಇನ್ನೂ ಅನುಮಾನದ ಹೆಜ್ಜೆ

ಯನ್ನಿಡುತ್ತಿದ್ದಾರೆ. ಬೇಕಿಗೆ ಬಂದ ಕೆಲವರಲ್ಲಿ ಸಣ್ಣಕತೆಗಳನ್ನು ಬರೆದವರೇ ಹೆಚ್ಚು. ಇತ್ತೀಚಿನ ಎರಡು ಮೂರು ವರ್ಷಗಳಲ್ಲಿಯೇ ಕಾದಂಬರಿಯ ಮೇಲೆ ನಾವು ಲೇಖಕಿಯರ ಹೆಸರನ್ನು ಕಾಣುತ್ತಿದ್ದೇವೆ. ಸಲ್ಲದ ವಾದ-ವಿವಾದಗಳೂ, ಪ್ರಗತಿಯ ಹುಚ್ಚು ಆವೇಶ ಇವು ಸಾಹಿತ್ಯವನ್ನು ಅವಿವೇಕದ ದಾರಿಯಲ್ಲಿ ಎಳೆಯುತ್ತಿರುವಾಗ, ಜೀವನದಲ್ಲಿ ಹೇಗೋ ಸಾಹಿತ್ಯದಲ್ಲಿಯೂ ಹಾಗೆಯೇ ಹೆಣ್ಣು ಸಂಪ್ರದಾಯವನ್ನು ಕಾಪಾಡಿ ಸಾಹಿತ್ಯವನ್ನು ಶುಚಿಗೊಳಿಸಿದರೆ ಮಹತ್ತರ ಕಾರ್ಯವಾಗುತ್ತದೆ. ಶ್ರೀಮತಿ ಬಿ. ವ್ಹಿ. ಚಂಪಕಮಾಲಾ ಇವರ ಈ ಕಾದಂಬರಿ, ಅವರ ಪ್ರಥಮ ಕೃತಿಯಾದರೂ, ಕನ್ನಡ ಕಾದಂಬರಿಗಳ ಇತಿಹಾಸದಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನ ಮೀಸಲಾಗಿದೆ. ಈ ದೃಷ್ಟಿಯಿಂದ ಅವರು ನಿಜವಾಗಿಯೂ ಅಭಿನಂದನಾರ್ಹರು.

ಬೆಳಗಾವಿ

—**ಕೆ. ಡಿ. ಕುರ್ತಕೋಟಿ**

# ಪ್ರಕಾಶನಕ್ಕೆ ಮೊದಲು

ಶನಿವಾರ. ೧೭-೧೦-೧೯೫೩. ಮುಂಜಾನೆಯ ಪೋಸ್ಟಿನಲ್ಲಿ ನಾಲ್ಕಾರು ಪತ್ರಗಳ ಜೊತೆಗೆ ಇದೂ ಒಂದು ಪತ್ರ ಇತ್ತು:

ಮೈಸೂರು
೧೫ ೧೦-೧೯೫೩

ಬಹುಮಾನಿತರೆ,

ಅಪರಿಚಿತಳಾದ ನಾನು ನಿಮಗೆ ಇದೇ ಮೊದಲು ಕಾಗದ ಬರೆಯುತ್ತಿರುವುದು. ನಿಮ್ಮ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಆಸಕ್ತಿಯಿಂದ ಓದುವ ವಾಚಕರಲ್ಲಿ ನಾನೋರ್ವಳು. ನನಗೆ ಬಾಲ್ಯದಿಂದಲೂ ಕಥೆ, ಕವನಗಳೆಂದರೆ ಬಹಳ ಆಸಕ್ತಿ. ನಾನೀಗ ಬಹಳ ದಿನಗಳಿಂದ ಒಂದು ಕಾದಂಬರಿಯನ್ನು ಬರೆಯಬೇಕೆಂದು ಪ್ರಯತ್ನಪಟ್ಟು ಈಗ ತಾನೆ ಅದನ್ನು ಬರೆದು ಮುಗಿಸಿದ್ದೇನೆ. ನನ್ನ ಮೊದಲ ಕೃತಿಯಾದ ಆ ಕಾದಂಬರಿಯನ್ನು ನಿಮ್ಮ ಗ್ರಂಥಮಾಲೆಯ ಕುಸುಮಗಳಲ್ಲೊಂದನ್ನಾಗಿ ಸ್ವೀಕರಿಸಿ ಪ್ರಕಟಿಸಬಹುದೇ? ಕಾದಂಬರಿಯ ಹಸ್ತಪ್ರತಿಯನ್ನು ಅಂಚೆಯ ಮೂಲಕ ನಿಮ್ಮ ಅವಗಾಹನೆಗೆ ಕಳುಹಿಸಲೇ? ಯಾವುದಕ್ಕೂ ದಯವಿಟ್ಟು ಉತ್ತರ ಬರೆಯಬೇಕಾಗಿ ಬೇಡುತ್ತೇನೆ.

ನಿಮ್ಮ ವಿಶ್ವಾಸದ
—ಬಿ. ವಿ. ಚಂಪಕಮಾಲಾ.

“ಜೇಲಿನಲ್ಲಿ ‘ಸಿ’ಕ್ಲಾಸಿನ ಕೈದಿಯಾಗಿ ‘ಖಡಿ’ ಒಡೆಯುವ ಕೆಲಸ ಮಾಡಬಹುದು, ಈ ಹಸ್ತಪ್ರತಿಗಳನ್ನು ಓದಲಾಸಲ್ಲ.” ಎಂದುಕೊಂಡಿತು ನನ್ನ ಮನಸ್ಸು. ಇದಕ್ಕೆ ಕಾರಣ, ಇಪ್ಪತ್ತುವರ್ಷ ಸತತವಾಗಿ ‘ಬ್ರಹ್ಮಲಿಪಿ’ಯ ಆ ಹಸ್ತಪ್ರತಿಗಳನ್ನು ಓದುವ ಕೆಲಸವನ್ನೇ ಮಾಡಿದ ಅತಿಪರಿಚಯದ ಬೂಳ್ಪು

ಬಂದಿರಬೇಕು ನನ್ನ ಮನಸ್ಸಿನ ಮೇಲೆ. ಅಂತೆಯೆ ಹಸ್ತಪ್ರತಿ ಬರುತ್ತವೆಂದಾಗ ಲೆಲ್ಲ ಈ ಭಾವನೆ ಉಳಿದ ವಿಚಾರಗಳನ್ನೆಲ್ಲಾ ಹಿಂದೂಡಿ ಮುಂದೆ ಬಂದು ನಿಲ್ಲುತ್ತದೆ. ಇದರ ಪ್ರಭಾವ ಹೆಚ್ಚಿದಾಗ ಒಮ್ಮೊಮ್ಮೆ ಅಚಾತುರ್ಯ ನಡೆದು ಹೋಗುವ ಸಂಭವವೂ ಉಂಟು; ತುಂಬಿ ಬರಲಾರದ ಹಾನಿಯಾಗುವುದೂ ಉಂಟು. ಆದರೆ ಹಾಗೇನೂ ಆಗಲಿಲ್ಲವಲ್ಲ ಎಂದು ಈಗ—ಈ ಪುಸ್ತಕ ಎಲ್ಲಾ ಮುಗಿದು ಪ್ರಕಟವಾದ ನಂತರ—ನನ್ನ ಮನಸ್ಸು ಸಮಾಧಾನಗೊಂಡಿದ್ದರೂ, ಮೇಲಿನ ಪತ್ರಕ್ಕೆ ಉತ್ತರ ಬರೆಯುವಾಗ ಮಾತ್ರ ನಿರ್ಭಾವನೆಯಿಂದ ಸುಮ್ಮನೆ ಔಪಚಾರಿಕವಾಗಿ "ಹಸ್ತಪ್ರತಿ ಕಳಿಸಬಹುದು. ನೋಡಿ ತಿಳಿಸುತ್ತೇನೆ." ಎಂದಿಷ್ಟೇ, ಏಳೆಂಟು ದಿನ ಬಿಟ್ಟು ಬರೆದು ತಿಳಿಸಿದೆ.

ಕೆಲ ಕಾಲದ ನಂತರ ಅವರಿಂದ ಉತ್ತರ ಬಂತು:

ಮೈಸೂರು<br>
೯-೧೨-೧೯೫೩

ಹೃತ್ಪೂರ್ವಕ ವಂದನೆಗಳು,

ತಮ್ಮ ಕಾರ್ಡು ತಲುಪಿತು. ಕೂಡಲೆ ಉತ್ತರಿಸಲಾಗದ್ದಕ್ಕೆ ಕ್ಷಮಿಸಬೇಕು. ನನ್ನ ಕಾದಂಬರಿಯ ಹಸ್ತಪ್ರತಿಯನ್ನು 'ರೆಜಿಸ್ಟರ್' ಮಾಡಿ ಕಳುಹಿಸಿದ್ದೇನೆ. ನನ್ನ ಅಕ್ಷರ ಸ್ಫುಟವಾಗಿಲ್ಲ. ಕೆಲವು ಕಡೆ ಆತುರದಿಂದ ಬೇಗನೆ ಬರೆದಿರುವೆ. ಅದರಿಂದ ನನ್ನ ಕೈಬರಹ ಚೆನ್ನಾಗಿ ಬಂದಿಲ್ಲ. ತಾವು ತಾಳ್ಮೆಯಿಂದ ಅದನ್ನು ಓದಿಕೊಳ್ಳಬೇಕಾಗಿ ಬೇಡುವೆ. ನನ್ನ ಮೊದಲ ಕಾದಂಬರಿಯಾಗಿದ್ದರಿಂದ ಅನೇಕ ಲೋಪ-ದೋಷಗಳಿರಬಹುದು. ಎಲ್ಲವನ್ನೂ ಸರಿಪಡಿಸಿ ಕೊಡುವ ಭಾರವನ್ನು ತಮ್ಮ ಮೇಲೆಯೇ ಹಾಕುವೆ. ಹಸ್ತಪ್ರತಿ ತಲುಪಿದ್ದಕ್ಕೆ ತಿಳುಹಿಸಿ. ಓದಿಯಾದ ಕೂಡಲೆ ತಮ್ಮ ಅಭಿಪ್ರಾಯವನ್ನೂ ತಿಳುಹಿಸಿದರೆ ತುಂಬ ಉಪಕೃತಳಾಗುವೆನು.

ಇಂತಿ ತಮ್ಮ<br>
—ಬಿ. ವಿ. ಚಂಪಕಮಾಲಾ

ಹಸ್ತಪ್ರತಿ ಬಂತು. ಎಷ್ಟೋ ಹಸ್ತಪ್ರತಿಗಳಂತೆ ಇದೂ ನಿರಾಸೆಯನ್ನೇ

ಹೊತ್ತು ತಂದಿರಬಹುದೆಂಬ ಭಾವನೆ ಒಳಗಿದ್ದರೂ "ಏನಿದೆ ನೋಡೋಣ" ಎಂಬ ಕುತೂಹಲದಿಂದ ಗಂಟು ಬಿಚ್ಚಿ ಹಸ್ತಪ್ರತಿಯನ್ನು ಸುಮ್ಮನೆ ಹಾಗೊಮ್ಮೆ ಹೀಗೊಮ್ಮೆ ಮೊದಲ ಸಲ ನೋಡಿದೆ. ಆಗ ಹಾಗೇ ಇಟ್ಟು, ರಾತ್ರಿ ಮಲಗುವ ಮೊದಲು ಅದನ್ನೇ ಓದಲು ತೆಗೆದುಕೊಂಡೆ. ಬಹಳ ವರ್ಷಗಳ ವರೆಗೂ ಹಸ್ತಪ್ರತಿಗಳನ್ನೇ ಓದಿದ ನನ್ನ ಕಣ್ಣುಗಳಿಗೆ ಅದನ್ನು ಓದಲು ಅಷ್ಟೇನು ತೊಂದರೆಯಾಗದಿದ್ದರೂ ಮುದ್ರಣದ ದೃಷ್ಟಿಯಿಂದ ಹಸ್ತಪ್ರತಿ ಪರಿಷ್ಕೃತವಾಗಬೇಕು ಎನಿಸಿತು. ಓದುತ್ತ ಹೋದಂತೆ ಕತೆ ಹಿಡಿಸಿತು. ಶೈಲಿ ಅದಕ್ಕೂ ಹೆಚ್ಚಾಗಿ ಹಿಡಿಸಿತು. ಇದು ಹೆಣ್ಣುಮಗಳು ಬರೆದಿದ್ದಿರಬಹುದೇ? ಎಂಬ ಸಂಶಯವೂ ತಲೆ ಹಾಕಿತು. ಆದರೂ ಪ್ರಕಟಿಸಲು ಅರ್ಹವಿದೆ ಎಂದು ಮನಸ್ಸು ಒಪ್ಪಿಗೆ ಕೊಟ್ಟಿತು. ಒಡನೆಯೆ, ಪ್ರಕಟಿಸುವ ಇಚ್ಛೆಯನ್ನು ವ್ಯಕ್ತಪಡಿಸಿ ಒಂದು ಉತ್ತರ ಬರೆದೆ. ಅದರಲ್ಲಿ 'ಕಾದಂಬರಿಯ ಹೆಸರನ್ನು 'ಗೃಹದೇವತೆ' ಎಂದಿಡದೆ ಬರಿ 'ಸರೂ' ಎಂದಿಟ್ಟರೆ ಹೇಗೆ?' ಎಂದು ಕೇಳಿದ್ದೆ. ಅಲ್ಲದೆ ಅಲ್ಲಿ ಇಲ್ಲಿ ಒಂದಿಷ್ಟು ಸುಮ್ಮನೆ—ಬಾಡಿಗೆದಾರ ತಾನಿರುವ ಮನೆಯ ಅಂತರ್ವ್ಯವಸ್ಥೆಯನ್ನು ತನ್ನ ಅಭಿರುಚಿಗೆ ತಕ್ಕಂತೆ ಒಂದೆಡೆ ಸುಳಿ ತೆಗೆದು, ಒಂದೆಡೆ ಬಣ್ಣ ಹಚ್ಚಿ, ಒಂದೆಡೆ ತನಗೆ ಬೇಕಾದ ಚಿತ್ರ ಹಾಕಿ, ತನ್ನ ಅನುಕೂಲತೆ, ಶಕ್ತಿಗೆ ತಕ್ಕಂತೆ ಹೊಂದಿಸಿಕೊಂಡರೂ ಮೂಲ ಕಟ್ಟಡ ಬದಲಾಗುವದಿಲ್ಲ, ಬಾಡಿಗೆದಾರನ ಮಾಲ್ಕಿಯದೂ ಆಗುವುದಿಲ್ಲ ಅದು. ಹಾಗೆ ಮುದ್ರಣದ ದೃಷ್ಟಿಯಿಂದ ಸರಿಯಾಗುವಂತೆ ಕೆಲವು ತಿದ್ದುಪಡಿಗಳನ್ನು ಮಾಡಲು ಅವಕಾಶ ಕೊಡಬೇಕೆಂದೂ ಕೇಳಿಕೊಂಡಿದ್ದೆ.

ಇದಕ್ಕೂ ಒಡನೆಯೆ ಅವರಿಂದ ಉತ್ತರ ಬಂತು:

ಬೆಂಗಳೂರು
೨೨-೧೨-೧೯೫೪

ಅನೇಕಾನೇಕ ಪ್ರಣಾಮಗಳು,

ತಮ್ಮ ಆದರಪೂರ್ವಕವಾದ ಕಾಗದ ತಲುಪಿತು. ನೀವು ಅಪೇಕ್ಷಿಸುವಂತೆ ಕೆಲವು ತಿದ್ದುಪಡಿಗಳನ್ನು ಮಾಡಬಹುದು. ನನ್ನ ಪ್ರಥಮ ಕಾದಂಬರಿಯಾದ್ದರಿಂದ ಅನೇಕ ನ್ಯೂನಾತಿರೇಕಗಳು ಇರಬಹುದು. ಅವನ್ನೆಲ್ಲಾ ಸರಿಪಡಿಸಿ ಪ್ರಕಟಿಸುವಿರಾದರೆ ಬಹಳ ಸಂತೋಷ. ಅದಕ್ಕೆ

ನನ್ನದೇನೂ ಅಭ್ಯಂತರವಿಲ್ಲ. ನಿಮಗೆ ಸರಿ ಕಂಡಲ್ಲಿ 'ಸರೂ' ಎಂದೇ ಕಾದಂಬರಿಯನ್ನು ಹೆಸರಿಸಬಹುದು.

ನನ್ನ ಕಾದಂಬರಿ ಪ್ರಕಟವಾಗಿ ಅದನ್ನು ನಮ್ಮ ನಾಡಿನ ಜನ ಓದಿ, 'ಕಥೆ ಪರವಾಗಿಲ್ಲ' ಎಂದುಕೊಂಡು ಸಮಾಧಾನ ಹೊಂದಿದರೆ ಅದೇ ನನಗೆ ಬಹಳ ಸಂತಸದ ಸುದ್ದಿ.

ಪ್ರಕಟನೆಗೆ ನನ್ನ ಕಾದಂಬರಿ ಕೈಕೊಂಡುದಕ್ಕಾಗಿ ನಾನು ನಿಮಗೆ ಕೃತಜ್ಞಳಾಗಿರುವೆ.

ಇಂತಿ ವಂದನೆಗಳು.
—ಬಿ. ವಿ. ಚಂಪಕಮಾಲಾ

ಹಸ್ತಪ್ರತಿಯನ್ನು ಮುದ್ರಣಕ್ಕೆ ಕೊಡುವ ದೃಷ್ಟಿಯಿಂದ ಓದಿ ಮುಗಿಸ ಬೇಕಾದರೆ ನಾಲ್ಕಾರು ತಿಂಗಳು ಉರುಳಿದವು. ಈ ಅವಧಿಯಲ್ಲಿ ಲೇಖಕಿಯ ರಿಂದ ಒಂದೆರಡು ನೆನಪಿನ ಪತ್ರಗಳೂ ಬಂದವು. ಯಾವ ಉತ್ತರವನ್ನೂ ಅವರಿಗೆ ಕೊಡುವಂತಿರಲಿಲ್ಲ. ಹಸ್ತಪ್ರತಿಯನ್ನು ಓದಿ ಓದಿದಂತೆ ಅದರ ಸತ್ವ, ಆಳ, ವಿಸ್ತಾರ ಹೆಚ್ಚು ಹೆಚ್ಚಾಗಿ ನನ್ನ ಗಮನವನ್ನು ಸೆಳೆದವು. ಮುದ್ರಣ ಕ್ಕಾಗಿ ಬೇರೆ ಪ್ರತಿಯನ್ನೇ ಮಾಡಬೇಕಾಗಿ ಬಂತು; ಮಾಡಿ ಮುಗಿಸಿ ಅಚ್ಚಿಗೂ ಕೊಟ್ಟೆ. ಆಗ 'ಇಷ್ಟೊಂದು ಹದ ಬರೆವಣಿಗೆಯಲ್ಲಿ ಸಾಧಿಸಬೇಕಾದರೆ ಇದು ಮೊದಲ ಬರವಣಿಗೆಯಾಗಿರಲಿಕ್ಕಿಲ್ಲ; ಅಥವಾ ಬೇರೆಯ....?' ಎಂಬ ಸಂಶಯ ಮತ್ತೆ ಬಂತು. 'ಯಾಕೆ ಹೀಗೆ?' ಎಂದು ನನಗೆ ನಾನೇ ಕೇಳಿಕೊಂಡೆ. 'ಇದು ಒಳ್ಳೆಯ ಕೃತಿ.' ಎಂದೊಡನೆ 'ಯಾರಿಂದ ಎತ್ತಿದ್ದು?' ಎಂದೇ ಕೇಳುವ ಆಧು ನಿಕ ದಾಸ್ಯಮನಸ್ಸಿನ ಪಡಿಯಚ್ಚೇ ನನ್ನದೂ ಆಗಿರಬೇಕು ಆಗ. 'ಇದು ಸ್ವತಂತ್ರ ಕೃತಿ, ಇವರೇ ಬರೆದದ್ದು.' ಎಂದು ಮನಸ್ಸು ನಿಸ್ಸಂಕೋಚವಾಗಿ ಒಪ್ಪುವುದಕ್ಕೆ ಯಾಕೆ ಹಿಂಜರಿಯಬೇಕು? ಏನು ಕಾರಣ ಇರಬಹುದು? ಹಾಗೇ ಯೋಚಿಸಿದೆ. ಆಗ ನನ್ನ ತಲೆಯಲ್ಲಿ ಪರೋಕ್ಷ-ಅಪರೋಕ್ಷ, ಸಮಂಜಸ-ಅಸಮಂಜಸ, ಸಮೀಪ-ದೂರ, ಲೌಕಿಕ-ಪಾರಲೌಕಿಕ, ವೈಯಕ್ತಿಕ-ಸಾಂಘಿಕ, ಕಾರಣಗಳ ಒಂದು ದಂಡೇ ಮೆರವಣಿಗೆ ಹೊರಟಿತು. ದಂಡಿನ ಮೆರೆವಣಿಗೆ ಯಲ್ಲಿ ಜನ ಬಹಳಿದ್ದರೂ ಒಂದೇ ತಾಳಲಯದ ಬೆನ್ನು ಹತ್ತಿ ಹೆಜ್ಜೆ ಹಾಕು

ವಂತೆ ನನ್ನ ವಿಚಾರಗಳ ದಂಡಿನ ಮೆರಿವಣಿಗೆ ಒಂದೇ ಗತ್ತಿನ ಧ್ವನಿಯ ಬೆನ್ನುಹತ್ತಿ ನಡೆದಪ್ಪು ಕಂಡುಬಂತು. ಆ ಧ್ವನಿ ಈ ಅರ್ಥದ್ದಿರಬೇಕು: ಬೇರೆ ನೀತಿಸೂತ್ರಗಳಿಂದ ಬದ್ಧವಾದ ಹಿಂದಿನ ತಲೆಮಾರಿನ ಸಮಾಜವ್ಯವಸ್ಥೆಯಲ್ಲಿ ಹುಟ್ಟಿ ಬೆಳೆದ ನನ್ನನ್ನು ಅದಕ್ಕೆ ವಿಪರೀತವಾದ ನೀತಿಸೂತ್ರಗಳಿಂದ ಬದ್ಧವಾದ ಹೊಸ ಸಮಾಜರಚನೆಯಲ್ಲಿ ಕಾಲ ತಂದು ಸಿಕ್ಕಿಸಿದ್ದರಿಂದ ಈ ದೃಷ್ಟಿವೈಪರೀತ್ಯ ಬಂದಿರಬೇಕು ನನ್ನಲ್ಲಿ. ಹೊಸ ಸಮಾಜರಚನೆಯಲ್ಲಿ 'ಇದು ಅವನ ಗ್ರಂಥ, ಇದು ಇವನ ಗ್ರಂಥ; ಇದು ಅವನ ಕಲ್ಪನೆ, ಇದು ಇವನ ಕಲ್ಪನೆ' ಎಂದು ಕಲ್ಪನೆಗಳ ಮೇಲೆ ಮಾಲ್ಕೀ ಹಕ್ಕು ಹೇರುವಂತಿಲ್ಲ. ನಾಟಕವಲ್ಲಿ ಪಾತ್ರ ಹಾಕಿದ ನಟ, ಇಡೀ ನಾಟಕ ಬಾಯಿಪಾಠ ಮಾಡಿ ಒಪ್ಪಿಸುವ ಮಾತ್ರದಿಂದ ಆ ನಾಟಕ ಅವನದೇ. ಅವನೇ ನಾಟಕಕಾರನಾಗಬಹುದು. ತನ್ನದೆಂದೇ ಅವನು ಅದನ್ನು ಪ್ರಕಟಿಸಬಹುದು. ಪರದೇಶೀಯರ ಪರಭಾಷೆಯವರ ಕಲ್ಪನೆಗಳನ್ನೋ, ರಚನೆಯ ಚೌಕಟ್ಟನ್ನೋ ತೆಗೆದುಕೊಂಡು, ಒಮ್ಮೊಮ್ಮೆ ಇಡಿಕಿಡಿಯಾಗಿ ಎತ್ತಿಹಾಕಿಯೂ ಆ ಋಣಭಾರ ಒಪ್ಪದೆ, ಕೀರ್ತಿಶ್ರೀಮಂತರಾಗಬಹುದು ಸಾಹಿತ್ಯಕಲ್ಪನಾದರಿದ್ರರು. ಈ ವೈಪರೀತ್ಯವನ್ನೆಲ್ಲಾ ನೋಡಿ ನೋಡಿ ತಗ್ಗು ·ಇಲ್ಲದಲ್ಲಿಯೂ ಮನಸ್ಸು ಮುಗ್ಗರಿಸುತ್ತದೆ. ಹಾಗೇ ಆಗಿರಬೇಕು ಈ ಕಾದಂಬರಿಯ ವಿಷಯದಲ್ಲಿಯೂ..................

ಗ್ರಂಥದಲ್ಲಿ ಪ್ರಕಟಿಸಲು ತಮ್ಮದೊಂದು ಫೋಟೋ ಕಳಿಸಿಕೊಡಲು ಕೇಳಿದಾಗ ಉತ್ತರ ಹೀಗೆ ಬಂತು ಅವರಿಂದ:

ಬೆಂಗಳೂರು
೧-೧೧-೧೯೩೪.

ವಂದನೆಗಳು,

ನಿಮ್ಮ ಕಾಗದ ತಲುಪಿತು. ಫೋಟೋ ವಿಚಾರ—ಬರಿಯ ಒಂದೇ ಒಂದು ಕಥೆ ಬರೆವ ಮಾತ್ರಕ್ಕೆ ನನ್ನ ಫೋಟೋ ಪ್ರಕಟಿಸಿಸಿಕೊಂಡು ಪರಿಚಯ ಮಾಡಿಸಿಕೊಳ್ಳುವುದು ಉಚಿತವಾಗಲಾರದು ಎಂದು ನನ್ನ ಭಾವನೆ. ಇನ್ನೂ ಹಲವಾರು ಕಾದಂಬರಿಗಳನ್ನು ಬರೆದು ಕೈಕುದುರಲಿ; ನಂತರ ಬೇಕಾದರೆ ಆ ಕೆಲಸ ಮಾಡೋಣ. ಈಗಲೇ ಬೇಡ. ದಯ

ವಿಟ್ಟು ಕ್ಷಮಿಸಿ. ಬೇರೆ ಯಾವ ರೀತಿಯೂ ತಿಳಿಯಬೇಡಿ.

ಇಂತಿ ನಿಮ್ಮ
—ಬಿ. ವಿ. ಚಂಪಕಮಾಲಾ

(ಮ. ಮಾ)

ನನ್ನ ಫೋಟೋದ ಬದಲು ರಕ್ಷಾಪತ್ರಕ್ಕೆ ಅಂದವಾದ ಸಮಂಜಸವಾದ ಚಿತ್ರವನ್ನು ಪ್ರಕಟಿಸಿದರೆ ಹೆಚ್ಚು ಆಕರ್ಷಕವಾಗಿರುತ್ತದೆಂದು ನನ್ನ ಅಭಿಪ್ರಾಯ.

ಒಂದು ವರ್ಷ ಕಳೆಯಿತು. ನನ್ನಿಂದ ಹಸ್ತಪ್ರತಿ ತಯಾರಿಸುವುದಾಗಲಿಲ್ಲ. ಎರಡನೆಯ ವರ್ಷವೂ ದಾಟುವುದರಲ್ಲಿತ್ತು. ಇನ್ನೊಬ್ಬರಾಗಿದ್ದರೆ ತಮ್ಮ ಪ್ರತೀಕ್ಷೆಯ ಕಳವಳವನ್ನು ಇಷ್ಟು ದೀರ್ಘ ಕಾಲದ ವರೆಗೆ ಅದುಮಿಟ್ಟುಕೊಳ್ಳಲಾರದೆ ಬೇಸರಪಟ್ಟುಕೊಂಡು ಉದಾಸೀನಭಾವವನ್ನಾದರೂ ವ್ಯಕ್ತಪಡಿಸಬಹುದಾಗಿತ್ತು. ತಾಳ್ಮೆಯ ಮೂರ್ತಿಯಾಗಿ ಗೊಮ್ಮಟನಷ್ಟು ಎತ್ತರ ಬೆಳೆದು ನಿಂತ 'ಸರೂ'ವನ್ನು ಕಲ್ಪಿಸಿ ನಿರ್ಮಿಸಿದ ಶ್ರೀಮತಿ ಚಂಪಕಮಾಲಾ ಅವರ ಹೃದಯ ಅಂತಹ ಯಾವ ಭಾವನೆಗಳಿಗೂ ಅವಕಾಶ ಕೊಡಲಿಲ್ಲ. ಒಂದು ಸಲವೂ ಅವರು ಔಚಿತ್ಯದ ಮೇರೆಯನ್ನು ಮೀರಿ ಬರೆಯಲಿಲ್ಲ.

ಇಷ್ಟು ದೀರ್ಘಕಾಲ ಕಳೆದ ನಂತರವೂ ಅವರಿಂದ ಬಂದ ಪತ್ರ ಇದು:

ಬೆಂಗಳೂರು
೨೮-೧-೧೯೫೫

ಸವಿನಯ ಪ್ರಣಾಮಗಳು,

ತಮ್ಮ ಕಾಗದ ತಲುಪಿತು. ಅಲ್ಲಿನ ವಿಷಯವೆಲ್ಲಾ ತಿಳಿಯಿತು. ಹಿಂದೆ ನೀವು ಮುದ್ರಣದ ಪ್ರತಿ ತಯಾರಿಸುತ್ತೇನೆಂದು ಬರೆದಿದ್ದಿರಿ. ಈ ವೇಳೆಗೆ ಸಾಕಷ್ಟು ಮುದ್ರಣವಾಗಿರಬಹುದೆಂಬ ಒಂದು ಊಹೆಯ ಮೇಲೆ ನಾನು ಅದನ್ನು ತಿಳಿದುಕೊಳ್ಳಲು ಬರೆದಿದ್ದೆ ಅಷ್ಟೇ. ನನಗೆ ಯಾವ ಆತುರವೂ ಇಲ್ಲ. ನಿಧಾನವಾಗಿಯೇ ಆಗಲಿ. ಬೇರೆಯ ಅವರ

ಪ್ರತಿಯನ್ನು ನೀವೇ ತಯಾರಿಸುತ್ತಿದ್ದೀರೆಂದು ನಾನು ತಿಳಿದಿರಲಿಲ್ಲ. ಈಗ ವಿಷಯ ತಿಳಿದು ನನಗೇ ಅನುತಾಪವಾಯಿತು. ದಯವಿಟ್ಟು ಕ್ಷಮಿಸಿ. ನಿಮಗೆ ಹೇಗೆ ಅನುಕೂಲವೋ ಹಾಗೆ ಮಾಡಿ. ನನ್ನದೇನೂ ಅಭ್ಯಂತರ ವಿಲ್ಲ. ನನ್ನ ಆಸೆ ಏನು? ಪುಸ್ತಕ ಪ್ರಕಾಶಕ್ಕೆ ಬಂದರಾಯಿತು. ವರ್ಷ ಗಟ್ಟಲೆ ತಡವಾದರೂ ಪರವಾಗಿಲ್ಲ. ನನಗೆ ಯಾವ ಬಗೆಯ ಆತುರವೂ ಇಲ್ಲ. ನಿಮಗೆ ಮೇಲೆ ಮೇಲೆ ಪತ್ರಗಳನ್ನು ಬರೆದು ಬೇಸರವನ್ನು ಉಂಟುಮಾಡಿದ್ದಕ್ಕಾಗಿ ಮನ್ನಿಸಿ. ಅಥವಾ ನನ್ನ ಹಸ್ತಪ್ರತಿಯನ್ನೇ 'Re-Write' ಮಾಡಿ ಪ್ರೆಸ್ಸಿಗೆ ಕೊಟ್ಟರೆ ನಿಮಗೆ ಬೇಸರವೇತರದು?

ಇಂತೀ
—ಬಿ. ವಿ. ಚಂಪಕಮಾಲಾ.

ಈ ಪತ್ರ ಬರೆದು 'ಹೆಣ್ಣಿನ ಶೀಲ, ತಾಳ್ಮೆ' ಎಂಬುದನ್ನು ಶ್ರೀಮತಿ ಚಂಪಕ ಮಾಲಾ ಅವರು ಪ್ರತ್ಯಕ್ಷ ತೋರಿಸಿಕೊಟ್ಟರು.

ಪ್ರಕಾಶನಕ್ಕೆ ಮೊದಲು ಇಷ್ಟು ಕಾಲದ ಕಾವುಂಡ, 'ಗೃಹದೇವತೆ' 'ಸರೂ' ಎಂಬ ಎರಡೂ ಹೆಸರನ್ನಾಂತ, ಈ ೩೯೨ ಪುಟದ ಕಾದಂಬರಿ ಈಗ ಮುದ್ರಣದ ಸಂಸ್ಕಾರ ಪಡೆದು ಈ ರೂಪದಲ್ಲಿ ಪೂರ್ಣವಾಗಿ ಓದುಗರೆದುರು ಬಂದಿದೆ. ಓದಿದವರ ಮನಸ್ಸಿಗೆ ಇದು ಮೆಚ್ಚಿಗೆಯಾದರೆ, ಅವರು 'ಪರವಾಗಿಲ್ಲ ಚೆನ್ನಾಗಿದೆ' ಎಂದರೆ ಬರೆದವರ, ಪ್ರಕಾಶಕರ ಇಬ್ಬರ ಶ್ರಮವೂ ಸಾರ್ಥಕ ವಾಯಿತೆಂದು ಭಾವಿಸುತ್ತೇನೆ.

ಈ ಕಾದಂಬರಿಯನ್ನು ಎಲ್ಲರಿಗಿಂತ ಮೊದಲು ಮೆಚ್ಚಿದವರು ಇಬ್ಬರು. ಎಲ್ಲರಿಗಿಂತ ಮೊದಲು ಓದಿದವರೂ ಇಬ್ಬರೇ. ಒಬ್ಬರು ಗ್ರಂಥದ ಪ್ರಕಾಶಕರು; ಇನ್ನೊಬ್ಬರು ಯಥಾರ್ಥನಾಮರಾದ ಕೀರ್ತಿನಾಥರು. ಕಾದಂಬರಿಯನ್ನು ಸಮಗ್ರವಾಗಿ ಓದಿ, ಪ್ರಾಮಾಣಿಕವಾದ ತಮ್ಮ ಅಭಿಪ್ರಾಯವನ್ನು ಪ್ರಮಾಣ ವರಿತು ಉಚಿತ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ ಮುನ್ನುಡಿಯಲ್ಲಿ ಅವರು. ಇಂತಹ ಬೆಲೆಯರಿತ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ. ಕೀರ್ತಿಯವರಿಗೆ ನಾನು ಚಿರಋಣಿಯಾಗಿದ್ದೇನೆ.

ಪ್ರಕಾಶನ ಕಾರ್ಯದಲ್ಲಿ ಇಷ್ಟು ದೀರ್ಘ ಕಾಲದ ವಿಲಂಬಕ್ಕೆ ನಾನು ಕಾರಣನಾದರೂ ಅದೆಲ್ಲ ಹಿಂಸೆಯನ್ನೂ ತಾಳಿಕೊಂಡು ಈ ಗ್ರಂಥಮಾಲೆಯ ಮೇಲಿನ ತಮ್ಮ ವಿಶೇಷ ಅಭಿಮಾನದಿಂದ ಈ ಕಾದಂಬರಿಯನ್ನು ಪ್ರಕಟಿಸುವ ಸುಯೋಗ ನನಗೆ ತಂದು ಕೊಟ್ಟುದಕ್ಕಾಗಿ ನಾನು ಶ್ರೀಮತಿ ಚಂಪಕಮಾಲಾ ಅವರಿಗೆ ತುಂಬ ಕೃತಜ್ಞನಾಗಿದ್ದೇನೆ.

ಕಾದಂಬರಿಯ ಹೊದಿಕೆಯನ್ನು ಅಂದವಾಗಿ ಮುದ್ರಿಸಿಕೊಟ್ಟ ಸಂಯುಕ್ತ ಕರ್ನಾಟಕ ಪ್ರೆಸ್ಸಿನವರಿಗೂ ನನ್ನ ವಂದನೆಗಳು.

—ಪ್ರ

ಮುಂದಿನ ಗ್ರಂಥ

# ಬಾಗಿನ

( ಹದಿನಾರು ಜೀವನ ದೃಶ್ಯಗಳು )

ಬರೆದವರು :

ಶ್ರೀಮತಿ ಆರ್. ಲಲಿತಮ್ಮ

# ಗೃಹದೇವತೆ

" ಸರೂ... ....! "

ಗೋವಿಂದರಾಯರು ಕೂಗುತ್ತ ಒಳಗೆ ಬಂದು, ಕ್ರೈಲಿಷ್ಟ ಬಿಸ್ಕೀಟ್ ಪ್ಯಾಕೆಟ್ಟನ್ನು ಟೇಬಲ್ ಮೇಲೆ ಇಟ್ಟು, ಬೂಟು ಬಿಚ್ಚತೊಡಗಿದರು. ಅವರ ಆ ಕರೆಗೆ ಸರೂಸ ಉತ್ತರದ ಬದಲು ಒಳಗಡೆಯಿಂದ ನರಳುವ ಧ್ವನಿ ಮಾತ್ರ ಕೇಳಬಂತು. " ಈ ದಿನವೂ ಮತ್ತೆ ಜ್ವರ ಬಂದಿದೆಯೇನೋ ! " ಎಂದು ಕೊಂಡು ಕೈಕಾಲು ತೊಳೆದುಕೊಳ್ಳಲು ಬಚ್ಚಲುಮನೆಗೆ ಹೋದರು ರಾಯರು.

ರಂಗಮ್ಮ ದೋಸೆ ಹುಯ್ಯುತ್ತ ಒಲೆಯ ಮುಂದೆ ಕೂತಿದ್ದರು. ಸೌದೆ ಹಸಿಯಾಗಿದ್ದುದರಿಂದ ಹೊಗೆ ಮನೆಯ ತುಂಬಾ ತುಂಬಿತ್ತು. ಒಲೆಯನ್ನು ಊದಿ ಊದಿ ರಂಗಮ್ಮನ ಕಣ್ಣು ಕೆಂಪಾಗಿದ್ದವು. " ಥೂ, ಏನು ಸೌದೆಯೋ ಏನು ಒಲೆಯೋ ! ಇದರಲ್ಲಿ ಹೇಗೆ ಮಾಡುವದೋ ನಾ ಕಾಣೆ ! " ಎಂದು ಗೊಣಗುತ್ತ ಒಲೆಯನ್ನು ಊದಿಯೇ ಊದುತ್ತಿದ್ದರು.

ರಾಯರು ಬಚ್ಚಲುಮನೆಯಿಂದ ಬಂದು, ಅಲ್ಲಿಯೇ ತಮಗಾಗಿ ಹಾಕಿದ್ದ ಮಣೆಯೊಂದರ ಮೇಲೆ ಕೂತು " ಈ ದಿನವೂ ಡಾಕ್ಟರು ಬಂದಿದ್ದ ರೇನಕ್ಕಾ ? " ಎಂದು ಹೊಗೆಯಿಂದ ತೇವಗೊಂಡ ಕಣ್ಣುಗಳನ್ನು ಒರಸಿ ಕೊಳ್ಳುತ್ತ ಕೇಳಿದರು.

" ಹುಂ, ಬಂದಿದ್ದರು, ಬೆಳಗ್ಗೆ ಹತ್ತರ ವೇಳೆಗೆ."

" ಏನು ಹೇಳಿದರು ? "

" ಹೇಳುವುದೇನು ಬಂತು ? ಯಥಾಪ್ರಕಾರ ಚುಚ್ಚಿ ಹೋದರು."

ಮಾತನ್ನು ಮುಂದುವರಿಸದೆಯೆ ರಾಯರು ಬಡಿಸಿದ ದೋಸೆಯನ್ನು ಸುಮ್ಮನೆ ಗಂಟಲಿಗಿಳಿಸಿದರು.

ಒಳಗಡೆಯಿಂದ ಬಂದ ಕೆಮ್ಮಿನ ಧ್ವನಿ ಕೇಳಿ, ಏನೋ ಜ್ಞಾಪಿಸಿ ಕೊಂಡವರಂತೆ ರಂಗಮ್ಮ " ನೋಡು ಗೋವಿಂದು, ಅಂದಹಾಗೆ ನೆನ್ನೆಯಿಂದ

ಸೀತಮ್ಮನಿಗೆ ಕೆಮ್ಮಿದಾಗೊಷ್ಟು ಸ್ವಲ್ಪ ರಕ್ತ ಬರುತ್ತದಪ್ಪ. ವೈದ್ಯರಿಗೆ ಹೇಳೋಣ ಅಂದುಕೊಂಡೆ ಆ ಅವಸರದಲ್ಲಿ ಜ್ಞಾಪಕಕ್ಕೇ ಬರಲಿಲ್ಲ!" ಎಂದರು.

"ಸರಿ, ಆಗಲಿ; ಇನ್ನು ಅದು ಯಾವ ರೋಗಕ್ಕೆ ತಿರುಗಿಕೊಳ್ಳುತ್ತದೋ ಏನೋ!" ಎಂದು ರಾಯರೂ ಯೋಚನಾಪರರಾದರು.

ಅಷ್ಟರಲ್ಲಿ ಸೀತಮ್ಮ ನರಳುತ್ತ ಎದ್ದು ಬಂದು ಬಚ್ಚಲುಮನೆಗೆ ಹೋಗಿ ವಾಂತಿಮಾಡಿಕೊಳ್ಳಲಾರಂಭಿಸಿದರು. ಆ ಶಬ್ದ ಕೇಳಿದೊಡನೆ ಒಲೆಯ ಮೇಲೆ ದೋಸೆ ಸೀದುಹೋಗುವುದನ್ನೂ ಗಮನಿಸದೆ ರಂಗಮ್ಮ ಬಚ್ಚಲು ಮನೆಗೆ ಧಾವಿಸಿ, ಸೀತಮ್ಮನನ್ನು ಹಿಡಿದುಕೊಂಡು, ಎದೆ ಬೆನ್ನು ಎಲ್ಲಾ ನೀವಲಾರಂಭಿಸಿದರು. ಈ ಸಲವೂ ಸ್ವಲ್ಪ ರಕ್ತ ಬಿತ್ತು. ಸೀತಮ್ಮ ನಿಶ್ಚೇತನರಾಗಿ ಕೂತರು. ಅವರ ಕೈ ಬಾಯಿಗಳನ್ನು ತೊಳೆದು ಮತ್ತೆ ರೂಮಿಗೆ ಅವರನ್ನು ಹಿಡಿದುಕೊಂಡು ಬಂದು, ಅಲ್ಲಿದ್ದ ಹಾಸಿಗೆಯ ಮೇಲೆ ಮಲಗಿಸಿ ಬೆಚ್ಚಗೆ ಕಂಬಳಿ ಹೊದಿಸಿ ಹೊರಬಂದು "ಗೋವಿಂದೂ, ಗೋವಿಂದೂ!" ಎಂದು ಕೂಗಿದರು

ಏನೋ ಯೋಚಿಸುತ್ತ ಮಣೆಯ ಮೇಲೇ ಕುಳಿತಿದ್ದ ರಾಯರು ಹಾಗೇ ಒಮ್ಮೆಲೇ ಎದ್ದು ಹೋಗಿ "ಏನು, ಅಕ್ಕಾ, ಕರೆದೆಯಾ?" ಎಂದರು.

"ಹೋಗು, ಕೂಡಲೆ ಆ ವೈದ್ಯರನ್ನು ಕರೆದುಕೊಂಡು ಬಾ. ಈಗಲೂ ಅಷ್ಟು ರಕ್ತ ಬಿತ್ತು. ಬಹಳ ಅಶಕ್ತಳಾಗಿದ್ದಾಳೆ. ಜಾಗ್ರತೆ ಕರೆದುಕೊಂಡು ಬಾ."

ಅವಸರವಸರವಾಗಿ ಕೈತೊಳೆದು ಬಂದು, ಹೆಗಲ ಮೇಲೊಂದು ಉತ್ತರೀಯವನ್ನು ಹಾಕಿಕೊಂಡು ರಾಯರು ತಲೆಬಾಗಿಲ ಮೆಟ್ಟಿಲಿಳಿದು ಹೊರಕ್ಕೆ ಹೊರಟುಹೋದರು.

ಡಾಕ್ಟರು ಬರುವ ವೇಳೆಗೆ ರೂಮನ್ನು ಚೊಕ್ಕಟವಾಗಿರಿಸೋಣ ಎಂದು ರಂಗಮ್ಮ ಕೆಲಸಕ್ಕೆ ತೊಡಗಿದರು. ಅಲ್ಲಿಯೇ ಬಿದ್ದಿದ್ದ ಕಿತ್ತಳೆ ಹಣ್ಣಿನ ಸಿಪ್ಪೆಗಳು, ಕಾಫಿ ಕುಡಿದ ಲೋಟ, ಎಲ್ಲಾ ತೆಗೆದು ಒಳಗಿರಿಸಿ ಬಂದರು; ಕಸಗೂಡಿಸಿದರು; ಕಿಟಕಿ ತೆರೆದಿಟ್ಟರು; ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಸರೂನ ಆಟಿಗೆ, ಪುಸ್ತಕಗಳನ್ನೆಲ್ಲಾ ಜೋಡಿಸಿ ತೆಗೆದಿಟ್ಟರು; ಬಟ್ಟೆಗಳನ್ನೆಲ್ಲಾ ಮಡಿಚಿಟ್ಟರು; ಸೀತಮ್ಮನನ್ನು ಮೆಲ್ಲಗೆ ಎಬ್ಬಿಸಿ ಅವರ ಹಾಸಿಗೆಯನ್ನು ಕೊಡಹಿ ಮತ್ತೆ ಹಾಸಿದರು. ಎಲ್ಲಾ ಮುಗಿದ ಮೇಲೆ ಬೀದಿಯ

ಬಾಗಿಲಿಗೂ ಒಳಕ್ಕೂ ತಿರುಗಾಡಲಾರಂಭಿಸಿದರು. ಅವರ ಆತುರ ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. “ವೈದ್ಯರು ಏನು ಹೇಳುವರೋ ಏನೋ, ಬೇಗ ವಾಸಿಯಾಗುತ್ತದೋ ಇಲ್ಲವೋ, ಒಂದು ವೇಳೆ ಏನಾದರೂ ಆದರೆ.....ಆದರೆ... ?” ಎಂದು ತಮ್ಮಷ್ಟಕ್ಕೆ ತಾವೇ ಒಟಗುಡುತ್ತಿದ್ದರು. ಗೋವಿಂದರಾಯರು ಹೋಗಿ ಒಂದು ಗಂಟೆಯಾದರೂ ಇನ್ನೂ ಬಂದಿರಲಿಲ್ಲ. ತಮ್ಮ ಮನಸ್ಸಿನ ಸಮಾಧಾನಕ್ಕಾಗಿ ಒಳಗೆ ಹೋಗಿ ದೇವರಿಗೆ ತುಪ್ಪದ ದೀಪ ಹತ್ತಿಸಿ “ದೇವರೇ, ನನ್ನ ಸೀತೂನ್ನ ಉಳಿಸು ಸ್ವಾಮೀ ! ನಮ್ಮ ವಂಶ ನಿಲ್ಲುವಂತಾಗಲಿ ದೇವರೇ ! ನನ್ನ ಕಂದನಿಗೆ ಯಾವ ಅಪಾಯವೂ ಆಗದಂತೆ ಈ ಬೇನೆಯಿಂದ ಪಾರು ಮಾಡು. ಹಾಗೆ ಆದರೆ. ನಂಜುಂಡೇಶ್ವರಾ, ನಿನಗೆ ಕಣ್ಣಿಗೆ ಕಣ್ಬಟ್ಟು, ಕಾಲಿಗೆ ಕವಚ ಮಾಡಿಸಿ ಹಾಕುತ್ತೇನೆ.” ಎಂದು ರಂಗಮ್ಮ ಹರಕೆ ಹೊತ್ತು ಬಂದರು.

ನೆರೆಮನೆಯ ಗಡಿಯಾರವೊಂದು ಇದೇ ಹೊತ್ತಿಗೆ ಏಳು ಬಡಿದು ಸೂರ್ಯಾಸ್ತವನ್ನು ಸೂಚಿಸಿತು.

ಹೊರಗಡೆಯಿಂದ ಎಂಟು ವರ್ಷದ ಮಗುವೊಂದು ಆತುರದಿಂದ ಓಡಿ ಬಂದು “ಅತ್ತೇ, ಡಾಕ್ಟರ್ ಮಾವಾ ಅಣ್ಣನ ಜೊತೆಯಲ್ಲಿ ಬರುತ್ತಿದ್ದಾರೆ.” ಎಂದಿತು.

“ಬರುತ್ತಿದ್ದಾರೆಯೋ ಮಗು ! ಹಾಗಾದರೆ ಸರಿಹೋಯಿತು.” ಎಂದು ಎದ್ದು, ಹನಿಗೂಡಿದ ತಮ್ಮ ಕಣ್ಣುಗಳನ್ನು ರಂಗಮ್ಮ ಒರಸಿಕೊಂಡರು.

“ಯಾಕೆ ಅತ್ತೆ, ಅಳುತ್ತೀಯಾ ?” ಎಂದು ಕೇಳಿಯೇಬಿಟ್ಟಿತು ಪಾಪ, ಮಗು, ದೈನ್ಯ ತುಂಬಿದ ಕಣ್ಣುಗಳನ್ನು ಹಿಗ್ಗಿಸಿ.

“ಯಾಕೂ ಇಲ್ಲಮ್ಮಾ, ಕಣ್ಣಲ್ಲಿ ಕಸ ಬಿತ್ತು ಅಷ್ಟೆ; ಇನ್ನೇನಿಲ್ಲಾ.” ಎಂದು ಆ ಕೂಸಿನ ಗಮನವನ್ನು ಬೇರೆಡೆಗೆ ತಿರುಗಿಸಲೆತ್ನಿಸಿದರು.

ಅಷ್ಟರಲ್ಲಿ ಹೊರಗಡೆ ಡಾಕ್ಟರ ಧ್ವನಿ ಕೇಳಿಸಿತು. ರಂಗಮ್ಮ ಅತ್ತ ತೆರಳಿದರು.

ಡಾಕ್ಟರರು ಕೈಲಿ ಒಂದು ಬ್ಯಾಗ್ ಹಿಡಿದು ಒಳಬಂದರು. ಸೀತಮ್ಮ ಮಲಗಿದಲ್ಲಿಗೆ ಹೋದರು. ಸೀತಮ್ಮ ಕಣ್ಣು ಮುಚ್ಚಿ ಮಲಗಿದ್ದರು. ಡಾಕ್ಟರು ಅವರ ನಾಲಗೆ, ಕಣ್ಣು, ಎದೆ ಎಲ್ಲಾ ಪರೀಕ್ಷೆ ಮುಗಿಸಿದ ನಂತರ ರಂಗಮ್ಮ

ನವರ ಕಡೆ ತಿರುಗಿ "ಎಷ್ಟು ದಿನಗಳಿಂದ ಹೀಗೆ ಆಗುತ್ತಿದೆ? ಏನು ಇದೇ ಮೊದಲನೇ ಸಲವೊ?" ಎಂದು ಕೇಳಿದರು

"ಈಗ ಎರಡು ಮೂರು ದಿನಗಳಿಂದಲೂ ಹೀಗೆ ಶುರು ಆಗಿದೆಯಪ್ಪಾ. ಆದರೆ ಅವಳಿಗೆ ಈ ಕೆಮ್ಮು ಈ ಜ್ವರ ಶುರು ಆಗಿ ಆರು ತಿಂಗಳ ಮೇಲಾದುವು. ಏನೋ ಮಾಮೂಲಿ ಕಾಯಿಲೆ ಇರಬೇಕು ಅಂತ ಮೊದಮೊದಲು ಎಲ್ಲೂ ತೋರಿಸಲಿಲ್ಲ. ಮನೆಯಲ್ಲೇ ನನಗೆ ಗೊತ್ತಿದ್ದ ಕಷಾಯ ಕೊಟ್ಟು ಉಪ ಚಾರ ಮಾಡಿದೆ. ಗುಣಮುಖ ಕಾಣಲಿಲ್ಲ ರೋಗ. ಅಲ್ಲಿಂದ ನಿಮಗೇ ತೋರಿಸಿದ್ದು. ನೀವೇ ನೋಡುತ್ತಿದ್ದೀರಿ." ಎಂದು ಸಾದ್ಯಂತವಾಗಿ ನಿವೇದಿಸಿದರು ರಂಗಮ್ಮ

ಡಾಕ್ಟರು ರಂಗಮ್ಮನವರ ಮಾತು ಕೇಳಿ ಒಂದು ಕ್ಷಣ ಯೋಚಿಸಿದರು. ಏನೋ ನಿರ್ಧರಿಸಿಕೊಂಡು ತಮ್ಮ ಬ್ಯಾಗಿನಿಂದ ಒಂದು ಬಾಟ್ಲಿ ತೆಗೆದು ಔಷಧ ಕೊಟ್ಟು, ಅನುಪಾನ ತಿಳಿಸಿ, "ತುಂಬ ನಿಶ್ಶಕ್ತರಾಗಿದ್ದಾರೆ. ಅವರನ್ನು ಹಾಸಿಗೆಯಿಂದ ಏಳಗೊಡಿಸಬೇಡಿ" ಎಂದು ಹೇಳಿ ಗೋವಿಂದರಾಯರನ್ನು "ಹೀಗೆ ಬನ್ನಿ, ಹೋಗೋಣ." ಎಂದು ಕೈಹಿಡಿದು ಹೊರಕ್ಕೆ ಕರೆದುಕೊಂಡು ಹೋದರು. ತಲೆಬಾಗಿಲಿಗೆ ಬಂದು ನಿಂತು "ನೋಡಿ ಗೋವಿಂದರಾಯರೆ, ನಿಮ್ಮನ್ನು ಕೆಲ ಮಾತು ಕೇಳಬೇಕಾಗಿದೆ. ಕೇಳಬಹುದಷ್ಟೇ?" ಎಂದರು.

"ಅಗತ್ಯ ಕೇಳಿ."

"ನಿಮ್ಮ ಮನೆಯಲ್ಲಿ ಹಿಂದೆ ಯಾರಿಗಾದರೂ ಟಿ. ಬಿ. ಆಗಿತ್ತೇ?"

ಗೋವಿಂದರಾಯರು ಕೆಲ ಹೊತ್ತು ಯೋಚಿಸಿ "ನಮ್ಮ ಕಡೆ ಯಾರಿಗೂ ಆಗಿತ್ತೆಂದು ಹೇಳಲಾರೆ. ಏನೊ, ಆಕೆಯ ಕಡೆಯವರೊಬ್ಬರಿಗೆ ಮಾತ್ರ ಆಗಿ ತ್ತೆಂದು ಕೇಳಿದ್ದೇನೆ. ಏನು ಅದರ ಸಂಶಯವೇ?" ಎಂದು ತಲೆಯ ಮೇಲೆ ಕೈಯಿಟ್ಟುಕೊಂಡರು.

ಡಾಕ್ಟರು ಕೆಲಹೊತ್ತು ಮೌನವಾಗಿದ್ದರು. ಗೋವಿಂದರಾಯರು ಉತ್ತರ ಅಪೇಕ್ಷಿಸಿ ಅವರ ಮುಖ ನೋಡಿದರು. ಆ ಮುಖ ನಿಸ್ತೇಜವಾಗಿ ಕಂಡಿತು. ರಾಯರ ತಳಮಳ ಹೆಚ್ಚಾಗಿ "ಯಾಕೆ? ಹೇಗೆ? ಏನು?" ಎಂದು ಆತುರರಾಗಿ ಕೇಳಿದರು.

"ನೀವೇನು ಗಾಬರಿಯಾಗಬೇಡಿ. ರೋಗ ಇನ್ನೂ ಬಲಿತಿಲ್ಲ. ನೀವು ಕೂಡಲೆ ಮೈಸೂರಿನ ಆಸ್ಪತ್ರೆಗೆ ಕರೆದೊಯ್ದು ತೋರಿಸಿದರೆ ನಿಶ್ಚಿತವಾಗಿ

ಗುಣವಾಗುತ್ತದೆ. ಇಲ್ಲಿ ಈ ರೋಗಕ್ಕೆ ಅಷ್ಟೊಂದು ಅನುಕೂಲತೆಯಿಲ್ಲ....... ನಾನು ಬರಲಾ ?" ಎಂದು ಅವಸರದಿಂದ ಹೊರಟುಹೋದರು.

ಗೋವಿಂದರಾಯರು ದಿಂಗ್ಮೂಢರಾಗಿ ಒಳಗೂ ಬಾರದೆ, ಹೊರಗೂ ಹೋಗದೆ ತಲೆಬಾಗಿಲ ಚೌಕಟ್ಟಿಗೆ ಆತುಕೊಂಡು ಅಲ್ಲಿಯೇ ನಿಂತಿದ್ದರು. ಆಗ ಅವರ ದೃಷ್ಟಿ ಅಗೋಚರದಲ್ಲಿ ಲೀನವಾಗಿತ್ತು. ಮುಗ್ಧ ಸರೂ ಇಷ್ಟೊತ್ತಿನ ವರೆಗೆ ರಂಗಮ್ಮನ ಬೆನ್ನ ಬೆನ್ನ ಹಿಂದೆ ಅವಳ ನೆರಳಂತೆ ಉಲಿದಾಡುತ್ತಿದ್ದವಳು, ಇದೇ ಹೊತ್ತಿಗೆ ಬಿಟ್ಟು ತಂದೆಯ ಹತ್ತಿರ ಬಂದು ಅವನುಟ್ಟ ಧೋತರದ ಅಂಚಿನೊಡನೆ ಆಟವಾಡುತ್ತ ಮಂಕುಬಡಿದವಳಂತೆ ನಿಂತಿದ್ದಳು. ರಂಗಮ್ಮ ಒಳಗೆ ಹೋಗಿ ಏನೋ ಬೇರೆ ಕೆಲಸದಲ್ಲಿ ತೊಡಗಿದ್ದವರು ಹೊರಗೆ ಬಂದು "ವೈದ್ಯರು ಮತ್ತೇನೆಂದರು ಗೋವಿಂದೂ ?" ಎಂದು ಕೇಳಿದರು.

"ಮತ್ತೇನೆ ಮಾತಾಡಮ್ಮಾ, ಕೇಳಿಸೀತು. 'ಟಿ. ಬಿ' ಇದ್ದರೂ ಇರಬಹುದು. ಈಗಲೆ ಮೈಸೂರಿಗೆ ಕರೆದುಕೊಂಡು ಹೋಗಿ ತೋರಿಸಿದರೆ ಗುಣವಾಗುತ್ತದೆ ಎಂದರು." ಗೋವಿಂದರಾಯರು ಸರೂನ ತಲೆಯ ಮೇಲೆ ಕೈಯಾಡಿಸುತ್ತ ಹೇಳಿದರು.

"ನನಗೇನು ಮಣ್ಣು ಗೊತ್ತಾಗಬೇಕಪ್ಪಾ! ಹಾಗೆಂದರೆ ಏನು ಗೋವಿಂದು ?" ರಂಗಮ್ಮ ಕೇಳಿದರು.

"ಅಂದರೆ ಕ್ಷಯ. ಆ ರೋಗಕ್ಕೆ ಇಲ್ಲಿ ಅನುಕೂಲವಿಲ್ಲವಂತೆ. ಮೈಸೂರಲ್ಲಿ ಅದಕ್ಕಾಗಿಯೆ ಒಂದು ದೊಡ್ಡ ಅಸ್ಪತ್ರೆ ಕಟ್ಟಿದ್ದಾರಂತೆ. ಅಲ್ಲಿಗೆ ಹೋಗಿ ಎಂದರು." ಗೋವಿಂದರಾಯರ ಮುಖ ಚಿಂತೆಯ ಕ್ರೂರ ಹಿಡಿತಕ್ಕೆ ತುತ್ತಾಗಿತ್ತು.

"ಹೋಗೋದು ತಾನೆ? ಜೀವದಕಿಂತ ಹೆಚ್ಚೆ? ಅಲ್ಲಿಗೆ ಯಾವಾಗ ಹೊರಡೋಣ?"

"ಯಾವಾಗ ಹೊರಡುವುದೋ ಏನೋ! ನನಗೆ ಒಂದೂ ತಿಳಿಯದಾಗಿದೆ. ಈಗ ತಿಂಗಳ ಕೊನೆ ಬೇರೆ. ಈ ಡಾಕ್ಟರ ಬಿಲ್ ಬೇರೆ ಬಂದು ಕೂತಿದೆ. ಆಫೀಸಿನಲ್ಲಿ ರಜೆ ಕೊಡುತ್ತಾರೋ ಇಲ್ಲವೋ ಹೇಳಲಾರೆ.ಆದರೂ ನೋಡೋಣ ಈ ತಿಂಗಳಂತೂ ಕಳೆಯಲಿ."

"ಈಗ ಎಷ್ಟು ತಾರೀಖು, ಗೋವಿಂದು ?"

"ಇಪ್ಪತ್ತೈದು. ಮೊದಲನೇ ತಾರೀಖಿಗೇ ಸಂಬಳ ಬರುತ್ತೆ. ತೆಗೆದು ಕೊಂಡು ಹೊರಟರಾಯಿತು."

"ನೀನು ಯಾವುದಕ್ಕೂ ಚಿಂತೆ ಮಾಡಬೇಡ, ನಾನಿದ್ದೇನೆ. ಮೊದಲು ಮೈಸೂರಿಗೆ ಕರಕೊಂಡು ಹೋಗುವುದನ್ನು ಗೊತ್ತುಮಾಡಬಿಡು. ಸ್ವಲ್ಪ ತಡೆ, ಒಳಗೆ ಹೋಗಿ ದೇವರನ್ನ ಹೊರಡುವ ಮುಹೂರ್ತ ಕೇಳ್ತೇನೆ." ಎಂದು ರಂಗಪ್ಪ ಒಳಗೆ ಹೋಗಿ, ದೇವರಿದುರು ಕುಳಿತು, ಪಂಚಾಂಗ ತೆಗೆದು ನೋಡಿ, ಒಂದು ತಿಥಿ ಶುಭ ಎಂದು ಗೊತ್ತುಮಾಡಿಕೊಂಡು, ಹಾಗೇ ಪಂಚಾಂಗ ಮೊದಸೆಯೆ ಹೊರಗೆ ಬಂದು ಗೋವಿಂದೂಗೆ ಹೇಳಿದರು: "ಪಂಚಮಿಯ ದಿವ ಚೆನ್ನಾಗಿದೆ. ದಿನವೂ ಗುರುವಾರ. ಆ ದಿನವೆ ಹೊರಟುಬಿಡೋಣ. ನೀನೂ ರಜೆ ತೆಗೆದುಕೊಳ್ಳಲು ಪ್ರಯತ್ನಮಾಡು. ಕೊಟ್ಟೇ ಕೊಡುತಾರೆ; ಇಂಥ ಹೊತ್ತಿನಲ್ಲಿ ಕೊಡದೆ ಇನ್ನಾವಾಗ ಕೊಡೋದು?" ರಂಗಪ್ಪ ಮಾತು ಮುಗಿಸಿ ಒಳಕ್ಕೆ ಹೋದರು. ರಾಯರು ದೇವಾಲಯಕ್ಕೆ ಹೋದರು.

ಸೀತಮ್ಮ ತನ್ನ ಕೋಣೆಯಲ್ಲಿಯೇ ಮಲಗಿದ್ದರೂ, ಹೊರಗೆ ಡಾಕ್ಟರು ಗೋವಿಂದರಾಯರು ಆಡಿದ ಮಾತುಗಳು, ಆನಂತರ ಅಕ್ಕ ತಮ್ಮ ಒಬ್ಬರಿಗೊಬ್ಬರು ಆಡಿಕೊಂಡ ಗೃಹಕೃತ್ಯದ ಮಾತುಗಳು ಎಲ್ಲವನ್ನೂ ಕೇಳಿದ್ದಳು. ಅವರಾಡಿದ 'ಟಿ.ಬಿ' 'ಕ್ಷಯ' ಎಂಬ ಎರಡು ಅಕ್ಷರಗಳು ಅವಳ ಕಣ್ಣೆದುರಿಗೆ, ತನ್ನ ಎಳೆತನದಲ್ಲಿ ನೋಡಿದ ನೆರೆಮನೆಯ ರೋಗಗ್ರಸ್ತ ಶಂಕರಪ್ಪನ ಒಂದು ಭೀಕರ ಚಿತ್ರವನ್ನು ತಂದು ನಿಲ್ಲಿಸಿದವು. ಅವನು ದಿನವೂ ಕೆಮ್ಮುತ್ತಾ ಬೀದಿಯ ಕಟ್ಟೆಯ ಮೇಲೆ ಕೂತು ನರಳುತ್ತಿದ್ದುದು ಈಗ ಅವಳಿಗೆ ಕೇಳಿಸಿದಂತಾಯಿತು. ಎಲ್ಲರ ಕಣ್ಣೆದುರಿಗೇ ಚಿಕಿತ್ಸೆಯಿಲ್ಲದೆ ಅವನು ದಿನದಿನಕ್ಕೆ ನವೆದು ಅಸ್ಥಿಪಂಜರದಂತಾಗಿ ಕಣ್ಣು ಮುಚ್ಚಿದ ಗಳಿಗೆ ನೆನಪಾಗಿ ಅವಳನ್ನು ಸತ್ವಹೀನ ಮಾಡಿತು ಅವನು ಕೆಮ್ಮುವಾಗ ಅನುಭವಿಸುತ್ತಿದ್ದ ತೀವ್ರ ಯಾತನೆ, ಉಸಿರಿಗಾಗಿ ಪಡುತ್ತಿದ್ದ ಕಷ್ಟ, ಎಲ್ಲಾ ಒಂದು ನಿಮಿಷದಲ್ಲಿ ಸೀತಮ್ಮನ ಕಣ್ಣೆದುರಿಗೇ ಬಂದಂತಾಯಿತು. ಅದನ್ನು ನೆನೆದು ಅವಳ ಮೈ ನಡುಗಿತು. ಈಗ ತನಗೆ ಬಂದಿರುವುದು ಅದೇ ಕಾಯಿಲೆ ಎಂಬುದು ತಿಳಿದೊಡನೆ ಸೀತಮ್ಮನ ಹೃದಯಕ್ಕೆ ಶೂಲವಿಟ್ಟಿರಿದಂತಾಯಿತು. ಸೀತಮ್ಮ ಕಳವಳ ಹೆಚ್ಚಾಗಿ ಹಾಸಿಗೆಯ ಮೇಲೆ ಅತ್ತಿತ್ತ ಹೊರಳಾಡಿದಳು. ತನ್ನ ಸಂಸಾರಜೀವನದ ನೆನಪುಗಳು ದೃಶ್ಯಮಾಲೆಯಾಗಿ ಅವಳ ಮನದೆದುರಿಗೆ ಹಾಯ್ದು ಹೋದವು. ಒಂದು ಕ್ಷಣ ಸಾವನ್ನು ನೆನೆದು ಅಂಜಿದಳು. ತನ್ನವರು, ತನ್ನದು ಎಂಬುದಿದೆಲ್ಲವನ್ನೂ ಬಿಟ್ಟುಹೋಗಬೇಕಾಗುತ್ತದಲ್ಲಾ ಎಂದು

ಅತ್ತಳು. ಮರುಕ್ಷಣ ಸಾವಿಗಂಜಿ ಎಷ್ಟು ದಿನ ಬದುಕುವುದು? ಸಾವು ತಪ್ಪುವುದೇ? ನನಗಾಗಿ ಮೊದಲೇ ಜರ್ಜರಿತರಾದ ಇವರನ್ನು ಇನ್ನೂ ಎಷ್ಟಂದು ಗೋಳಾಡಿಸುವುದು? ಎಷ್ಟು ಭಾರ ಅವರ ಮೇಲೆ ಹಾಕುವುದು? ಸಾಕು. ಮುಗಿಸಿಬಿಡುವುದೇ ಒಳಿತು. ಸೀತಮ್ಮನ ಮುಖ ಮನಸ್ಸಿನಲ್ಲಿಯ ಈ ಹೊಯ್ದಾಟಗಳಿಗೆಲ್ಲ ಕನ್ನಡಿಯಾಗಿತ್ತು. ಕೊನೆಗೊಮ್ಮೆ ಒಂದು ಯಾವುದೋ ನಿರ್ಧಾರಕ್ಕೆ ಬಂದು ದೀರ್ಘವಾದ ನಿಶ್ವಾಸ ಬಿಟ್ಟು, ಇತ್ತ ಇದ್ದ ಮುಖವನ್ನು ಅತ್ತ ಮಾಡಿ ಕೈಕಾಲುಗಳನ್ನು ಎತ್ತಿ ಒಗೆದರು.

ದೇವಾಲಯಕ್ಕೆ ಹೋಗಿದ್ದ ಗೋವಿಂದರಾಯರು ಇದೇ ಹೊತ್ತಿಗೆ ತಿರುಗಿ ಬಂದರು. ಸೀತಮ್ಮನ ಕೋಣೆಯಲ್ಲಿ ಹಣಿಕಿಹಾಕಿದರು. ಮಲಗಿದಂತೆ ಕಂಡದ್ದರಿಂದ ನೇರವಾಗಿ ಒಳಕ್ಕೆ ಹೋಗಿ ಕೈಕಾಲು ತೊಳೆದುಕೊಂಡು ಸಂಧ್ಯಾವಂದನೆಗೆ ಕುಳಿತರು.

ತಲೆಬಾಗಿಲಂಚಿನಲ್ಲಿ ಅಕ್ಕ ತಮ್ಮ ಇವರ ಮಾತು ನಡೆದಾಗಲೆ ಸರೂ ಅವರ ಕಣ್ಣು ತಪ್ಪಿಸಿ ಯಾವಾಗಲೋ ಜಾರಿಕೊಂಡು ಒಳಗೆ ಬಂದು ದೀಪದ ಮುಂದೆ ಕುಳಿತು ಗಟ್ಟಿಯಾಗಿ ಓದತೊಡಗಿದ್ದಳು: "ಗುರುಹಿರಿಯರ ಮಾತನ್ನು ಮೀರಬಾರದು. ಪ್ರಾಣಿಗಳಲ್ಲಿ ದಯೆ ಇರಬೇಕು. ದೇವರಲ್ಲಿ ಭಕ್ತಿ ಇರಬೇಕು."

ಸೀತಮ್ಮ ಇನ್ನೊಂದು ಪಕ್ಕಕ್ಕೆ ಹೊರಳಿ, ಕ್ಷೀಣ ಧ್ವನಿಯಿಂದ ಕರೆದರು: "ಸರೂ....!"

ಸರೂ ಪುಸ್ತಕದಲ್ಲಿ ನೆಟ್ಟ ಕಣ್ಣುಗಳನ್ನು ಕದಲಿಸದೆ, ಕುಳಿತಲ್ಲಿಂದಲೇ "ಏನಮ್ಮಾ?" ಎಂದು ಮತ್ತೆ ಓದು ಮುಂದರಿಸಿದಳು

"ಇಲ್ಲಿ ಬಾ ಮಗೂ" ಎಂದು ಕರೆದಳು ಸೀತಮ್ಮ

ಸರೂ ಇನ್ನೂ ಓದುವುದರಲ್ಲಿಯೇ ಇದ್ದಳು.

"ಹೋಗು ಸರೂ, ಯಾಕೋ ನಿಮ್ಮಮ್ಮ ಕರೀತಿದ್ದಾಳೆ ನೋಡು. ಏನು ಬೇಕು ಕೇಳಿ ಬಾ." ಎಂದು ರಂಗಮ್ಮ ತಾವಿದ್ದಲ್ಲಿಂದಲೇ ಪಂಚಾಯತಿ ಮಾಡಿದರು.

ಸರೂ ಪುಸ್ತಕ ಮುಚ್ಚಿ, ಎದ್ದು ಅದನ್ನು ತನ್ನ ಪೆಟ್ಟಿಗೆಯಲ್ಲಿ ಇಟ್ಟು ಅಮ್ಮನ ಬಳಿ ತೆರಳಿದಳು.

ಸೀತಮ್ಮ ಮಲಗಿದಲ್ಲಿಂದಲೇ ಕೈನೀಡಿ ತನ್ನ ಹತ್ತಿರ ಕರೆದುಕೊಂಡು, ಕುಳಿತುಕೊಳ್ಳಲು ಹೇಳಿ, ಅವಳ ತಲೆಯನ್ನು ಮೃದುವಾಗಿ ನೇವರಿಸುತ್ತ "ನಾನು ಹೇಳಿದಂತೆ ಕೇಳುವಿಯಾ ಮಗು?" ಎಂದು ಕೇಳಿದರು.

"ಹೂಂ, ಕೇಳುವೆನಮ್ಮಾ" ಎಂದು ಕೂಸು ತಾಯಿಯ ಮುಖವನ್ನೇ ದಿಟ್ಟಿಸಿತು.

"ನಾನು ಎಲ್ಲಿಗಾದರೂ ಹೋದರೆ, ನೀನು ಅತ್ತೆಯ ಜೊತೆಯಲ್ಲಿಯೇ ಇರತೀಯಾ?"

"ಯಾಕೆ? ನೀನೆಲ್ಲಿಗೆ ಹೋಗುವೆ?"

"ನಾನು ಎಲ್ಲಿಗೋ ಹೋದೆ ಎಂದು ತಿಳಿ. ನೀನೊಬ್ಬಳೇ ಇರತೀಯಾ?"

"ಹೋಗದೆ ಯಾಕೆ ತಿಳೀಬೇಕಮ್ಮಾ? ನೀನು ಎಲ್ಲಿಗೇ ಹೋಗು, ನಾನು ನಿನ್ನ ಜೊತೆಯಲ್ಲಿ ಬರ್‍ತೀನಿ. ನನ್ನೂ ಕರೆದುಕೊಂಡು ಹೋಗಬೇಕು ನೋಡು."

"ಇಲ್ಲ ಮಗು. ನಾನು ಬಹಳ ದೂರ ದೂರ ಹೋಗುವೆ. ನೀನಾದೂ ಬರಲಾಗದಂತಹ ಸ್ಥಳಕ್ಕೆ ಹೋಗುವೆ."

"ಅದೇಕಮ್ಮಾ, ನಮ್ಮನ್ನೆಲ್ಲಾ ಬಿಟ್ಟು ಹೋಗುತ್ತೀಯಾ?"

"ಅದೆಲ್ಲಾ ಈಗ ನಿನಗೆ ತಿಳಿಯದು. ನೀನು ದೊಡ್ಡವಳಾದ ನಂತರ ತಿಳಿಯುತ್ತದೆ."

"ಹಾಗಾದರೆ ನಾನು ದೊಡ್ಡವಳೇ ಆಗೋಲ್ಲ."

"ಹಾಗೆಂದರೆ ನಡೆಯೋದಿಲ್ಲ ಮಗು. ನೋಡು, ನಾನೊಂದು ಮಾತು ಹೇಳುವೆ. ಅದನ್ನು ನೀನು ಎಂದಿಗೂ ಮರೆಯಬೇಡ ತಿಳಿಯಿತೆ?"

"ಹೂಂ...." ಎಂದಳು ಸರೂ ಭಾರವಾದ ಧ್ವನಿಯಲ್ಲಿ,— ಅಮ್ಮ ತನ್ನನ್ನು ಬಿಟ್ಟು ಎಲ್ಲಿಗೋ ಹೋಗುತ್ತಾಳೆಂಬ ಭಯದಿಂದ.

"ನೋಡು, ನೀನು ಇನ್ನು ಕೆಲ ವರ್ಷಗಳಾದ ಬಳಿಕ ದೊಡ್ಡವಳಾಗುವೆ. ಆಗ ನಿನಗೆ ಮದುವೆಯಾಗುವುದು; ನಿನಗೊಬ್ಬ ಗಂಡ ಬರುತ್ತಾನೆ."

"ಮೊನ್ನೆ ಆ ಪದ್ದಕ್ಕನ ಮದುವೆ ಆಯಿತಲ್ಲಾ ಹಾಗೆಯೇ?" ಎಂದು ತಾಯಿಯ ಮಾತನ್ನು ಅರ್ಧಕ್ಕೇ ತಡೆದು, ಅವಳ ಮುಖವನ್ನು ಕುತೂಹಲದಿಂದ ನೋಡುತ್ತ ಸರೂ ನುಡಿದಳು.

ಸೀತಮ್ಮ ಹುಸಿನಗೆ ನಕ್ಕು "ಹೂಂ, ಹಾಗೆಯೇ. ಆ ನಿನ್ನ ಗಂಡ ಹೇಳಿದ ಹಾಗೆ ಕೇಳಿಕೊಂಡಿರುತ್ತಿಯಾ?" ಎಂದು ಕೇಳಿದರು.

"ಹೂಂ" ಎಂದು ಧ್ವನಿ ಎಳೆದು ಮಗು ಮುಖ ಕೆಳಗೆ ಹಾಕಿತು.

"ಇಲ್ಲಿ ಕೇಳು ಸರೂ, ಈ ಮಾತುಗಳನ್ನು ಚೆನ್ನಾಗಿ ಮನಸ್ಸಿನಲ್ಲಿ ಇಟ್ಟುಕೊ. ಹೆಂಗುಸಿಗೆ ಗಂಡನೇ ದೇವರು; ಅವನೇ ಅವಳ ಸರ್ವಸ್ವ; ಆ ಗಂಡನೆಂಬವನಲ್ಲಿಯೆ ಅಡಕವಾಗಿದೆ ಈ ಪ್ರಪಂಚದ ಬಾಳ್ವೆ. ಅದಕ್ಕೆ ನೀನು ಆ ಗಂಡನಿಗೆ ಸಂತೋಷವಾಗುವಂತೆ, ಅವನ ಮನ ನೋಯದಂತೆ ಅವ ನೊಡನೆ ನಡೆದುಕೊಳ್ಳಬೇಕು. ಅವನ ಸುಖದುಃಖಗಳಲ್ಲಿ ನೀನೂ ಒಂದಾಗ ಬೇಕು; ದುಃಖ ಮರೆಯಾಗಿ ಸುಖ ತೋರುವಂತೆ ಮಾಡಬೇಕು. ಇದೇ ನಿನ್ನ ಕರ್ತವ್ಯ, ಇದೇ ನೀನು ನಿನ್ನ ಕಣ್ಣಿನ ನೇರಕಿಟ್ಟುಕೊಳ್ಳಬೇಕಾದ ಧ್ಯೇಯ. ಈ ಸಂಸಾರ ಒಂದು ತಪಸ್ಸು ಎಂದು ತಿಳಿದು ಬಾಳಬೇಕು; ಕೊಟ್ಟ ಮನೆಗೆ ನೀನು ಹೆಸರಾಗಬೇಕು; ನಿನ್ನ ತವರುಮನೆಯ ದೀಪದ ಬೆಳಕು ಅತ್ತೆಯ ಮನೆಗಾಗಬೇಕು. ನಾನು ಹೇಳಿದ್ದು ತಿಳಿಯಿತೇ ಮಗು?"

"ಆ ಗಂಡನೇ ದೇವರೇನಮ್ಮಾ?" ಆಶ್ಚರ್ಯದಿಂದ ಕೇಳಿತು ಮಗು.

"ಹೌದು. ಆದರೆ ಅದರ ಅರ್ಥ ನಿನಗೆ ಈಗಲೇ ತಿಳಿಯುವುದಿಲ್ಲ. ನೀನು ದೊಡ್ಡವಳಾದ ಮೇಲೆ ತಿಳಿಯುತ್ತದೆ. ಈ ಮಾತುಗಳನ್ನು ಮಾತ್ರ ನೆನಪಿ ನಲ್ಲಿಟ್ಟು ಅವಕ್ಕೆ ಸರಿಯಾಗಿ ನಡದೆಯಾದರೆ ನನ್ನ ಜನ್ಮವೂ ನಿನ್ನನ್ನು ಪಡೆದ ದ್ದಕ್ಕೆ ಸಾರ್ಥಕವಾಗುತ್ತೆ."

ಈ ಮಾತುಗಳು ಅವಳಿಗೆ ಭಾರವೆನಿಸಿದುವು. ಏನೂ ಮಾರುತ್ತರ ಹೇಳದೆ ಸುಮ್ಮನೇ ತಾಯಿಯ ಮೈಗೆ ತನ್ನ ತಲೆಯಾನಿಸಿದಳು.

"ನಿದ್ದೆ ಬರುತ್ತಿದೆಯೇ ಮಗು?" ಎಂದು ಸೀತಮ್ಮ ಅವಳ ತಲೆಯ ಮೇಲೆ ಕೈಯಾಡಿಸಿದರು.

"ಹೂಂ" ಎಂದಿತು ಮಗು ಜಡವಾದ ಧ್ವನಿಯಲ್ಲಿ.

"ಹೋಗು, ಹಾಗಾದರೆ ಊಟಮಾಡಿ ಮಲಗು ನನ್ನ ಚಿನ್ನಾ. ಮಲಗು ವಾಗ ದೇವರಿಗೆ ನಮಸ್ಕರಿಸಿ ಮಲಗುತ್ತೀಯೋ ಇಲ್ಲವೋ?"

"ದಿನಾಲು ನಮಸ್ಕಾರ ಮಾಡುತ್ತೀನಮ್ಮಾ" ಎಂದು ಆಕಳಿಸಿದಳು ಸರೂ.

ರಂಗಮ್ಮನೂ ಅಡುಗೆಮನೆಯಿಂದ ಇದೇ ಹೊತ್ತಿಗೆ ಕೂಗಿದರು:

"ಬಾ ಮಗೂ, ಊಟಕ್ಕೆ." ಎಂದು.

ಸರೂ ಅತ್ತೆಯ ಕರೆ ಕೇಳಿದೊಡನೆ ಒಳಗೆ ಓಡಿದಳು. "ಅತ್ತೇ, ಅಮ್ಮ ನಮ್ಮನ್ನೆಲ್ಲ ಬಿಟ್ಟು ಎಲ್ಲೋ ದೂರ ಹೋಗುತ್ತಾಳಂತೆ ನೋಡೇ! ನೀನು ಅವಳನ್ನ ಹೋಗಗೊಡಬಾರದು ನೋಡು."

"ಆಗಲಿ ಬಾ. ಮೊದಲು ಊಟಮಾಡು."

"ಅತ್ತೇ, ಈ ದಿನ ಯಾವ ಕತೆ ಹೇಳುತ್ತೀಯಾ?"

"ನೀನೇ ಹೇಳು, ಯಾವ ಕತೆ ಹೇಳಲಿ?"

"ಮೊನ್ನೆ ಹೇಳಿದ್ದೆಯಲ್ಲ, ಆ ಯುವರಾಜನ ಕತೆ, ಅದನ್ನೇ ಹೇಳು."

"ಹೇಳುತ್ತೇನೆ, ಇಲ್ಲಿ ಕುಳಿತುಕೊ ಬಾ." ಎಂದು ತೊಡೆಯ ಮೇಲೆ ಕುಳಿತುಕೊಳ್ಳಲು ಸೂಚಿಸಿದರು.

ಸರೂ ಅತ್ತೆಯ ತೊಡೆ ಏರಿ ಕುಳಿತಳು. ರಂಗಮ್ಮ ತುತ್ತುಮಾಡಿ ಉಣಿಸುತ್ತ ಕತೆ ಹೇಳತೊಡಗಿದರು. ಊಟ ಮುಗಿಯುವುದಕ್ಕೂ ಕತೆಯೂ ಮುಗಿಯಿತು. ಕೈಬಾಯಿ ತೊಳೆಯಿಸಿ ಹಾಸಿಗೆಯ ಮೇಲೆ ಕರೆತಂದು ಮಲಗಿಸಿದರು. ಆಗಲೂ ಮತ್ತೆ ಕಥೆ ಹೇಳಬೇಕು ನಿದ್ರೆ ಬರಿಸುವುದಕ್ಕೆ ಪಕ್ಕದಲ್ಲಿಯೇ ಕುಳಿತು ಅವಳನ್ನು ಮೃದುವಾಗಿ ತಟ್ಟುತ್ತಾ, ಕಾಲಿಲ್ಲದ ಕತೆ ಮತ್ತೆ ಪ್ರಾರಂಭಿಸಿದರು. ಅವಳಿಗೆ ನಿದ್ದೆ ಹತ್ತಿದ ನಂತರ, ಮೈತುಂಬ ಹೊದಿಸಿ, ಎದ್ದು ಬಂದು "ಏಳು ಗೋವಿಂದೂ, ಊಟಕ್ಕೆ. ಗಂಟೆ ಒಂಬತ್ತಾಯಿತೆಂದು ಕಾಣುತ್ತೆ" ಎಂದು ಮಣೆ ಹಾಕಿ ಎಲೆ ಹಾಕಿದರು. ಗೋವಿಂದರಾಯರು ಬಂದು ಕುಳಿತು ಊಟ ಮುಗಿದನಂತರ, ಸೀತಮ್ಮನಿಗೆ ಹಾಲು, ಗಂಜಿ ಕೊಟ್ಟು ಕಸಮುಸುರೆಯನ್ನು ಮಾಡಿ, ಅಡುಗೆಮನೆ ತೊಳೆದು ರಂಗಮ್ಮ ಮಲಗುವ ವೇಳೆಗೆ ಹತ್ತುಗಂಟೆಯಾಗಿತ್ತು. ಆನಂತರ ಕೆಲಹೊತ್ತು ಅಕ್ಕತಮ್ಮಂದಿರಿಬ್ಬರೂ ಲೋಕಾಭಿರಾಮವಾಗಿ ಮಾತುಕತೆಯಾಡುತ್ತ ಕುಳಿತರು. ಆಗ ಅವರಿಬ್ಬರ ಮನಸ್ಸಿನ ರಂಗದ ಮೇಲೆ ತಮ್ಮ ಗತಜೀವನದ ಅದೆಷ್ಟೋ ದೃಶ್ಯಗಳು ಒಂದರ ಹಿಂದೆ ಒಂದೊಂದಾಗಿ ಕಾಣಿಸತೊಡಗಿದವು. ತಾವು ಇದ್ದ ಕಾಲವನ್ನೇ ಮರೆತು ಆ ಹಿಂದಿನ ಕಾಲದಲ್ಲಿ ಲೀನರಾಗಿ ವಿಹರಿಸ ಹತ್ತಿದರು. ತಮ್ಮ ಜೀವನನಾಟಕ ನಡೆದಾಗ ತಾವೇ ಅದರ ಪ್ರೇಕ್ಷಕರಾಗಿ ನೋಡತೊಡಗಿದಂತೆನಿಸಿತು ಅವರಿಗೆ. ಕಾಲದ ತೆರೆ ಸರಿದು ನಾಟಕ ಮುಗಿಯಿತು ಎನಿಸಿದೊಡನೆ ಇಬ್ಬರೂ ಎದ್ದು ಹೋಗಿ ತಮ್ಮ ತಮ್ಮ ಜಾಗಗಳಲ್ಲಿ

ಕಾಲಕ್ರಮೇಣ ಬೇರೆ ಜಮೀನುಗಳನ್ನೂ ಕೊಂಡುಕೊಂಡು ಮೊದಲಿನ ತಮ್ಮ ಜಮೀನಿನ ಹತ್ತರಷ್ಟು ಸ್ವಾರ್ಜಿತವಾದ ಆಸ್ತಿಯನ್ನೂ ಮಾಡಿದರು. ಈಗ ಹೆಚ್ಚು ಕಡಿಮೆ ರಾಮನಾಥಪುರದ ಸುತ್ತಮುತ್ತಲಿದ್ದ ಎಲ್ಲಾ ಗದ್ದೆಗಳೂ ಇವರವೇ ಆಗಿದ್ದುವು.

ಚಂದ್ರಶೇಖರಯ್ಯನವರು ಬೆಳಿಗ್ಗೆ ಆರು ಗಂಟೆಗೇ ಏಳುವರು. ಏಳು ವಾಗಲೇ ದೇವರನಾಮ ಉಚ್ಚರಿಸುವರು. ಎದ್ದು ಪ್ರಾತರ್ವಿಧಿ ತೀರಿಸಿ ಕೊಂಡು ಒಂದು ಹೂಬುಟ್ಟಿಯನ್ನು ಹಿಡಿದು ಹಿತ್ತಲಿಗೆ ಹೋಗುವರು. ಬಳ್ಳಿ-ಗಿಡಗಳಲ್ಲಿ ಬಿಟ್ಟಿದ್ದ ಹೂಗಳನ್ನೆಲ್ಲಾ ಬಿಡಿಸಿ ದೇವರಿಮರಿಗೆ ತಂದಿಡು ವರು. ನಂತರ ಹೊಲ, ಗದ್ದೆ, ತೋಟಗಳ ಕಡೆಗೆ ಹೋಗಿ ಅಲ್ಲಿನ ಕೆಲಸ ಗಾರರಿಗೆ ಅವರವರ ಕೆಲಸದ ಬಗ್ಗೆ ಹೇಳಿ, ತಿರುಗಿ ಮನೆಗೆ ಬಂದು ಕಾರಕೂನ ನೊಡನೆ ದೈನಂದಿನ ಲೆಕ್ಕಾಚಾರವನ್ನೆಲ್ಲ ಚರ್ಚಿಸಿ ತಮ್ಮ ಕಾಗದ ಪತ್ರಗಳನ್ನೆಲ್ಲಾ ನೋಡಿ ಮುಗಿಸುವ ಹೊತ್ತಿಗೆ ಹತ್ತುಗಂಟೆಯಾಗುವುದು. ಅಲ್ಲಿಂದ ಸ್ನಾನ ಮುಗಿಸಿಕೊಂಡು ದೇವರಮನೆ ಪ್ರವೇಶಿಸಿದರೆಂದರೆ ನಿತ್ಯದ ಆಹ್ನಿಕ, ಸಹಸ್ರ ನಾಮಾವಳಿಯೊಡನೆ ಯಥಾವಿಧಿ ದೇವರಪೂಜೆ ನಡೆದು, " ಲೇ, ನೈವೇದ್ಯಕ್ಕೆ ತೊಗೊಂಡು ಬಾ. " ಎಂದು ತಮ್ಮ ಹೆಂಡತಿ ರುಕ್ಮಿಣಿಯಮ್ಮನವರನ್ನು ಕೂಗುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡಕ್ಕೇ ಬರುತ್ತದೆ. ಕೊನೆಯ ಮಂಗ ಳಾರತಿಯ ಹೊತ್ತಿನ ಗಂಟೆಯ ಶಬ್ದ ಆಯಿತೆಂದರೆ, ಅದೇ ಎಲ್ಲರಿಗೂ ' ಊಟ ಸಿದ್ಧವಾಗಿದೆ' ಎಂಬ ಎಚ್ಚರಿಕೆ ಕೊಡುವ ಸೂಚನೆ. ಮಗುವಿನಿಂದ ಹಿಡಿದು ಮುದುಕರ ವರೆಗೆ ಎಲ್ಲರೂ ಆ ಹೊತ್ತಿಗೆ ಬಂದು ಸಿದ್ಧರಾಗಿ ನಿಲ್ಲುವರು. ಮಂಗಳಾರತಿ ಮುಗಿದೊಡನೆ ಎಲ್ಲರಿಗೂ ಸಾಲಾಗಿ ಎಲೆ ಹಾಕುವರು. ಚಂದ್ರ ಶೇಖರಯ್ಯನವರೂ ಎಲ್ಲರೊಡನೆ ಕುಳಿತು ಸಹಭೋಜನ ನಡೆಸುವರು. ಏನಿಲ್ಲೆಂಥರೂ ಪ್ರತಿದಿನ ಇಪ್ಪತ್ತು ಜನಕ್ಕೆ ಮಿಕ್ಕಿದ ಆ ಪಂಕ್ತಿಗೆ ರುಕ್ಮಿಣಿಯಮ್ಮ ಒಬ್ಬರೇ ಅಡುಗೆ ಮಾಡುವದಲ್ಲದೆ, ಒಬ್ಬರೇ ಸೊಂಟಕಟ್ಟಿ ನಿಂತು ಬಡಿಸುವರು.

ಚಂದ್ರಶೇಖರಯ್ಯನವರು ಊಟಮಾಡಿ ಮೂರು ಗಂಟೆಯ ವರೆಗೆ ವಾಮಕುಕ್ಷಿಯಾಗಿ ಮಲಗಿ ವಿಶ್ರಾಂತಿ ಪಡೆಯುವರು. ಅನಂತರ ಎದ್ದು ಮತ್ತೆ ಮುಖ ತೊಳೆದುಕೊಂಡು, ಒಂದು ಲೋಟ ನೀರು ಕುಡಿದು, ಹೊರಗೆ ಬಂದು ಜಗುಲಿಯ ಮೇಲೆ ಹಾಸಿದ ಚಾಪೆಯ ಮೇಲೆ ಕೂಡುವರು. ರೈತಾಪಿ ಜನರು, ಊರ ಇನ್ನಿತರ ಜನರು ಬಂದು ಸೇರುವರು. ಊರಲ್ಲಿಯ ಯಾವ

ಜಗಳಗಳೇ ಆಗಲಿ, ಯಾರ ಕಷ್ಟಗಳೇ ಆಗಲಿ ಅವೆಲ್ಲಾ ಇಲ್ಲಿಯೇ ನಿವಾರಣೆ-ಯಾಗುವವು. ಅವಕ್ಕೆಲ್ಲಾ ಚಂದ್ರಶೇಖರಯ್ಯನವರೇ ನ್ಯಾಯಾಧಿಕಾರಿಗಳು. ಊರಿನ ಯಾವುದೇ ಕೆಲಸಕ್ಕೂ ಅವರು ಇದ್ದೇ ಇರಬೇಕು. ಊರಿಗೆ ರೋಗ ಬರಲಿ, ಒಂದು ಸಮಾರಂಭ ಬರಲಿ, ಯಾರಿಗೇ ಸತ್ಕಾರಕೂಟ ಕೊಡಲಿ, ಎಲ್ಲದಕ್ಕೂ ಶುಭದಿಂದ ಹಿಡಿದು ಅಶುಭದ ವರೆಗೆ, ಜನನದಿಂದ ಮರಣದ ವರೆಗೆ ಮುಂದಾಳಾಗಿ ನಿಂತು ಕೆಲಸ ಮಾಡುವರು.

ಸಾಯಂಕಾಲದ ವರೆಗೆ ಹೀಗೆ ಮಾತುಕತೆಯಾಡುತ್ತಿದ್ದು ನಂತರ ತಿರುಗಾಡಿಕೊಂಡು ಬರಲು ಹೊರಡುವರು. ಹೋಗುವಾಗ ಎಲ್ಲರ ಮನೆಯ ಕ್ಷೇಮಸಮಾಚಾರವನ್ನೂ ವಿಚಾರಿಸುವರು. ತಮ್ಮ ತೋಟಪಟ್ಟಿಗಳಿಗೆ ಹೋಗಿ ತಿರುಗಿ ಏಳು-ಏಳೂವರೆ ಗಂಟೆಗೆ ಮನೆಗೆ ಮರಳುವರು. ಸಂಧ್ಯಾ-ವಂದನೆ, ಭಗವದ್ಗೀತಾಪಾರಾಯಣದ ನಂತರ ಊಟ ಮುಗಿಸಿ ಶತಪಥ ತಿರುಗುತ್ತಿರುವಾಗಲೆ ರುಕ್ಮಿಣಿಯಮ್ಮನೂ ತಮ್ಮ ಕೆಲಸ ಮುಗಿಸಿಕೊಂಡು ಬಂದು ವೀಳ್ಯವೊಂದನ್ನು ಕೈಯ್ಯಲ್ಲಿಡುವರು. ಹಾಗೇ ನಿಂತು ಸ್ವಲ್ಪ ಹೊತ್ತು ಸಂಸಾರದ ವಿಷಯವಾಗಿಯೋ ಮತ್ತೇತರ ವಿಷಯವಾಗಿಯೋ ಚಾಟು ಗೋಷ್ಠಿಯಾಡಿ ಮಲಗುವ ಮನೆಗೆ ಹೋಗುವರು. ಹೀಗೆ ಅವ್ಯಾಹತವಾಗಿ ಸಾಗಿ ಬಂದಿದೆ ಅವರ ನಿತ್ಯಜೀವನಕ್ರಮ.

ರುಕ್ಮಿಣಮ್ಮ ಚಂದ್ರಶೇಖರಯ್ಯನವರಿಗೆ ತಕ್ಕ ಗೃಹಿಣಿ. ಅವರ ಬಣ್ಣ ಕಪ್ಪಾದರೂ ದೇಹಮಾಟದಿಂದ, ಕಪ್ಪುಕಣ್ಣುಗಳಿಂದ, ಕಿವಿ ಮೂಗುಗಳಿಂದ ನೋಡಲು ಲಕ್ಷಣವಾಗಿದ್ದರು. ವಯಸ್ಸು ಐವತ್ತರ ಹತ್ತಿರಕ್ಕೆ ಬಂದಿದ್ದರೂ ಇಪ್ಪತ್ತು ವರ್ಷದ ಹುಡುಗಿಯಂತೆ ಚುರುಕಾಗಿ ಕೆಲಸಮಾಡುವರು. ಮನೆಯ ಸಂಪೂರ್ಣ ಜವಾಬ್ದಾರಿಯು ಅವರದ್ದೇ ಆಗಿತ್ತು. ಅಡುಗೆಮನೆಯ ಪ್ರತಿ ಸಾಮಾನುಗಳ ಮೇಲೂ ಅವರ ಅಮೃತಹಸ್ತ ಓಡಾಡುತ್ತಿದ್ದುದರಿಂದಲಿ ಪಾಕ, ನಳಪಾಕವಾಗಿ ಪರಿಣಮಿಸುತ್ತಿತ್ತು. ಅನ್ನಪೂರ್ಣೆಯ ಕೃಪೆಯನ್ನು ಪಡೆದ ಅವರು ನಿತ್ಯವೂ ಎಷ್ಟೇ ಜನ ಬರಲಿ, ಎಂತಹದೇ ಹೊತ್ತಿನಲ್ಲಿ ಬರಲಿ, ತೃಪ್ತಿಯನ್ನೇ ಬಡಿಸುತ್ತಿದ್ದರು. "ಅಮ್ಮಾ, ನೀವೇ ಯಾಕೆ ಎಲ್ಲಾ ಕೆಸಲ ಗಳನ್ನೂ ಮಾಡಿ ದಣಿಯುತ್ತೀರಿ? ಯಾರಾದರೂ ಒಬ್ಬ ಪರಿಚಾರಕರನ್ನು ಗೊತ್ತುಮಾಡಬಾರದೇ?" ಎಂದು ಮನೆಗೆ ಬಂದವರಲ್ಲಿ ಅನೇಕ ಜನ ಕೇಳಿದ್ದೂ ಉಂಟು. "ನನಗೇನು ಆಗಿದೆಯಮ್ಮಾ, ಕಡಿದರೆ ನಾಲ್ಕಾಳು

ಅನ್ನುವ ಹಾಗಿದ್ದೇನೆ. ಇನ್ನೂ ಅಷ್ಟು ಜನ ಬರಲಿ, ನಾನು ಮಾಡುವೆ. ನಾನೇ ಮಾಡಿ, ನನ್ನ ಕೈಯಿಂದಲೇ ಬಡಿಸಿದರೇ ನನಗೆ ಸಮಾಧಾನ. ನಾನು ಗಟ್ಟಿಯಾಗಿರುವವರೆಗೂ ನಾನೇನು ಇನ್ನೊಬ್ಬರಿಗೆ ಅಡುಗೆ ಕೆಲಸ ಬಿಟ್ಟು ಕೊಡೋದಿಲ್ಲ." ಎಂದು ನಕ್ಕು ಉತ್ತರ ಹೇಳಿದ್ದೂ ಉಂಟು.

ರುಕ್ಮಿಣಮ್ಮ ಎಲ್ಲರ ಊಟ ಮುಗಿದ ನಂತರ ಮಧ್ಯಾಹ್ನ ಒಂದು ಗಂಟೆಗೆ ಊಟ ಮಾಡುವರು. ಹನ್ನೆರಡರ ಬಸ್ಸು ಬಂದು ಹೋಯಿತೋ ಇಲ್ಲವೊ ಎಂದು ಊಟಕ್ಕೆ ಕೂಡುವಾಗಲೂ ಯಾರಾದರೂ ಬರಬಹುದೆಂಬ ನಿರೀಕ್ಷೆ ಯಿಂದ ಸ್ವಲ್ಪ ಹೊತ್ತು ಕಾದು ಊಟ ಮುಗಿಸುವರು. ರುಕ್ಮಿಣಮ್ಮ ಎಲೆ ಬಡಿಸಿಕೊಂಡು ಮೊದಲ ತುತ್ತು ತೆಗೆದುಕೊಳ್ಳಬೇಕೆನ್ನುವಾಗಲೂ ಒಮ್ಮೊಮ್ಮೆ ಅತಿಥಿಗಳು ಬಂದು ಅದನ್ನು ತಪ್ಪಿಸಿದ್ದುಂಟು. ಬಡಿಸಿದ ಎಲೆಯನ್ನು ಅತಿಥಿ ಗಳಿಗಿಟ್ಟು ತಾವು ಹಿಂದುಗಡೆಯಿಂದ ಊಟ ಮುಗಿಸುವರು. ಮನೆಯಲ್ಲಿಯ ಅತಿಥಿಗಳಿಗೆ ಅವರ ಬೇಕು-ಬೇಡಗಳನ್ನು ನೋಡಿಕೊಳ್ಳಬೇಕು, ದನು-ಕರು ಗಳು ಸರಿಯಾಗಿ ಹೊತ್ತು ಹೊತ್ತಿಗೆ ಮನೆಗೆ ಬರುತ್ತಿವೆಯೇ, ಅವಕ್ಕೆ ಹುಲ್ಲು ನೀರು ಸರಿಯಾಗಿವೆಯೇ, ಮನೆಯಲ್ಲಿ ಯಾವ ಯಾವ ಪದಾರ್ಥ ಇವೆ, ಯಾವು ದನ್ನು ತರಿಸಬೇಕು, ಮನೆಗೆ ಹೊಸಬರು ಯಾರು ಯಾರು ಬಂದರು, ಮನೆಯ ಆಳು-ಕಾಳುಗಳಿಗೆ ಸರಿಯಾಗಿ ಸಂಬಳ ದೊರೆಯುತ್ತದೆಯೇ, ಹೀಗೆ ಒಂದೇ ಎರಡೇ, ಅನೇಕ ಗೃಹಕೃತ್ಯಗಳನ್ನು ಮೈತುಂಬ ಕಣ್ಣಿಟ್ಟುಕೊಂಡು ಅವರು ನಿರ್ವಹಿಸುವರು. ಇದರಿಂದ ಯಾರ ಬಾಯಲ್ಲೂ, ಯಾವ ಕೆಲಸಕ್ಕಾದರೂ ರುಕ್ಮಿಣಮ್ಮ ಬರದೆ ಸಾಗುವಂತೆಯೇ ಇರಲಿಲ್ಲ.

ಚಂದ್ರಶೇಖರಯ್ಯನವರ ಮನೆ ಅವರ ಹಿರಿಯರ ಕಾಲದಿಂದಲೂ ಇದ್ದ ಪುರಾತನ ಮನೆ. ಅದರಲ್ಲಿಯೇ ಚಂದ್ರಶೇಖರಯ್ಯನವರೂ ತಮ್ಮ ಸಂಸಾರ ವನ್ನು ಹೂಡಿದರು. ಅವರೇ ಮನಸ್ಸು ಮಾಡಿದ್ದರೆ ಹೊಸ ಬಂಗಲೆಯೊಂದನ್ನೇ ಕಟ್ಟಿಸಬಹುದಿತ್ತು. ಆದರೆ ಹಿರಿಯರಿಂದ ಬಂದದ್ದು ಎಂಬ ಅಭಿಮಾನದಿಂದ ಆ ಹಳೆಯ ಮನೆಯನ್ನೇ ತಮ್ಮ ಅಭಿರುಚಿಗೆ ತಕ್ಕಂತೆ ಹೆಚ್ಚುಕಡಿಮೆ ಮಾಡಿಕೊಂಡು ಅದರಲ್ಲಿಯೇ ನೆಲಸಿದ್ದರು. ನಾಲ್ಕು ಅಂಕಣದ ತೊಟ್ಟಿಯ ಮನೆ. ಮನೆಯ ಮುಂದುಗಡೆ ಎರಡೂ ಕಡೆಗಳಲ್ಲಿಯೂ ಎತ್ತರವಾದ ಜಗುಲಿಗಳು. ತೊಟ್ಟಿಯ ಬಲಭಾಗದಲ್ಲಿ ಸಾಲಾಗಿ ಮೂರು ರೂಮುಗಳು. ಎಡಭಾಗದಲ್ಲಿ ದೇವರಮನೆ; ಹೊಸದಾಗಿ ಕಟ್ಟಿಸಿಕೊಂಡದ್ದು ತಮಗಾಗಿ.

ನಂತರ ಅಡುಗೆಮನೆ; ಅದರ ಪಕ್ಕದಲ್ಲಿ ಬಚ್ಚಲುಮನೆ. ಮನೆಯ ಹಿಂಭಾಗ ದಲ್ಲಿ ದೊಡ್ಡದಾದ ದನದ ಕೊಟ್ಟಿಗೆ. ಸುತ್ತಲೂ ದೊಡ್ಡದಾದ ಆವರಣ. ಅಲ್ಲಿಯೇ ಹಿತ್ತಲಲ್ಲಿ ದೇವರಿಗಾಗಿ ಹೂಗಿಡಗಳು ಅಲ್ಲದೆ ನಾಲ್ಕು ತೆಂಗಿನಮರ ಗಳೂ ಎರಡು ಮಾವಿನಮರಗಳೂ ಮತ್ತು ನಾಲ್ಕು ತರದ ತರಕಾರಿಯಿದ್ದ ಮಡಿಗಳು ಹಸುರಿನ ಹಾಸಿಗೆ ಹಾಸಿದಂತಿದ್ದವು.

ತೊಟ್ಟಿಯ ಬಲಭಾಗದ ರೂಮುಗಳು ಅತಿಥಿಗಳಿಗೇ ಮೀಸಲಾಗಿದ್ದವು. ಊರಿಗೆ ಯಾವ ಅಮಲ್ದಾರರಾಗಲಿ, ಡೆಪ್ಯೂಟಿ ಕಮಿಾಶನರರಾಗಲಿ, ಯಾರೇ ಸರಕಾರಿ ಅಧಿಕಾರಿಗಳು ಬರಲಿ, ಅವರ ಬೀಡಾರ, ಊಟಉಪಚಾರ ಇವರ ಮನೆಯಲ್ಲಿಯೇ ಆಗಬೇಕು. ಯಾವ ಮೇಷ್ಟರಾಗಲಿ, ಗುಮಾಸ್ತನಾಗಲಿ, ಊರಿಗೆ ಹೊಸದಾಗಿ ಬಂದರೆ, ನೇರವಾಗಿ ಇವರಲ್ಲಿಗೇ ಬಂದಿಳಿಯುವರು. ಮನೆ ಸಿಕ್ಕು, ಎಲ್ಲ ಅನುಕೂಲಗಳು ಆಗುವವರೆಗೂ ಅವರಿಗೆ ಈ ಮನೆಯೇ ಸ್ವಾಗತ ಕೊಡಬೇಕು. ಇದರಿಂದ ಅವರ ಮನೆ ಯಾವಾಗಲೂ ಜನರಿಂದ ತುಂಬಿರುತ್ತಿತ್ತು. ತುಂಬಿದ ಮನೆ ಅವರ ಮನವನ್ನೂ ತುಂಬುತ್ತಿತ್ತು. ಮನೆಯ ಉಗ್ರಾಣವೂ ಗೀಜಗನ ಗೂಡಿನಂತೆ ಯಾವಾಗಲೂ ಧಾನ್ಯಸಂಪತ್ತಿ ನಿಂದ ತುಂಬಿಯೇ ಇರುತ್ತಿತ್ತು.

ಚಂದ್ರಶೇಖರಯ್ಯನವರಿಗೆ ಮೂರು ಜನ ಮಕ್ಕಳು. ಹಿರಿಯವಳು ರಂಗಮ್ಮ. ಎರಡನೆಯವ ಗೋವಿಂದ. ನಂತರ ಗೋಪಾಲ. ರಂಗಮ್ಮ ತಾಯಿಯ ಮನೆ ಬಿಟ್ಟು ಅತ್ತೆಯ ಮನೆಗೆ ಹೋದುದೇ ಇಲ್ಲ. ಕೇವಲ ಹತ್ತು ವರ್ಷದ ಹುಡುಗಿಯಾಗಿದ್ದಾಗ ಅವರ ಮದುವೆ ನಡೆಯಿತು. ಆದರೆ ದುರದೃಷ್ಟದಿಂದ ಅವರ ಪತಿ ಮದುವೆಯಾದ ಆರು ತಿಂಗಳೊಳಗೇ ಮೃತ ರಾದರು. ರಂಗಮ್ಮ ಅಂತಹ ಚಿಕ್ಕ ವಯಸ್ಸಿನಿಂದಲೂ ವಿಧವೆಯಾಗಿ ಬಾಳ ಬೇಕಾಯಿತು. ಚಂದ್ರಶೇಖರಯ್ಯನವರಿಗೆ ಇದೊಂದು ದುಃಖದ ಸಂಗತಿ ಯಾದರೂ ಧೈರ್ಯಗೆಡದೆ ಮಗಳನ್ನೂ ಸಹ ಒಬ್ಬ ಮಗನೆಂದೇ ಭಾವಿಸಿ, ಅವಳಿಗೆ ಮನೆಯಲ್ಲಿಯೇ ಭಾರತ ರಾಮಾಯಣ ಗ್ರಂಥಗಳನ್ನು ಓದಿ ತಿಳಿದು ಕೊಳ್ಳುವಷ್ಟು ಕಲಿಸಿದರು. ಯಾವಾಗಲೂ ಅವರಿಗೆ ದೇವರ ವಿಚಾರದಲ್ಲಿಯೇ ಗಮನ ಹೋಗುವಂತೆ ಅನೇಕ ದೈವಭಕ್ತರ ಚರಿತ್ರೆಗಳನ್ನು ತಂದು ಓದಿ ತೋರಿಸಿದರು; ಭಾಗವತವನ್ನು ಅರ್ಥಮಾಡಿ ಹೇಳಿದರು. ಈ ರೀತಿಯ ಸತತ ಪರಿಶ್ರಮದಿಂದ, ಚಿಕ್ಕವಳಾಗಿದ್ದರೂ ರಂಗಮ್ಮನ ಜೀವನದಾರಿ ಬೆಳಕು

ಕಂಡಿತು. ಅವಳ ಮನಸ್ಸು ಲೌಕಿಕವನ್ನು ಮರತು ಪಾರಲೌಕಿಕವನ್ನು ಗ್ರಹಿಸಿತು. ಅದು ಸದಾ ದೇವರಪೂಜೆ ಪುನಸ್ಕಾರ ಇವುಗಳಲ್ಲಿಯೇ ನೆಲಸಿತು. ಮಗಳ ಈ ಪಲ್ಲಟಗೊಂಡ ಪ್ರವೃತ್ತಿಯನ್ನು ನೋಡಿ ತಂದೆ ತಾಯಿಗಳಿಗೆ ಇದ್ದುದರಲ್ಲಿಯೇ ಸಮಾಧಾನವಾಯಿತು. ರಂಗಮ್ಮ ಬರಬರುತ್ತ ಅನಾಸಕ್ತಳಂತೆಇದ್ದರೂ ಗೃಹಸೂತ್ರಗಳೆಲ್ಲ ಅವಳ ಕೈಗೇ ಬಂದವು. ರಂಗಮ್ಮನ ಮಾತನ್ನು ಎಲ್ಲರೂ ಗೌರವಿಸಹತ್ತಿದರು.

ಚಂದ್ರಶೇಖರಯ್ಯನವರು ತಮ್ಮ ಹುಡುಗರು 'ಲೋವರ್ ಸೆಕಂಡರಿ' ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ಅವರನ್ನು ಪಟ್ಟಣಕ್ಕೆ ಕಳಿಸಿ ಹೆಚ್ಚಿನ ವಿದ್ಯಾಭ್ಯಾಸ ಮಾಡಿಸಲು ಇಷ್ಟಪಡಲಿಲ್ಲ.

ಗೋವಿಂದ ತಂದೆಯ ಮಾತಿಗೆ ತಲೆಬಾಗಿ ತನ್ನ ವ್ಯಾಸಂಗವನ್ನು ಅಲ್ಲಿಗೇ ಮುಗಿಸಿದ. ಗೋಪಾಲ ಮೊದಲಿಂದಲೂ ಹಟದ ಸ್ವಭಾವದವ. ತಾನು ಮೈಸೂರಿಗೆ ಹೋಗಿ ಮುಂದೆ ಓದುವೆನೆಂದು ಹಟ ಹಿಡಿದ. ಅವನ ಸ್ವಭಾವವನ್ನು ತಿಳಿದ ಚಂದ್ರಶೇಖರಯ್ಯನವರು ಮಾತು ಬೆಳೆಸದೆ ಅದಕ್ಕೆ ಒಪ್ಪಿದರು. ಅದೇ ವರ್ಷ ಗೋಪಾಲ ಮೈಸೂರಿನ ಮಹಾರಾಜಾ ಹೈಸ್ಕೂಲಿಗೆ ಸೇರಿದ. ಅಲ್ಲಿಯೇ ಹಾಸ್ಟೆಲ್ ಒಂದರಲ್ಲಿ ಅವನ ಬಿಡಾರವೂ ಆಯಿತು. ಅವನ ಪಟ್ಟಣದ ಜೀವನವೂ ಅಂದಿನಿಂದ ಪ್ರಾರಂಭವಾಯಿತು.

ಗೋವಿಂದ ತಂದೆಗೆ ಸಹಾಯಕನಾಗಿ ಮನೆಯಲ್ಲಿಯೇ ಉಳಿದರೂ ತಂದೆಯ ಸಹವಾಸದಿಂದ, ಅಭ್ಯಾಸಬಲದಿಂದ ಮನಸ್ಸಿನ ವೈಶಾಲ್ಯವನ್ನು ಪಡೆದ; ಸುಸಂಸ್ಕೃತನಾದ.

ಗೋಪಾಲ ತನ್ನ ಮೆಟ್ರಿಕ್ ಪರೀಕ್ಷೆಯನ್ನು ಮುಗಿಸಿ ಊರಿಗೆ ಬಂದಾಗ, ಚಂದ್ರಶೇಖರಯ್ಯನವರು ಅವನಲ್ಲಿ ಆದ ಬದಲಾವಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ಅವನು ಪೂರ್ತಿಯಾಗಿ ಪಟ್ಟಣದ ಸುಖ ಸೌಂದರ್ಯಕ್ಕೆ ಮಾರುಹೋಗಿದ್ದಾನೆಂಬುದನ್ನು ಅವನ ಮಾತಿನಿಂದಲೇ ಕಂಡಕೊಂಡರು.

"ಗೋಪಾಲ, ನಿನ್ನ ಪರೀಕ್ಷೆಯ ಫಲಿತಾಂಶ ಎಂದು ಬರುತ್ತೆ?" ಎಂದು ಚಂದ್ರಶೇಖರಯ್ಯನವರು ಒಂದು ದಿನ ಮಗನೆದುರಿಗೆ ಮಾತೆತ್ತಿದರು.

"ಮುಂದಿನ ತಿಂಗಳು."

"ಸರಿ, ಹಾಗಾದರೆ ನೀನೇನೂ ಇನ್ನು ಪುನಃ ಮೈಸೂರಿಗೆ ಹೋಗುವ

ಹಾಗಿಲ್ಲ ತಾನೇ?"

"ಯಾಕೆ? ಹೋಗದೆ ಇದ್ದರೆ ಹೇಗೆ? ಇನ್ನೂ ಮುಂದೆ ಕಾಲೇಜ್ ಸೇರಬೇಡವೆ?"

"ಏನು! ಇನ್ನೂ ಓದುವಿಯಾ? ಇಷ್ಟು ಬಂದಿರುವುದು ಸಾಲದೆ? ನೀನೇನು ಓದಿ ದುಡಿದು ನಿನ್ನ ಹೊಟ್ಟೆಗೆ ಸಂಪಾದಿಸಬೇಕಾಗಿದೆಯೆ? ದೇವರು ನಮಗೆ ಏನು ಕಡಿಮೆ ಮಾಡಿದ್ದಾನೆ? ಈಗ ಇರುವುದನ್ನೇ ರೂಢಿಸಿಕೊಂಡು ಹೋದರೆ, ನೀವೆಲ್ಲಾ ಕೂತುಕೊಂಡು ತಿಂದರೂ ಸವೆಯದಷ್ಟು ಆಸ್ತಿ ಇದೆ. ಮತ್ತೇಕೆ ಇನ್ನೂ ಓದಬೇಕೆನ್ನುವೆ?"

"ಈ ಕೊಂಪೆಯಲ್ಲಿ ಇರುವುದಕ್ಕೆ ನನ್ನಿಂದ ಸಾಧ್ಯವಿಲ್ಲಪ್ಪಾ. ಇಲ್ಲೇನಿದೆ ಮಣ್ಣು? ಒಂದು ಸಿನೇಮಾನೇ, ಹೋಟಲ್ಲೇ, ಸ್ನೇಹಿತರೇ, ಇಲ್ಲಿ ಏನು ಇದೆ ಎಂದು ಇರಬೇಕು? ನನಗೆ ಇಲ್ಲಿ ಇರಲು ಬೇಜಾರು." ಎಂದು ಮಾತನ್ನು ಮುಂದೆ ಬೆಳೆಯಿಸದೆ ಅಲ್ಲಿಂದ ಎದ್ದು ಹೊರಟು ಹೋದ. ಚಂದ್ರಶೇಖರಯ್ಯ ನವರು ಉಮ್ಮಳಿಸಿ ಬರುತ್ತಿದ್ದ ವ್ಯಥೆಯನ್ನು ಒಳಗೇ ನುಂಗಿಕೊಂಡರು. ಇನ್ನು ಎಷ್ಟೇ ಬುದ್ಧಿವಾದ ಹೇಳಿದರೂ ಏನೂ ಪ್ರಯೋಜನವಿಲ್ಲವೆಂದು ಮನಗಂಡರು. ಆದರೆ ತಮ್ಮ ಆಸ್ತಿ ಮಾತ್ರ ಅವಿಚ್ಛಿನ್ನವಾಗಿ ಇರಬೇಕೆಂದು ಅವರ ಒಳಗಿನ ಒಂದು ಉತ್ಕಟ ಆಸೆಯಿದ್ದಿತು. ತಮ್ಮ ಸಂಸಾರ ಅವಿಭಕ್ತ ಕುಟುಂಬವಾಗಿಯೇ ಉಳಿಯಬೇಕೆಂದು ಅವರು ಹಾರೈಸುತ್ತಿದ್ದರು. ಆದರೆ ಗೋಪಾಲ ಹೀಗೆ ಹಟ ಮಾರಿಯಾಗಿ, ತನ್ನ ಹುಟ್ಟಿದೂರನ್ನು ಬಿಟ್ಟು ಎಲ್ಲಿಗೋ ಹೋಗಿ ನೆಲಸುವುದು ಅವರಿಗೆ ಹೃದಯಶಲ್ಯವಾಗಿ ಪರಿಣಮಿಸಿತ್ತು.

ಅವರಿಗೂ ವಯಸ್ಸಾಗುತ್ತ ಬಂದಿತ್ತು. ಮಗನ ಮದುವೆಯೊಂದು ಮಾಡಿಬಿಡಬೇಕೆಂದು ಆಸೆಯಿಂದ ಗೋವಿಂದನಿಗೆ ಕೇವಲ ಇಪ್ಪತ್ತು ವರ್ಷ ವಯಸ್ಸಾಗಿದ್ದರೂ ಅವನ ಮದುವೆಯನ್ನು ಅದೇ ವರ್ಷ ಸಾವಿತ್ರಮ್ಮನೊಡನೆ ಮಾಡಿದರು. ಮದುವೆಯಾದ ಕೆಲ ತಿಂಗಳ ನಂತರ ಸಾವಿತ್ರಿಯೂ ಮನೆಗೆ ಬಂದಳು. ಅವಳು ಬಂದಮೇಲೆ ಗಂಡಹೆಂಡಿರಿಬ್ಬರಿಗೂ ಮನೆ ತುಂಬಿದಂತೆನಿ ಸಿತು. ಸಾವಿತ್ರಿ ತನ್ನ ಒಳ್ಳೆ ಗುಣಗಳಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದಳು. ರುಕ್ಮಿಣಮ್ಮ ತಮ್ಮ ಮಗಳೆಂದೇ ಭಾವಿಸಿ ಅವಳನ್ನು ಪ್ರೀತಿಯಿಂದ ನೋಡಿ ಕೊಳ್ಳುತ್ತಿದ್ದರು.

ಅವರ ಸಂಸಾರ ನೌಕೆ ಈ ರೀತಿಯಾಗಿ ಯಾವ ಆಕಸ್ಮಿಕವನ್ನೂ

ಕಾಣದೆ ಸರಾಗವಾಗಿ ಸಾಗಿದ್ದಿತು ಕಾಲಪ್ರವಾಹದ ಮೇಲೆ.

ಒಂದು ದಿನ ಸಾಯಂಕಾಲ, ತಿರುಗಾಡಿಕೊಂಡು ಬಂದ ಚಂದ್ರಶೇಖ ರಯ್ಯನವರು ಎದೆನೋವೆಂದು ಮಲಗಿದರು. ರುಕ್ಮಿಣಮ್ಮ ಅಧೀರರಾಗಿ ಅವರ ಹಾಸಿಗೆಯ ಬಳಿ ಕುಳಿತು ಅವರನ್ನೇ ದಿಟ್ಟಿಸುತ್ತಿದ್ದರು.

"ಇದೇನಾಯಿತೂ ಅಂದ್ರೇ! ಹೀಗೇಕೆ ಇವರು ಸಾಯಂಕಾಲದಲ್ಲಿ ಮಲಗಿದರು?" ಎಂದು ರುಕ್ಮಿಣಮ್ಮ ಮೃದುವಾಗಿ ಅವರ ಕಾಲುಗಳನ್ನು ಒತ್ತಿದರು.

"ಏನೋ ಸ್ವಲ್ಪ ಎದೆಯಲ್ಲಿ ಛಳಕು ಆದಂತೆ ಆಗಿದೆ. ಪರವಾ ಇಲ್ಲ, ಹೋಗು, ಏನೂ ಯೋಚಿಸಬೇಡ." ಎಂದು ಹೆಂಡತಿಗೆ ಸಮಾಧಾನ ಹೇಳಿ ದರೂ ಅವರ ಹೃದಯ ಯಾವುದೋ ಒಂದು ಅವ್ಯಕ್ತ ಭವಿತವ್ಯವನ್ನು ನೆನೆದು ಕಳವಳಕ್ಕೀಡಾಗುತ್ತಿದ್ದರು. ರಾತ್ರಿಯಾದ ಹಾಗೆಲ್ಲ ಜ್ವರವೂ ಏರುತ್ತ ಬಂದಿತು. ಜೊತೆಗೆ ಅಸಾಧ್ಯ ತಲೆನೋವೂ ಬಂದಿತು. ಸಂಜೆ ಮನೆಗೆ ಬಂದ ಗೋವಿಂದ ತಂದೆ ಮಲಗಿರುವುದನ್ನು ಕಂಡು ಗಾಬರಿಯಾದ. ತಂದೆಯ ಬಳಿ ಬಂದು "ಏನಾಯ್ತು ಅಪ್ಪಾ?" ಎಂದು ಕೇಳಿದ.

"ಏನೋ ಸ್ವಲ್ಪ ಹುಷಾರಿಲ್ಲ ಮೈಯಲ್ಲಿ, ಅಷ್ಟೇ. ಏನೇ ಆಗಲಿ, ನಾಳಿನ ಬೆಳಿಗ್ಗೆಯೇ ಹೊರಟು ಗೋಪಾಲನನ್ನು ಒಂದಿಷ್ಟು ಕರೆದುಕೊಂಡು ಬಂದು ಬಿಡು. ಭಗವದ್ಗೀತೆ ಒಂದಿಷ್ಟು ಓದು; ಕೇಳಬೇಕೆನಿಸಿದೆ" ಎಂದು ಹೇಳಿದರು.

ಗೋವಿಂದ ತಂದೆ ಹೇಳಿದ ಮಾತಿಗೆ ಒಪ್ಪಿ ಭಗವದ್ಗೀತೆಯ ಶ್ಲೋಕ ಗಳನ್ನು ತಂದೆಯ ಬಳಿಯಲ್ಲಿಯೇ ಕುಳಿತು ಓದತೊಡಗಿದನು. ಕೇಳುತ್ತ ಕೇಳುತ್ತ ಚಂದ್ರಶೇಖರಯ್ಯನವರು ಹಾಗೆಯೇ ನಿದ್ರೆಹೋದರು. ಗೋವಿಂದ ಅಲ್ಲಿಗೇ ನಿಲ್ಲಿಸಿ ಎದ್ದು ಒಳಗೆ ಹೋದನು. ಎಷ್ಟೋ ವರ್ಷಗಳಿಂದ ಕಾಯಿಲೆ ಕಸಾರಿಕೆ ಕಾಣದ ಅವರ ಮನೆ, ಚಂದ್ರಶೇಖರಯ್ಯನವರು ಮಲಗಿದ್ದರಿಂದ 'ಬಿಕೋ' ಎನ್ನುತ್ತಿತ್ತು. ರುಕ್ಮಿಣಮ್ಮನವರಂತೂ ಗರಬಡಿದವರಂತೆ ಕೂತಿ ದ್ದರು.

ಮಾರನೆಯ ದಿನ ಬೆಳಿಗ್ಗೆ ಹನ್ನೆರಡರ ವೇಳೆಗೆ ಗೋವಿಂದ ಗೋಪಾಲ ನನ್ನು ಕರೆದುಕೊಂಡು ಬಂದ. ಗೋಪಾಲನ ಮುಖವನ್ನು ನೋಡಿದ ಮೇಲೆ ಚಂದ್ರಶೇಖರಯ್ಯನವರ ಮುಖದ ಮೇಲೆ ಸ್ವಲ್ಪ ಸಮಾಧಾನ ಕಾಣಿಸಿ ಕೊಂಡಿತು. ಗೋಪಾಲನೂ ಗಾಬರಿಯಾಗಿ ತಂದೆಯನ್ನೇ ದಿಟ್ಟಿಸುತ್ತ ಮೂಕ

ನಾಗಿ ನಿಂತ. ರುಕ್ಮಿಣಮ್ಮ "ಗೋಪೂ ಬಂದಿದಾನೆ, ನೋಡಿ. ಗೋಪೂ, ಮಾತನಾಡು, ಹಾಗೇ ಸುಮ್ಮನೇಕೆ ನಿಂತೆ? ಕ್ಷೇಮಸಮಾಚಾರ ಕೇಳು, ಹೇಳು" ಎಂದರು.

ಗೋಪಾಲ ತಂದೆಯ ಮುಖವನ್ನು ಮಾತ್ರ ನೋಡಿದ. ಏನನ್ನೂ ಮಾತನಾಡಲಿಲ್ಲ. ಚಂದ್ರಶೇಖರಯ್ಯನವರೂ ಅವನನ್ನೇ ನೋಡಿದರು. ಅಂತರ್ಗತ ಭಾವನೆಗಳು ಮಾತಿನ ಅಳವಿಗೆ ಸಿಕ್ಕಿರಲಿಕ್ಕಿಲ್ಲವೆಂದೇ ಇಬ್ಬರೂ ಮೌನವ ಮರೆಯಲ್ಲಡಗಿರುವಂತೆ ತೋರಿತು.

ಸಂಜೆ. ಆರರ ಸಮಯ. ಗಂಡಸರೆಲ್ಲ ಹೊರಕ್ಕೆ ಹೋಗಿದ್ದರು. ರಂಗಮ್ಮ ತಮ್ಮ ಕೆಲಸವಲ್ಲಿ ತೊಡಗಿದ್ದರು. ರುಕ್ಮಿಣಮ್ಮ ಮಾತ್ರ ಚಂದ್ರಶೇಖರಯ್ಯನವರ ಪಕ್ಕದಲ್ಲಿಯೆ ಕುಳಿತಿದ್ದರು. ಈ ಮಗ್ಗುಲಿಂದ ಇನ್ನೊಂದು ಮಗ್ಗುಲಿಗೆ ಹೊರಳುವಾಗ ರುಕ್ಮಿಣಮ್ಮನಿಗೆ ತಮ್ಮ ಮಕ್ಕಳನ್ನು ಒಳಗೆ ಕರೆಯಲು ತಿಳಿಸಿದರು ರಾಯರು. ರುಕ್ಮಿಣಮ್ಮ ಹೋಗಿ ಆಳು ಕಳಿಸಿ ಅವರನ್ನು ಕರೆಯಿಸಿ ಒಳಗೆ ಕರೆತಂದರು.

"ಗೋವಿಂದೂ ಇಲ್ಲಿ ಬಾ" ಎಂದರು ರಾಯರು ನಡುಗುವ ಧ್ವನಿಯಲ್ಲಿ.

ಗೋವಿಂದ ಇನ್ನೂ ಹತ್ತಿರ ಬಂದು ತಲೆಯ ಹತ್ತಿರ ನಿಂತ.

"ನೋಡು ಮಗೂ, ನನ್ನ ಕಾಲ ಮುಗೀತು ಎಂದು ತೋರುತ್ತೆ. ನೀನೂ ಗೋಪಾಲ ಇಬ್ಬರ ನಡುವೆ ಅಂತರ ಬಹಳ. ಆದರೂ ನೀವಿಬ್ಬರೂ ಕೂಡಿರಬೇಕೆಂಬುದೇ ನನ್ನ ಆಸೆ. ನೀನು ಹಿರಿಯ. ಅವನನ್ನು ಸರಿಯಾದ ಮಾರ್ಗದಲ್ಲಿ ನಡೆಯಿಸಿಕೊಂಡು ಹೋಗುವದು ನಿನ್ನನ್ನೇ ಕೂಡಿದೆ. ಇಷ್ಟೇ ಅಲ್ಲ, ನಿನ್ನ ಚಿಕ್ಕ, ನಿನ್ನ ತಾಯಿ, ಈ ಮನೆ, ಈ ಜಮೀನು ಎಲ್ಲ ಭಾರ ನಿನ್ನ ಮೇಲೆಯೇ ಇದೆ. ಒಂದು ಮಾತು, ಗೋವಿಂದೂ, ಎಂತಹ ಪ್ರಸಂಗ ಬಂದರೂ ಈ ಆಸ್ತಿ ಒಡೆದು ಹೋಗದಂತೆ ನೋಡಿಕೋ." ಎಂದು ಕೆಲ ಹೊತ್ತು ಸುಮ್ಮನಾದರು.

ಅಲ್ಲಿಂದ ಗೋಪಾಲನ ಕಡೆ ಕಣ್ಣು ಹೊರಳಿಸಿದರು. ಸಮೀಪ ಬರಲು ಕಣ್ಣಿಂದಲೇ ತಿಳಿಸಿದರು. ಗೋಪಾಲ ಹತ್ತಿರ ಬಂದ. "ಗೋಪೂ, ನಿನಗೆ

ಹಳ್ಳಿಯ ವಾಸ ಸೇರದಿರಬಹುದು. ಆದರೆ ಈಗಿನ ಈ ಸ್ಥಿತಿ ಬರುವಂತೆ ಈ ನಿನ್ನ ತಂದೆ ಎಷ್ಟು ಕಷ್ಟಪಡಬೇಕಾಯಿತು ಎನ್ನುವುದನ್ನು ನೆನೆಸಿಕೊಂಡು ನಿನಗೆ ತೋಚಿದಂತೆ ಮಾಡು. ಆದರೂ ನಿನ್ನ ತಂದೆಯಾದುದಕ್ಕೆ ನಿನ್ನ ಮೇಲಿನ ಅಭಿಮಾನದಿಂದ ಹೇಳುವೆ,—ಆ ಪಟ್ಟಣ, ಅಲ್ಲಿಯ ಭೋಗ ಎಲ್ಲ ವನ್ನೂ ಮರೆತು, ನಿನ್ನ ಹಿತ ದೃಷ್ಟಿಯಿಂದ ಇಲ್ಲಿಯೇ ಇರುವ ಪ್ರಯತ್ನಮಾಡು ನೀನು ಈಗ ಓದಿದ್ದು ಬೇಕಾದಷ್ಟಾಯಿತು. ಇನ್ನಾದರೂ ನಿನ್ನ ಆ ಹಟಬಿಟ್ಟು ಬಿಡು. ಇಷ್ಟರಮೇಲೆ ದೇವರು ನಡೆಸಿದಂತೆ ಆಗಲಿ..." ಆಯಾಸ ಹೆಚ್ಚಾಗಿ ಮಾತು ನಿಂತವು.

ಗೋಪಾಲನಿಗೆ ತನ್ನ ನಡತೆಯ ಬಗ್ಗೆ ತನಗೇ ಕೆಡಕೆನಿಸಿತು. ತಂದೆಯ ಪಾದಗಳನ್ನು ಹಿಡಿದು "ಇಲ್ಲ ಅಪ್ಪಾ, ನೀನು ಹೇಳಿದ್ದಕ್ಕೆ ಪ್ರತಿ ಹೋಗುವು ದಿಲ್ಲ. ನಿಮ್ಮ ಅಪೇಕ್ಷೆಯಂತೆಯೆ ಇರುತ್ತೇನೆ" ಎಂದು ಕಣ್ಣೀರು ಮಿಡಿದ. ಎಲ್ಲ ರಿಗೂ ದುಃಖ ಉಮ್ಮಳಿಸಿ ಬಂತು. ಆದರೆ ಅದಕ್ಕೆ ಹೊರಬರಲು ಅವಕಾಶ ವಿಲ್ಲದ್ದರಿಂದ ಒಳಗೇ ಹೊಯ್ದಾಡ ಬೇಕಾಯಿತು.

ಚಂದ್ರಶೇಖರಯ್ಯನವರು ಎಲ್ಲರಿಗೂ ತಮ್ಮ ಅನುಭವದ ನಾಲ್ಕು ಬುದ್ಧಿಯ ಮಾತು ಹೇಳಿದರು. ಅವರ ಮುಖ ಎಂದಿಲ್ಲದ ತೃಪ್ತಿಯನ್ನು ತಳೆ ದಿತ್ತು. ರಾತ್ರಿಯ ವೇಳೆಗೆ ಎದೆ ನೋವು, ಜ್ವರ ಎಲ್ಲಾ ಕಡಿಮೆಯಾದಂತೆ ಕಂಡವು. ಎಲ್ಲರೂ ಸಮಾಧಾನದ ಉಸಿರುಬಿಟ್ಟರು. ಆ ದಿನ ರಾತ್ರಿ ಶಾಂತ ರಾಗಿ ಮಲಗಿದ ಚಂದ್ರಶೇಖರಯ್ಯನವರು ಪುನಃ ಬೆಳಿಗ್ಗೆ ಏಳಲೇ ಇಲ್ಲ. ಅಂದೇ ಅವರ ಜೀವನಯಾತ್ರೆಯು ಕೊನೆಗೊಂಡಿತು.

ತುಂಬಿದ ಮನೆ ಬರಿದಾದಂತಾಯಿತು. ಸ್ಮಶಾನಭೀಕರತೆ ಎಲ್ಲೆಲ್ಲೂ ವ್ಯಾಪಿಸಿತು. ಮರಣದ ಸುದ್ದಿ ಊರಲ್ಲೆಲ್ಲಾ ಕಿಚ್ಚಿನಂತೆ ಹರಡಿತು. ಊರಿನ ಜನರೆಲ್ಲಾ ಓಡೋಡಿ ಬಂದು ಮನೆಯ ಮುಂದೆ ನೆರೆದರು. "ಅಯ್ಯೋ, ನಮ್ಮ ಧಣಿ, ನಮ್ಮ ದೇವರು ಹೋಗಿ ಬಿಟ್ಟರೇ! ಇನ್ನಾರು ನಮ್ಮನ್ನು ಕೇಳುವವರು! ಎಂದು ಗೋಳಿಟ್ಟರು. ನೆಂಟರಿಷ್ಟರಿಗೆಲ್ಲ ತಾರಿನಿಂದ ಸಮಾಚಾರ ತಿಳಿಸ ಲಾಯಿತು. ಹತ್ತಿರದವರು ಒಡನೆ ಬಂದರು. ಎಲ್ಲರೂ ತಮ್ಮ ತಮ್ಮ ಭಾಗದ ಕಣ್ಣೀರಿನ ತರ್ಪಣಕೊಟ್ಟರು. ಅಂತ್ಯಸಂಸ್ಕಾರಗಳೆಲ್ಲ ಯಥಾವಿಧಿ ಯಾಗಿ ಮುಗಿದವು.

ರುಕ್ಮಿಣಮ್ಮ ಆ ದಿನ ಹಾಸಿಗೆ ಹಿಡಿದು ಮಲಗಿದವರು. ಪುನಃ ಮೇಲಕ್ಕೇ

ಳಲೇ ಇಲ್ಲ. ಹಾಗೆಯೇ ಕೊರಗಿ ಕೊರಗಿ ವೈಕುಂಠ ಸಮಾರಾಧನೆಯ ದಿವಸ ಅವರೂ ತಮ್ಮ ಪತಿಯನ್ನೇ ಹಿಂಬಾಲಿಸಿದರು.

ಮೊದಲೇ ದುಃಖದಿಂದ ಬಳಲಿದ ಗೋವಿಂದ ಗೋಪಾಲರು ಈಗ ತಾಯಿಯ ಮರಣದಿಂದ ಇನ್ನೂ ಬಳಲಿ ಬೆಂಡಾದರು. "ಪುಣ್ಯವಂತೆ ನಮ್ಮ ತಾಯಿ, ಗೆದ್ದುಕೊಂಡಳು ಇನ್ನೂ ಮುತ್ತೈದೆಯಾಗಿರುವಾಗಲೇ!" ಎಂದು ಹೆಂಗಸರೆಲ್ಲರೂ ಕೌತುಕಮಾಡಿ ಹೇಳಿದರು.

ಅವರ ದಿನಕರ್ಮಗಳೆಲ್ಲ ತೀರಿದನಂತರ ಬಂದ ನೆಂಟರಿಷ್ಟರೆಲ್ಲಾ ಒಬ್ಬೊಬ್ಬರಾಗಿ ತೆರಳಿದರು. ಮನೆಯಲ್ಲಿ ರಂಗಮ್ಮ, ಗೋವಿಂದ, ಸಾವಿತ್ರಿ ಮತ್ತು ಗೋಪಾಲ ಇಷ್ಟೇ ಜನ ಉಳಿದರು. ರುಕ್ಮಿಣಮ್ಮನ ಜವಾಬ್ದಾರಿಯೆಲ್ಲ ಈಗ ರಂಗಮ್ಮನ ತಲೆಯಮೇಲೆ ಬಿದ್ದಿತು. ಈ ವರೆಗೆ ಬರಿ ಪುರಾಣ ಪುಣ್ಯ ಕಥೆಗಳಲ್ಲಿ ಮುಳುಗಿದ್ದ ರಂಗಮ್ಮ ಈಗ ಎದ್ದು ಮನೆ ಕಾರ್ಯಗಳಲ್ಲಿ ತೊಡಗ ಬೇಕಾಯಿತು. ಕರ್ಮನಿಷ್ಠ ಅನಾಸಕ್ತ ಜೀವನ ಅವರದು. ಬಂದದ್ದೆಲ್ಲಕ್ಕೂ ಸಿದ್ಧರೇ. ಮತ್ತೆ ಜೀವನಪ್ರವಾಹ ಮುಂದೆ ಮುಂದಾಯಿತು.

ಕಾಲವು ಇದೆಲ್ಲವನ್ನೂ ಮರೆವಿನ ತೆರೆಯಹಿಂದೆ ನೂಕಿ, ಮತ್ತೊಂದು ಮುಂದಿನ ಅಂಕನ್ನು ಪ್ರಾರಂಭಿಸಿತು.

ಗೋಪಾಲನಿಗೆ ಹಳ್ಳಿಯ ಜೀವನ ಮತ್ತೆ ಬೇಸರಬಂತು. ಬಿಟ್ಟು ಹೊರಗೆ ಹೋಗಬೇಕೆಂದರೆ ತಂದೆಗೆ ಕೊಟ್ಟ ಮಾತು ತಡೆಯುತ್ತಿತ್ತು. ಈ ಹೊಯ್ದಾ ಟದಲ್ಲಿರುವಾಗಲೆ ಕೆಲ ಸ್ನೇಹಿತರೂ ಗಂಟು ಬಿದ್ದರು. ಮನಸ್ಸಿನ ಮೇಲಿನ ಹಿಡಿತ ತಪ್ಪಿದ ಇದೇ ವಿಷ ಗಳಿಗೆಯಲ್ಲಿಯೇ ಸ್ನೇಹಿತರೊಡನೆ ಇಸ್ಪೇಟಿನಾಟ ಪ್ರಾರಂಭವಾಯಿತು. ಮೊದಮೊದಲು ಮನರಂಜನೆಯಾಯಿತು; ಬರಬರುತ್ತಾ ವ್ಯಸನವಾಗಿ ಬೆಳೆಯಿತು. ಹಣ ಕೈಬಿಡುತ್ತಾ ಹೋಯಿತು. ಆಲಸ್ಯ ಮೈಯಲ್ಲಿ ಹೆಚ್ಚುತ್ತಾ ಬಂತು. ಮನೆಯಕಡೆಗೆ ಲಕ್ಷ್ಯವೇ ಕಡಿಮೆಯಾಯಿತು. ಮೊದ ಮೊದಲು ರಾತ್ರಿ ಹತ್ತುಗಂಟೆಗೆ ಮನೆಗೆ ಬರುವುದಾಯಿತು; ಅಲ್ಲಿಂದ ಅದು ಹನ್ನೊಂದಾಯಿತು, ಹನ್ನೆರಡಕ್ಕೂ ಬಂದು ಮುಟ್ಟಿತು. ಎಷ್ಟೊತ್ತಾದರೂ

ಗೋವಿಂದ ಮಾತ್ರ ಅವನಿಗಾಗಿ ಕಾದು ಕುಳಿತು, ಅವನು ಬಂದನಂತರವೇ ಅವನ ಜೊತೆಯಲ್ಲಿ ಊಟ ಮಾಡುತ್ತಿದ್ದ. ಅನೇಕ ವೇಳೆ "ಮನೆಗೆ ಬೇಗ ಬರ ಬಾರದೇ ಗೋಪೂ?" ಎಂದು ತಮ್ಮನಿಗೆ ರಂಗಮ್ಮ ಹೇಳಿ ನೋಡಿದರು. "ನೀವು ಎಲ್ಲರೂ ಬೇಕಾದರೆ ಊಟಮಾಡಿ ಮಲಗಿಕೊಳ್ಳಿ ಅಕ್ಕಾ. ನನಗೆ ಆದಾಗ ಬಂದು ನಾನು ಊಟ ಮಾಡುವೆ." ಎಂದು ಉತ್ತರ ಬಂದದ್ದಕ್ಕೆ ಸುಮ್ಮನಾಗಿಬಿಟ್ಟರು. ಮದುವೆಯನ್ನು ಮಾಡಿದರಾದರೂ ದಾರಿಗೆ ಬರುತ್ತಾನೇನೋ ನೋಡೋಣ ಎಂದುಕೊಂಡು ಅವನು ಒಪ್ಪಿದ ಹುಡುಗಿಯೊಂದನ್ನು ತಂದು, ಅವನ ಮದು ವೆಯನ್ನೂ ಮಾಡಿದರು. ಹೆಂಡತಿ ಕಮಲಾ ಮನೆಗೆ ಬಂದಳು. ಅವಳೂ ಗಂಡ ನಿಗೆ ತಕ್ಕ ಹೆಂಡತಿಯೇ ಆಗಿದ್ದಳು. ಗೋಪಾಲನಲ್ಲಿದ್ದ ಹಟ ಒಂದು ತೂಕ ವಾದರೆ, ಅವಳಲ್ಲಿದ್ದ ಅಹಂಕಾರ ಅದಕ್ಕೆ ಹತ್ತರಷ್ಟು ಮಿಗಿಲಾಗಿತ್ತು.

ಗೋಪಾಲ ತನ್ನ ಸ್ನೇಹಿತರ ಸಲಹೆಯಂತೆ ಒಂದು ನಾಟಕ ಕಂಪನಿ ಪ್ರಾರಂಭಿಸಿದ. ಅದಕ್ಕೆ ಬೇಕಾಗುವ ಸಾವಿರಾರು ರೂಪಾಯಿಯ ಬಂಡವಲು ಗೋಪಾಲನ ಹತ್ತಿರ ಎಲ್ಲಿಂದ ಬರಬೇಕು? ಸರಿ. ಆಸ್ತಿಯ ಆಧಾರದ ಮೇಲೆ ಸಾಲ ತಂದ. ಅಣ್ಣನನ್ನು ಒಂದು ಮಾತೂ ಕೇಳಲಿಲ್ಲ.

ಕಂಪನಿ ಸುರುವಾದ ಮೇಲಂತೂ ಗೋಪಾಲ ಮನೆಯನ್ನು ಕಾಣುವುದೇ ದುಸ್ತರವಾಯಿತು. ಮನೆಗೆ ಊಟಕ್ಕೆ ಕೂಡ ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ಯಾವಾಗ ನೋಡಿದರೂ 'ಇಸ್ಪೇಟಿನಾಟದಲ್ಲಿಯೇ ಮಗ್ನನಾಗಿರುತ್ತಿದ್ದ. ನಾಟಕ ಕಂಪನಿ ಹಾಗೂ ಹೀಗೂ ನಡೆದಿತ್ತು, ಹಣ ಇರುವವರೆಗೆ. ಅದು ತೀರಿದ ಕೂಡಲೆ ಕಂಪನಿಯೂ ಮುಳುಗುವ ಸ್ಥಿತಿ ಬಂದಿತು. ಸಾಲಗಾರರ ತಗಾದೆ ಹೆಚ್ಚಾಯಿತು. ಕಂಪನಿಯನ್ನೇ ಹರಾಜ ಹಾಕಲಾಯಿತು. ಎಳೆಂಟು ಸಾವಿರ ದಷ್ಟೂ ಬೆಲೆ ಬರಲಿಲ್ಲ. ಸಾಲ ತೀರಲಿಲ್ಲ. ಸಾಲಗಾರರು ಆಸ್ತಿಯ ಮೇಲೆ ದಾವಾಮಾಡಿದರು.

ಕೋರ್ಟಿನ ಅಮೀನನೊಬ್ಬ ಕೈಯಲ್ಲಿ ಕೆಲ ಕಾಗದಗಳನ್ನು ಹಿಡಿದು ಕೊಂಡು ಬೀದಿಯ ಜಗುಲಿಯ ಮೇಲೆ ಕುಳಿತ ಗೋವಿಂದರಾಯರ ಬಳಿ ಬಂದು "ಚಂದ್ರಶೇಖರಯ್ಯನವರ ಮನೆ ಇದೇನೆ?" ಎಂದು ಕೇಳಿದ.

"ಹೌದು. ಯಾರು ಬೇಕಾಗಿತ್ತು ನಿಮಗೆ?"

"ಅವರ ಮಗ ಗೋಪಾಲರಾಯರು."

"ಏನು ಕೆಲಸ ಅವರ ಹತ್ತಿರ ಹೇಳಬಹುದೇ?"

"ಅವರು ತಮ್ಮ ನಾಟಕ ಕಂಪನಿಗಾಗಿ ತೆಗೆದ ಸಾಲ ತೀರಿಸಲು ಅವರ ಮೇಲೆ ದಾವಾ ಹೂಡಿದ್ದಾರೆ ಸಾವುಕಾರರು. ಇನ್ನೇಳು ದಿನಗಳು ವಾಯಿದೆ ಯಲ್ಲಿ ಸಾಲ ತೀರಿಸದೆ ಹೋದಲ್ಲಿ ಜಮೀನು ಆಸ್ತಿ ಎಲ್ಲಾ ಸರಕಾರದಿಂದ ಹರಾಜು ಮಾಡಿಸಿ ಪಡೆಯುತ್ತಾರೆ. ನಿಮಗೆ ಈ ಸಮಾಚಾರ ತಿಳಿಸಿ ಹೋಗೋಣ ಅಂತ ಬಂದೆ. ಗೋಪಾಲರಾಯರು ನಿಮ್ಮ ತಮ್ಮಂದಿರಾ?"

"ಹುಂ" ಎಂದಿಷ್ಟೇ ಹೇಳಿ ಗೋವಿಂದರಾಯರು ಮೌನ ತಾಳಿದರು. ಅವರಿಗೆ ಒಳಗೆ ಸಾವಿರ ಚೇಳು ಕಡಿದಷ್ಟು ವೇದನೆಯಾಯಿತು. ತಳಮಳ ಗೊಂಡರು. ಎಲ್ಲ ನುಂಗಿಕೊಂಡು ಆ ಅಮೀನನಿಂದಲೇ ತಮ್ಮನ ಎಲ್ಲ ವೃತ್ತಾಂತವನ್ನೂ ಕೇಳಿಕೊಂಡರು.

ಅಮೀನ ಹೊರಟು ಹೋದ ಮೇಲೆ ವಿಚಾರಕ್ಕೊಳಗಾದರು: ತಂದೆ ಯವರ ಕೊನೆಯ ಇಚ್ಛೆಯ ಪ್ರಕಾರ ಏನನ್ನೂ ಹೆಚ್ಚುಕಡಿಮೆ ಮಾಡದೆ ನಡೆಸಿ ಕೊಂಡು ಬಂದರೂ, ತಮ್ಮ ಕಣ್ಣೆದುರಿಗೇ ತನ್ನ ತಮ್ಮ ಈ ರೀತಿ ಹಾಳಾಗು ತ್ತಿರುವದನ್ನು ನೋಡಿ ಅವರಿಗೆ ಸಹಿಸಲಾರದಾಯಿತು. ಪಾಲು ಕೊಟ್ಟುಬಿಟ್ಟು ತಮ್ಮಷ್ಟಕ್ಕೆ ತಾವು ಇರಬೇಕೆಂದರೂ ತಂದೆಯವರಿಗೆ ಕೊನೆಯ ಗಳಿಗೆಯಲ್ಲಿ ಕೊಟ್ಟ ಮಾತು ಮರುಕಳಿಸಿ ಬಂದು ಅವರನ್ನು ಇನ್ನಷ್ಟು ವಿಹ್ವಲರನ್ನಾಗಿ ಮಾಡುತ್ತಿತ್ತು. ಆದರೂ ಕೊಟ್ಟ ಮಾತನ್ನು ಮೀರಲಾಗದೆ ಬಂದ ಕಷ್ಟಗಳನ್ನೆಲ್ಲ ನುಂಗಿಕೊಂಡಿರುತ್ತಿದ್ದರು.

ಅದೇ ರಾತ್ರಿ ಗೋಪಾಲ ರಾತ್ರಿ ಹತ್ತು ಗಂಟೆಗೆ ಏನೂ ಅರಿಯದವ ನಂತೆ ಮನೆಗೆ ಬಂದ. ಗೋವಿಂದರಾಯರೇ ಮಾತಿಗೆ ಪ್ರಾರಂಭಿಸಿದರು:

"ಗೋಪಾಲ, ನಿನ್ನ ಕಂಪನಿ ಸರಿಯಾಗಿ ನಡೆಯುತ್ತಿದೆಯೇ?"

"ಹುಂ, ಹಾಗೆಯೇ ನಡೆದಿದೆ."

"ಗೋಪಾಲ, ನಾನು ನಿನಗೆ ಅಣ್ಣ. ನಿನ್ನ ವ್ಯವಹಾರವನ್ನೆಲ್ಲ ನನಗೆ ಏಕೆ ತಿಳಿಸುವುದಿಲ್ಲ? ನಿನ್ನ ತೊಂದರೆ ಏನೇ ಇದ್ದರೂ ನನಗೆ ಹೇಳಬಾರದೆ?"

"ಆ ಕಾಲ ಬಂದಾಗ ಹೇಳುವೆ."

"ಇನ್ನೂ ಬಂದಿಲ್ಲವೇ ಆ ಕಾಲ? ಏನು ಗೋಪಾಲ, ನೀನು ಹೀಗೆ ಮಾಡಬಹುದೇ? ನನಗೆ ಏನೂ ಗೊತ್ತಿಲ್ಲವೆಂದು ನೀನು ತಿಳಿದಿರುವಿಯಾ? ಇಲ್ಲಿ ನೋಡು ಅಮೀನರು ಬಂದಿದ್ದಾರೆ. ನಮ್ಮ ಆಸ್ತಿಯನ್ನೆಲ್ಲಾ ಹರಾಜು ಮಾಡಿಸುವ ನೋಟೀಸು ತಂದಿದಾರೆ. ಅದಕ್ಕೆ ಏನು ಹೇಳುವೆ?"

" ಇರುವ ಆಸ್ತಿಯನ್ನು ಮಾರುವನು, ಸಾಲ ತೀರಿಸುವುದು." ಎಂದು ನಿರಂಜನವಾಗಿ ಹೇಳಿಬಿಟ್ಟ.

ಗೋವಿಂದರಾಯರಿಗೆ ಕುತ್ತಿಗೆ ಹಿಸುಕಿಕೊಂಡಂತಾಯಿತು. ತನ್ನ ತಂದೆ ಅಷ್ಟು ಕಷ್ಟಪಟ್ಟು, ಬೆವರು ಸುರಿಸಿ ಸಂಪಾದಿಸಿದ ಆಸ್ತಿಯನ್ನು ಮಾರುವುದು ಅದೇನೂ ಅಷ್ಟೊಂದು ಮಹತ್ವದ್ದಲ್ಲವೆಂಬಂತೆ ಗೋಪಾಲ ಮಾತನಾಡಿದುದು ಅವರಿಗೆ ಅಸಹ್ಯವೆನಿಸಿತು. ಮನಸ್ಸು ಉದ್ವಿಗ್ನಗೊಂಡು ಆ ರಾತ್ರಿ ಬಹು ಹೊತ್ತಿನ ತನಕ ಅಣ್ಣತಮ್ಮಂದಿರಿಬ್ಬರೂ ಬಿರುಸಾಗಿಯೆ ಮಾತನಾಡಿದರು ಆದರೂ ಪ್ರಯೋಜನವಾಗಲಿಲ್ಲ.

ಮುಂದೆ ಸಾಲ ತೀರಿಸಲಷ್ಟಕ್ಕೆ ಆಸ್ತಿ ವಿಕ್ರಯವಾಯಿತು. ತಂಗುವುದಕ್ಕಾಗಿ ನೆರಳೂ ಉಳಿಯಲಿಲ್ಲ. ಅದಕ್ಕಾಗಿ ಪಟ್ಟ ಪ್ರಯತ್ನಗಳೆಲ್ಲ ವ್ಯರ್ಥವಾದುವು. ಮಾರಿ ಬಂದ ಹಣಕ್ಕೂ ಸಾಲಕ್ಕೂ ಸರಿಹೋಯಿತು. ಕೈಯಲ್ಲಿ ಏನೂ ಉಳಿಯ ಲಿಲ್ಲ. ಪಿತ್ರಾರ್ಜಿತ ಆಸ್ತಿಯ ಪೈಕಿ ಚಿಕ್ಕ ಕವಡೆಯೂ ಉಳಿಯಲಿಲ್ಲ ಅಷ್ಟೊಂದು ಒಳ್ಳೆಯ ಸ್ಥಿತಿಯಲ್ಲಿದ್ದವರು ಒಂದೇ ಸಾರಿಗೆ ಹೀಗೆ ಅನಾಥರಂತೆ ನಿರ್ಗತಿಕರಾಗಿ ನಿಂತುದನ್ನು ನೆನೆದು ಗೋವಿಂದರಾಯರು ಸಹನೆ ಮೀರಿ, ನಿಂತಲ್ಲಿಯೇ ಕುಸಿದು "ಕಡೆಗೂ, ಕಡೆಗೂ ನನ್ನ ತಂದೆಯ ಅಂತಿಮ ಆಸೆಯನ್ನು ನೆರವೇರಿಸ ಲಿಕ್ಕಾಗಲಿಲ್ಲವಲ್ಲಾ." ಎಂದು ತಳಮಳಗೊಂಡು ಕಣ್ಣೀರು ಮಿಡಿದರು.

ಇದೇ ಹೊತ್ತಿಗೆ ಇನ್ನೂ ಒಂದು ದುರಂತ ನಡೆಯಿತು ಮನೆಯಲ್ಲಿ. ಗೋವಿಂದರಾಯರ ಹೆಂಡತಿ ಸಾವಿತ್ರಮ್ಮ, ಮನೆಯ ಹಿತ್ತಲಲ್ಲಿ ಬಟ್ಟೆ ಒಗೆ ಯುವದಕ್ಕಾಗಿ ಹೋದಾಗ, ಕಲ್ಲು ಕೆಳಗೇ ಕುಳಿತ ನಾಗವೊಂದು ಬಂದು ಕಚ್ಚಿತು. ಸಾವಿತ್ರಮ್ಮ ಅದನ್ನು ನೋಡಿದರು, ಕೂಗಿಕೊಂಡು ಒಳಗೆ ಓಡಿ ಬಂದರು. ಜನ ಸೇರಿತು. ವೈದ್ಯರನ್ನು ಬರಮಾಡಿಕೊಂಡರು. ದೇಸೀ ಮದ್ದಿನ ಉಪಚಾರಗಳೆಲ್ಲಾ ಆದವು. ಆದರೆ ಅಷ್ಟರಲ್ಲಿಯೇ ವಿಷ ಮೈಯನ್ನೆಲ್ಲ ವ್ಯಾಪಿ ಸಿತ್ತು. ಬಾಯಿಗೆ ಬುರುಗು ಬಂದಿತ್ತು. ವಿಸ್ಮೃತಿಯಾಗುತ್ತ ನಡೆದಿತ್ತು. ಕಣ್ಣುಗಳು ಅರೆಗಣ್ಣಾಗಿದ್ದವು. ಮೈ ಹಸಿರಾಗಿತ್ತು. ಯಾವ ಔಷಧವೂ ಫಲ ಕಾರಿಯಾಗದೆ ಸಾವಿತ್ರಮ್ಮ ಕಣ್ಣು ಮುಚ್ಚಿದರು. "ನರಿ ಆಕಾಶ ಭೂಮಿ ಯಂತಿದ್ದ ತಂದೆ–ತಾಯಿ ಹೋದರು; ಆಸ್ತಿ–ಪಾಸ್ತಿ ಹೋಯಿತು; ಹೆಂಡತಿಯೂ ಕೈ ಬಿಟ್ಟಳು. ನಾನಿನ್ನು ಬದುಕಿ ಏನುಪಯೋಗ?" ಎಂದು ಗೋವಿಂದರಾಯರು ನೈರಾಶ್ಯದ ಉಸಿರು ಬಿಟ್ಟರು. ಬದುಕಿನ ಆಸೆಯ ಎಳೆಗಳೆಲ್ಲಾ ಕತ್ತರಿಸಿದಂತಾಗಿ

ಒಂದು ಬಗೆಯ ವಿರಕ್ತ ಜೀವನವನ್ನು ಪ್ರಾರಂಭಿಸಿದರು.

ಕೆಲ ಕಾಲ ಹೀಗೇ ಹೋಯಿತು.

ಒಂದು ದಿನ ರಂಗಮ್ಮ "ಗೋವಿಂದೂ, ಹೀಗೆ ಎಷ್ಟು ದಿನಾ ಅಂತ ಕಾಲ ತಳ್ಳುತ್ತೀಯಪ್ಪಾ? ನಿನಗೆ ಜೊತೆಯಾಗಿರಲು ಯಾರೂ ಬೇಡವೆ? ಒಬ್ಬಂಟಿಗನಾಗಿ ಈ ಸಣ್ಣವಯಸ್ಸಿನಲ್ಲಿ ಇರಲು ಸಾಧ್ಯವೇ ಹೇಳು?" ಎಂದು ಕೇಳಿದರು.

"ನೀನೇ ಹೇಳು ಅಕ್ಕಾ, ನಾನು ಯಾರಿಗಾಗಿ ಬದುಕಬೇಕಾಗಿದೆ? ಅಮ್ಮ ಅಪ್ಪ ಹೋದರು. ಇದ್ದ ಒಬ್ಬನೇ ತಮ್ಮ ಈ ರೀತಿ ಆಚರಿಸಿದ. ಕೈ ಹಿಡಿದ ಹೆಂಡತಿಯೂ ಹೋದಮೇಲೆ, ನಾನು ಏತಕ್ಕಾಗಿ ಪುನಃ ಮದುವೆ ಮಾಡಿಕೊಂಡು ಮತ್ತೆ ಈ ನೀರಸವಾದ ಸಂಸಾರಕ್ಕೆ ತೊಡಗಲಿ?"

"ಗೋವಿಂದೂ, ನೀನೇ ಹೀಗೆ ಹೇಳಿದರೆ, ಇನ್ನು ನಾನು ಏನು ಹೇಳಬೇಕು? ನಾನು ಏನನ್ನು ನೋಡಿ ಬದುಕಬೇಕು ಹೇಳು? ನನಗೇನಿದೆ? ನೀನೂ ಹೀಗಂದರೆ ನಾನು ಯಾರ ಮನೆಯ ಬಾಗಿಲಿಗೆ ಹೋಗಬೇಕಿನ್ನು? ಗೋಪಾಲ ಹಾಗೆ, ನೀನು ಹೀಗೆ. ಹೆಂಗುಸಾದ ನಾನು ನಿನಗೆ ಧೈರ್ಯ ಹೇಳಬೇಕೆ? ಕಷ್ಟಗಳು ಮನುಷ್ಯರಿಗೆ ಬರದೆ ಮರಕ್ಕೆ ಬರಬೇಕೆ? ಗಂಡಸು ಎದೆ ಕಳೆದುಕೊಳ್ಳಬಾರದು. ಯಾರೇನು ಚಿರಂಜೀವಿಗಳಲ್ಲ. ಸಾವು ಕರೆದರೆ ಹೋಗಲೇಬೇಕು. ಹೋದವರು ಗೆದ್ದರು. ಇದ್ದವರು ಏಳಬೇಕು. ಜಗತ್ತಿಗೆ ಹೊರತಾಗಿರುವುದು ಸಾಧ್ಯದ ಮಾತಲ್ಲ. ನೋಡು, ನೀನು ಒಪ್ಪುವುದಾದರೆ ಸೀತುವೇ ಇದ್ದಾಳೆ. ತಬ್ಬಲಿಯಾದ ಅವಳಿಗೂ ಒಂದು ದಿಕ್ಕು ಆಗುತ್ತೆ."

ಬಹಳ ಹೊತ್ತಿನ ನಂತರ "ಆಗಲಿ ಅಕ್ಕಾ, ನೀನು ಹಿರಿಯಳು. ನಿನ್ನಮಾತನ್ನು ಮೀರುವುದಿಲ್ಲ. ಆದರೆ ಒಂದು ಮಾತು ಸೀತೂನ್ನೇ ಕೇಳಿ ನೋಡು. ಅವಳು ಒಪ್ಪುವುದಾದರೆ ಸರಿ." ಎಂದು ಮಾತು ಮುಗಿಸಿದರು. ಗೋವಿಂದರಾಯರು

ರಂಗಮ್ಮ ಒಡನೆಯೆ ಗೋವಿಂದು ಸೀತೆಯರ ಲಗ್ನವನ್ನು ಯಾವ ಆಡಂಬರವೂ ಇಲ್ಲದೆ ನಡೆಯಿಸಿದರು.

ಹೊಸ ಸಂಸಾರ ಇತ್ತ ಪ್ರಾರಂಭವಾಗುವ ಹೊತ್ತಿಗೆ, ಸಾಲಕ್ಕಾಗಿ ಹರಾಜಿ

ಸಲ್ಲಿ ಕೊಂಡುಕೊಂಡ ಸಾಹುಕಾರರು ಮನೆಯನ್ನು ತಮ್ಮ ವಶಕ್ಕೆ ಕೊಡಲು ಅವಸರಪಡಿಸಹತ್ತಿದರು. ಹಾಗೂ ಹೀಗೂ ಎರಡು ಮೂರು ತಿಂಗಳು ಮುಂದೆ ಎಳೆಯಬೇಕಾದರೆ ಸಾಕುಬೇಕಾಯಿತು ಗೋವಿಂದರಾಯರಿಗೆ. ಒಂದು ದಿನ ಮನೆ ಬಿಟ್ಟುಕೊಟ್ಟು ಹೊರಡುವುದೆಂದು ನಿಶ್ಚಯಿಸಿದರು.

ಗೋಪಾಲ ತನ್ನ ಹೆಂಡತಿಯೊಡನೆ ಮೈಸೂರಿಗೆ ಹೋಗಿಬಿಟ್ಟ. ಅಲ್ಲಿ ಪೂರ್ವಪುಣ್ಯದಿಂದ ಅವನಿಗೊಂದು ಕೆಲಸವೂ ಸಿಕ್ಕಿತು. ಗಂಡ ಹೆಂಡತಿ ಅವರ ಪಾಡಿಗೆ ಅವರು ಸಂಸಾರ ಮಾಡಿಕೊಂಡಿದ್ದರು. ಆದರೂ ಗೋಪಾಲನ ಇಸ್ಪೇಟಿನಾಟದ ಚಟ ಮಾತ್ರ ಅವನನ್ನು ಬಿಟ್ಟಿರಲಿಲ್ಲ.

ಗೋವಿಂದರಾಯರು ಮನೆಯಲ್ಲಿದ್ದ ಹಸುಕರುಗಳನ್ನೆಲ್ಲ ತಮ್ಮಲ್ಲಿ ಕೆಲಸ ಮಾಡುತ್ತಿದ್ದ ರೈತರ ಮನೆಗೆ ಕಳಿಸಿದರು. ಪಾತ್ರೆ–ಪಡಗ, ದವಸ–ಧಾನ್ಯಗಳನ್ನೆಲ್ಲ ಮಾರಿ ಬಂದ ಹಣದಲ್ಲಿ ಅರ್ಧ ಗೋಪಾಲನಿಗೆ ಕಳಿಸಿಕೊಟ್ಟು, ಉಳಿದದ್ದನ್ನು ತಮ್ಮ ದಾರಿಯ ಬುತ್ತಿಯೆಂದು ಕಾಯ್ದಿಟ್ಟುಕೊಂಡರು.

ಒಂದು ಒಳ್ಳೆಯ ದಿನ ಗೊತ್ತುಮಾಡಿಕೊಂಡು ಊರು ಬಿಟ್ಟು ಹೊರಡುವುದಕ್ಕನುವಾದರು. ಇಷ್ಟು ದಿನದ ಬಾಳೆಲ್ಲ ಕಣ್ಣೆದುರಿಗೆ ಬಂದು ಗೋವಿಂದರಾಯರ ಜೀವವನ್ನು ತಳಮಳಗೊಳಿಸಿತು. ನಡೆದಾಡಿದ ಭೂಮಿ, ಒಡನಾಡಿದ ಜನ ಬಿಟ್ಟು ಹೋಗಬೇಕಾದರೆ ತಮ್ಮ ಕರುಳನ್ನೆ ಹರಿದುಕೊಂಡು ಹೋದಂತೆ ಎನಿಸಿತು ಗೋವಿಂದರಾಯರಿಗೆ. ದುಃಖ ತುಂಬಿ, ಮಾತುಗುಂದಿ ಮೂಕರಾಗಿದ್ದರು ರಾಯರು ಊರು ಬಿಡುವಾಗ.

"ಯಾವ ಊರಿಗಾದರೂ ಹೋಗುತ್ತೀರಿ?" ಎಂದು ಕೇಳಿದವರಿಗೆ "ಮುಂಚೆ ಈ ಊರು ಬಿಡುವುದು. ನಂತರ ಎಲ್ಲಿಗಾದರೆ ಅಲ್ಲಿಗೆ ಹೋಗುವುದು." ಎಂದು ಉತ್ತರಿಸಿದರು. "ಅಲ್ಲಿಂದ ಮುಂದೆ?" ಎಂದರೆ "ದೇವರು ಮಾಡಿಸಿದ್ದು" ಎಂದರು.

ರಂಗಮ್ಮನೂ ಹೊರಡಬೇಕಲ್ಲ, ತಮ್ಮನ ಬೆನ್ನಹಿಂದೆ. ಹೊರಟರು. ಹೊರಡುವ ಮೊದಲು ತಂದೆ ಕಟ್ಟಿಸಿದ ರಾಮದೇವಾಲಯಕ್ಕೆ ಹೋಗಿ ಬಂದರು. "ಇದೇ ನಿನ್ನ ಕಡೆಯ ದರ್ಶನ. ಕಾಪಾಡು. ನಮಗೆ ನೀನೇ ಗತಿ. ಮುಂದೆ ಹೇಗೆ ನಡೆಸುತ್ತೀಯೋ ನೀನೇ ನಡೆಸು. ನನ್ನ ಗೋಪಾಲ ಗೋವಿಂದರನ್ನು ಸನ್ಮಾರ್ಗದಲ್ಲಿ ನಡೆಸು ನಮ್ಮಪ್ಪಾ." ಎಂದು ಬೇಡಿಕೊಂಡು ಮತ್ತೆ ಮತ್ತೆ ಗುಡಿಯ ಸುತ್ತುಹಾಕಿ ಭಾರವಾದ ಮನಸ್ಸಿನಿಂದ ಮರಳಿದರು. ಅಕ್ಕ, ತಮ್ಮ,

ಹೆಂಡತಿ ಕಡೆಗೊಮ್ಮೆ ಮನೆ ಬಿಟ್ಟರು; ಊರೂ ಬಿಟ್ಟರು.

ರಾಮನಾಥಪುರ ಬಿಟ್ಟು ಬಂದ ಗೋವಿಂದರಾಯರು ಬೆಂಗಳೂರಿನ ಲ್ಲಿಯೇ ನೆಲಸಿದರು. ಸುದೈವದಿಂದ ಒಂದು ಅಂಗಡಿಯಲ್ಲಿ ಲೆಕ್ಕ ಬರೆಯುವ ಕೆಲಸ ಹೆಚ್ಚು ತೊಂದರೆಯಿಲ್ಲದೆಯೇ ದೊರಕಿತು. ಆ ಕೆಲಸದಲ್ಲಿಯೆ ನಿರತ ರಾಗಿ, ಅಲ್ಲಿನ ವಾತಾವರಣಕ್ಕೆ ಹೊಂದಿಕೊಂಡು, ಪಟ್ಟಣವಾಸವನ್ನು ಕೈಕೊಂ ಡರು. ಅಂದಿನಿಂದ ಅವರ ಜೀವನ ಯಂತ್ರದಂತೆ ಒಂದೇ ಬಗೆಯಲ್ಲಿ ಸಾಗಿತು. ಅವರ ಸುಖ ದುಃಖಗಳ ಮಧ್ಯೆ ಸರೂ ಒಬ್ಬಳು ಹುಟ್ಟಿ ಅವರ ಯಾಂತ್ರಿಕ ಜೀವನವನ್ನು ಬಹುಮಟ್ಟಿಗೆ ಕಡಿಮೆ ಮಾಡಿ, ನಿಸ್ಸಾರವೆನಿಸಿದ ಅವರ ಸಂಸಾರ ದಲ್ಲಿ ಸವಿ ತುಂಬಿದಳು.

ಗಡಿಯಾರ ಆರು ಬಡಿಯಿತು. ಬೆಳಗಾಗುವವರಲ್ಲಿತ್ತು. ಮಲಗಿದ್ದ ರಂಗಮ್ಮ ಎಬ್ಬಿಸಿದವರಂತೆ ಹಾಸಿಗೆಯ ಮೇಲೆ ಎದ್ದು ಕುಳಿತರು. ರಾತ್ರಿ ಕನಸಿನಲ್ಲಿ ಕಂಡ ಗತಜೀವನದ ದೃಶ್ಯಗಳೆಲ್ಲ ಮರೆಯಾಗಿದ್ದರೂ, ಏನೋ ಕಳ ಕೊಂಡವರಂತಾಗಿತ್ತು ಮನಸ್ಸು. ಮೇಲಕ್ಕೇಳೋಣ ಎಂದುಕೊಂಡು ಬಲಕ್ಕೆ ತಿರುಗಿದರು. ಕಿಟಕಿಯಲ್ಲಿ ಕೂತಿದ್ದ ಬೆಕ್ಕೊಂದು 'ಮಿಯಾಂ' ಎಂದಿತು. "ಥೂ! ಇದೇನು, ಬೆಳಿಗ್ಗೆ ಎದ್ದೊಡನೆ ಇದರ ಸುಟ್ಟ ಮುಖ ನೋಡಬೇಕಾಯಿತಲ್ಲಾ!" ಎಂದುಕೊಂಡು ಪುನಃ ಮಲಗಿ ಮತ್ತೊಂದು ಸಾರೆ ಎದ್ದರು. ಎದ್ದವರೇ ಬಚ್ಚಲುಮನೆಗೆ ಹೋಗಿ ಕೈಕಾಲುತೊಳೆದುಕೊಂಡು, ಹಂಡೆಗೆ ಉರಿ ಹಾಕಿ, ಅಡುಗೆ ಮನೆಗೆ ಬಂದು ಒಲೆ ಹೊತ್ತಿಸಿ ಕಾಫಿಗೆ ನೀರು ಇಟ್ಟರು. ಅಷ್ಟೊತ್ತಿಗೆ ಹೊರಗಡೆಯಿಂದ "ಅವ್ವಾ!" ಎಂದು ಹಾಲಿನವಳು ಕೂಗಿದಳು. ರಂಗಮ್ಮ ಹಾಲಿನ ಪಾತ್ರೆಯನ್ನು ಒಯ್ದು ಹಾಲು ಹಾಕಿಸಿಕೊಂಡರು. "ಬಂದ ಹಾಗೆ

ಮುತ್ತಮ್ಮಾ, ನಾವು ನಾಡಿದ್ದು ಗುರುವಾರ ಮೈಸೂರಿಗೆ ಹೊರಡಬೇಕೆಂದಿದ್ದೇವೆ. ಬರುವುದು ಎಂಟು ಹತ್ತು ದಿನ ಆಗಬಹುದು. ಹಾಲನ್ನು ಕೊಳ್ಳೋದಕ್ಕೆ ಇಲ್ಲಿ ಯಾರೂ ಇರುವುದಿಲ್ಲ. ನೀನು ಹಾಲನ್ನೇನು ತರಬೇಡ." ಎಂದು ಹೊರಡಲನುವಾದ ಹಾಲಿನವಳನ್ನು ತಡೆದು ಹೇಳಿದರು.

"ಅದೇನ್ರವ್ವಾ, ಎಲ್ಲರೂ ಯಾಕೆ ಹೋಗುತ್ತೀರಾ? ಸ್ವಾಮಿಯೋರೂ ಹೋಗುತ್ತಾರೆಯೇ?" ಎಂದಳು ಮುತ್ತಮ್ಮ.

"ನಮ್ಮ ಸೀತೂಗೆ ಹುಷಾರಿಲ್ಲವಮ್ಮ. ಅದರಿಂದ ಮೈಸೂರಿನ ಆಸ್ಪತ್ರೆಗೆ ತೋರಿಸಬೇಕಂತೆ. ಅದಕ್ಕಾಗಿ ಹೋಗ್ತೇವೆ." ಎಂದು ಹಾಲಿನ ಪಾತ್ರೆ ತೆಗೆದುಕೊಂಡು ಒಳಕ್ಕೆ ಬಂದರು.

"ಹಾಗೆಯೇ ಆಗಲೀವ್ವಾ. ಸದ್ಯ ಅವ್ವಾವ್ರಿಗೆ ಹುಷಾರಾದರೆ ಸಾಕು." ಎನ್ನುತ್ತ ಹಾಲಿನ ಮಡಿಕೆಯನ್ನು ಕುಕ್ಕಿಯೊಳಗಿಟ್ಟುಕೊಂಡು, ತಲೆಯಮೇಲೆ ಹೊತ್ತು ಹೊರಟುಹೋದಳು.

ರಂಗಮ್ಮ ಅಡುಗೆ ಮನೆಗೆ ಬಂದರು. ಒಲೆಯ ಮೇಲಿಟ್ಟಿದ್ದ ನೀರು ಕುದಿಯುತ್ತಿತ್ತು. ಫಿಲ್ಟರಿಗೆ ಪುಡಿಯನ್ನು ಹಾಕಿ, ಅದಕ್ಕೆ ನೀರು ಹಾಕಿಟ್ಟು, ಒಲೆಯ ಮೇಲೆ ಹಾಲು ಕಾಯಿಸಲು ಇಟ್ಟು ಸರೂವನ್ನು ಎಬ್ಬಿಸತೊಡಗಿದರು. ಸರೂ ಇನ್ನೂ ನಿದ್ದೆಯಲ್ಲಿಯೇ ಇದ್ದಳು. ಕಾಫಿ ತಯಾರಿಸಿ ಸರೂವನ್ನು ಮತ್ತೆ ಎಬ್ಬಿಸಿದರು. ಸರೂ ಕಣ್ಣೊರಸಿಕೊಳ್ಳುತ್ತ ಎದ್ದಳು. ಬಚ್ಚಲುಮನೆಗೆ ಹೋಗಿ ಮುಖ ತೊಳೆದು ಬಂದಳು. ರಂಗಮ್ಮ ಅವಳನ್ನು ತೊಡೆಯಮೇಲೆ ಕೂರಿಸಿಕೊಂಡು ಕಾಫಿ ಕುಡಿಸಿದರು. ಆಗ ಸರೂ ಒಂದಿಷ್ಟು ಗೆಲುವಾದಳು. ತನ್ನ ರೂಮಿಗೆ ಹೋಗಿ ತನ್ನ ಪಾಠ ಪ್ರಾರಂಭಿಸಿದಳು. ರಂಗಮ್ಮ ಅಲ್ಲಿಂದೆಮ್ಮ ಮುಂದಿನ ಕೆಲಸಗಳಿಗೆ ತೊಡಗಿದರು.

ಗೋವಿಂದರಾಯರೂ ಬೆಳಗಿನಲ್ಲಿ ಬೇಗ ಎದ್ದು, ಪ್ರಾತರ್ವಿಧಿಗಳನು ತೀರಿಸಿಕೊಂಡು, ಸ್ನಾನ ಸಂಧ್ಯಾವಂದನೆ, ದೇವತಾರ್ಚನೆ ಮುಗಿಸಿ, ಕಾಫಿ ಕುಡಿದು, ಮನೆಯಲ್ಲಿಯೇ ಬರೆಯುವದಕ್ಕೆಂದು ತಂದ ಅಂಗಡಿಯ ಲೆಕ್ಕವನ್ನು ಬರೆಯುವುದರಲ್ಲಿ ತೊಡಗಿದರು.

ಸೀತಮ್ಮ ತಮ್ಮ ರೂಮಿನಲ್ಲಿ ಮಲಗಿಯೇ ಇದ್ದರು. ಯೋಚಿಸಿ ಯೋಚಿಸಿ ತಲೆ ಚಿಟ್ಟು ಹಿಡಿದಿತ್ತು. ಗೋಡೆಯ ಮೇಲಿದ್ದ ಕ್ಯಾಲೆಂಡರ ನೋಡಿ ಅಂದಿನ ದಿನಾಂಕ ಗೊತ್ತುಮಾಡಿಕೊಂಡಳು. ವಾರ ನೋಡಿದಳು; ಬುಧವಾರ.

ಮರುದಿನವೇ ಮೈಸೂರಿಗೆ ಹೊರಡಬೇಕು. ಗೋವಿಂದರಾಯರು ಆ ತಿಂಗಳ ಪೂರ್ತಿ ಲೆಕ್ಕ ಬರೆದುಕೊಟ್ಟು, ಯಜಮಾನರಿಂದ ಕಾಡಿ, ಬೇಡಿ ಏಳೆಂಟು ದಿನಗಳ ರಜೆ ಪಡೆದು, ಖರ್ಚಿಗಾಗಿ ಒಂದಿಷ್ಟು ಹಣವನ್ನೂ ಅವರಿಂದ ಬಿಚ್ಚಿಸಿ, ಮೈಸೂರ ಪ್ರಯಾಣದ ಎಲ್ಲ ಏರ್ಪಾಡು ಮಾಡಿದ್ದರು. ಇಲ್ಲಿಂದ ಇಷ್ಟು ದೂರದ ಆ ಪರವೂರಿಗೆ ಹೋಗುವುದು, ಆಸ್ಪತ್ರೆಯಲ್ಲಿ ತೋರಿಸುವುದು, ಅವರು ಕೊಟ್ಟ ಔಷಧ, ಆ ಚುಚ್ಚುಮದ್ದು ಎಲ್ಲಾ ತೆಗೆದುಕೊಳ್ಳುವುದು, ಅವರು ಹೇಳಿದಷ್ಟು ದಿನ ಅಲ್ಲಿಯೇ ಇರುವುದು, ಇದೆಲ್ಲದಕ್ಕೂ ನೀರಿನಂತೆ ಹಣ ಸುರಿಯುವುದು,-ಎಷ್ಟು ತೊಂದರೆ,ಎಷ್ಟು ಶ್ರಮ ತನ್ನಿಂದ ಇತರರಿಗೆ?.... ಇಷ್ಟೆಲ್ಲಾ ಕಷ್ಟಪಟ್ಟದ್ದಕ್ಕೂ ಗುಣವಾದರೇನೋ ಸರಿ. ಒಂದು ವೇಳೆ ಯಶಸ್ಸು ದೊರೆಯದೆ ಹೋದರೆ....? ಎಂದು ಸೀತಮ್ಮ ಯೋಚನೆ ಮಾಡಿದಷ್ಟು ಅವರ ಹೃದಯ ಕಳವಳಕ್ಕೀಡಾಗುತ್ತಿತ್ತು. ಒಂದು ಮನಸ್ಸು ಹೇಳಿತು: "ನೋಡು ನಿನಗೆ ಬಂದಿರುವುದು ಎಂತಹ ಭಯಂಕರವಾದ ಕಾಹಿಲೆ ಎನ್ನುವುದು ನಿನಗೆ ಗೊತ್ತಿದೆಯೇ? ಮುಂದೆ ಅದರ ಪರಿಣಾಮ ನಿನ್ನ ಮೇಲೆ ಎಷ್ಟರ ಮಟ್ಟಿಗಾಗು ವುದು ಎಂಬುದು ನಿನಗೆ ತಿಳಿದಿದೆಯೇ? ನೀನು ನಿನ್ನ ಚಿಕ್ಕತನದಲ್ಲಿ ನೋಡಿದ ಆ ಶಂಕರಪ್ಪನನ್ನು ಜ್ಞಾಪಿಸಿಕೊ. ಅವನ ಸಂಕಟ ವೇದನೆಗಳನ್ನು ನೀನು ನೋಡಿಲ್ಲವೇ? ನಿನಗೀಗ ಬಂದಿರುವುದೂ ಅಂತಹದೇ ರೋಗ. ನೀನಿನ್ನು ಏನು ಮಾಡಿದರೂ ಬದುಕುವುದಿಲ್ಲ. ನಿನಗಾಗಿ ಮಾಡುವ ವೆಚ್ಚವೆಲ್ಲ ವ್ಯರ್ಥ....ವ್ಯರ್ಥ! ನಿನ್ನ ಸರ್ವಸ್ವವಾದ ಪತಿ, ನಿನ್ನ ಪ್ರತಿಬಿಂಬವಾಗಿರುವ ಆ ನಿನ್ನ ಸರೂ, ನಿನ್ನನ್ನು ಸಾಕಿ ಸಲುಹಿ ಈ ವರೆಗೆ ಮಗಳಂತೆ ಕಾಪಾಡಿದ ರಂಗಮ್ಮ ಇವರೆಲ್ಲ ರನ್ನೂ ಋಣಭಾರದ ವಿಪತ್ತಿಗೆ ಸಿಕ್ಕಿಸಿ ನೀನು ಬದುಕಬೇಕೆನ್ನುವಿಯಾ?" ಇನ್ನೊಂದು ಮನಸ್ಸು ಹೇಳಿತು: "ಇಲ್ಲ, ಇಲ್ಲ. ಹಾಗೆಂದಿಗೂ ಮಾಡಲಾರೆ. ಅವರಿಗಾಗಿಯೇ ಬದುಕುವೆ. ಆದರೆ ಇದಕ್ಕೆ ಪರಿಹಾರ, ನಿವಾರಣೆ ಏನು?" "ಇರುವುದು, ಒಂದೇ ಮಾರ್ಗ. ಅದು ನಿನ್ನ ಸಾವು. ಅದೇ ಇದಕ್ಕೆ ಪರಿಹಾರ ನಾಳೆಯೇ ನಿನ್ನ ಮೈಸೂರಿನ ಪ್ರಯಾಣ. ಅದೇನು ಅಲ್ಪಸ್ವಲ್ಪ ಖರ್ಚಿನದಲ್ಲ; ಅದಕ್ಕಾಗಿ ನೀನು ಮುಂಚೆಯೆ ನಿನ್ನ ಬಲಿದಾನ ಮಾಡು. ಯೋಚಿಸು. ಈಗಲೂ ಕಾಲವಿದೆ; ನಿನ್ನ ಕೆಲಸ ನೀನು ಮಾಡು. ಹೇಳುವುದು ಹೇಳಿಯಾಯಿತು. ಇನ್ನು ನಿನ್ನ ಮನ ಬಂದಂತೆ ಮಾಡು." ಎಂದುಸಿರಿ ಸುಮ್ಮನಾಯಿತು ಮೊದ ಲಿನ ಮನಸ್ಸು.

ಸೀತಮ್ಮ ಈ ಎರಡು ಮನಗಳ ನಡುವೆ ಸಿಕ್ಕು ಬಳಲಿ ಬೆಂಡಾದರು. 'ಹೌದು, ಅದೇ ಸರಿಯಾದ ದಾರಿ' ಎಂದು ಒಂದು ಬಾರಿ ಯೋಚಿಸಿದರೆ, ಮರುಕ್ಷಣ ತನ್ನ ಜೀವದ ಜೀವವಾಗಿದ್ದ ಆ ಮುಗ್ಧ ಸರಳ ಸುಂದರ ಸರೂಳ ಮುಖ ಎದುರಿಗೆ ಬಂದು ನಿಲ್ಲುವುದು, ಹೃದಯವನ್ನೆಲ್ಲಾ ಕಲಕುವುದು. ಅಂತಹ ಹುಡುಗಿಯನ್ನು ತಬ್ಬಲಿಯಾಗಿ ಮಾಡಿಬಿಡುವುದೇ? ಅವಳ ಜೀವನ ವನ್ನೆ ಹಾಳುಮಾಡುವುದೇ? ಎಂದು ವಿಹ್ವಲರಾಗುವರು. ಹೀಗೇ ಅನೇಕ ಗಂಟೆಗಳ ವರೆಗೆ ಮನಸ್ಸಿನ ಈ ಹೊಯ್ದಾಟದಲ್ಲಿ ಸೀತಮ್ಮ ಕಂಗಾಲಾದರು. ಕಡೆಗೆ ಒಂದು ನಿರ್ಧಾರಕ್ಕೆ ಬಂದು ಹಾಸುಗೆಯಿಂದ ಎದ್ದರು. ಹಾಸುಗೆಯಿಂದ ಎಬ್ಬಿಸಬೇಡಿ ಎಂದು ಡಾಕ್ಟರು ಬಜಾಯಿಸಿ ಹೇಳಿದ್ದರೂ ನೇರವಾಗಿ ಬಚ್ಚಲು ಮನೆಗೆ ಸದ್ದಿಲ್ಲದಂತೆ ನಡೆದೇ ಹೋದರು. ಒಂದೆರಡು ಚೆಂಬುಗಳಷ್ಟು ತಣ್ಣೀರಿನಿಂದ ಕೈಕಾಲು ತೊಳೆದು ಅಲ್ಲಿಯೇ ಇದ್ದ ಮಡಿ ಸೀರೆಯುಟ್ಟರು. ತಲೆಯನ್ನು ಬಾಚಿಕೊಂಡರು. ಚೆನ್ನಾಗಿ ಎದ್ದು ಕಾಣುವಂತೆ ಅಗಲ ಕುಂಕುಮ ಇಟ್ಟುಕೊಂಡರು. ದೇವರ ಮನೆಯ ಕಡೆಗೆ ನಡೆದರು. ಅವರ ಪ್ರತಿ ಹೆಜ್ಜೆ ಯಲ್ಲಿಯೂ ಸಾವನ್ನಪ್ಪುವ ದೃಢ ಸಂಕಲ್ಪವಿತ್ತು. ದೇವರೆದುರಿಗಿನ ದೀಪ ಅಚಲವಾಗಿ ಉರಿಯುತ್ತಲೇ ಇತ್ತು. ದೇವರ ಸಮೀಪಕ್ಕೆ ಬಂದು ಭಕ್ತಿಯಿಂದ ನಮಸ್ಕಾರ ಮಾಡಿದರು. ಅಲ್ಲಿಯೇ ಕುಳಿತು ಕೆಲಕ್ಷಣ ಧ್ಯಾನಿಸಿದರು. ಕೃತ ನಿಶ್ಚಯ ಬದಲಾಗಲಿಲ್ಲ. ಎದ್ದು ತನ್ನ ರೂಮಿಗೆ ಹೋಗಿಬಂದರು. ಬಂದು ಮತ್ತೆ ದೇವರಿಗೆ ನಮಸ್ಕರಿಸಿದರು. ಅತ್ತಿತ್ತ ನೋಡಿ ಏನನ್ನೋ ಬಾಯಲ್ಲಿ ಹಾಕಿ ಕೊಂಡರು. ತತ್‌ಕ್ಷಣ 'ಸರೂ!' ಎಂದು ಕೂಗಿಕೊಂಡು ಅಲ್ಲಿಯೇ ನೆಲದ ಮೇಲೆ ಬಿದ್ದುಬಿಟ್ಟರು.

"ಏನು ಸೀತೂ!" ಎಂದು ಗಾಬರಿಯಾಗಿ ರಂಗಮ್ಮ ರೂಮಿಗೆ ಓಡಿ ಬಂದರು. ಅಲ್ಲಿ ಸೀತಮ್ಮ ಇರಲಿಲ್ಲ. ಅಲ್ಲಿ ಇಲ್ಲಿ ಓಡಾಡಿ, ಕೊನೆಗೆ ದೇವರ ಮನೆಗೆ ಬಂದು ನೋಡಿದರು. ಸೀತಮ್ಮ ದೇವರ ಮಂಟಪಾಸನದ ಮುಂದೆ ಬೋರಲಾಗಿ ಬಿದ್ದಿದ್ದರು.

"ಸೀತೂ, ಏನಾಯಿತಮ್ಮಾ? ನನಗೆ ಹೇಳಬಾರದೇ? ನೀನೇ ಎದ್ದು ಬಂದುಬಿಟ್ಟಿದ್ದೀಯಲ್ಲಾ!" ಎಂದು ಹತ್ತಿರ ಬಂದು ಅವರನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಗಾಳಿ ಹಾಕತೊಡಗಿದರು. ಸೀತಮ್ಮನ ಆ ವೇಷ ಭೂಷಣ, ಮುಖದಲ್ಲಿ ಮೂಡಿದ್ದ ಆ ವಿಚಿತ್ರ ಕಳೆ, ಒಳಗಿನ ಸಂಕಟಕ್ಕಾಗಿ ಒಂದೇ

ಸಮನೆ ತುಟಿಗಳ ಮೇಲೆ ಆಡುತ್ತಿದ್ದ ಆ ನಾಲಿಗೆ, ಇವನ್ನು ನೋಡಿ ರಂಗಮ್ಮ ನಿಗೆ ಒಂದು ಕ್ಷಣ ದಿಗಿಲುಬಡಿದಂತಾಯಿತು. ಸೀತಮ್ಮ ಅರೆತೆರೆದ ಕಣ್ಣುಗಳಿಂದ ರಂಗಮ್ಮನ ಕಡೆ ನೋಡಿ "ಸರೂ...." ಎಂದು ತೊದಲಿದರು.

"ಗೋವಿಂದೂ, ಸರೂ, ಇಲ್ಲಿ ಬನ್ನಿ!" ಎಂದು ಗಟ್ಟಿಯಾಗಿ ಕೂಗಿಕೊಂಡರು ರಂಗಮ್ಮ. ಇನ್ನೂ ಲೆಕ್ಕದಲ್ಲಿಯೇ ಮಗ್ನರಾಗಿದ್ದ ಗೋವಿಂದರಾಯರು ಇದಾವ ಸಮಾಚಾರವನ್ನೂ ತಿಳಿಯದೆ, "ಏನಕ್ಕಾ ಅಷ್ಟು ಗಟ್ಟಿಯಾಗಿ ಕೂಗಿದೆ! ಏನಾಗಿದೆ?" ಎಂದು ಸ್ವಲ್ಪ ಬೇಸರದಿಂದಲೆ ಬಂದರು. ಸರೂ ತನ್ನ ರೂಮಿನಿಂದ ಕೈಯಲ್ಲಿ ಪುಸ್ತಕ ಹಿಡಿದೇ ಓಡಿಬಂದಳು. ಇವರನ್ನು ನೋಡಿ ಸೀತಮ್ಮ ಎದ್ದು ಕೂಡಲು ಪ್ರಯತ್ನಿಸಿದರು.ರಂಗಮ್ಮ ಏಳಗೊಡಲಿಲ್ಲ. ಮಲಗಿಯೆ "ಹೀಗೆ ಸ್ವಲ್ಪ ಹತ್ತಿರ ಬನ್ನಿ" ಎಂದು ಅವರನ್ನು ಕರೆದರು.

ಗೋವಿಂದರಾಯರು ಈಗ ಅವಾಕ್ಕಾದರು. ಏನೂ ತೋಚದೆ ಅವರ ಹತ್ತಿರ ಹೋಗಿ ಕುಳಿತರು. ಸರೂ ಹತ್ತಿರ ಬಂದರೂ, ಕುಳಿತುಕೊಳ್ಳದೆ ಗಾಬರಿಯಾಗಿ ಹಾಗೇ ತಾಯಿಯ ಮುಖವನ್ನೇ ನೋಡುತ್ತ ನಿಂತಳು.ಸೀತಮ್ಮ ಅಲ್ಲಿಂದಲೇ ಅವರ ಪಾದ ಮುಟ್ಟಿ ತನ್ನ ಹಣೆಗೆ ಆ ಕೈಯಿಂದ ಸವರಿಕೊಂಡರು. "ಇದೇ ನನ್ನ ಕೊನೆಯ ನಮಸ್ಕಾರ. ಈ ಪಾದಸೇವೆಗೆ ಇನ್ನು ಹೆಚ್ಚು ಕಾಲ ಇರಲಾರೆ....ನಾನೇ ನನ್ನ ಮರಣ ತಂದುಕೊಂಡಿದ್ದೇನೆ....ನಾನು ಮಾಡುವ ಬದಲು ನಿಮ್ಮಿಂದ ಸೇವೆ ತೆಗೆದುಕೊಂಡು ಪಾಪ ಮಾಡಿದ್ದೇನೆ....ಅನಾಥಳಾಗಿದ್ದ ನನ್ನನ್ನು ಕೈ ಹಿಡಿದು ಎತ್ತಿದಿರಿ....ಮನೆ ಕಟ್ಟಿದಿರಿ....ಸುಖ ಕೊಟ್ಟಿರಿ.... ಅದನ್ನು ಭೋಗಿಸುವ ಭಾಗ್ಯ ನನಗಿಲ್ಲ....ನನ್ನ ಕರ್ಮ....ನೀವು ಮಾಡಿದ ಉಪಕಾರ ಏಳು ಜನ್ಮಗಳಲ್ಲಿಯೂ ತೀರಿಸಲಾರೆ...." ಎಂದು ಕಣ್ಣುಗಳನ್ನು ಸರೂ ನಿಂತೆಡೆಗೆ ತಿರುಗಿಸಿದರು. ಪಾಪ, ಸರೂ ಏನೂ ತಿಳಿಯದವಳಾಗಿ, ದುಃಖತುಂಬಿ ಬಿಕ್ಕುತ್ತ ನಿಂತಿದ್ದಳು. ಸೀತಮ್ಮ ಮಾತನಾಡಬೇಕೆಂದರು. ಆದರೆ ಯಾಕೋ ತಡೆಹಿಡಿದರು.

"ಇದನ್ನೇನು ಮಾಡಿದೆ ಸೀತೂ!" ಎಂದು ರಂಗಮ್ಮ ಗೋಳಿಟ್ಟರು.

ಗೋವಿಂದರಾಯರು ಡಾಕ್ಟರನ್ನು ಕರೆತರಬೇಕೆಂದು ಹೊರ ಹೊರಡಲು ಮುಖ ತಿರುಗಿಸಿದರು. ಸೀತಮ್ಮ ಅವರನ್ನು ತಡೆದು "ಬೇಡ. ನಾನು ಸಾಯುವುದು ನಿಶ್ಚಿತ....ಯಾರನ್ನೂ ಕರೆತರಬೇಡಿ....ನನ್ನ ಆಸೆ ಇನ್ನೊಂದಿದೆ, ನಡೆಸಿಕೊಡಿ....ನೀವು ಇನ್ನೊಂದು ಮದುವೆ ಮಾಡಿಕೊಂಡು ಈ ಮನೆ ನಿಲ್ಲಿಸಿ...."

ಎಂದು ಹೇಳಿದರೂ ಕೇಳದೆ ಅವಸರದಿಂದ ಹೊರಟುಹೋದರು.

"ಸರೂ.....!" ಎಂದು ತನ್ನನ್ನೇ ನೋಡುತ್ತ ನಿಂತಿದ್ದ ಮಗುವಿನ ಕಡೆಗೆ ಮತ್ತೆ ನೋಡಿದಳು. ದುಃಖ ಉಮ್ಮಳಿಸಿ ಬಂತು. ಆದರೂ ತಡೆ ಹಿಡಿದು... "ಸರೂ, ನಾನು ಬರತೇನಮ್ಮಾ...ದೂರ ದೂರ ಹೋಗುವೆ. ನಿಮ್ಮತ್ತೆ ನಿನ್ನ ನೋಡಿಕೋತಾರೆ...." ಎನ್ನುವಾಗ ಅವರ ಕಂಠ ಬಿಗಿದು ಬಂತು. ಬಿಕ್ಕಿದರು. ರಂಗಮ್ಮ ತನ್ನ ದುಃಖವನ್ನೆಲ್ಲಾ ನುಂಗಿಕೊಂಡು ಇಷ್ಟೊತ್ತೂ ಸುಮ್ಮಗಿದ್ದರು. ಈಗ ಅವರ ದುಃಖ ಕೋಡಿವರಿಯಿತು. "ಸೀತೂ! ಇನ್ನೂ ನನ್ನನ್ನು ಎಷ್ಟು ಈ ಭೂಮಿಯ ಮೇಲೆ ಇರೂ ಅಂತಿಯಾ? ನಿನಗೇ ಸಾಕಾದಲ್ಲಿ ನಾನು ಇನ್ನೂ ಇರಬೇಕೇ? ಇದನ್ನೇನು ಮಾಡಿಕೊಂಡೇ!" ಎಂದು ಅತ್ತೇಬಿಟ್ಟರು. ಸರೂ ಬೆದರಿದ ಕಣ್ಣುಗಳಿಂದ ತಾಯಿಯ ಕಡೆಗೊಮ್ಮೆ, ಅತ್ತೆಯ ಕಡೆಗೊಮ್ಮೆ ನೋಡುತ್ತ ನಿಂತಿದ್ದಳು. ಸೀತಮ್ಮ ಸರೂಗೆ ಹತ್ತಿರ ಬಂದು ಕುಳಿತುಕೊಳ್ಳಲು ಸನ್ನೆಮಾಡಿದರು. ಮಗು ಬಂದು ಕುಳಿತುಕೊಂಡಿತು. ಸೀತಮ್ಮ ಅದರ ತಲೆಯನ್ನು ನೇವರಿಸುತ್ತ "ನಾನು ಹೋಗಲೇ ಮಗೂ, ದೇವರ ಬಳಿಗೆ?" ಎಂದರು.

"ಇಲ್ಲಮ್ಮಾ, ನನ್ನ ಬಿಟ್ಟು ನೀನು ಎಲ್ಲಿಗೂ ಹೋಗಬೇಡ. ನಾನೊಬ್ಬಳೇ ಇರಲು ನನಗೆ ಹೆದರಿಕೆಯಾಗುತ್ತೆ." ಎಂದಿತು ಮಗು.

"ಯಾಕೆ, ಅತ್ತೆ ನಿನ್ನ ಜೊತೆಯಲ್ಲಿಯೇ ಇರುತ್ತಾರೆ. ನಿನ್ನನ್ನು ಯಾವಾಗಲೂ ನೋಡಿಕೊಳ್ಳುತ್ತಾರೆ."

ತಾಯಿ ತನ್ನನ್ನು ಬಿಟ್ಟು ಎಲ್ಲಿಗೋ ಹೋಗುತ್ತಾಳೆಂಬ ಭಯದಿಂದ ತಾಯಿಯ ಕೈಯ ಮೇಲೆ ಮುಖವಿಟ್ಟು ಅಳಲಾರಂಭಿಸಿತು.

"ಹಾಗೆಲ್ಲಾ ಅಳಬಾರದು ಮಗೂ. ನಾನು ಅಂದು ಹೇಳಿದ್ದೆಲ್ಲಾ ನೆನಪಿನಲ್ಲಿದೆ ತಾನೇ?" ಎಂದು ತುಂಬಿ ಬಂದ ದುಃಖ ತಡೆಯಲಾರದೆ ಮುಖ ಸ್ವಲ್ಪ ಹೊರಳಿಸಿದರು.

ರಂಗಮ್ಮ ಗಾಬರಿಯಾಗಿ ಹೊರಳಿಸಿದ ಮುಖವನ್ನು ಈ ಕಡೆ ಮಾಡಿ ನೋಡಿದರು. ಆ ಮುಖ ಕಣ್ಣೀರಿನಿಂದ ತೊಯ್ದಿತ್ತು.

"ಅತ್ತೇ........" ಎಂದು ಸುಮ್ಮಗಾದಳು.

"ಹೇಳು, ಹೇಳು, ನನಗೇನು ಹೇಳುವದಿದೆ ಹೇಳು."ಎಂದರು ರಂಗಮ್ಮ.

"ಅತ್ತೇ, ಈ ದೇಹ ನಿನ್ನ ತೊಡೆಯ ಮೇಲೆಯೆ ಇಷ್ಟು ದೊಡ್ಡದಾಯಿತು.

ಕೊನೆಗೆ ನಿನ್ನ ತೊಡೆಯ ಮೇಲೆಯೆ ಮಲಗಿತು. ಇದೇ ನನ್ನ ಪುಣ್ಯ. ನನ್ನಂತೆಯೇ ನನ್ನ ಸರೂನನ್ನು ನಿಮ್ಮ ಮಡಿಲಲ್ಲಿ ಹಾಕಿದ್ದೇನೆ. ನನ್ನ ಭಾರ ಇಳಿದಂತಾಯಿತು. ನನ್ನನ್ನು ಕ್ಷಮಿಸಿ. ನನ್ನ ನೆನಪಿಗಾಗಿ ನನ್ನ ಸರೂ ನಿಮ್ಮ ಲ್ಲಿದ್ದಾಳೆಂದು ತಿಳಿಯಿರಿ. ಹೋಗಿಬರುತ್ತೇನೆ ಅತ್ತೇ!" ಎಂದು ಒಮ್ಮೆಲೆ ಎದ್ದು ಪಾದದ ಮೇಲೆ ಬಿದ್ದಳು. ಪ್ರಜ್ಞೆ ಹಾರಿತ್ತು. ಕಣ್ಣುಗಳು ಗಿರಗಿರ ತಿರು ಗುತ್ತಿದ್ದವು. ರಂಗಮ್ಮ, ಡಾಕ್ಟರು ಇನ್ನೂ ಬರಲಿಲ್ಲವಲ್ಲಾ ಎಂದು ಹರದಾಡಿ ದಳು. ಸೀತಮ್ಮ 'ಎಲ್ಲಾ ಮುಗಿಯಿತು' ಎನ್ನುವಂತೆ ಮುಖ ಕಿವುಚಿ ಗೋಣು ಅತ್ತ ಹೊರಳಿಸಿದಳು.

ಗೋವಿಂದರಾಯರು ಡಾಕ್ಟರೊಡನೆ ಬಂದರು. ಡಾಕ್ಟರು ಪರೀಕ್ಷಿಸಿ "ಇನ್ನೇನೂ ಪ್ರಯೋಜನವಿಲ್ಲ. ಆದರೂ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ನಾನು ಬೇಕಾದರೆ ಚೀಟಿ ಕೊಡುತ್ತೇನೆ." ಎಂದು ಮೆಲ್ಲಗೆ ತಿಳಿಸಿ ಬಹಳ ಹೊತ್ತು ಅಲ್ಲಿ ನಿಲ್ಲದೆ ಹೊರಟು ಹೋದರು.

ಒಲೆಯ ಮೇಲಿದ್ದ ಅನ್ನವು ಸೀದು ಒಂದು ಬಗೆಯ ಒಗರು ವಾಸನೆ ಮನೆಯನ್ನೆಲ್ಲಾ ಆವರಿಸಿದ್ದಿತು. ಬೆಕ್ಕೊಂದು ಬಂದು ಹಾಲಿನ ಪಾತ್ರೆಯನ್ನು ಉರುಳಿಸಿ ಹೋಯಿತು. ಎಲ್ಲಿಲ್ಲದ ಗಾಳಿ ಒಮ್ಮೆಲೆ ಬಂದು ದೇವರ ಮುಂದಿನ ದೀಪವನ್ನು ನಂದಿಸಿತು. ಮನೆಯೆಲ್ಲೆಲ್ಲಾ ಭೀಕರವಾದ ನೀರವತೆ ನೆಲೆಸಿತು.

ಗೋವಿಂದರಾಯರಿಗೆ ಇನ್ನೂ ಆಸೆಯಿದ್ದಿತು. ಗಡಿಬಿಡಿಯಿಂದ ಟ್ಯಾಕ್ಸಿ ಯೊಂದನ್ನು ತರಲು ಹೊರಟರು. ರಂಗಮ್ಮ ಮಂಕುಬಡಿದವರಂತೆ ಕಣ್ಣೀರು ಸುರಿಸುತ್ತ, ದೇವರ ಮುಂದಿನ ದೀಪ ಬೆಳಗಿಸಿ, ಅದರಲ್ಲಿ ಸ್ನೇಹ ಹೆಚ್ಚಿಸಿದರು. ಅಲ್ಲಿಯೇ ನಿಂತು ದೇವರಿಗೆ ಕೈ ಮುಗಿದರು. ಸರೂ, ಯಾರೂ ಹೇಳುವ ಕೇಳುವ ವರಿಲ್ಲದಂತೆ ಮಂಕಾಗಿ ಸೀತಮ್ಮನನ್ನೆ ನೋಡುತ್ತ ದೂರದಲ್ಲಿ ಕುಳಿತಿದ್ದಳು.

ಅರ್ಧ ಗಂಟೆಯೊಳಗಾಗಿ ಟ್ಯಾಕ್ಸಿಯೊಂದು ಮನೆಯ ಮುಂದೆ ಬಂದು ನಿಂತಿತು. ಸೀತಮ್ಮನನ್ನು ಗೋವಿಂದರಾಯರು ರಂಗಮ್ಮ ಇಬ್ಬರೂ ಸೇರಿ ಕಾರಿನೊಳಕ್ಕೆ ತಂದು ಮಲಗಿಸಿದರು. ಸರೂನನ್ನು ಕರೆದುಕೊಂಡು ಮನೆಗೆ ಬೀಗ ಹಾಕಿ ಕಾರಿನೊಳಕ್ಕೆ ಹೋಗಿ ಕೂತರು. ಕೆಲನಿಮಿಷಗಳಲ್ಲಿಯೆ ಕಾರು ಅವರನ್ನು ತೆಗೆದುಕೊಂಡು ಆಸ್ಪತ್ರೆಯ ಬಳಿ ತಂದು ಬಿಟ್ಟಿತು.

ಗೋವಿಂದರಾಯರು ಇಳಿದು ಆಸ್ಪತ್ರೆಯ ಒಳಕ್ಕೆ ಹೋಗಿ ಅಲ್ಲಿನ ಮುಖ್ಯ ಡಾಕ್ಟರರಿಗೆ ತಾವು ಬಂದಿರುವ ಕೆಲಸವನ್ನು ತಿಳಿಸಿ, ಆ ಕಾಗದವನ್ನೂ

ಕೊಟ್ಟರು. ಅದನ್ನು ಅವರು ಓದಿ ನೋಡಿಕೊಂಡು "ಪರಶುರಾಂ ನಿಮ್ಮ ಮನೆಯ ಡಾಕ್ಟರೇ? ಸರಿ." ಎಂದು ಹೇಳಿದವರೇ ಸಿದ್ಧತೆಗಾಗಿ ಒಳಗೆ ಹೋದರು.

ಸ್ಟ್ರೆಚರ್ ಮೂಲಕ ಸೀತಮ್ಮನನ್ನು ಒಳಕ್ಕೆ ಸಾಗಿಸಲಾಯಿತು. ಡ್ರೈವ್ಹರನಿಗೆ ಬಾಡಿಗೆ ಕೊಟ್ಟು ಗೋವಿಂದರಾಯರು, ಸರೂ, ರಂಗಮ್ಮನವರೊಡನೆ ಆಸ್ಪತ್ರೆಯೊಳಕ್ಕೆ ಬಂದರು. ಸೀತಮ್ಮನನ್ನು ಆಗಲೆ 'ಆಪರೇಶನ್ ವಾರ್ಡಿಗೆ' ಸಾಗಿಸಲಾಗಿತ್ತು. ಪ್ರತ್ಯೇಕವಾಗಿ ನಿರ್ಮಿಸಲ್ಪಟ್ಟ ಪ್ರೇಕ್ಷಕರ ಗ್ಯಾಲರಿಯಲ್ಲಿ ಹೋಗಿ ಕುಳಿತರು. ಅಲ್ಲಿ ಎಲ್ಲವೂ ಕಾಣುತ್ತಿತ್ತು. ಆಪರೇಶನ್ ಮಾಡುವ ಮೊದಲು ರೋಗಿಗೆ ಒಂದು ಬಗೆಯ ಔಷಧವನ್ನು ಒತ್ತಾಯದಿಂದ ಕುಡಿಸಿದರು. ಕುಡಿಸಿದ ಸ್ವಲ್ಪ ಹೊತ್ತಿನೊಳಗಾಗಿ ವಾಂತಿಯಾಗತೊಡಗಿತು. ಡಾಕ್ಟರು ರೋಗಿಯನ್ನು ಪರೀಕ್ಷಿಸುತ್ತಲೆ ಇದ್ದರು. ಆದರೆ ಅವರ ಮನಸ್ಸು ಯಾವುದನ್ನೂ ನಿರ್ಧರಿಸುವ ಮೊದಲೇ ವಾಂತಿಯ ಜೊತೆಗೆ ಅಸಾಧ್ಯವಾಗಿ ರಕ್ತ ಹೋಗಿರುವದನ್ನು ನೋಡಿ ಅಧೀರರಾದರು. ಆಪರೇಶನ್ ವಿಚಾರ ಬಿಟ್ಟು ನಿರೀಕ್ಷಿಸಹತ್ತಿದರು. ರೋಗಿಗೆ ಬರಬರುತ್ತ ರಕ್ತಸ್ರಾವದಿಂದ ಶಕ್ತಿ ಕ್ಷೀಣವಾಗುತ್ತ ನಡೆದಿತ್ತು. ಡಾಕ್ಟರ ಚಿಕಿತ್ಸೆಯ ಸೀಮೆಯನ್ನೂ ದಾಟಿತ್ತು. ರೋಗಿಯ ಬದುಕುವ ಆಸೆಯನ್ನೇ ಅವರು ಬಿಡಬೇಕಾಯಿತು. ಈ ರೀತಿ ಆಗಬಹುದೆಂದು ಅವರೂ ಬಗೆದಂತೆ ತೋರಲಿಲ್ಲ. ಈ ವಿಷಮಾವಸ್ಥೆ ಬಂದೊದಗಿದ್ದಕ್ಕಾಗಿ ಅವರ ಮನಸ್ಸೂ ಬಹಳ ವ್ಯಾಕುಲಗೊಂಡಿತು. "Case hopless" ಎನ್ನುತ್ತಾ ರೂಮಿನಿಂದ ಎಲ್ಲರೂ ಹೊರಬಂದರು. ಸುಮ್ಮನೆ ಸಾಕ್ಷಿಗಳಾಗಿ ಕುಳಿತಿದ್ದ ಗೋವಿಂದರಾಯರಿಗೆ ರಂಗಮ್ಮನವರಿಗೆ ಇದಾವುದೂ ತಿಳಿಯಲಿಲ್ಲ. ಡಾಕ್ಟರು ಹೊರಗೆ ಬಂದೊಡನೆ ಕೆಲಸ ಮುಗಿಯಿತೆಂದು ಅವರನ್ನು ಕಾಣಲು ಗೋವಿಂದರಾಯರೂ ಹೊರಕ್ಕೆ ಬಂದು ಡಾಕ್ಟರನ್ನು ಕಂಡರು. ಮಾತನಾಡಿಸಲಿಕ್ಕಾಗದೇ ಅವರ ಮುಖ ನೋಡಿದರು. ಆ ಮುಖವೇ ಅವರಿಗೆ ಉತ್ತರ ಹೇಳಿತು; ನಿರಾಸೆಯ ನಿಟ್ಟುಸಿರೊಂದು ಅವರ ಬಾಯಿಂದ ಅವರಿಗರಿಯದೇ ಹೊರಬಿದ್ದಿತು. ಅದರ ಅರ್ಥವಾಯಿತು ಗೋವಿಂದರಾಯರಿಗೆ. ಅವರು ಶೂನ್ಯಮನಸ್ಕರಾಗಿ ತಲೆತಗ್ಗಿಸಿ ನಿಂತರು. ಡಾಕ್ಟರನ್ನು ಯಾವ ಪ್ರಶ್ನೆ ಕೇಳಲಿಕ್ಕೂ ಹೋಗಲಿಲ್ಲ. ಅಷ್ಟರಲ್ಲಿ ರಂಗಮ್ಮನವರೂ ಅಲ್ಲಿಗೆ ಬಂದರು. "ಡಾಕ್ಟರ್, ಡಾಕ್ಟರ್, ನಮ್ಮ ಸೀತೂಂದು ಏನಾಯಿತು?....

ನನ್ನ ಕಂಪ ಉಳಿಯತಷ್ಟೇ? .... ಯಾಕೆ ಏನೂ ಮಾತನ್ನೇಕೆ ಆಡಲೊಲ್ಲಿರಿ? .... ಬದುಕಿದಳೇ ನನ್ನ ಮಗು?.... ಬದುಕಿಸಿ ನನ್ನ ತಂದೇ.... ಪುಣ್ಯ ಕಟ್ಟಿಕೊಳ್ಳಿ........" ಎಂದು ಹುಚ್ಚರಂತೆ ಪ್ರಲಾಪಿಸಹತ್ತಿದರು. "ಏಳೀಮ್ಮಾ, ನೀವು ಇಷ್ಟು ವಯಸ್ಸಾದವರು ಹೀಗೆ ಮಾಡಿದರೆ ಹೇಗೆ ಹೇಳಿ? ಧೈರ್ಯ ತಂದುಕೊಳ್ಳಿ. ಜನನ ಮರಣಗಳು ಮನುಷ್ಯನ ಕೈಲಿದೆಯೇ ತಾಯೀ? ನೀವೇ ಹೀಗೆ ಅಧೀರರಾದರೆ, ಇನ್ನು ಆ ಮಗುವಿನ ಗತಿ ಏನಾಗಬೇಕು? ಅವನ್ನು ಸಂತೈಸುವವರಾರು?" ಎಂದು ಡಾಕ್ಟರೇ ಸಮಾಧಾನ ಮಾಡಿದರು.

ಸರೂ ಇದನ್ನೆಲ್ಲಾ ನೋಡಿ ಗಾಬರಿಯಾಗಿ ಅಳಲಾರಂಭಿಸಿದಳು. ರಂಗಮ್ಮ ಹತ್ತಿರ ಹೋಗಿ, ಎತ್ತಿಕೊಂಡು ತಲೆ ನೀವಿ, ಗದ್ದ ಗಲ್ಲ ತುಟಿ ಹಿಡಿದು ಸಮಾಧಾನ ಪಡಿಸಲೆತ್ನಿಸಿದರೂ ಆಗೀಗ ಬರುತ್ತಿದ್ದ ಮಗುವಿನ ಬಿಕ್ಕುಗಳು ತ್ರಿಶೂಲಿಯನ್ನೂ ನಡುಗಿಸಬಹುದಾಗಿತ್ತು.

ಡಾಕ್ಟರು ಗೋವಿಂದರಾಯರನ್ನು ಹತ್ತಿರ ಕರೆದು "ನಮ್ಮ ಕೈಲಾದುದನ್ನೆಲ್ಲಾ ನಾವು ಮಾಡಿಯಾಯಿತು. ನನ್ನ ಚಿಕಿತ್ಸೆ ಈ ಕಾಲದಲ್ಲಿ ಉಪಯೋಗವಾಗಲಿಲ್ಲ. ಅವಕಾಶ ಮೀರಿ ಹೋಗಿದೆ. ಮೊದಲಿಗೇ ಬಂದಿದ್ದರೆ ಏನಾದರೂ ಉಪಯೋಗವಾಗುತ್ತಿತ್ತೊ ಏನೊ. ರೋಗಿಯನ್ನು ನೀವೀಗ ಕರೆದೊಯ್ಯುವುದೇ ಮೇಲು. ದೇವರು ನಿಮಗೆ ಈ ಕಷ್ಟವನ್ನೆಲ್ಲಾ ಎದುರಿಸುವ ಧೈರ್ಯ ಕೊಡಲಿ."ಎಂದು ಹೇಳಿ ತಮ್ಮ ಇತರ ಕಾರ್ಯಗಳಿಗೆ ತೆರಳಿದರು.

ವಾರ್ಡಿನಿಂದ ನರ್ಸೊಬ್ಬಳು ಹೊರ ಬಂದು ಗೋವಿಂದರಾಯರಿಗೆ "ಈಗ ಕರೆತಂದ ರೋಗಿಯ ಕಡೆಯುವರು ನೀವೆ?" ಎಂದು ಕೇಳಿದಳು.

"ಹೌದು." ಎಂದರು ಗೋವಿಂದರಾಯರು.

"ಅವರನ್ನು ಕೂಡಲೆ ಕರೆದುಕೊಂಡು ಹೋಗಿ. ಅಲ್ಲಿಗೆ ಇನ್ನೊಬ್ಬ 'ಪೇಷಂಟ್ ಅಡ್ಮಿಟ್' ಮಾಡಬೇಕಾಗಿದೆ." ಎಂದು ಹೇಳಿ, ಡ್ರಿಲ್ ಮಾಡುವವರಂತೆ ಗಿರಕ್ಕನೆ ತಿರುಗಿ, ಚಟ್‌ಪಟ್ ನಡೆದುಹೋದಳು.

ಗೋವಿಂದರಾಯರು ವಾಹನ ಸೌಕರ್ಯಕ್ಕಾಗಿ ಮತ್ತೆ ಹೊರ ಹೊರಟರು. ಅವರು ತಿರುಗಿ ಬರಬೇಕಾದರೆ ಅರ್ಧ ಗಂಟೆಯಷ್ಟು ಕಾಲವಾಯಿತು.

ಆ ವೇಳೆಗೆ ಸೀತಮ್ಮನನ್ನು ಸ್ಟ್ರೆಚರ್ ಮೂಲಕ ಇಬ್ಬರು ಹೊರತಂದು ಅಲ್ಲಿಯೆ ರಂಗಮ್ಮನ ಬಳಿ ಮಲಗಿಸಿ, ಯಾವ ಮಾತನ್ನೂ ಆಡದೆ ಸರಸರನೆ ಹೊರಟು ಹೋದರು. ರಂಗಮ್ಮನವರಿಗೆ ಇದೆಲ್ಲ ನಿರ್ದಯವ್ಯಾಪಾರವೆನಿಸಿ

ಕರುಳು ಕಿತ್ತುಬರುವಂತಾಯಿತು. ಸೀತಮ್ಮನ ತಲೆಯನ್ನೆತ್ತಿ ತಮ್ಮ ತೊಡೆಯ ಮೇಲಿರಿಸಿಕೊಂಡು, ಕುರುಳುಗಳನ್ನು ಮೃದುವಾಗಿ ತೀಡಲಾರಂಭಿಸಿದರು.

ಗೋವಿಂದರಾಯರು ಜಡವಾದ ನಡಿಗೆಯಿಂದ ಒಳ ಬಂದರು. ಅಕ್ಕ ತಮ್ಮ ಸೇರಿ ಸೀತಮ್ಮನನ್ನು ಕಾರಿನೊಳಕ್ಕೆ ಮಲಗಿಸಿದರು. ಕಾರೇನೊ ತೀವ್ರ ಗತಿಯಿಂದ ಹೊರಟಿತು. ಆದರೆ ಸೀತಮ್ಮನನ್ನು ತಮ್ಮ ತೊಡೆಯ ಮೇಲೆಯೆ ಮಲಗಿಸಿಕೊಂಡು, ಅವಳ ನಿಸ್ತೇಜವಾದ ಕಣ್ಣುಗಳನ್ನೆ ದಿಟ್ಟಿಸಿ ನೋಡುತ್ತಿದ್ದಂತೆಯೇ ಅವರ ಮನಸ್ಸು ಹಿಂದೆ ಹಿಂದೆ, ಅನೇಕ ವರ್ಷಗಳ ಹಿಂದಕ್ಕೆ ಹೋಗಿತ್ತು; ಆಗಿನ ದಿನಗಳೆಲ್ಲಾ ಕ್ಷಣಮಾತ್ರದಲ್ಲಿ ಕಣ್ಣಮುಂದೆ ಹಾದು ಹೋದಂತಾಯಿತು ರಂಗಮ್ಮನವರಿಗೆ.

.ಅದೊಂದು ಬೇಸಗೆಯ ಕಾಲ. ಸಾಂಕ್ರಾಮಿಕ ರೋಗಗಳಿಗೆ ಅನುಕೂಲ ಕಾಲ. ಶಾಂತಿಪುರ ಪ್ಲೇಗಿಗೆ ಆನುವುಮಾಡಿಕೊಟ್ಟಿತ್ತು. ಜನರೆಲ್ಲ ಊರು ಬಿಟ್ಟು, ಹೊರಗಡೆ ಗುಡಿಸಲುಗಳಲ್ಲಿ ಇರತೊಡಗಿದ್ದರು. ಸರಕಾರದವರು 'ಇನಾಕ್ಯುಲೇಶನ್' ಮೊದಲಾದ ಮುಂಜಾಗ್ರತೆ ವಹಿಸಿದಾಗ್ಯೂ, ಆ ರೋಗ ಅನೇಕರನ್ನು ಆಹುತಿ ತೆಗೆದುಕೊಳ್ಳದೆ ಬಿಡಲಿಲ್ಲ. ಹಾಗೆ ಆಹುತಿಯಾದವರಲ್ಲಿ ಸೋಮಶೇಖರನ ತಂದೆ ತಾಯಿಗಳೂ ಇದ್ದರು. ಅವರು ತಮ್ಮ ಏಕಮಾತ್ರ ಪುತ್ರನನ್ನು ಬಿಟ್ಟು, ಒಂದು ಚಿಕ್ಕ ಕವಡೆಯಷ್ಟು ಆಸ್ತಿಯನ್ನೂ ಇಡದೆ ಪರದೇಶಿಯನ್ನಾಗಿ ಮಾಡಿ ಕಣ್ಣು ಮುಚ್ಚಿದರು. ದಿಕ್ಕಿಲ್ಲದ ಹುಡುಗನನ್ನು ನೋಡಿ ಒಬ್ಬಿಬ್ಬರು ತಮ್ಮ ಮನೆಗಳಿಗೆ ಕರೆದೊಯ್ದು ಕೆಲವು ದಿನ ಇಟ್ಟುಕೊಂಡಿದ್ದರು. ಆದರೆ ಎಷ್ಟು ದಿನಾ ಅಂತಾ ತಾನೇ ಮಾಡುತ್ತಾರೆ? ಒಂದು ದಿನ, ಯಾರೋ ಯಾವುದೋ ಮಾತಿಗೆ ಸ್ವಲ್ಪ ಗದರಿಸಿದಾಗ ಸೋಮಶೇಖರ ತಾನಿದ್ದ ಠಾಣವನ್ನೇ ಬಿಟ್ಟುಬಿಟ್ಟ. ಎಲ್ಲಿಗೂ ಹೋಗಲಿಕ್ಕೆ ತಿಳಿಯದೆ ಬಸ್‌ನಿಲ್ದಾಣಕ್ಕೆ ಬಂದ. ಒಂದು ಬಸ್ ಹೊರಡಲು ಸಿದ್ಧವಾಗಿ ನಿಂತಿತ್ತು. ಎಲ್ಲಿಗೆ ಎಂದು ಕೇಳದೆ ಹತ್ತಿದ. ಕರ್ಮಧರ್ಮಸಂಯೋಗದಿಂದ ಆ ಬಸ್ಸಿನ ಡ್ರೈವ್ಹರನಿಗೆ ಈ ಹುಡುಗನ ವಿಷಯ ತಿಳಿದಿತ್ತು. ಹಣ ಕೇಳದೆ

ಕೂಡಿಸಿಕೊಂಡು ಹೊರಟ. ರಾಮನಾಥಪುರಕ್ಕೆ ಬಂದೊಡನೆ ಇಳಿಯಬೇಕೆನಿಸಿತು. ಇಳಿದ. ನಿಲ್ದಾಣದ ಬಳಿಯಲ್ಲಿದ್ದ ಅರಳೀಮರದ ಕಟ್ಟೆಯ ಮೇಲೆ ಸುಮ್ಮನೆ ಕುಳಿತುಕೊಂಡ.

ಚಂದ್ರಶೇಖರಯ್ಯ ಸಂಜೆ ಹಾಗೆಯೇ ತಿರುಗಾಡಿಕೊಂಡು ಬರುವಾಗ ಬಸ್ ನಿಲ್ದಾಣಕ್ಕೂ ಬಂದರು. ಕಟ್ಟೆಯ ಮೇಲೆ ಮಂಕಾಗಿ ಕುಳಿತ ಈ ಹುಡುಗನನ್ನೂ ನೋಡಿದರು. ಹತ್ತು ವರ್ಷದ ವಯಸ್ಸು. ಹಾಕಿದ್ದ ಒಂದು ಚಡ್ಡಿ, ತೊಟ್ಟ ಒಂದು ಷರ್ಟಲ್ಲದೆ ಬೇರಾವ ಬಟ್ಟೆಯೂ ಅವನ ಮೈಮೇಲಿರಲಿಲ್ಲ. ಎಣ್ಣೆಯನ್ನು ಕಾಣದ ತಲೆ, ಮಾಸಿದ ಅಂಗಿಗಳು ಇದ್ದರೂ ಮುಖ ಕಳೆ ದುಂಬಿತ್ತು; ಕಣ್ಣುಗಳು ಒಳಗಿನ ವೇದನೆಯನ್ನು ಸೂಚಿಸುತ್ತಿದ್ದವು. ಚಂದ್ರಶೇಖರಯ್ಯ ಇನ್ನೂ ಹತ್ತಿರ ಬಂದು "ನೀನು ಯಾರು ಮಗೂ? ಹೀಗೇಕೆ ಕೂತಿರುವೆ? ನೀನಾರ ಮನೆಗೆ ಹೋಗಬೇಕು?" ಎಂದು ವಿಶ್ವಾಸದಿಂದ ಕೇಳಿದರು.

"ನಾನು ಸೋಮಶೇಖರ, ಶಾಂತಿಪುರದವನು." ಎಂದಿಷ್ಟೆ ಹೇಳಿದ ಹುಡುಗ.

"ಹಾಗಾದರೆ ನೀನು ನಮ್ಮ ನಾರಾಯಣನ ಮಗನಲ್ಲವೆ? ನಿಮ್ಮ ತಂದೆ ಎಲ್ಲಿ? ಏನು ಸಮಾಚಾರ?" ಎಂದು ಹತ್ತಿರ ಕುಳಿತು ತಲೆಯ ಮೇಲೆ ವಾತ್ಸಲ್ಯದಿಂದ ಕೈಯಾಡಿಸಿದರು.

"ಅಮ್ಮ ಅಪ್ಪ ಇಬ್ಬರೂ ಪ್ಲೇಗ್ ರೋಗದಲ್ಲಿ ಸತ್ತುಹೋದರು." ಎಂದು ಹೇಳಿ ಬಿಕ್ಕಹತ್ತಿತು ಹುಡುಗ.

"ಅಳಬೇಡ ಮಗೂ, ನಾನಿದ್ದೇನೆ. ನಾನು ದೊಡ್ಡಪ್ಪನಾಗಬೇಕು ನಿನಗೆ. ಬಾ, ಮನೆಗೆ ಹೋಗೋಣ." ಎಂದು ಕೈಹಿಡಿದು ಎಬ್ಬಿಸಿಕೊಂಡು ಮನೆಗೆ ಹೋದರು.

ಮನೆಗೆ ಹೋದ ಕೂಡಲೆ ಅವನನ್ನು ತಾವೇ ಕರೆದುಕೊಂಡು ಬಚ್ಚಲು ಮನೆಗೆ ಹೋಗಿ ಕೈಕಾಲುಗಳನ್ನು ತೊಳೆಯಿಸಿ ಅಡುಗೆ ಮನೆಗೆ ಕರೆದುಕೊಂಡು ಬಂದರು. ರುಕ್ಮಿಣಮ್ಮ, ದೇವರಿಗೆ ದೀಪ ಹತ್ತಿಸಿ ನಮಸ್ಕಾರ ಹಾಕುತ್ತಿದ್ದರು. "ಲೇ!" ಎಂಬ ಚಂದ್ರಶೇಖರಯ್ಯನವರ ಕೂಗು ಕೇಳಿ ಅಡುಗೆಮನೆಗೆ ಧಾವಿಸಿ ಬಂದು ನೋಡಿದರು, ಒಂದು ಹೊಸ ಹುಡುಗನ ಮುಖ ಕಾಣಿಸಿತು.

"ಮುಂಚೆ ಎಲೆ ಹಾಕಿ ಬಡಿಸು. ಪಾಪ, ಹುಡುಗ ಬೆಳಗಿನಿಂದಲೂ ಉಪವಾಸವಿದ್ದಾನೆಂದು ತೋರುತ್ತೆ." ಎಂದು ಸೋಮಶೇಖರನನ್ನು ಕುಳ್ಳಿರಿಸಿದರು.

ರುಕ್ಮಿಣಮ್ಮನವರು ಅವಸರದಿಂದ ಎಲೆ ಹಾಕಿ ಬಡಿಸಿದರು. ಸೋಮು ಮೊದಮೊದಲು ಸಂಕೋಚದಿಂದ ಊಟ ಮಾಡಲಾರಂಭಿಸಿದ. ಆದರೆ ಕಡೆಗೆ ರುಕ್ಮಿಣಮ್ಮನವರ ಮೃದು ಮಾತುಗಳಿಗೆ ಮನಸೋತು, ತನಗರಿವಿಲ್ಲದೆಯೆ ದಿನಕ್ಕಿಂತ ಹೆಚ್ಚಾಗಿ ಊಟಮಾಡಿದ. ಆ ಊಟ ಎಂದರೆ ಅಮೃತವಾಗಿತ್ತು ಅವನಿಗೆ.

ಊಟ ಮುಗಿದ ಮೇಲೆ ಅವನನ್ನು ಕರೆದುಕೊಂಡು ಬಂದು ತಮ್ಮ ಹತ್ತಿರ ಕುಳ್ಳಿರಿಸಿಕೊಂಡು ಎಲ್ಲ ಸಂಗತಿಗಳನ್ನು ಕೇಳಿಕೊಂಡರು. 'ಇದೇ ನಿನ್ನ ಮನೆ ಎಂದು ತಿಳಿದು ಇಲ್ಲಿಯೇ ಇದ್ದು ಬಿಡು.' ಎಂದು ವಾತ್ಸಲ್ಯದಿಂದ ಹೇಳಿದರು. ಅಂದಿನಿಂದ ಸೋಮು ಆ ಮನೆಯವನಾದ.

ಸೋಮಶೇಖರನ ಓದು ಹಳ್ಳಿಯ ಓದು; ಕನ್ನಡ ನಾಲ್ಕನೆಯ ತರಗತಿಯ ವರೆಗೆ. ಅವನ ಕಂಠ ಬಹು ಮೃದುವಾಗಿ, ಹಾಡಿದರೆ ಬಹಳ ಸುಶ್ರಾವ್ಯವಾಗಿರುತಿತ್ತು. ಇದನ್ನು ಕಂಡುಹಿಡಿದು ಚಂದ್ರಶೇಖರಯ್ಯನವರು ಅವನಿಗೆ ರಾಮಾಯಣ ಮಹಾಭಾರತ ಕನ್ನಡ ಶ್ಲೋಕಗಳನ್ನು ಓದಲು ಹೇಳಿಕೊಟ್ಟರು. ಹಾಗೆಯೇ ದಿನಕ್ರಮೇಣ ತನ್ನ ಅಭ್ಯಾಸಬಲದಿಂದ ಶ್ಲೋಕಗಳನ್ನು ರಾಗವಾಗಿ ಹೇಳುವುದನ್ನೂ ಕಲಿತ.

ಸೋಮು ಕೆಲವೇ ದಿನಗಳಲ್ಲಿ ಎಲ್ಲರಿಗೂ ಅಚ್ಚು ಮೆಚ್ಚಿನವನಾದ. ರಂಗಮ್ಮನವರನ್ನು 'ಅಕ್ಕಾ' ಎಂದು, ಗೋವಿಂದ ಗೋಪಾಲರನ್ನು 'ಅಣ್ಣಾ' ಎಂದು ಚಂದ್ರಶೇಖರಯ್ಯನವರನ್ನು 'ಮಾಮಾ' ಎಂದು ಕರೆಯಲಾರಂಭಿಸಿದ. ಪ್ರತಿದಿನ ಸಂಜೆ ಏಳು ಗಂಟೆಯಿಂದ ಎಂಟರ ವರೆಗೆ ಸೋಮು ಬೀದಿಯ ಜಗುಲಿಯ ಮೇಲೆ ಕುಳಿತು ಶ್ಲೋಕಗಳನ್ನೋದುವನು. ಮಕ್ಕಳಿಂದ ಹಿಡಿದು ಮುದುಕರ ವರೆಗೆ ಊರಿನ ಜನರೆಲ್ಲ ಅದನ್ನು ಕೇಳಲು ಬಂದು ಕೂಡುವರು. ಓದಿನ ಮುಕ್ತಾಯದೊಡನೆ ರುಕ್ಮಿಣಮ್ಮನ ಚರಿಪುಪ್ರಸಾದ ಎಲ್ಲರ ಬಾಯನ್ನು ರುಚಿಮಾಡಿ ಕಳಿಸುತ್ತಿತ್ತು. ಇದರಿಂದ ಚಂದ್ರಶೇಖರಯ್ಯನವರ ಮನೆ ನಿತ್ಯವೂ ಮದುವೆಯ ಮನೆಯಂತಿರುತ್ತಿತ್ತು.

ಸೋಮು ಹುಡುಗತನದಲ್ಲಿಯೂ ದೇವರು, ಸಾಧು-ಸಂತರು, ಎಂದರೆ

ಬಹಳ ಭಯ ಭಕ್ತಿಯಿಂದ ಕಾಣುತ್ತಿದ್ದ. ಇಲ್ಲಿ ಬಂದ ಮೇಲೆ ಅನೇಕ ಮಹಾತ್ಮರ ಚರಿತ್ರೆಗಳನ್ನು ಓದಿ ಮನಸ್ಸನ್ನೂ ಇನ್ನೂ ತಿದ್ದಿಕೊಂಡ.

ಸೋಮು ಹುಡುಗತನ ದಾಟಿ ಈಗ ತಾರುಣ್ಯಕ್ಕೆ ಬಂದಿದ್ದಾನೆ. ದೇಹ ಪುಷ್ಟವಾಗಿದೆ. ತಾರುಣ್ಯದಿಂದ ಅಂಗಕಾಂತಿ ಹೆಚ್ಚಿದೆ. ಪ್ರಾಥಮಿಕ ಶಾಲೆಯ ಮೇಸ್ಟರನಾಗಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳ ಗಳಿಸುತ್ತಿದ್ದಾನೆ. ಅಂತೂ ನೆಮ್ಮದಿಯಾಗಿದ್ದಾನೆ, ಹಾಯಾಗಿದ್ದಾನೆ. ಪ್ರವಚನ ಇನ್ನೂ ಸಾಗಿದೆ.

ಒಂದು ದಿನ ಚಂದ್ರಶೇಖರಯ್ಯ ಬಂದು "ಸೋಮೂ, ನೀನು ಈಗ ದೊಡ್ಡವನಾಗಿರುವೆ. ನಿನಗೆ ಕೆಲಸವೂ ಇದೆ. ಯಾವ ತೊಂದರೆಯೂ ಇಲ್ಲ. ಆದುದರಿಂದ ನಿನ್ನ ಸುಖಸಂತೋಷಗಳಲ್ಲಿ ಪಾಲುಗೊಳ್ಳಲು ನಿನಗೆ ಒಬ್ಬರು ಬೇಕಲ್ಲವೆ?" ಎಂದು ಪರ್ಯಾಯವಾಗಿ ಕೇಳಿದರು.

"ಹಾಗೇಂದರೇನು ಮಾಮಾ? ನೀವೆಲ್ಲಾ ಇರುವಿರಲ್ಲಾ ನನ್ನ ಸುಖದಲ್ಲಿ ಭಾಗಿಗಳಾಗಲು! ಇನ್ನಾರು ಬೇಕಿತ್ತು?" ಎಂದು ಅವರ ಸೂಚ್ಯಾರ್ಥ ತಿಳಿಯದೆ ಉತ್ತರಿಸಿದ.

"ಹಾಗಾದರೆ ಎಲ್ಲಾ ನಿನಗೆ ಬಿಡಿಸಿ ಹೇಳಬೇಕೂ ಅನ್ನು. ಕೇಳು: ನೀನೀಗ ಮದುವೆ ಮಾಡಿಕೊಳ್ಳಲು ಪ್ರಾಪ್ತವಯಸ್ಕನಾಗಿದ್ದೀಯಾ. ಮದುವೆಯಾಗಿ ಹೆಂಡತಿ ಮಕ್ಕಳೊಂದಿಗೆ ಸಂಸಾರಮಾಡಿಕೊಂಡಿರಬೇಕೆಂಬುದೇ ನನ್ನ ಅಪೇಕ್ಷೆ. ಆದ್ದರಿಂದ ನೋಡು, ನೀನು ಒಪ್ಪುವೆಯಾದರೆ ಆ ರಾಮಾ ಜೋಯಿಸರ ಮಗಳು ಸುಶೀಲೆಯನ್ನ ನಿನಗೆ ತಂದುಕೊಳ್ಳೋಣ ಅಂತ ಇದ್ದೀನಿ. ನೀನು ಒಪ್ಪಿದರೆ ಮುಂದಿನ ಮಾತು. ಏನು ಹೇಳುವೆ?"

"ಮಾಮಾ, ನನ್ನ ಭಾಗದ ದೇವರು ನೀವು. ಯಾವುದೋ ಜನ್ಮದ ಪುಣ್ಯದ ಫಲವಾಗಿ ನಾನು ನಿಮ್ಮ ಬಳಿ ಬಂದು ಸೇರಿದೆ. ನಿರ್ಗತಿಕನಾದ ನನ್ನನ್ನು ಒಬ್ಬ ಮನುಷ್ಯನನ್ನಾಗಿ ಮಾಡಿ ಸಮಾಜದಲ್ಲಿ ಒಂದು ಸ್ಥಾನ ಕಲ್ಪಿಸಿ ಕೊಟ್ಟಿರಿ. ನಿಮ್ಮ ಮನಸ್ಸಿಗೆ ಯಾವುದು ಒಳ್ಳೆಯದೆಂದು ತೋರುವುದೋ ಅವನ್ನೇ ಮಾಡಿ. ನೀವು ಮಾಡಿದ್ದಕ್ಕೆ ನನ್ನ ಒಪ್ಪಿಗೆಯಿದೆ." ಎಂದು ಹೇಳಿ ಅವರ ಎದುರಿಗೆ ನಿಲ್ಲಲಾರದೆ ಆ ಜಾಗ ಬಿಟ್ಟು ಹೊರಟುಹೋದ.

ಅದೇ ವೈಶಾಖದಲ್ಲಿ ಸೋಮಶೇಖರ–ಸುಶೀಲೆಯರ ವಿವಾಹ ವಿಜೃಂಭಣೆಯಿಂದ ಚಂದ್ರಶೇಖರಯ್ಯನವರ ಮನೆಯಲ್ಲಿಯೇ ನಡೆಯಿತು. ರುಕ್ಮಿಣಮ್ಮ

ಚಂದ್ರಶೇಖರಯ್ಯನವರೇ ವರನ ಕಡೆಯವರಾಗಿ ನಾಂದಿ ಇಟ್ಟುಕೊಂಡು, ಎಲ್ಲ ಕಾರ್ಯ ನೆರವೇರಿಸಿದರು. ನಿಂತು ಧಾರೆ ಎರಿಸಿಕೊಂಡು ಸೊಸನ್ನೂ ಒಪ್ಪಿಸಿ ಕೊಂಡರು. ಮನೆ ತುಂಬಿಸಿಕೊಳ್ಳುವಾಗ ರುಕ್ಮಿಣಮ್ಮ ಹುಡುಗಿಗೆ ಕುಂಕುಮ ವಿಟ್ಟು, ಎರಡೆಳೆ ಸರ, ಕೈಗೆ ಎರಡು ಜೊತೆ ಚಿನ್ನದ ಬಳೆ ತೋಡಿಸಿ ಒಳಕ್ಕೆ ಕರೆದುಕೊಂಡರು. ಇವನ್ನು ನೋಡಿದ ಸೋಮಶೇಖರನ ಹೃದಯ ಅವರ ಹೃದಯವೈಶಾಲ್ಯಕ್ಕಾಗಿ ಕೃತಜ್ಞತೆಯ ಭಾವದಿಂದ ತುಂಬಿಬಂತು.

ಒಂದು ಒಳ್ಳೆಯ ದಿನ ಸುಶೀಲೆ ಮನೆಗೆ ಬಂದಳು. ಹುಡುಗಿಯೂ ಹೆಸ ರಿಗೆ ತಕ್ಕಂತೆ ಸುಶೀಲೆಯೆ ಆಗಿದ್ದಳು. ರುಕ್ಮಿಣಮ್ಮನವರಿಗೆ ಇನ್ನೂ ಯಾವ ಸೊಸೆಯೂ ಬಂದಿರಲಿಲ್ಲವಾದ್ದರಿಂದ ಸುಶೀಲೆಯನ್ನೇ ತಮ್ಮ ಸೊಸೆಯೆಂದು ಸೊಸೆಗಿಂತ ಮಗಳೆಂದೇ— ಹೆಚ್ಚು ಪ್ರೀತಿಸುತ್ತಿದ್ದರು. ರಂಗಮ್ಮ ಸುಶೀ ಲೆಯ ಗೆಳತಿಯಾಗಿಬಿಟ್ಟರು. ರಂಗಮ್ಮ ಸ್ವಲ್ಪ ಹಿರಿಯರಾಗಿದ್ದರೂ ಸುಶೀ ಲೆಯ ಸಲಿಗೆ ಅವರಲ್ಲಿಯೇ ಹೆಚ್ಚಾಗಿದ್ದಿತು. ಇಬ್ಬರಲ್ಲಿಯೂ ಒಂದು ಅನಿ ರ್ವಾಚ್ಯ ಮಧುರ ಸಂಬಂಧವು ಕೆಲವೆ ದಿನಗಳಲ್ಲಿ ಬೆಳೆಯಿತು.

ಸೋಮೂನ ಹೊಸ ಸಂಸಾರ ಪ್ರಾರಂಭವಾಯಿತು. ಬೇರೆ ಮನೆ ಮಾಡಬೇಕೆಂದು ಕೇಳಿದಾಗ ಚಂದ್ರಶೇಖರಯ್ಯನವರು ಅವನ ಮಾತನ್ನೆ ಅವ ನಿಗೆ ತಿರುಗಿಸಿ ಆ ವಿಷಯವನ್ನೆ ಕೊನೆಗೊಳಿಸಿಬಿಡುತ್ತಿದ್ದರು. ಜೀವನದಲ್ಲಿ ಒಂದು ಅವರ್ಣನೀಯವಾದ ಸುಖವಿದೆ, ಸಂತೋಷವಿದೆ ಎಂಬುದನ್ನು ಸುಶೀಲೆ ಬಂದ ಕೆಲವು ತಿಂಗಳೊಳಗಾಗಿ ಸೋಮಶೇಖರನಿಗೆ ಅರಿವು ಮಾಡಿ ಕೊಟ್ಟಳು. ಅವರ ದಾಂಪತ್ಯಜೀವನದ ಬಳ್ಳಿಗೆ ಒಂದು ಹೂ ಬಿಟ್ಟಂತೆ ಒಂದು ಹೆಣ್ಣುಮಗುವೂ ಆಯಿತು. ರಂಗಮ್ಮನ ಸಂತೋಷಕ್ಕಂತೂ ಮೇರೆಯೇ ಇರಲಿಲ್ಲ. ರುಕ್ಮಿಣಮ್ಮ ಮೊಮ್ಮಗಳು ಹುಟ್ಟಿದಷ್ಟು ಸಂತೋಷಪಟ್ಟರು. ಅವರೇ ಮಗೂಗೆ ಸೀತಾಲಕ್ಷ್ಮಿ ಎಂದು ಹೆಸರಿಟ್ಟರು.

ಮಗು ಯಾವಾಗಲೂ ರಂಗಮ್ಮನ ಬಳಿಯಲ್ಲಿಯೇ ಇರುತ್ತಿತ್ತು. ಹಾಲು ಉಣಿಸುವಾಗಷ್ಟು ಬಿಟ್ಟರೆ ಇನ್ನಾವ ಸಮಯದಲ್ಲೂ ಅದು ತಾಯಿಯ ಬಳಿ ಇದ್ದುದನ್ನೇ ಯಾರೂ ಕಾಣರು. ಮಗುವನ್ನೇ ಕಾಣದ ರಂಗಮ್ಮನಿಗೆ ಅದೊಂದು ಅಪರಿಮಿತವಾದ ನಿಧಿಯನ್ನೇ ಕಂಡಂತಾಗಿತ್ತು. ಅದಕ್ಕೆ ಮಡಿ ಉಡಿಸುವುದು, ಬಟ್ಟೆ ಹಾಕುವುದು, ಮಲಗಿಸುವುದು, ಆಟ ಆಡಿಸುವುದು ಎಲ್ಲದಕ್ಕೂ ರಂಗ ಮ್ಮನೇ. ಮಗುವೂ ಅಂತೆಯೇ ಅವಳನ್ನು ಹೊಂದಿಕೊಂಡಿತ್ತು.

ಸೀತು ಈಗ ಎರಡು ವರ್ಷದ ಹುಡುಗಿಯಾಗಿದ್ದಾಳೆ. ಮುದ್ದುಮುದ್ದಾಗಿ ಮಾತನಾಡುತ್ತ ಮನೆ ತುಂಬ ಓಡಾಡುತ್ತಾಳೆ. ಯಾವದಕ್ಕೂ ಅತ್ತೆಯೇ ಬರಬೇಕು. ಇಲ್ಲದಿದ್ದರೆ ಆ ದಿನವೆಲ್ಲ ಅವಳ ಅಳು ನಿರಾತಂಕವಾಗಿ ನಡೆಯುತ್ತಲೇ ಇರುತ್ತದೆ. ಮಲಗುವಾಗ ರಂಗಮ್ಮನೇ ಜೋಗುಳ ಹಾಡಿ ತನ್ನ ಪಕ್ಕದಲ್ಲಿ ಮಲಗಿಸಿಕೊಳ್ಳಬೇಕು. ಎಂದಾದರೂ ಅಪರೂಪಕ್ಕೊಮ್ಮೆ ತಾಯ ಬಳಿಯಲ್ಲಿ ಮಲಗಿದ್ದರೆ, ರಾತ್ರಿಯಲ್ಲಿ ಎದ್ದು 'ಅತ್ತೇ' ಎಂದು ಅಳುತ್ತ, ರಂಗಮ್ಮ ಬಂದು ಹತ್ತಿರ ಮಲಗುವವರೆಗೂ ಹಟಹಿಡಿದುದುಂಟು. ಹೀಗೆ ಸೀತು, ಸುಶೀಲೆಯ ಮಗಳಾದರೂ ನೋಡುವವರಿಗೆ ರಂಗಮ್ಮನ ಮಗಳೇ ಆಗಿ ಬೆಳೆದ. . ಯಾವಾಗಲೂ ದೇವರು–ದಿಂಡರು, ಪೂಜೆ-ಪುನಸ್ಕಾರಗಳಲ್ಲಿ ಮುಳುಗಿದ್ದ ರಂಗಮ್ಮನನ್ನು ಸೀತೂ ಈಗ ಬಲವಂತವಾಗಿ ಸಂಸಾರಕ್ಕೆ ಎಳೆದು ತಂದಳು.

ಸುಶೀಲಾ ಮತ್ತೆ ಗರ್ಭವತಿಯಾದಳು. ದಿನ ತುಂಬುತ್ತಾ ಬಂತು. ಲಕ್ಷಣ ನೋಡಿ 'ಈ ಸಲ ಗಂಡುಮಗುವಾಗುತ್ತೆ' ಎಂದರು ರಂಗಮ್ಮ. "ಈ ಗಂಡು, ಗಂಡಾಂತರದ್ದಾಗಿ ಕಾಣುತ್ತೆ ಅಕ್ಕಾ!" ಎಂದು ಭಯ ಸೂಚಿಸಿದಳು ಸುಶೀಲಾ. ಅಂತೇ ಎಲ್ಲರೂ ಆತಂಕದಿಂದ ಹಡೆಯುವ ದಿನವನ್ನೇ ನಿರೀಕ್ಷಿಸುತ್ತಿದ್ದರು. ಒಂದು ದಿನ ಸುಶೀಲಾ ಗಂಡುಮಗುವನ್ನೇ ಹೆತ್ತಳು. ರಂಗಮ್ಮನ ಭವಿಷ್ಯ ನಿಜವಾಯಿತು. ಹೆತ್ತನಂತರ ಎರಡು ಮೂರು ದಿನ ಯಾವ ತೊಂದರೆ ಇಲ್ಲದೆಯೇ ಕಳೆಯಿತು. ನಾಲ್ಕನೆಯ ದಿನದಿಂದ ಸಣ್ಣದಾಗಿ ಜ್ವರ ಬರಲಾರಂಭಿಸಿತು. ದಿನದಿನಕ್ಕೆ ಜ್ವರ ಏರುತ್ತಾ ಹೋಗಿ ಕೊನೆಗೆ ಸನ್ನಿಪಾತಕ್ಕೆ ತಿರುಗಿಕೊಂಡಿತು. ಸೋಮು ಗಾಬರಿಯಾದ. ಚಂದ್ರಶೇಖರಯ್ಯನವರೂ ಅನೇಕ ಜನ ವೈದ್ಯರನ್ನು ಕರೆಯಿಸಿ ಚಿಕಿತ್ಸೆ ಮಾಡಿಸಿದರು. ಏನೂ ಫಲಕಾರಿಯಾಗದೆ ಹೆತ್ತ ಒಂಬತ್ತನೆಯ ದಿನ ಸುಶೀಲಾ ಮಕ್ಕಳನ್ನು ತಬ್ಬಲಿಯನ್ನಾಗಿ ಮಾಡಿ ಕಣ್ಣು ಮುಚ್ಚಿದಳು. ಆ ಗಂಡುಮಗುವೂ ಆಯುಷ್ಯ ಪಡೆದು ಬಂದಿರಲಿಲ್ಲ ಎಂದು ಕಾಣುತ್ತೆ. ಸ್ವಲ್ಪೇ ದಿನಗಳಲ್ಲಿ ತನ್ನ ತಾಯಿಯನ್ನು ಹಿಂಬಾಲಿಸಿತು.

"ನನ್ನ ಈ ಕೈ ಬಂಜೆಯ ಕೈ ಎಂದು ಕಾಣುತ್ತೆ. ಮುಟ್ಟಿದ ಮಕ್ಕಳೆಲ್ಲಾ ಸಾವಿಗೇ ತುತ್ತಾಗುತ್ತಿವೆ. ನಾನಿನ್ನೂ ಎಷ್ಟು ಸಾವು ನೋಡಬೇಕಾಗಿದೆಯೋ ದೇವರೇ ಬಲ್ಲ!" ಎಂದು ರಂಗಮ್ಮ ತಮ್ಮ ದುಃಖ ತೋಡಿಕೊಂಡರು.

ರುಕ್ಮಿಣಮ್ಮ ಮಾತನಾಡಲೂ ಕೂಡ ಶಕ್ತಿ ಇಲ್ಲದವರಾಗಿದ್ದರು.

ನಡೆಯುವ ಕೆಲಸಗಳೆಲ್ಲಾ ನಡೆಯಲೇಬೇಕಲ್ಲ. ಸೋಮು ಹೆಂಡತಿಯ ಅಂತ್ಯಕ್ರಿಯೆಗಳನ್ನೆಲ್ಲ ಮುಗಿಸಿದ. ಅವನಿಗೆ ಪ್ರಪಂಚವೇ ಶೂನ್ಯವಾಗಿ ತೋರಿತು. ಚಂದ್ರಶೇಖರಯ್ಯ ಹೇಳುವಷ್ಟು ಸಮಾಧಾನ ಹೇಳಿದರು. ಆದರೆ ಸೋಮು ಅದಾವುದಕ್ಕೂ ಗಮನ ಕೊಡಲಿಲ್ಲ. ಒಂದು ರಾತ್ರಿ ಯಾರಿಗೂ ಹೇಳದೇ ಕೇಳದೆ ಮನೆಯನ್ನು ಬಿಟ್ಟು ಹೊರಟುಹೋದ. ಚಂದ್ರಶೇಖರಯ್ಯ ಹುಡುಕಿಸಿದುದೆಲ್ಲವೂ ವ್ಯರ್ಥವಾಯಿತು.

ತಾಯಿ–ತಂದೆಗಳನ್ನು ಕಳೆದುಕೊಂಡು ತಬ್ಬಲಿಯಾದ ಸೀತೆ ಈಗ ಪೂರ್ತಿಯಾಗಿ ರಂಗಮ್ಮನ ಕೊರಳಿಗೇ ಗಂಟುಬಿದ್ದಳು. ರಂಗಮ್ಮ ಆ ಮಗು ವನ್ನೇ ಹಚ್ಚಿಕೊಂಡು, ಅದರ ಲಾಲನೆ-ಪಾಲನೆಗಳಲ್ಲಿಯೇ ಮುಳುಗಿದರು. ಸುಶೀಲಾ ಹೋದ ದುಃಖ ಸ್ವಲ್ಪ ಮರೆಯಾಯಿತು ಅವರಿಗೆ.

ಅಂದಿನಿಂದ ಸಾಕಿ ಸಲುಹಿ, ದೊಡ್ಡವಳನ್ನಾಗಿ ಮಾಡಿ, ತಮ್ಮ ಗೋವಿಂದೂಗೆ ಅವಳನ್ನು ತಂದುಕೊಂಡು ಮದುವೆ ಮಾಡಿದ್ದರು ರಂಗಮ್ಮ.

ಸೀತೂ ಮಗುವಾಗಿದ್ದಾಗ ರಂಗಮ್ಮನ ತೊಡೆಯ ಮೇಲೆಯೇ ಮಲಗಿ ರುತ್ತಿತ್ತು. ಈಗಲೂ ಅವರ ತೊಡೆಯ ಮೇಲೆಯೆ ಮಲಗಿದೆ! ಎಷ್ಟು ಅಂತರ! ಅದಕ್ಕೂ ಇದಕ್ಕೂ ನಡುವೆ ಈಗ ಕಣ್ಣೀರಿನ ಕ್ಷಾರೋದಧಿಯೇ ಬಂದು ನಿಂತಿದೆ!

ರಂಗಮ್ಮ ಹಿಂದಿನ ಈ ನೆನಪುಗಳ ಚಿತ್ರಮಾಲೆಯನ್ನು ನೋಡುತ್ತ ನೋಡುತ್ತ ಕೊನೆಗೊಂದು ನಿಟ್ಟುಸಿರು ಬಿಟ್ಟರು. ತೊಡೆಯ ಮೇಲೆ ಮಲಗಿದ್ದ ಸೀತೂಳ ಆ ನಿಶ್ಚಲ ಮುಖದಲ್ಲಿ ಮುಖ ಇಟ್ಟರು.

ಕಾರು ಮನೆಯ ಬಾಗಿಲ ಬಳಿ ಬಂದು ನಿಂತಿತು. ಗೋವಿಂದರಾಯರು ಮೊದಲು ಕೆಳಗಿಳಿದರು. ನಂತರ "ಏಳು ಅಕ್ಕಾ, ಮನೆ ಬಂತು." ಎಂದು ರಂಗಮ್ಮನನ್ನು ಎಚ್ಚರಿಸಿದರು. ಅವರು ಮುಖ ಮೇಲಕ್ಕೆ ಎತ್ತಿದರು. ಇದು ವರೆಗೆ ಅವರು ಗತಕಾಲದಲ್ಲಿ ಮರೆಯಾಗಿದ್ದ ತಮ್ಮ ಜೀವನ ದೃಶ್ಯಗಳನ್ನೆ

ನೋಡುವುದರಲ್ಲಿ ತಲ್ಲೀನರಾಗಿದ್ದರು. "ಇನ್ನು ಆ ಸೀತೂ ಇಲ್ಲದಂತಾದಳಲ್ಲ!" ಎಂಬ ಅರಿವು ಅವರನ್ನು ವರ್ತಮಾನಕಾಲಕ್ಕೆ ತಂದು ಬಿಟ್ಟಿತು.

ಇಬ್ಬರೂ ಸೇರಿ ಸೀತಮ್ಮನ ದೇಹವನ್ನು-ಅವಳ ಪ್ರಾಣ ದಾರಿಯಲ್ಲಿ ಯಾವಗಲೋ ಹೋಗಿರಬೇಕು—ಎತ್ತಿಕೊಂಡು ಬಂದು ಮನೆಯೊಳಕ್ಕೆ ನೆಲದ ಮೇಲೇ ಮಲಗಿಸಿದರು. ಸುದ್ದಿ ಗೊತ್ತಾಗಿ ನರೆ-ಹೊರೆ ಜನ ಎಲ್ಲಾ ಬಂತು. ಮುಂದಿನ ಕಾರ್ಯವೆಲ್ಲ ನಡೆದು ಹೋಯಿತು.

ಪಾಪ, ಸರೂನ್ನ ಯಾರು ಕೇಳಬೇಕು? ರಂಗಮ್ಮ ಯಾವುದನ್ನು ಮಾಡ ಬೇಕು? ಸೀತಮ್ಮ ಸತ್ತ ದುಃಖ ಒಂದು ಪಾಲಾಗಿದ್ದರೆ, ಸರೂನ ಪರದೇಶಿ ತನದ ದುಃಖ ಎರಡು ಪಾಲಾಗಿತ್ತು ಅವರಿಗೆ. ಮಗೂನ ಮುಖ ನೋಡಿದರೆ ಸಾಕು, ದುಃಖ ಉಮ್ಮಳಿಸಿ ಬರುತ್ತಿತ್ತು. ಅದರಲ್ಲಿಯೂ ಸೀತಮ್ಮನ ಶವ ಸಂಸ್ಕಾರ ಮುಗಿದು, ಚಟ್ಟ ಎತ್ತುವ ಮೊದಲು ಸರೂ ಬಂದು ತಾಯಿಯ ಬಾಯಲ್ಲಿ ಅಕ್ಕೀಕಾಳು ಹಾಕುವಾಗ ಆ ಮಗು "ಅಮ್ಮಾ, ಎಲ್ಲಿಗೆ ಹೋಗು ತ್ತೀಯಮ್ಮಾ? ನನ್ನನ್ನೇಕೆ ಬಿಟ್ಟು ಹೊರಟಿಯಮ್ಮಾ?" ಎಂದು ದೈನ್ಯದಿಂದ ಬೇಡಿಕೊಳ್ಳುವುದನ್ನು ನೋಡಿದರೆ ವಜ್ರ ಕೂಡ ಕರಗಬಹುದಾಗಿತ್ತು.

ಮೊದಲೇ ಸಂಸಾರದಲ್ಲಿ ವಿರಕ್ತರಾಗಿದ್ದ ಗೋವಿಂದರಾಯರು ಈಗ ಪೂರ್ತಿಯಾಗಿ ಸನ್ಯಾಸಿಯೇ ಆದಂತಾದರು. ಯಾರೊಡನೆಯೂ ಹೆಚ್ಚು ಮಾತುಕಥೆ ಇಲ್ಲ. ಸದಾ ಯಾವುದೋ ಒಂದು ಕ್ಲಿಷ್ಟ ಸಮಸ್ಯೆಯನ್ನು ಬಿಡಿ ಸುವುದರಲ್ಲಿ ತೊಡಗಿರುವವರಂತೆ ಗಂಭೀರರಾಗಿಯೆ ಇರುತ್ತಿದ್ದರು. ಬೆಳಿಗ್ಗೆ ಆರು ಗಂಟೆಗೆ ಏಳುವುದು, ಸ್ನಾನ ಸಂಧ್ಯಾವಂದನೆಯಲ್ಲಿಯೆ ಎರಡು ಗಂಟೆ ಕಾಲ ಕಳೆಯುವುದು, ನಂತರ ರಂಗಮ್ಮನವರು ಕೊಟ್ಟ ಕಾಫಿ ಕುಡಿಯುವುದು, ಹತ್ತರ ವರೆಗೆ ತಮ್ಮ ಕಾಗದಪತ್ರಗಳಲ್ಲಿ ಮಗ್ನರಾಗಿರುವುದು, ಊಟ ಮಾಡಿ ಕೊಂಡು ಅಂಗಡಿಗೆ ಹೋದವರು ಮರಳಿ ಸಂಜೆಯ ಆರು ಗಂಟೆಗೇ ಮನೆಗೆ ಬರುವುದು, ಉಪಹಾರ ತೀರಿಸಿಕೊಂಡು ದೇವಾಲಯಕ್ಕೋ ಹರಿಕಥೆಗೋ, ಹೋಗಿ ರಾತ್ರಿ ಒಂಬತ್ತರ ವೇಳೆಗೆ ಮನೆಗೆ ಮತ್ತೆ ಬಂದು, ಸರೂ ಎಚ್ಚರ ವಾಗಿದ್ದರೆ ಅವಳೊಡನೆ ಸ್ವಲ್ಪ ಹೊತ್ತು ಕಾಲಕಳೆಯುವುದು, ಮಲ ಗಿದ್ದರೆ ಅಕ್ಕನೊಡನೆಯೇ ಕೆಲಸಮಯ ಮಾತಾಡುವುದು, ನಂತರ ಊಟ ಮಾಡಿ ನಿದ್ದೆ ಹೋಗುವುದು ಹೀಗೆ ಒಂದು ಬಗೆಯ ಯಂತ್ರದಂತೆ ಅವರ ಜೀವನ ಸಾಗಿತು. ಸೀತಮ್ಮ ಗತಿಸಿದ ನಂತರ ಗೋವಿಂದರಾಯರು ನಶ್ಶಿ

ವ್ವನ್ನೇ ಯಾರೂ ನೋಡಲಿಲ್ಲ. ಉದಾಸೀನತೆಯೇ ಅವರನ್ನು ಮುತ್ತಿಬಿಟ್ಟಿತ್ತು.

ಒಂದು ದಿನ ಕಾಫಿಗೆ ಸಕ್ಕರೆಯನ್ನೇ ಹಾಕಲು ಮರೆತಿದ್ದರು ರಂಗಮ್ಮ. ಗೋವಿಂದರಾಯರು ಯಾವುದನ್ನೂ ಹೇಳದೆ ಎಂದಿನಂತೆ ಕುಡಿದರು. ರಂಗಮ್ಮ ನವರೂ ಕುಡಿದು ನೋಡಿದರು. "ಇದೇನೋ ಗೋವಿಂದೂ, ಸಕ್ಕರೇನೇ ಹಾಕಿಲ್ಲ. ಹಾಗೆಯೇ ಕುಡಿದೆಯಲ್ಲೋ? ಹೇಳಬಾರದೇ?" ಎಂದರು. "ದಿನಾ ಕುಡಿಯುವ ಕಾಫಿಗೆ ಒಂದು ದಿನ ಸಕ್ಕರೆ ಇಲ್ಲದೇ ಇದ್ದರೆ ಏನಾಗುತ್ತೆ ಅಕ್ಕಾ? ಯಾವುದೋ ಒಂದು ಕುಡಿದರಾಯಿತು, ತಿಂದರಾಯಿತು. ಎಷ್ಟು ಮಾಡಿದ ರೇನು ಈ ಶರೀರ ಸ್ಥಿರವಾಗಿರುತ್ತದೆಯೇ?" ಎಂದು ಮಾತು ಹಾರಿಸಿ ಬಿಡುತ್ತಿದ್ದರು.

ಗೋವಿಂದರಾಯರದು ಈ ರೀತಿಯಾದರೆ ರಂಗಮ್ಮನದೇ ಒಂದು ರೀತಿ ಬೇರೆ. ಸೀತಮ್ಮ ಹೋದಂದಿನಿಂದ ಅವರ ಬುದ್ಧಿಯೇ ಹಿಡಿತದಲ್ಲಿರಲಿಲ್ಲ. ದಿನಾಲು ಅಡಿಗೆಗೆ ಒಂದಿಲ್ಲ ಒಂದು ಸಾಮಾನು ಮರೆಯುವುದು ಹೆಚ್ಚಾಗಿ ಬಿಟ್ಟಿತು. ದಿನಕ್ಕೆ ಹತ್ತು ಬಾರಿ ಸೀತಮ್ಮನನ್ನು ಜ್ಞಾಪಿಸಿಕೊಂಡು ಅಳುವು ದೊಂದೇ ಅವರ ಕೆಲಸವಾಗಿತ್ತು.

ಹೀಗೆ ನಿಸ್ಸಾರ ನಿರ್ಜೀವ ಜೀವಗಳ ಮಧ್ಯೆ ಸರೂ ಬೆಳೆಯಬೇಕಾಯಿತು. ಯಾವ ಕಷ್ಟಸುಖಗಳನ್ನೂ ಕಾಣದ ಮುಗ್ಧ ಸರೂ ಹೀಗೆ ತಂದೆ ಮತ್ತು ಅತ್ತೆಯರ ನೀರಸ ಮತ್ತು ಯಾಂತ್ರಿಕ ಜೀವನಗಳ ನಡುವೆ ಸಿಕ್ಕು ನೀರಿಲ್ಲದ ಸಸಿಯಂತಾದಳು.

"ಅಮ್ಮ ಎಲ್ಲಿ ಹೋದಳು? ಈಗ ಅತ್ತೆ ಯಾಕೆ ನನಗೆ ಹಿಂದಿನಂತೆ ಕಥೆ ಹೇಳುವುದಿಲ್ಲ? ಅಣ್ಣ ನನಗೆ ಚಾಕಲೇಟು ಬಿಸ್ಕಿಟ್‌ಗಳನ್ನು ಯಾಕೆ ತಂದು ಕೊಡುವುದಿಲ್ಲ? ಅತ್ತೆ ಯಾವಾಗಲೂ ಯಾಕೆ ಅಳುತ್ತಾಳೆ?" ಎಂದು ಯೋಚಿಸಿ ಯೋಚಿಸಿ ಏನೂ ತಿಳಿಯದೆ ಮಂಕಾದಳು ಸರೂ. ಒಂದು ತಿಂಗ ಳೊಳಗಾಗಿ ದುಂಡುದುಂಡಾಗಿದ್ದ ಕೈಕಾಲುಗಳು ಸೊರಗಿ ಕಡ್ಡಿಯಂತಾದುವು. ಕಣ್ಣುಗಳು ಒಳಸೇರಿದುವು. ಕತ್ತು ಚಿವುಟಿದರೆ ಕೈಗೇ ಬರುವುದೇನೋ ಎನ್ನುವಷ್ಟು ಸಣ್ಣದಾಗಿತ್ತು. ಇನ್ನು ಹೀಗೆಯೇ ಸ್ವಲ್ಪ ದಿನ ಕಳೆದರೆ ತನ್ನ ತಾಯಿಯ ದಾರಿಯನ್ನೇ ಹಿಡಿಯಬಹುದಾಗಿತ್ತು. ರಂಗಮ್ಮ ನೋಡಿ ಗಾಬರಿ ಯಾದರೂ ಧೃತಿಗೆಡದೆ ಹೀಗಾಗುವುದಕ್ಕೆ ಕಾರಣ ಹುಡುಕಿ ತೆಗೆದು ಅಂದಿ ನಿಂದ ತಮ್ಮನ್ನೇ ತಾವು ತಿದ್ದಿಕೊಂಡರು. ಒಂದು ದಿನ ಸರೂ ಸ್ಕೂಲಿನಿಂದ

ಬಂದವಳೇ ಕಾಫಿ ಕುಡಿದು ಯಾವ ಮಾತು ಆಡದೆ ಸುಮ್ಮನೆ ಹೋಗಿ ತನ್ನ
ರೂಮಿನಲ್ಲಿ ಕೂತು ಅಳಲಾರಂಭಿಸಿದಳು. ಅವಳನ್ನೇ ಹಿಂಬಾಲಿಸಿ ಬಂದ
ರಂಗಮ್ಮ ಬಾಗಿಲಿಗೆ ಬಂದು 'ಸರೂ! ಸರೂ!' ಎಂದು ಕೂಗಿದರು. ಸರೂ
ಕತ್ತೆತ್ತಿ ನೋಡಿ ಪುನಃ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ರಂಗಮ್ಮ ಹತ್ತಿರ
ಬಂದು ತಲೆಯ ಮೇಲೆ ಕೈಯಾಡಿಸಿ, ಗದ್ದ ತುಟಿ ಹಿಡಿದು, ತೊಡೆಯ ಮೇಲೆ
ಕುಳ್ಳಿರಿಸಿಕೊಂಡು "ಯಾಕೆ ಮಗೂ, ಏನಾಯ್ತು?" ಎಂದು ಮೃದುವಾಗಿ
ಮುಂಗುರುಳು ನೇವರಿಸಿದರು.

"ಅತ್ತೇ, ಅಮ್ಮನ ಹತ್ತಿರ ಹೋಗುತ್ತೀನಿ." ಎಂದಿತು ಕಂದಮ್ಮ.

ಇದಕ್ಕೆ ರಂಗಮ್ಮ ಏನು ಹೇಳಲೂ ತೋರದೆ ಸುಮ್ಮನೇ ಇದ್ದರು. ಅದರ
ಕಣ್ಣುಗಳಲ್ಲಿ ನೀರು ಮಾತ್ರ ಒಂದೇ ಸವನೆ ಹರಿದು ಹೋಗುತ್ತಿತ್ತು.

"ಅಮ್ಮ ಎಲ್ಲಿಗೆ ಹೋದಳು ಅತ್ತೇ? ಅವತ್ತು ಅಷ್ಟೊಂದು ಹೂ ಮುಡಿದು
ಕೊಂಡು, ಕುಂಕಮ ಇಟ್ಟುಕೊಂಡು ಎಲ್ಲಿಗೆ ಹೋದಳು ಅತ್ತೇ? ನನ್ನನ್ನೂ
ಕಳಿಸು, ನಾನು ಹೋಗುತ್ತೀನಿ."

"ಅಮ್ಮ ದೇವರ ಹತ್ತಿರ ಹೋಗಿದ್ದಾಳೆ ಮಗೂ. ಅಲ್ಲಿಗೆ ನೀನು ಈಗ
ಹೋಗುವುದಕ್ಕೆ ಬರುವುದಿಲ್ಲ."

"ಅಮ್ಮ ಮಾತ್ರ ಯಾಕೆ ಹೋದಳು? ನಾನೂ ಯಾಕೆ ಹೋಗಬಾರದು?"

"ಯಾಕೆ ಅಂದರೆ, ಅಮ್ಮನ್ನ ದೇವರು ಕರೆದ. ಅವಳು ಹೋದಳು.
ನಿನ್ನನ್ನೂ ಕರೆದಾಗ ನೀನೂ ಹೋಗುವಿಯಂತೆ." ಎಂದು ತಾವು ಹೇಳಿದ
ಭವಿತವ್ಯದ ಭೀಕರ ಸತ್ಯವನ್ನು ನೆನೆದು ಅವರ ಹೃದಯ ಕಂಪಿಸಿತು. "ನನ್ನ
ಸರೂನ್ನ ನನ್ನ ಜೀವವಿರುವತನಕ ನಾನು ಅಲ್ಲಿಗೆ ಎಂದೆಂದಿಗೂ ಹೋಗ
ಗೊಡಲಾರೆ." ಎಂದು ಮಗುವನ್ನು ಗಟ್ಟಿಯಾಗಿ ಅಪ್ಪಿಕೊಂಡರು.

"ದೇವರು ನನ್ನನ್ನೂ ಕರೆಯುತ್ತಾನೆ. ಆಗ ನಾನೂ ಅಮ್ಮನ ಹತ್ತಿರ
ಹೋಗುತ್ತೇನೆ." ಎಂದುಕೊಂಡು ಅತ್ತೆಯ ತೊಡೆಯ ಮೇಲೆಯೇ ಮಲಗಿ
ದಳು. ಹಾಗೆಯೇ ನಿದ್ದೆ ಬಂದು ಆವರಿಸಿತು.

"ಪಾಪ, ಮಗು ತಾಯಿಗಾಗಿ ಹಂಬಲಿಸಿ ಇಷ್ಟು ಸೊರಗಿಹೋಗಿದೆ.
ಈ ಮುದ್ದು ಮಗೂನ್ನ ಹೀಗೆ ನರಳುವ ಹಾಗೆ ಮಾಡಲು ಸೀತೂಗೆ ಅದು
ಹೇಗೆ ಮನಸ್ಸು ಬಂತೋ ನಾ ಬೇರೆ ಕಾಣೆ." ಎಂದುಕೊಂಡು ಮಂಚದ
ಮೇಲೆ ಸರೂನ್ನ ಮಲಗಿಸಿ ಒಳಕ್ಕೆ ತೆರಳಿದರು.

ಸದಾ ರಂಗಮ್ಮನ ಹಿತವಾದ ಅಂತಃಕರಣದ ಆರೈಕೆಯಿಂದ ದಿನೇ ದಿನೇ ಗೆಲುವಾಗುತ್ತ, ನಡೆದು ಮತ್ತೆ ಮೊದಲಿನಂತೆ ಚೂಟಿಯಾದಳು.

ರಾಮನಾಥಪುರ ಬಿಟ್ಟು ಹೋದ ಗೋಪಾಲ ಮೈಸೂರಲ್ಲಿಯೆ ನೆಲಸಿದ. 'ಭಾರತ ಮ್ಯುಚುಯಲ್ ಟ್ರೇಡಿಂಗ್ ಕಂಪನಿ'ಯಲ್ಲಿಯೆ 'ಸೇಲ್ಸಮನ್' ಕೆಲಸ ಅವನಿಗೆ ದೊರೆಯಿತು. ಅದರಿಂದ ಅವರಿಬ್ಬರ ಸಂಸಾರ ಸಾಗುವುದಕ್ಕೆ ಅನು ಕೂಲವಾದಷ್ಟು ವರಮಾನ ಬರುತ್ತಿತ್ತು.

ರಾತ್ರಿ ಹತ್ತು ಗಂಟೆಯಾಗಿತ್ತು. ಕಮಲಾ ಕೆಲಸವನ್ನೆಲ್ಲಾ ಮುಗಿಸಿ ಗಂಡನ ದಾರಿಯನ್ನೇ ಕಾಯುತ್ತಿದ್ದಳು. ಬೆಳಗ್ಗೆ ಹತ್ತು ಗಂಟೆಗೆ ಊಟ ಮಾಡಿ ಹೋದವನು ಈ ವರೆಗೂ ಬಂದಿರಲಿಲ್ಲ. ಪ್ರತಿದಿನ ಸಂಜೆಯ ಕಾಫಿಗಾದರೂ ಮನೆಗೆ ಬರುತ್ತಿದ್ದ. ಈ ದಿನ ಅದಕ್ಕೂ ಬಂದಿರಲಿಲ್ಲ. ಕೂತು ಕೂತು ಬೆನ್ನು ನೋಯತೊಡಗಿತು ಕಮಲಳಿಗೆ. ಅಲ್ಲಿಯೇ ನೆಲದ ಮೇಲೆ ಒರಗಿದಳು. ಸೋತ ಮೈಗೆ ಆ ನೆಲವೇ ಹಿತವೆನಿಸಿತು. ಹಿಂದೆ ತಾನು ಅತ್ತೆಯ ಮನೆಗೆ ಬಂದ ಹೊಸದರಲ್ಲಿ ತನ್ನ ಗಂಡನ ವಿಷಯವಾಗಿ ಎಷ್ಟು ಅಭಿಮಾನ, ಎಷ್ಟು ಹೆಮ್ಮೆ ಪಟ್ಟುಕೊಂಡಿದ್ದಳು, ತನ್ನ ಗಂಡ ಕಾಲೇಜ್ ಓದಿದ್ದಾನೆ ಎಂದು ಎಷ್ಟು ಜಂಭ ದಿಂದ ತನ್ನ ಸ್ನೇಹಿತರ ಕೈಲೆಲ್ಲಾ ಹೇಳಿಕೊಂಡಿದ್ದಳು, ಅಹಂಕಾರದಿಂದ ತನ್ನ ಅತ್ತಿಗೆಯನ್ನೂ ಎಷ್ಟು ತಿರಸ್ಕಾರದಿಂದ ಕಂಡಿದ್ದಳು, ಆಗಿನ ತನ್ನ ದುರಹಂ ಕಾರ ದುರಭಿಮಾನಗಳೇ ಈಗ ತನ್ನನ್ನು ಈ ರೀತಿ ಕಾಡುತ್ತಿವೆಯೋ ಏನೋ ಎಂದು ಯೋಚಿಸಿ ತನ್ನ ನಡತೆಯ ಬಗ್ಗೆ ತಾನೇ ವ್ಯಥೆಗೊಂಡಿದ್ದಳು. ತನ್ನ ಕಷ್ಟ ಸುಖಗಳನ್ನು ಹೇಳಿಕೊಂಡೇನೆಂದರೆ ತನ್ನವರು ಎಂಬವರೊಬ್ಬರೂ ಇಲ್ಲ ವಲ್ಲಾ ಎಂದು ಕಣ್ಣೀರು ಸುರಿಸಿದ್ದಳು. ಇರುವ ಒಬ್ಬ ರಂಗಮ್ಮನನ್ನೂ ಸರಿ ಯಾಗಿ ಕಾಣದೆ ಅವರ ಪ್ರೀತಿಯನ್ನೂ ಕಳೆದುಕೊಂಡೆನಲ್ಲಾ, ಎಂದು ತನ್ನ ಜೀವನದ ಹಿಂದಿನ ನೆನಪುಗಳನ್ನೆಲ್ಲಾ ನೆನಸುತ್ತಿರುವಾಗಲೆ ಹೊರಗಡೆ ಬಾಗಿಲು ತಟ್ಟಿದ ಶಬ್ದ ಕೇಳಬಂತು. ಕಮಲಾ ತಟಕ್ಕನೆ ಎದ್ದು ಹೋಗಿ ಬಾಗಿಲು ತೆರೆ ದಳು. ಸಿಗರೇಟು ಬಾಯಲ್ಲಿಟ್ಟುಕೊಂಡು ಗೋಪಾಲ ಒಳಗೆ ಬಂದ.

"ಬಾಗಿಲು ತಟ್ಟಿದರೆ ಕೇಳಿಸುವುದೇ ಇಲ್ಲವೇನು ನಿನಗೆ? ಎಷ್ಟು ಹೊತ್ತು ಬಾಗಿಲು ತೆರೆಯಲು?" ಎಂದು ಸಿಡುಗುಟ್ಟಿದ ಗೋಪಾಲ.

"ನಿಮ್ಮ ಶಬ್ದ ಕೇಳಿದ ಕೂಡಲೇ ಬಂದು ತೆಗೆದೆ, ನಾನೆಲ್ಲಿ ತಡಮಾಡಿದೆ?"

"ಸಾಕು, ಬಾಯಿ ಮುಚ್ಚು. ನನಗೇ ಎದುರುತ್ತರ ಹೇಳಲು ಬರಬೇಡ." ಎಂದು ಹ್ಯಾಟು ಕೋಟು ತೆಗೆದಿಡುವುದಕ್ಕಾಗಿ ತನ್ನ ರೂಮಿನೊಳಕ್ಕೆ ಹೋದ.

ಕಮಲಾ ಯಾವ ಮಾತನ್ನೂ ಆಡದೆ, ಎಲೆ, ಮಣೆ ಹಾಕಲು ಅಡುಗೆ ಮನೆಗೆ ಹೋದಳು.

ಗೋಪಾಲ ಕೆಲ ನಿಮಿಷಗಳ ನಂತರ ಹೊರಗೆ ಬಂದು ಅಲ್ಲಿದ್ದ ಆರಾಮ ಕುರ್ಚಿಯಲ್ಲಿ ಕುಳಿತು ಮತ್ತೆ ಸಿಗರೇಟು ಹೊತ್ತಿಸಿದ. ಕಣ್ಣುಗಳು ಎಲ್ಲಿಯೋ ಏನನ್ನೋ ನೋಡುತ್ತಿದ್ದವು.

ಒಳಗಿನಿಂದ ಬಂದು "ಊಟಕ್ಕೆ ಏಳಿ, ಎಲೆ ಹಾಕಿದ್ದೇನೆ." ಎಂದಳು ಕಮಲಾ.

"ನಾನು ಈಗ ಊಟ ಮಾಡುವುದಿಲ್ಲ. ಬರುವಾಗ ಅಲ್ಲಿಯೇ ಹೊಟೆಲ್‌ಗೆ ಹೋಗಿದ್ದೆ. ನೀನು ಊಟ ಮಾಡು." ಎಂದು ಸಿಗರೇಟು ಸೇದಿ, ಹೊಗೆ ಬಿಟ್ಟು ಆ ಹೊಗೆಯನ್ನೇ ನೋಡಹತ್ತಿದ.

ಸಾಯಂಕಾಲದಿಂದಲೂ ಅವನಿಗಾಗಿ ಕಾದು ಕುಳಿತು, ಒಂದಿಷ್ಟು ಕಾಫಿಯನ್ನೂ ಕುಡಿಯದೆ ತನ್ನ ಬರವನ್ನೇ ನಿರೀಕ್ಷಿಸುತ್ತಿದ್ದ ಕಮಲಳಿಗೆ ತನ್ನ ಉತ್ತರದಿಂದ ಅದೆಷ್ಟು ನೋವಾಗಬಹುದೆಂಬ ಕಲ್ಪನೆ ಅವನಿಗೆ ಬರಲಿಲ್ಲ.

"ಅಲ್ಲ, ನೀವೇಕೆ ಹೀಗೆ ಮಾಡುವಿರಿ? ಆ ಹಾಳು ಇಸ್ಪೇಟು ಬಿಡಿ ಎಂದು ಎಷ್ಟು ಹೇಳಿದರೂ ಕೇಳುವುದಿಲ್ಲ. ಬರುವ ಸಂಬಳವೆಲ್ಲಾ ಹೀಗೆ ಸ್ನೇಹಿತರು, ಹೊಟೆಲು ಎಂದು ಖರ್ಚು ಮಾಡಿದ್ದರೆ ಸಂಸಾರ ಹೇಗೆ ನಡೆಯಬೇಕು? ಮನೆ ಬಾಡಿಗೆ, ಹಾಲು ಮೊಸರಿನವರು, ಎಲ್ಲರೂ ದುಡ್ಡು ಕೇಳಲು ಶುರು ಮಾಡಿದ್ದಾರೆ. ಈ ದಿನ, ನಾಳೆ ಎಂದು ಇಷ್ಟು ದಿನ ತಳ್ಳಿದ್ದಾಯ್ತು. ಇನ್ನು ಬೇರೆ ನನಗೆ ಸಾಧ್ಯವಿಲ್ಲ, ಅವರಿಗೆ ಉತ್ತರ ಹೇಳಲು." ಎಂದು ಕಮಲಾ ತಡೆಯಲಾರದೆ ಅಂದುಬಿಟ್ಟಳು.

"ನೋಡು ಕಮಲಾ, ನಾನು ಇದೊಂದು ಸಲವಲ್ಲ ಸಾವಿರ ಸರ್ತಿ ಹೇಳಿದ್ದೇನೆ, ನೀನು ನನಗೆ ಉಪದೇಶ ಮಾಡಲು ಬರಬೇಡ ಎಂದು. ನಿನ್ನ ಕೆಲಸ ಎಷ್ಟು ಅಷ್ಟೇ." ಎಂದು ಎದ್ದು ತನ್ನ ಮಲಗುವ ರೂಮಿನೊಳಕ್ಕೆ ಹೋದ.

ತನಗೆ ದೊರಕುವ ಉತ್ತರ ಇದೇನೇ ಎಂಬುದನ್ನು ತಿಳಿದ ಕಮಲಾ ಪುನಃ ಯಾವ ಮಾತನ್ನೂ ಆಡದೆ ಒಳಗೆ ತೆರಳಿದಳು. ಜಡೇ ಹಾಕಿದ್ದ ಎಲೆಯಲ್ಲಿ ಕೂತು ಒಂದೆರಡು ತುತ್ತು ನುಂಗುವುದರಲ್ಲಿಯೇ ಮತ್ತೆ ದುಃಖ ಉಮ್ಮಳಿಸಿ ಬಂದು, ಅಷ್ಟಕ್ಕೇ ಎದ್ದು ಕೈ ತೊಳೆದು, ಎಲೆ ಎತ್ತಿ ಹೊರಗೆ ಹಾಕಿ ಬಂದು, ದೀಪ ಸಣ್ಣ ಮಾಡಿ, ಮಂಚದ ಬಳಿ ಹಾಸಿಗೆ ಹಾಸಿಕೊಂಡು ಮಲಗಿದಳು. ರಾತ್ರಿಯೆಲ್ಲಾ ನಿದ್ದೆಯೇ ಬರಲಿಲ್ಲ. ಅತ್ತು ಅತ್ತು ತಲೆದಿಂಬು ತೊಯ್ದು ಹೋಗಿತ್ತು.

ಮರುದಿನ ಸಂಜೆ ಆರು ಗಂಟೆಗೆ ದಿನದಂತೆ ಕಾಫಿ ತಿಂಡಿ ಮಾಡಿ ಮುಚ್ಚಿಟ್ಟು ಹೊರಬಾಗಿಲಿಗೆ ಬರುವ ಹೊತ್ತಿಗೆ ಪಕ್ಕದ ಮನೆಯ ಲಕ್ಷ್ಮಮ್ಮ ಹೂಬತ್ತಿ ಮಾಡಲು ಹತ್ತಿಯ ಬುಟ್ಟಿಯನ್ನು ಹಿಡಿದು ಎದುರಿಗೆ ಬಂದು, "ಆಯಿತೇ ಕಮಲಾ, ಕೆಲಸವೆಲ್ಲಾ?" ಎಂದು ಅಲ್ಲಿಯೇ ಒಳಬಾಗಿಲಲ್ಲಿ ಕೂತುಕೊಂಡರು.

"ನನಗೇನು ಕೆಲಸ ಬಿಡೀಮ್ಮಾ. ಯಾವ ಮಕ್ಕಳು ಮರಿ ಕೆಲಸ ಮಾಡೋದಕ್ಕೆ. ಇರುವವರು ಅವರೊಬ್ಬರು. ಅವರೂ ಹೊತ್ತು ಹೊತ್ತಿಗೆ ಸರಿಯಾಗಿ ಬರುವುದಿಲ್ಲ. ಇಲ್ಲಿ ಒಬ್ಬಳೇ ಕುಳಿತು ಏನು ಮಾಡುವುದು ಹೇಳಿ?" ಎಂದಳು ಕಮಲಾ ಬೇಸರದಿಂದ.

"ಅಂದ ಹಾಗೆ ನೋಡು ಕಮಲಾ, ನಿನಗೆ ಮದುವೆಯಾಗಿ ಎಷ್ಟು ವರ್ಷ ಆಯ್ತು?"

"ಎಂಟು ವರ್ಷ ಆಗಿರಬಹುದು."

"ನಿಮ್ಮ ಮನೆಯಲ್ಲಿ ಏನಾದರೂ ನಾಗರ ಕಾಟವಿದೆಯೆ?"

"ಏನೋ ಗೊತ್ತಿಲ್ಲಾ ಅಮ್ಮ."

"ಹಾಗೆ ಏನಾದರೂ ನಾಗರಕಾಟವಿದ್ದರೆ ಮಕ್ಕಳಾಗುವುದಿಲ್ಲವಂತೆ. ಅಂಥವರು ನಾಗರಪ್ರತಿಷ್ಠೆ ಮಾಡಿದರೆ ಮಕ್ಕಳಾಗುತ್ತವಂತೆ. ನೀನೂ ಯಾಕೆ ಮಾಡಬಾರದು? ಎಷ್ಟೆಷ್ಟೋ ವರ್ಷ ಮಕ್ಕಳಿಲ್ಲದವರಿಗೂ ಮಕ್ಕಳಾಗಿವೆ. ಅಂತಹದರಲ್ಲಿ ನೀನಿನ್ನೂ ಹುಡಿಗಿ, ವಯಸ್ಸೇನೂ ಆಗಿಲ್ಲ. ಮಾಡಿ ನೋಡು. ಆ ನಮ್ಮಪ್ಪ, ಸುಬ್ರಹ್ಮಣ್ಯೇಶ್ವರನ ದಯದಿಂದ ಆದರೂ ಆದೀತು." ಎಂದು ಪೀಠಿಕೆ ಹಾಕಿದರು ಲಕ್ಷ್ಮಮ್ಮ.

ತನಗೆ ಮಕ್ಕಳಿಲ್ಲವಲ್ಲಾ ಎಂದು ಕೊರಗುತ್ತಿದ್ದ ಕಮಲಳಿಗೆ ಈಗ ಹೊಸದೊಂದು ಆಶಾಕಿರಣವು ಕಂಡಿತಾದರೂ "ಆದರೆ, ನೋಡಿ ಅಮ್ಮಾ, ನಮ್ಮ

ನೇಲಿ ಅವರಿಗೆ ದೇವರು, ದಿಂಡರು, ಪೂಜೆ, ಪುನಸ್ಕಾರ ಅಂದರೆ ಅಷ್ಟು ನಂಬಿಕೆ ಇಲ್ಲ. ಇನ್ನು ಇವಕ್ಕೆ ಒಪ್ಪುತ್ತಾರೋ ಇಲ್ಲವೋ?" ಎಂದು ಅನುಮಾನಿಸಿದಳು ಕಮಲಾ.

"ಅಯ್ಯೋ ಬಿಡೇ ಸಾಕು, ಯಾರಿಗೆ ತಾನೇ ಮಕ್ಕಳೂ ಅಂದರೆ ಆಸೆ ಇರೋಲ್ಲಾ. ಆ ಒಂದು ಆಸೆ ಇದ್ದರೆ ಸಾಕು, ಎಂಥೆಂತಾ ಕೆಲಸಗಳನ್ನು ಬೇಕಾದರೂ ಅದು ಮಾಡಿಸುತ್ತೆ. ನಿನ್ನ ಗಂಡನೂ ಒಪ್ಪುತ್ತಾರೆ. ಎಲ್ಲರೂ ಒಪ್ಪುತ್ತಾರೆ. ನಾನು ಹೇಳಿದೇ ಅಂತಲೇ ಹೇಳು ನಿನ್ನ ಗಂಡನಿಗೆ ಪರವಾಗಿಲ್ಲ. ನನ್ನ ಹಾಸ್ಯ ಮಾಡಿದರೆ ಮಾಡಲಿ. ಮುಂದಿನ ವರ್ಷ ಈ ದಿನಕ್ಕೆ ನಿನ್ನ ಮನೆಯಲ್ಲಿ ತೊಟ್ಟಿಲು ತೂಗದೆ ಇದ್ದರೆ ಕೇಳು."

ಕಮಲಾ ಆನಂದದಿಂದ ಉಬ್ಬಿ ಹೋದಳು. ತನಗೂ ಎಲ್ಲರಂತೆ ಒಂದು ಮಗು ಆಗಬೇಕು, ಅದು ಬಹಳ ಮುದ್ದಾಗಿರಬೇಕು, ಬೆಳ್ಳಗೆ, ದಪ್ಪಗೆ, ಬಾಳೆಯ ದಿಂಡಿನಂತೆ ಮೃದುವಾಗಿರಬೇಕು. ಅದಕ್ಕೆ ಏನೆಂದು ಹೆಸರಿಡುವುದು? ಹೆಣ್ಣೋ ಗಂಡೋ, ಯಾವುದು ಆಗುತ್ತೋ ಯಾರಿಗೆ ಗೊತ್ತು? ಅದನ್ನು ಬಹಳ ಮುದ್ದಾಗಿ, ಅಕ್ಕರೆಯಿಂದ ಸಾಕಬೇಕು. ಮಗುವನ್ನು ಅಳಿಸಲೇ ಬಾರದು. ಅದು ಯಾವಾಗಲೂ ನಗುತ್ತಲೇ ಇರುವಂತೆ ಸಾಕಬೇಕು. ಹಾಗೆ ಹೀಗೆ ಎಂದು ತನ್ನ ಮುಂದಿನ ಮಗುವಿನ ಕನಸನ್ನು ಕಣ್ಣು ತೆರೆದೇ ನೋಡುತ್ತ ಕುಳಿತ ಕಮಲಳಿಗೆ ಹೊತ್ತು ಹೋದುದೇ ತಿಳಿಯಲಿಲ್ಲ. ತನ್ನ ಭಾವನಾ ಪ್ರಪಂಚದಿಂದ ಎಚ್ಚರ ಹೊಂದಿ ಪಕ್ಕಕ್ಕೆ ತಿರುಗಿ ನೋಡಿದರೆ ಅಲ್ಲಿಂದ ಲಕ್ಷ್ಮಮ್ಮನವರು ಯಾವಾಗಲೋ ಹೊರಟು ಹೋಗಿದ್ದರು. "ಅಯ್ಯೋ ಅವರಿಗೆ ಕುಂಕುಮವನ್ನೂ ಕೊಡದೆ ಕಳಿಸಿದೆನಲ್ಲಾ! ನನಗೆ ಎಂತಹ ಮೈಮರೆವು ಬಂದಿತ್ತು" ಎಂದುಕೊಂಡು ಒಳಕ್ಕೆ ಹೋದಳು.

ಕೈಕಾಲು ತೊಳೆದುಕೊಂಡು ದೇವರಿಗೆ ದೀಪಹಚ್ಚಿ ನಮಸ್ಕರಿಸುವಾಗಲೇ ಗೋಪಾಲ ಒಳಗೆ ಬಂದ. ಮುಖದ ಮೇಲೆ ಯಾಕೋ ಮಂದಹಾಸ ಮೂಡಿತ್ತು. ನಗು ನಗುತ್ತಲೇ "ಕಮಲಾ, ಅಡುಗೆಯಾಗಿದೆಯೇ?" ಎಂದು ಕೇಳಿದ.

"ಹೂಂ. ಇನ್ನೊಂದು ಅರ್ಧ ಗಂಟೆ; ಇನ್ನೇನು, ಸಾರಿಗೆ ಹುಳಿ ಹಾಕುತ್ತೇನೆ." ಎಂದು ಅಡುಗೆಮನೆಗೆ ತೆರಳಿದಳು. ಒಲೆಯ ಮೇಲೆ ಸಾರು ಕುದಿಯುತ್ತಿತ್ತು. ಹುಣಿಸೆಹಣ್ಣು ನೆನಸಿ ಹುಳಿ ಬಿಡುತ್ತಾ ಕೂತಿದ್ದಳು. ಹಿಂದಿನಿಂದ

ಗೋಪಾಲ ಬಂದವನೇ ಅಲ್ಲಿಯೇ ಒಂದು ಮಣೆ ಹಾಕಿಕೊಂಡು ಕುಳಿತ. ಕಮಲಳಿಗೆ ಕುತೂಹಲವಾಯ್ತು. ಒಂದು ದಿನವೂ ಹೀಗೆ ಬಂದು ಕುಳಿತು ಕೊಳ್ಳದವರು ಈ ದಿನ ಹೀಗೆ ಬಂದುದಕ್ಕೆ ಆಶ್ಚರ್ಯವಾಯ್ತು.

"ಬೇಗ ಅಡುಗೆ ಮುಗಿಸಿ ಬಿಡು ಕಮಲಾ, ಒಳ್ಳೆ ಪಿಕ್ಚರ್ ಬಂದಿದೆ. ಹೋಗೋಣ."

"ನಾನು ಯಾಕೆ ಸುಮ್ಮನೆ? ನೀವು ಹೋಗಿ ಬನ್ನಿ ಬೇಕಾದರೆ; ಹೇಗೂ ನಿಮ್ಮ ಸ್ನೇಹಿತರಿದ್ದಾರಲ್ಲಾ ಜೊತೆಗೆ." ಎಂದು ಕೊಂಕುನುಡಿದಳು.

"ನೋಡಿದಿಯಾ ನಿನ್ನ ಬುದ್ಧೀನ. ಜೊತೇಲಿ ನಿನ್ನ ಕರೆದುಕೊಂಡು ಹೋಗೋಣಾ ಅಂತ ಬಂದರೆ ನೀನು ಹೀಗೆ ಹೇಳುತ್ತಿಯಾ! ನೋಡು ಕಮಲಾ, ಏನೇ ಇದುವರೆಗೂ ಆಗಿದ್ದಾಯ್ತು. ನಿನ್ನನ್ನು ಇದುವರೆಗೂ ಏನು ಎಂತು ಅಂತ ವಿಚಾರಿಸಲಿಲ್ಲ, ಆ ಹಾಳು ಇಸ್ಪೇಟಿನ ಗುಂಗಿನಲ್ಲಿ. ಅದನ್ನು ಒಂದೇ ಸಲ ಬಿಡುವುದಾಗುವುದಿಲ್ಲ. ದಿನಕ್ರಮೇಣ ಕಮ್ಮಿ ಮಾಡುತ್ತೇನೆ. ಹಿಂದಿನದೆಲ್ಲಾ ಮರೆತುಬಿಡು ಕಮಲಾ! ಇನ್ನು ಮುಂದೆ ಸರಿಯಾಗಿರೋಣ. ಹೇಳು ಕಮಲಾ....ಹೇಳು, ಹಿಂದಿನದೆಲ್ಲಾ ಮರೆಯುತ್ತಿಯಾ?"

ಕಮಲಾ ತನ್ನ ಕಿವಿಯನ್ನೇ ತಾನು ನಂಬಲಾರದವಳಾಗಿದ್ದಳು. ತನ್ನ ಪತಿಯಲ್ಲಿ ಹೀಗೆ ಅಸಾಧ್ಯವಾದ ಪರಿವರ್ತನೆಯುಂಟಾದುದಕ್ಕೆ ಕಾರಣ ವೇನೆಂಬುದೇ ತಿಳಿಯಲಿಲ್ಲ. 'ಏನೇ ಕಾರಣವಾಗಲೀ ನನ್ನ ಗಂಡ ಒಳ್ಳೆಯವ ನಾದರೆ ಸಾಕು' ಎಂದುಕೊಂಡಳು. ಅದೇ ಉತ್ಸಾಹದಲ್ಲಿಯೇ ಅಡುಗೆ ಮುಗಿಸಿದಳು.

ಇಬ್ಬರೂ ಒಟ್ಟಿಗೇ ಕೂತುಕೊಂಡು ಊಟ ಮಾಡಿದ್ದರು. ಗೋಪಾಲ ನಗುತ್ತಾ ನಗುತ್ತಾ ದಿನಕ್ಕಿಂತ ಒಂದೆರಡು ತುತ್ತು ಹೆಚ್ಚಾಗಿಯೇ ಊಟ ಮಾಡಿದ. ಕಮಲಾ ಊಟವಾದ ಮೇಲೆ ತಟ್ಟೆ ತೊಳೆದಿಟ್ಟು, ಎಂಜಲು ಗೋಮ ಮಾಡಿ, ಬೇಗ ಸೀರೆಯನ್ನುಟ್ಟು ಸಿದ್ಧಳಾದಳು. ಗೋಪಾಲನೂ ಷರಾಯಿ ಕೋಟು ಟೊಪ್ಪಿಗೆ ಹಾಕಿಕೊಂಡು ಹೊರಟು ನಿಂತ. ಮನೆಗೆ ಬೀಗ ಹಾಕಿ, ಅಲ್ಲಿಯೇ ಹತ್ತಿರವಲ್ಲಿದ್ದ ಸರ್ಕಲ್‌ಗೆ ಹೋಗಿ ಜಟಕಾವಲ್ಲಿಯೇ ಥಿಯೇಟರ್‌ಗೆ ತೆರಳಿದ್ದಾಯ್ತು. ಬಾಲ್ಕನಿಗೆ ಟಿಕೆಟ್ ತೆಗೆದಿದ್ದೂ ಆಯ್ತು.

ಎದುರಿಗೆ ನೋಡುತ್ತಿದ್ದ ಚಿತ್ರಪಟದಲ್ಲಿಯ ಕಥಾನಾಯಕ, ಕುಡಿತಕ್ಕೆ ಬಲಿಯಾಗಿ, ಹೆಂಡತಿ ಮಕ್ಕಳನ್ನು ಕಷ್ಟಕ್ಕೀಡುಮಾಡಿ, ಕಡೆಗೆ ಬುದ್ಧಿ ಕಲಿತ

ಹೆಂಡತಿಯ ಬಳಿ ಬಂದಾಗ, ಆ ಸಾಧ್ವಿ ಅವನನ್ನು ಕ್ಷಮಿಸಿ ಮನೆಗೆ ಬರಮಾಡಿ ಕೊಂಡ ಕಥೆಯೇ ಆ ಚಲಚಿತ್ರದಲ್ಲಿತ್ತು. ಇದು ಸಾಮಾನ್ಯವಾದುದಾದರೂ ಗೋಪಾಲನಿಗೆ ಆ ಹೊತ್ತಿಗೆ ಅದು ಬಹಳ ಹಿಡಿಸಿತು. ಅದು ಬಹಳ ಮಟ್ಟಿಗೆ ತನ್ನ ಕಥೆಯೇನೇ ಅನ್ನುವಷ್ಟು ಅವನಿಗೆನಿಸಿತು. ಅದೇ ಸಂತೋಷದ ಸಂಭ್ರಮದಲ್ಲಿ ಕಮಲಾ ತನ್ನ ಆಶೆಯನ್ನೂ ಹೇಳಿದಳು, ನಾಗದ್ರತಿಷ್ಠೆ ಮಾಡೋಣಾ ಎಂದು. ಆಗ ಕಮಲಾ ಏನು ಕೇಳಿದ್ದರೂ ನಡೆಸಿಕೊಡುವ ಸ್ಥಿತಿಯಲ್ಲಿದ್ದ ಗೋಪಾಲ. ಅದರಿಂದ ಅವನ ಒಪ್ಪಿಗೆ ಅವಳು ನಿರೀಕ್ಷಿಸಿದ್ದುದ ಕ್ಕಿಂತ ಬೇಗನೆ ದೊರಕಿತು. ಅಂದಿನ ರಾತ್ರಿ ಅವಳ ಪಾಲಿಗೆ ಸ್ವರ್ಗವಾಗಿತ್ತು.

ಗಂಡನ ಒಪ್ಪಿಗೆ ಪಡೆದುದೇ ತಡ. ಕಮಲಾ ಎಲ್ಲಾ ತಯಾರಿಗಾರಂಭಿ ಸಿದಳು. ಗೋಪಾಲ ಆ ತಿಂಗಳ ಸಂಬಳ ಬಂದುದೇ ತಡ, ಅದನ್ನು ತಂದು ಕಮಲಳಿಗೆ ಕೊಟ್ಟ. ಅದರಿಂದ ಕಮಲಳಿಗಾದ ಆನಂದ ಅಷ್ಟಿಷ್ಟಲ್ಲ. ಮನೆ ಯಲ್ಲಿ ಹಿರಿಯರಾರೂ ಇಲ್ಲದ್ದರಿಂದ ಪಕ್ಕದ ಮನೆಯ ಮುದುಕಿ ಲಕ್ಷ್ಮಮ್ಮ ನವರೆ ಮುಂದಾಳಾಗಿ ನಿಂತು ಎಲ್ಲವನ್ನೂ ಅಣಿಮಾಡಿಸಿದರು.

ಗೋಪಾಲ ತನ್ನ ಅಣ್ಣಅಕ್ಕಂದಿರಿಗೆ ಕಾಗದ ಬರೆದು ಎಲ್ಲವನ್ನೂ ತಿಳಿ ಸಿದ. ತನ್ನ ಹಿಂದಿನ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟು, ಅದನ್ನೆಲ್ಲಾ ಮರೆತು ಈಗ ತನ್ನ ಮನೆಗೆ ಬರಬೇಕೆಂದು ವಿನಯವಾಗಿ ತಿಳಿಸಿದ. ಸಾಧ್ಯವಾದರೆ ರಂಗಮ್ಮನವರನ್ನು ಒಂದು ಎಂಟು ದಿನ ಮುಂಚಿತವಾಗಿ ಕಳಿಸಬೇಕೆಂದೂ ಕೇಳಿಕೊಂಡ.

ಗೋವಿಂದರಾಯರಿಗೆ ಹೆಚ್ಚಿಗೆ ದಿನ ರಜಾ ಸಿಗಲಿಲ್ಲವಾದ್ದರಿಂದ ಅವರು ಒಂದು ದಿನ ಮುಂಚಿತವಾಗಿ, ರಂಗಮ್ಮ ಸಹ ಇವರೊಡನೆ ಬಂದರು.

ರಾಮನಾಥಪುರವನ್ನು ಬಿಟ್ಟಮೇಲೆ ಅಣ್ಣತಮ್ಮಂದಿರು ಒಬ್ಬರನ್ನೊಬ್ಬರು ನೋಡಿದುದು ಇದೇ ಮೊದಲು. ಗೋವಿಂದರಾಯರು ಈಗ ವಿರಕ್ತರಾಗಿ ಊಟ ತಿಂಡಿಗಳಲ್ಲಿ ಉದಾಸೀನ ವೃತ್ತಿಯಲ್ಲಿದ್ದುದರಿಂದ ಅವರ ದೇಹ ಸ್ವಲ್ಪ ಕುಗ್ಗಿತ್ತು. ಆದರೆ ಹೊತ್ತು ಹೊತ್ತಿಗೆ ಊಟ ಉಪಚಾರಗಳಿಲ್ಲದೆ ಗೋಪಾಲನ ಹಿಂದಿನ ಆನೆಯಂತಹ ಕೊಬ್ಬಿದ ಶರೀರ ಈಗ ಅರ್ಧವಾಗಿತ್ತು. ಅಂತೂ ಒಂದೊಂದು ಬಗೆಯ ಕಾರಣದಿಂದ ಇಬ್ಬರೂ ಕ್ಷೀಣಿಸಿದ್ದರು.

ಕಮಲಾ ರಂಗಮ್ಮನವರ ಕಾಲುಗಳನ್ನು ಹಿಡಿದು "ನನ್ನನ್ನು ಕ್ಷಮಿಸಿ ಅತ್ತಿಗೇ! ನಾನೊಬ್ಬಳು ಪಾಪಿ, ನಿಮಗೆ ಅನೇಕ ಕಷ್ಟ ಕೊಟ್ಟೆ. ನೀವು ದೊಡ್ಡ

ವರು. ಅದೆಲ್ಲಾ ಮರೆತು ಈ ನನ್ನ ಮನೆಗೆ ಬಂದು ನನ್ನನ್ನೂ ನನ್ನ ಮನೆ
ಯನ್ನೂ ಪಾವನ ಮಾಡಿದಿರಿ.” ಎಂದು ಕಣ್ಣೀರು ಸುರಿಸಿದಳು.

“ಏಳು. ಬಿಡು ಮಗೂ, ಏನೋ ಅದೂ ಒಂದು ಕಾಲ. ನಡೆದುದು ನಡೆದು
ಹೋಯಿತು. ಅದನ್ನೆಲ್ಲಾ ನೆನೆದು ಏನು ಬಂತು?” ಎಂದು ಸಮಾಧಾನ
ಮಾಡಿ ಕೈ ಹಿಡಿದು ಮೇಲಕ್ಕೆ ಎಬ್ಬಿಸಿದರು.

ಮಾರನೆಯ ದಿನ ಶಾಸ್ತ್ರೋಕ್ತವಾಗಿ ಸರ್ಪಸಂಸ್ಕಾರವೂ ನಾಗರಪ್ರತಿ
ಷ್ಠೆಯೂ ಆಯಿತು. ಒಳ್ಳೆಯ ಕಲ್ಲಿನಲ್ಲಿ ನಾಗರ ಹಾವನ್ನು ಕೊರೆಸಿ ಅದನ್ನು
ಪ್ರತಿಷ್ಠೆ ಮಾಡಿಯೂ ಆಯಿತು. ಮಾರನೇ ದಿನ ನೆರೆಹೊರೆಯವರು, ಗುರುತಿ
ನವರು ಎಲ್ಲರನ್ನೂ ಕರೆದು ದೊಡ್ಡ ಅನ್ನಸಂತರ್ಪಣೆಯೂ ನಡೆಯಿತು. ದಂಪತಿ
ಗಳು ರಂಗಮ್ಮನವರಿಗೆ ನಮಸ್ಕರಿಸಿದಾಗ “ಮುಂದಿನ ವರ್ಷಕ್ಕೇ ಗಂಡು
ಮಗುವನ್ನು ಎತ್ತಿಕೊಳ್ಳಮ್ಮಾ. ನಮ್ಮ ವಂಶ ಬೆಳೆಯಲಿ. ವಂಶೋದ್ಧಾರಕ
ನಾದ ಗಂಡು ಮಗುವಿನ ತಾಯಿಯಾಗು ಮಗೂ.” ಎಂದು ಆಶೀರ್ವದಿಸಿ
ದಾಗ ಅವರ ಹೃದಯ ತಮ್ಮ ತಂದೆ ತಾಯಿಯರನ್ನು ನೆನೆದು ತಳಮಳಗೊಂಡು
ಕಣ್ಣಲ್ಲಿ ಎರಡು ಹನಿ ನೀರೂರಿದವು.

ಸರೂ ಚಿಕ್ಕಮ್ಮನನ್ನು ಬಹಳ ಬೇಗ ಹೊಂದಿಕೊಂಡಳು. ಕಮಲಾ ಸರೂ
ವನ್ನು ನೋಡಿದ್ದು ಅದೇ ಮೊದಲ ಬಾರಿ. ಸೀತಮ್ಮ ತೀರಿದಾಗ, ಗೋಪಾಲ
ಬೆಂಗಳೂರಿಗೆ ಹೋಗಲಾಗಲಿಲ್ಲ. ಅದರಿಂದ ಗೋಪಾಲನೂ ಸರೂವನ್ನು
ನೋಡಿರಲಿಲ್ಲ. ಸರೂನ್ನ ನೋಡಿದೊಡನೆ ಗೋಪಾಲ ತನ್ನ ಅತ್ತಿಗೆಯನ್ನು
ನೆನೆದು ದುಃಖಿಸಿದ. ಅದರಿಂದ ಎಲ್ಲರಿಗೂ ದುಃಖ ಉಮ್ಮಳಿಸಿ ಬಂತು.
ಗೋಪಾಲ ತನ್ನ ಅತ್ತಿಗೆಯ ಗುಣಗಳನ್ನು ನೆನೆದು ಗೋಳಾಡಿದ. ಸ್ವಲ್ಪ
ಹೊತ್ತು ಎಲ್ಲರೂ ಸೀತಮ್ಮನ ವಿಷಯವಾಗಿ ಮಾತಾಡುತ್ತಿದ್ದರು.

ಮಾರನೇ ದಿನ ಗೋವಿಂದರಾಯರು ಹೊರಡಲು ಸಿದ್ಧರಾದರು. ಬೆಳಗ್ಗೆ
ಗೋಪಾಲ “ಅಣ್ಣಾ, ಅಕ್ಕನೂ, ಸರೂ ಇಲ್ಲೇ ಸ್ವಲ್ಪ ದಿನ ಇರಲಿ. ಈ
ಮನೆಗೆ ಬಂದಿರುವುದು ಈ ಹತ್ತು ಹನ್ನೆರಡು ವರ್ಷಗಳಲ್ಲಿ ಇದೇ ಮೊದಲು.
ನೀನು ಬೇಕಾದರೆ ಹೋಗು. ಅವರು ಸ್ವಲ್ಪ ದಿನ ಬಿಟ್ಟು ಬರುತ್ತಾರೆ.” ಅಂದ.

“ಅದೆಲ್ಲಾ ಆಗೋದಿಲ್ಲಾ ಗೋಪಾಲ. ನಾನು ಅಡುಗೆಮನೆಯಲ್ಲಿ
ಇದ್ದೇ ಅವನು ಊಟ ತಿಂಡಿ ಅಷ್ಟು ಚೆನ್ನಾಗಿ ತಿನ್ನೋದು. ಇನ್ನು ಹೆಂಗಸು
ಅಂತ ಯಾರೂ ಮನೆಯಲ್ಲಿ ಇಲ್ಲದಿದ್ದರೆ ಮುಗಿದೇ ಹೋಯಿತು ಅವನ ಗತಿ.

ಈ ಸರೂನ್ನ ಒಬ್ಬನಿಗೆ ಕೊಟ್ಟು ಮದುವೆ ಮಾಡಿ ಅವಳ್ನ ಗಂಡನ ಮನೆಗೆ ಕಳಿಸೋ ತನಕ, ನಾನು ಎಲ್ಲೂ ಬರುವದಿಲ್ಲಾಪ್ಪಾ. ಆಮೇಲೆ ಬೇಕಾದರೆ ಎಲ್ಲೀ ಅಂದರಲ್ಲಿ ಬರುತ್ತೀನೆ." ಎಂದು ರಂಗಮ್ಮ ಆ ಮಾತನ್ನು ಅಲ್ಲಿಗೇ ಮುಗಿಸಿದರು.

ಕಮಲಾ ಸರೂವಿಗೆ ಹಣೆಗಿಟ್ಟು, ಒಂದು ಸಿಲ್ಕ ಸೀರೆಯನ್ನು ಕೊಟ್ಟಳು. ಸರೂ ಸಂಕೋಚದಿಂದ "ಇದೆಲ್ಲಾ ಯಾಕೆ ಚಿಕ್ಕಮ್ಮಾ, ಸುಮ್ಮಸುಮ್ಮನೆ?" ಎಂದಳು.

"ಯಾಕೆ, ಸುಮ್ಮನೆ ಕೊಡಬಾರದೇನೂ? ನಿನ್ನ ಮದುವೇಲೇ ಕೊಡ ಬೇಕೂ ಅಂತ ಶಾಸ್ತ್ರವೇ?" ಎಂದು ಸರೂವಿನ ಕೆನ್ನೆ ಚಿವುಟಿದಳು.

ಚಿರೋಟಿ, ಶಾವಿಗೆ ಪಾಯಸ, ಬೊಂಡಾ ಮಾಡಿ ಕಮಲಾ ಔತಣ ಮಾಡಿದಳು. ಸ್ಟೇಷನ್‌ಗೆ ಗೋಪಾಲ ಕಮಲಾ ಇಬ್ಬರೂ ಹೋಗಿ ಅವರ ನ್ನೆಲ್ಲಾ ಬೀಳ್ಕೊಟ್ಟು ಬಂದರು. ಮೂರು ದಿನದಿಂದ ಜನರಿಂದ ತುಂಬಿದ ಮನೆ ಈಗ ಬಿಕೋ ಅನ್ನುತ್ತಿತ್ತು. ಕಮಲಾಗೆ ತನ್ನ ಗಂಡ ದಾರಿಗೆ ಬಂದ, ಇನ್ನು ಮುಂದೆ ತಾನೂ ಇತರರಂತೆ ಮಾನವಾಗಿ ಸಂಸಾರ ಮಾಡಿಕೊಂಡಿರಬಹುದು, ಆ ಕಾರ್ಪಣ್ಯಜೀವನ ಅಲ್ಲಿಗೇ ಕೊನೆಗೊಂಡಿತು, ಎಂಬ ಭರವಸೆ ಅವಳಲ್ಲಿ ನೆಲಸಿತು. ಗೋಪಾಲನೂ ತನ್ನನ್ನು ತಾನು ತಿದ್ದಿಕೊಳ್ಳಲು ಪ್ರಯತ್ನಿಸಿದನು. ಬರಡಾಗಿದ್ದ ಸಂಸಾರದಲ್ಲಿ, ಈಗ ಎಲ್ಲಿಂದಲೋ ಆಶಾಕಿರಣವೊಂದು ಬಂದು ಅವರ ಸಂಸಾರವನ್ನು ಬೆಳಗಿತು.

ಸರೂ ಈಗ ಬೆಳೆದು ದೊಡ್ಡ ಹುಡುಗಿಯಾಗಿದ್ದಾಳೆ. ಹಿಂದಿನ ಆ ಸರಳ ಮುಗ್ಧಳಾದ ಸರೂ, ಈಗ ಪ್ರಾಯಸ್ಥಳಾಗಿದ್ದಾಳೆ. ಹಿಂದಿನ ಕೋಮಲವಾದ ಮುಖವು ಈಗ ತಾರುಣ್ಯಕ್ಕೆ ಎಡೆಗೊಟ್ಟಿದೆ. ಶರೀರದಲ್ಲಿ ಬದಲಾವಣೆ ಯಾದಂತೆಯೇ, ಅವಳ ಬುದ್ಧಿಯಲ್ಲಿಯೂ ಅನೇಕ ಪರಿವರ್ತನೆಯಾಗಿದೆ. ಹಿಂದಿನಂತೆ ಅವಳು ಈಗ "ಅಮ್ಮ ಎಲ್ಲಿ? ಅಮ್ಮನ ಹತ್ತಿರಕ್ಕೆ ಹೋಗುತ್ತೀನೆ." ಎಂದು ರಂಗಮ್ಮನವರನ್ನು ಪೀಡಿಸುವುದಿಲ್ಲ. ತಂದೆಯನ್ನು ಬಿಸ್ಕೀಟ್‌ಗಾಗಿ

ಕೇಳುವುದೂ ಇಲ್ಲ. ಹುಡುಗುತನದ ಚೆಲ್ಲಾಟ ಹೋಗಿ, ಈಗ ಗಂಭೀರ ಭಾವನೆಯು ಬಂದಿದೆ. ಹಿಂದೆ ಅವಳು ತೊಡುತ್ತಿದ್ದ ಲಂಗ, ಜಂಪರ್‌ಗಳಿಗೆ ಬದಲಾಗಿ ಈಗ ಸೀರೆ ಬಂದಿದೆ.

ಸರೂ ಈಗ ಹೈಸ್ಕೂಲ್‌ಗೆ ಹೋಗುತ್ತಿದ್ದಾಳೆ. ತನ್ನ ಕೆಲಸ ಎಷ್ಟೋ ಅಷ್ಟು. ಯಾರೊಡನೆಯೂ ಹೆಚ್ಚಿಗೆ ಮಾತಿಗೆ ಹೋಗುವವಳೇ ಅಲ್ಲ. ತನ್ನ ಸ್ನೇಹಿತೆಯರ ಜೊತೆಯಲ್ಲಿಯೂ ಅಷ್ಟೇ. ಕೇವಲ ಕಾಲಕ್ಕೆ ತಕ್ಕಂತೆ ಮಾತು. ಹೆಚ್ಚೂ ಇಲ್ಲ ಕಮ್ಮಿಯೂ ಇಲ್ಲ. ತನ್ನ ಪಾಠಗಳ ವಿಷಯದಲ್ಲಿ ಬಹಳ ಜಾಗರೂಕಳಾಗಿಯೇ ಇರುತ್ತಾಳೆ. ಗೆಳತಿಯರೆಲ್ಲ ಇದಕ್ಕೆ ಅವಳನ್ನು 'ಗಂಭೀರ ವದನೆ' ಎಂದು ಹಾಸ್ಯ ಮಾಡುತ್ತಿದ್ದರು. ಸರೂ ಅವರು ಹಾಗೆ ಕರೆದಾಗ ಮಾತ್ರ ಒಂದು ನಲ ನಕ್ಕು ಪುನಃ ತನ್ನ ಪಾಡಿಗೆ ತಾನು ಇರುತ್ತಿದ್ದಳು.

ರಂಗಮ್ಮನವರಿಗೂ ವಯಸ್ಸಾಗುತ್ತ ಬಂತು. ಹಿಂದಿನಂತೆ ಅವರಿಂದ ಕೆಲಸ ಮಾಡುವುದಾಗುತ್ತಿರಲಿಲ್ಲ. ಮಳೆಗಾಲ ಬಂದರೆ ಅವರಿಗೆ ಕೆಮ್ಮಲು ಶುರುವಾಗುತ್ತಿತ್ತು. ಸ್ವಲ್ಪ ಛಳಿಗಾಳಿಯಾದರೂ ಸರಿ, ಅವರಿಗೆ ಕೆಮ್ಮಲು ಶುರು ಆಗಿ ಉಬ್ಬಸ ಪಡುತ್ತಿದ್ದರು. ಅದರಿಂದ ಮನೆಯ ಸ್ವಲ್ಪ ಮೇಲು ಕೆಲಸಗಳನ್ನೂ ಮಾಡುವುದು ಸರೂವಿನ ಪಾಲಿಗೇ ಬಂದಿತು. ಸರೂ ತನ್ನ ಪಾಲಿಗೆ ಬಂದ ಕೆಲಸವನ್ನೆಲ್ಲ ಸ್ವಲ್ಪವೂ ಬೇಸರಿಯದೆ ಅಚ್ಚುಕಟ್ಟಾಗಿಯೇ ಮಾಡುತ್ತಿದ್ದಳು. ಸರೂ ಮೋಹಿನಿಯಂತೆ ಬೆಳೆದು ನಿಂತು ಎಲ್ಲರನ್ನೂ ಆಕರ್ಷಿಸಿದ್ದಳು.

ಸರೂಗೆ ಹನ್ನೆರಡು ವರ್ಷ ತುಂಬುವದರಲ್ಲಿತ್ತು. ಇನ್ನೂ ಬಾಲ್ಯದ ಚಿನ್ಹೆಗಳು ಸಂಪೂರ್ಣವಾಗಿ ಅಳಿಸಿರಲಿಲ್ಲ. ಮೊದಲಿನ ಹುಡುಗಾಟ ಇನ್ನೂ ಅಂಗಾಂಗಗಳಲ್ಲಿ ಮುಂಚಾಚುತ್ತಿತ್ತು.

ರಂಗಮ್ಮ, ಗೋವಿಂದರಾಯರೊಡನೆ ಮಾತಿಗಾರಂಭಿಸಿದರು:

"ಗೋವಿಂದೂ, ಸರೂವಿಗೂ ವಯಸ್ಸಾಗುತ್ತಾ ಬಂತು. ಮುಂಚಿನಂತೆ ಅವಳು ಇನ್ನು ಮೇಲೆ ಆಡುವ ಹುಡುಗಿಯಲ್ಲ. ಎಲ್ಲಿಯಾದರೂ ಒಳ್ಳೆಯ ಕಡೆ ಸ್ಥಳ ನೋಡಪ್ಪಾ. ಅವಳ ಮದುವೆ ಒಂದು ಮಾಡಿದರೆ ನಮಗೆ ಅರ್ಧ ಜವಾಬ್ದಾರಿ ಕಳೆದಂತಾಗುತ್ತೇ."

"ಈಗಲೇ ಏನು ಅವಸರ ಅಕ್ಕಾ? ಆಗಲಿ ಇನ್ನೂ ಒಂದೆರಡು ವರ್ಷ."

"ಹಾಗಂದರೆ ಹೇಗಾಗುತ್ತೋ? ಈಗಲಿಂದ ಪ್ರಯತ್ನಪಟ್ಟರೆ

ಮುಂದಕ್ಕೋ ಅಥವಾ ಆಪರ ಮುಂದಿನ ವರ್ಷಕ್ಕೋ ಮದುವೆ ಮಾಡಬಹುದು. ನಮ್ಮ ಮನೆತನದಲ್ಲಿ ಸಣ್ಣ ವಯಸ್ಸಿನಲ್ಲೇ ಮಾಡುವ ಪದ್ಧತಿ ಹಿಂದಿನಿಂದಲೂ ನಡೆದು ಬಂದಿದೆ. ನನ್ನ ಇಷ್ಟ ಇರುವುದೂ ಅದೇನೇ. ಹುಡುಗಿ ದೊಡ್ಡವ ಳಾಗುವ ಮುಂಚೆ ಮದುವೆ ಮಾಡಿದರೆ ಪೂರ್ತಿಯಾಗಿ ಕನ್ಯಾದಾನ ಮಾಡಿದ ಫಲ ಬರುತ್ತದಂತೆ."

"ಹೂಂ, ಹಾಗೇ ಆಗಲಿ ಅಕ್ಕಾ, ನೋಡೋಣ."

ಅಲ್ಲಿಯೇ ಕೂತಿದ್ದ ಸರೂ, ಹುಡುಗತನದ ಬುದ್ಧಿಯಿಂದ "ಯಾರಿಗೆ ಅತ್ತೀ ಮದುವೆ?" ಎಂದು ಕೇಳಿದಳು.

"ಥೂ, ಗಂಡುಬೀರಿ! ನಾಚಿಕೆ ಇಲ್ಲದೆ ಕೇಳೋದು ನೋಡು. ನಿನ್ನ ಮದುವೆ ಕಣೇ. ನಿನಗೇ ಮದುವೆ ಮಾಡಬೇಕೂಂತ ಅಂತೀನಿ. ನೀನು ಮಾಡಿ ಕೋತೀಯಾ?"

"ಹೂಂ, ಅವನು ಚೆನ್ನಾಗಿದ್ದರೇನೇ ಮಾಡಿಕೊಳ್ಳೋದು."

"ಈಗ ನಿನ್ನ ಗಂಡ ಆಗೋವನು ಹೇಗಿದಾನೆ ಗೊತ್ತೆ? ಸಾದಿನ ಬಣ್ಣ ವಾಗಿದ್ದಾನೆ. ಅವನ್ನೇ ನಿನಗೆ ಕೊಟ್ಟು ಮಾಡೋದು."

"ಊಹೂಂ, ಕಪ್ಪಗಿದ್ದರೆ ನಾನು ಮಾಡಿಕೊಳ್ಳೋದೇ ಇಲ್ಲಾ. ಎತ್ತರ ವಾಗಿ, ಬೆಳ್ಳಗೆ, ಚೆನ್ನಾಗಿದ್ದರೇನೇ ಮಾಡಿಕೊಳ್ಳೋದು. ಅವನು ನನಗೆ ಬೇಡ."

"ಅಲ್ಲವೇ ಸರೂ, ಗೋವಿಂದು ಅವನ್ನೇ ನಿನಗೆ ಕೊಟ್ಟು ಮದುವೆ ಮಾಡುತ್ತೀನಿ ಅಂತ ಅಂದರೆ ಏನು ಮಾಡುತ್ತೀ?"

"ಮಾಡೋದೇನೂ, ನನಗೆ ಆ ಕರೀ ಹುಡುಗ ಬೇಡಾ, ನಾನು ಮದುವೆ ಮಾಡಿಕೊಳ್ಳೋಲ್ಲಾ ಅಂತಾ ಹೇಳಿಬಿಡುತ್ತೀನಿ." ಎಂದು ಹೇಳಿ ಹೊರಗೆ ಓಡಿದಳು ಸರೂ.

"ಅಂತೂ ನಿನಗೆ ಬಿಳೀ ಹುಡುಗನನ್ನೇ ಹುಡುಕಬೇಕಾಯ್ತುಲ್ಲೇ." ಎಂದುಕೊಂಡು ಅಡುಗೆಮನೆಗೆ ತೆರಳಿದರು ರಂಗಮ್ಮ

ಒಂದು ದಿನ ಸಂಜೆ ಗೋವಿಂದರಾಯರು ಅಂಗಡಿಯಿಂದ ಹಿಂದಿರುಗಿ ಬರುವಾಗ ಜೊತೆಯಲ್ಲಿ ಒಬ್ಬರನ್ನು ಕರೆದುಕೊಂಡು ಬಂದರು. ರಂಗಮ್ಮನವರಿಗೆ ಅವರು ಯಾರೆಂದು ತಿಳಿಯಲಿಲ್ಲ.

"ಬನ್ನಿ ನಾಗಪ್ಪನವರೇ, ಕೈ ಕಾಲು ತೊಳೆದುಕೊಳ್ಳಿ." ಎಂದು ಅವರನ್ನು ಕರೆದುಕೊಂಡು ಬಚ್ಚಲುಮನೆಗೆ ಹೋದರು. ಕೈಕಾಲು ತೊಳೆದ ನಂತರ

ಇಬ್ಬರೂ ಬಂದು ಹಜಸಾಲೆಯಲ್ಲಿಯೇ ಕುಳಿತರು. ರಂಗಮ್ಮ ಎರಡು ತಟ್ಟೆ ಗಳಲ್ಲಿ ಉಪ್ಪಿಟ್ಟು ಹಾಕಿ, ಅದನ್ನು ಒಯ್ದು ಕೊಡಲು "ಸರೂ....ಸರೂ" ಎಂದು ಕೂಗಿದರು.

ಅಲ್ಲಿಯೇ ಇದ್ದ ಸರೂ ಓಡಿ ಬಂದು " ಏನತ್ತೇ, ಕೂಗಿದೆಯಾ? " ಎಂದಳು.

"ಹೂಂ, ಈ ತಿಂಡಿನ್ನ ತೆಗೆದುಕೊಂಡು ಹೋಗಿ ಅಣ್ಣನಿಗೆ, ಆಮೇಲೆ ಇನ್ನೊಬ್ಬರು ಬಂದಿದ್ದಾರಲ್ಲಾ ಅವರಿಗೂ ಕೊಟ್ಟು ಬಾ " ಎಂದು ಹೇಳಿ ಕಾಫಿ ಡಿಕಾಕ್ಷನ್‌ಗೆ ಹಾಲು ಸಕ್ಕರೆ ಬೆರಸತೊಡಗಿದರು.

"ಊಹೂಂ, ಹೋಗು ನಾನು ಕೊಡೋಲ್ಲಾ ಅವರಿಗೆ. ಅವತ್ತು ನೀನೇ ಅಂದೆ 'ಗಂಡುಬೀರಿ ನಾಚಿಕೆ ಇಲ್ಲಾ' ಅಂತ. ಅದಕ್ಕೆ ನಾನು ಕೊಡೋಲ್ಲಾ ಹೋಗು." ಎಂದು ಕೊರಳನ್ನು ಕೊಂಕಿಸುತ್ತಾ ಹಾಸ್ಯಮಾಡಿ ಹೊರಗಡೆ ಹೋದಳು.

ಅವಳ ಮಾತಿಗೆ ನಗುತ್ತಾ ರಂಗಮ್ಮ ತಾವೇ ತಟ್ಟೆಗಳನ್ನು ಕೈಲಿ ಹಿಡಿದು ಒಳ ಬಂದರು. ಇಬ್ಬರಿಗೂ ಒಂದೊಂದು ತಟ್ಟೆ ತಿಂಡಿಯನ್ನು ಕೊಟ್ಟು, ಅದುಗೆ ಮನೆಗೆ ಹೋಗಿ ಎರಡು ಲೋಟಾಗಳಲ್ಲಿ ಕಾಫಿಯನ್ನೂ ತಂದು ಇಬ್ಬರಿಗೂ ಕೊಟ್ಟರು.

ಉಪ್ಪಿಟ್ಟು ತಿನ್ನುತ್ತಾ ಗೋವಿಂದರಾಯರು "ಇವರು ನಾಗಪ್ಪನವರು ಅಕ್ಕಾ. ಅಲ್ಲಿಯೇ ನಮ್ಮ ಅಂಗಡಿಯ ಪಕ್ಕದಲ್ಲಿರುವ ಫ್ಲೋರ್ ಮಿಲ್ಲಿನ ಯಜಮಾನರು. ಇವರೂ ಸಹ ನಮ್ಮ ಊರಿನ ಕಡೆಯವರೇನೇ. ಮೈಸೂರಿನಲ್ಲಿ ಇರುವ ನಮ್ಮ ಜನವೆಲ್ಲಾ ಇವರಿಗೆ ಗೊತ್ತು. ಇವರಿಗೆ ತಿಳಿಯದವರೇ ಇಲ್ಲ."

"ನಾನೇನೋ ನಿಮಗೆ ಗುರುತಿಲ್ಲದವನಾದರೂ ನನಗೆ ನಿಮ್ಮ ತಂದೆ ಯವರು ಬಹಳ ಪರಿಚಿತರಾಗಿದ್ದರು ತಾಯೀ. ನಿಮ್ಮ ತಮ್ಮನಿಗೆ ನಾನು ಈಚೀ ಚೆಗೆ ಗುರುತಾದೆ. ನಂತರ ನಮ್ಮಿಬ್ಬರಲ್ಲಿ ಸಲುಗೆ ಬೆಳೆಯಿತು. ಮೊನ್ನೆ ದಿನ ಮಾತಿಗೆ ಮಾತು ಬಂದು 'ಮಗಳಿಗೆ ವರ ನೋಡಬೇಕು' ಅಂತ ಅಂದರು. ಹಾಗೆಯೇ ನೋಡಿಕೊಂಡು ಹೋಗೋಣಾ ಅಂತ ಬಂದೆ." ಎಂದರು ನಾಗಪ್ಪ ಕಾಫಿ ಕುಡಿಯುತ್ತಾ.

"ಏನೋಪ್ಪಾ, ತಾಯಿ ಇಲ್ಲದ ತಬ್ಬಲಿ ಮಗೂ,ಒಳ್ಳೇ ಕಡೆ ಸೇರಿ ನೆಮ್ಮದಿ ಯಾಗಿದ್ದರೆ ಸಾಕು." ಎನ್ನುವಾಗಲೇ ರಂಗಮ್ಮನವರ ಕಂಠ ಬಿಗಿದು ಬಂತು.

ಸೀತಮ್ಮನನ್ನು ನೆನೆದು.

"ಗೋವಿಂದರಾಯರು ಎಲ್ಲಾ ವಿಷಯಗಳನ್ನೂ ಹೇಳಿದ್ದಾರೆ ತಾಯಿ. ಅವರು ನನ್ನ ತಮ್ಮನ ಹಾಗೇ ಎಂದು ತಿಳಿಯಿರಿ. ಈ ವಿಷಯದಲ್ಲಿ ನನ್ನ ಕೈಲಾದ ಸಹಾಯ ಮಾಡಲು ನಾನು ಸಿದ್ಧ."

"ನಮ್ಮ ಗೋವಿಂದೂಗೆ ವ್ಯವಹಾರಜ್ಞಾನ ಬಹಳ ಕಡಿಮೆ, ನಾಗಪ್ಪನವರೇ. ಕಡಮೆ ಯಾಕೆ, ಇಲ್ಲವೇ ಇಲ್ಲವೆಂದರೂ ಪರವಾಗಿಲ್ಲ. ಅವರಲ್ಲೂ ಹೀಗೆ ವರ ಹುಡುಕೋದು, ಬೀಗತನ ಮಾಡೊದು ಮೊದಲಾದ ಕೆಲಸಗಳು ಅವನಿಗೆ ಎಳ್ಳಷ್ಟೂ ಗೊತ್ತಿಲ್ಲ. ಅವರಲ್ಲಿ ಹೇಗೆ ನಡೆದುಕೊಳ್ಳಬೇಕು, ಹೇಗೆ ಮಾತುಕತೆಗಾರಂಭಿಸಬೇಕು ಅನ್ನುವುದೇ ಅವನಿಗೆ ತಿಳಿಯದು. ನಮ್ಮ ಪುಣ್ಯಕ್ಕೆ ನೀವೊಬ್ಬರು ಇದ್ದೀರಿ. ನೀವೇ ಮುತವರ್ಜಿ ವಹಿಸಿ ಎಲ್ಲಿಯಾದರೂ ಒಂದು ಒಳ್ಳೇ ಮನೆತನದವರಲ್ಲಿ ಗೊತ್ತು ಮಾಡಿಬಿಡಿ. ನನಗೇನೋ ನಿಮನ್ನು ನೋಡಿದ ಕೂಡಲೆ ಮನಸ್ಸಿಗೆ ಧೈರ್ಯವಾಯಿತು, ಈ ಕೆಲಸ ನಿಮ್ಮಿಂದಲೇ ಸಾಧ್ಯ ಎಂದು. ನಾನು ಹೆಣ್ಣು ಹೆಂಗಸು, ಎಲ್ಲಿ ಅಂತ ಹೋಗುವುದಕ್ಕಾಗುತ್ತೆ ನೀವೇ ಹೇಳಿ? ನಮ್ಮ ಗೋವಿಂದೂ ನೋಡಿದರೆ ಯಾವಾಗಲೂ ಭಗವದ್ಗೀತೆ, ಪುರಾಣ ಅಂತ ಇರುತ್ತಾನೆಯೇ ಹೊರತು, ಮನೆ ವಿಷಯ ಒಂದೂ ಕಿವಿಯ ಮೇಲೆ ಹಾಕಿಕೊಳ್ಳೋದೇ ಇಲ್ಲ. ಏನೋಪ್ಪಾ, ಈ ಒಂದು ಕೆಲಸ ಮಾಡಿದರೆ ತಬ್ಬಲಿ ಮಗೂನ್ನ ಕಾಪಾಡಿದ ಪುಣ್ಯ ಬರುತ್ತೆ" ಎಂದರು ರಂಗಮ್ಮ.

"ಛೇ, ಅದೇನು ಬಹಳ ದೊಡ್ಡ ಮಾತು ಹೇಳುತ್ತೀರಿ ತಾಯಿ? ಇದೆಲ್ಲಾ ಎಷ್ಟರ ಕೆಲಸ? ಮನುಷ್ಯನಾದ ಮೇಲೆ ಒಬ್ಬರಿಗೊಬ್ಬರು ಸಹಾಯ ಮಾಡದೆ ಹೋದರೆ ಭೂಮಿಯ ಮೇಲೆ ಇದ್ದು ಏನು ಪ್ರಯೋಜನಾ ಅಂತೀನಿ? ನೋಡಿ ತಾಯಿ, ನಾನು ಇದುವರೆಗೂ ಹಿಗೆಯೇ ಅನೇಕ ಕಡೆ ಮದುವೆ ಗೊತ್ತು ಮಾಡಿ ಕೊಟ್ಟಿದ್ದೀನಿ. ಅದು ಸರಿಯಾಗಿ ಹೋದರಂತೂ ಸರಿ. ಗ್ರಹಚಾರ ವಶಾತ್ ಆ ಸಂಬಂಧಗಳಲ್ಲಿ ಯಾವುದಾದರೂ ತೊಡಕು ಉಂಟಾಗಿ ಮನಸ್ತಾಪಗಳು ಉಂಟಾದರಂತೂ ತೀರಿಯೇಹೋಯಿತು, ಈ ನಾಗಪ್ಪನ ಅವಸ್ಥೆ! ಮಧ್ಯಸ್ಥಿಕೆಗಾರನಾಗಿ ಬಂದು ಚೆನ್ನಾಗಿ ಹಣ ತಿಂದುಬಿಟ್ಟು ನಮಗೆ ಈ ಸಂಬಂಧ ಗಂಟುಹಾಕಿದಾ, ಎಂದು ಅನೇಕರು ಅಂದಿದ್ದೂ ಉಂಟು. ಆದರೆ ನಾನು ಸತ್ಯವಾಗಿಯೂ ಹೇಳುತ್ತೇನೆ ತಾಯೀ, ಈ ವಿಷಯಗಳಲ್ಲಿ ನಾನು ಯಾವ ಒಂದು ಚಿಕ್ಕ ಕಾಸನ್ನು ಕೂಡಾ ಯಾರಿಂದಲೂ ತೆಗೆದುಕೊಂಡಿಲ್ಲ.

ಮನುಷ್ಯನಾಗಿ ಹುಟ್ಟಿದ ಮೇಲೆ ಒಂದಲ್ಲ ಒಂದು ರೀತಿಯಿಂದ ಜನರಿಗೆ ಉಪಕಾರ ಮಾಡಲೇಬೇಕು. ನನಗೆ ಈ ರೀತಿ ಮದುವೆಗೆ ಸಂಬಂಧಗಳನ್ನು ಕುದುರಿಸಿ, ಮುಂದೆ ಅವರು ನೆಮ್ಮದಿಯಿಂದ ಇದ್ದರೆ ಸಾಕು, ಅದೇ ಬಂದ ಫಲ ಎಂದು ಭಾವಿಸಿ, ಯಾರು ಏನೇ ಅನ್ನಲಿ, ನಾನು ಈ ವೃತ್ತಿಯನ್ನು ಮಾಡು ತ್ತಲೇ ಬಂದಿದ್ದೇನೆ. ನಾನು ಒಳ್ಳೆಯದಾಗಲಿ ಎಂದೇ ಮಾಡುತ್ತೇನೆ. ಆದರೆ ಒಂದೊಂದು ಬಾರಿ ಮಾತ್ರ ಅದು ಸುಗಮವಾಗುವುದಿಲ್ಲ. ಆದರೂ ನಾನು ದೇವರ ಮೇಲೆ ಭಾರ ಹಾಕಿ ನನ್ನ ಕೆಲಸ ಮಾಡುತ್ತಿದ್ದೇನೆ. ಇನ್ನು ಮುಂದೆ ಹೇಗೆ ನಡೆಯುತ್ತದೆಯೋ ಗೊತ್ತಿಲ್ಲ."

"ಅಕ್ಕಾ ನೋಡು, ನೀನು ದಿನಾ ನನ್ನನ್ನು ಸುಮ್ಮನೆ ಪೀಡಿಸುತ್ತಿದ್ದೆ. ಈಗ ನನ್ನ ಜವಾಬ್ದಾರಿಯೆಲ್ಲಾ ಇವರ ಮೇಲೆಯೇ. ನೀನು ಏನು ಕೇಳ ಬೇಕಾದರೂ ಇವರನ್ನೇ ಕೇಳಬೇಕು ತಿಳಿಯಿತೆ? ನನ್ನನ್ನು ಯಾವ ವಿಷ ಯಕ್ಕೂ ಎಳೆಯಬೇಡ. ನೀನು ಒಪ್ಪಿದ ಹುಡುಗನಿಗೆ ನಾನು ಮಗಳನ್ನು ಕೊಡಲು ಸಿದ್ಧವಾಗಿದ್ದೇನೆ. ಇನ್ನು ಏನಿದ್ದರೂ ನೀವಿಬ್ಬರು ಅಣ್ಣಾ-ತಂಗಿಯ ರುಂಟು, ಅದರಲ್ಲಿ ನನ್ನದೇನೂ ಕೆಲಸವಿಲ್ಲ." ಎಂದು ಗೋವಿಂದರಾಯರು ಅಕ್ಕನಿಗೆ ಹೇಳಿ, ನಾಗಪ್ಪನವರನ್ನುದ್ದೇಶಿಸಿ "ಸದ್ಯ, ಮಹಾರಾಯರೇ ನಿಮ್ಮ ದಯದಿಂದ ನನಗೆ ಬಿಡುವು ದೊರೆತಂತಾಯಿತು. ಈಗ ಒಂದು ತಿಂಗಳಿಂದ ಕೂತಾಗ, ನಿಂತಾಗ, ಎದ್ದಾಗ, ಮಲಗಿದಾಗ ಬರೀ ಈ ಮದುವೆಯ ಸುದ್ದಿ ಕೇಳಿ ಕೇಳಿ ನನ್ನ ಕಿವಿ ಎಲ್ಲಾ ಕಿವುಡಾಯಿತು. ಇನ್ನುಮೇಲಾದರೂ ಸ್ವಲ್ಪ ಶ್ಲೋಕಗಳನ್ನು ಓದಲು ಶುರುಮಾಡಬಹುದು." ಎಂದು ಸಮಾಧಾನದ ಉಸಿರು ಬಿಟ್ಟರು.

ರಂಗಮ್ಮನವರು ಅವರ ಮಾತು ಕೇಳಿ ನಗುತ್ತಾ "ಕೇಳಿದಿರಾ ನಾಗಪ್ಪ ನವರೇ, ನಿಮ್ಮ ತಮ್ಮನ ಮಾತನ್ನ? ಹೀಗೆ ಮೂರು ಹೊತ್ತೂ ಶ್ಲೋಕ ಪುರಾಣ ಅಂತ ಕೂತಿರುವ ಈ ತಮ್ಮನ್ನ ಕಟ್ಟಿಕೊಂಡು, ಮದುವೆ ಹೇಗೆ ಮಾಡೋದು ಹೇಳಿ?" ಎಂದರು.

"ಈಗಲೇ ಹಾಗೆ ಸುಖವಾಗಿ ಕೂತುಕೊಳ್ಳಲು ಅವಕಾಶ ಕೊಡು ತ್ತೇನೆಯೇ ನಾನು. ನೀವೇ ಹೇಳಿದಂತೆ, ಇನ್ನು ಮೇಲೆ ನೀವು ನಾವು ಹೇಳಿದಂತೆ ಕೇಳಬೇಕು. ನಿಮಗೆ ಮನ ಒಪ್ಪಿದ ಹುಡುಗರನ್ನು ನೋಡಿ, ನಿಮಗೆ ಯಾವುದು ಸರಿ ಎನಿಸುತ್ತದೆಯೋ ಹೇಳಿ, ಆ ಹುಡುಗನನ್ನು ನಿಮಗೆ

ಗೊತ್ತುಮಾಡಿ ಕೊಡುವ ಭಾರ ನನ್ನದು. ಹುಡುಗನ ಪೂರ್ವೋತ್ತರವನ್ನೆಲ್ಲಾ ನಿಮಗೆ ಚಾಚೂ ತಪ್ಪದೆ ಹೇಳುತ್ತೇನೆ. ಅದರಲ್ಲಿ ಯಾವ ಲೋಪದೋಷಗಳಿದ್ದರೂ ನಿಮಗೆ ತಿಳಿಸುತ್ತೇನೆ. ಯಾವುದನ್ನೂ ಚನ್ನಾಗಿ ಯೋಚಿಸಿ, ನಿಮ್ಮ ಆಪ್ತೇಷ್ಟರ ಸಲಹೆಗಳನ್ನೂ ಕೇಳಿ, ನಿಮ್ಮ ಒಪ್ಪಿಗೆ ಕೊಡಿ. ಆಮೇಲೆ ಈ ನಾಗಪ್ಪ ಹೀಗೆ ಮಾಡಿದಾ ಎನ್ನುವ ಕೆಟ್ಟ ಹೆಸರು ನನಗೆ ಬರಬಾರದು ನೋಡಿ. ನನ್ನ ವಿಷಯವನ್ನೆಲ್ಲಾ ಹೇಳಿಬಿಟ್ಟಿದ್ದೇನೆ. ಇನ್ನು ಒಪ್ಪುವುದು ಬಿಡುವುದು ನಿಮ್ಮ ಇಷ್ಟ" ಎಂದು ಹೇಳಿ ನಾಗಪ್ಪ ಸುಮ್ಮನಾದರು.

"ನೀವು ನನ್ನಲ್ಲಿ ಯಾವ ತರಹದ ಅನುಮಾನವನ್ನೂ ಪಡಬೇಡಿ ಸ್ವಾಮೀ. ನೀವು ಹೇಳಿದಂತೆ ಮಾಡುವದು, ನಿಮ್ಮನ್ನು ನೆರಳಿನಂತೆ ಹಿಂಬಾಲಿಸುವುದು ನನ್ನ ಕೆಲಸ. ಅವರ ಸಾಧಕಬಾಧಕಗಳನ್ನೆಲ್ಲಾ ನೀವು ತಿಳಿಸುತ್ತೀರಿ. ಅವನ್ನು ನೋಡಿಕೊಂಡು ನಾವು ನಮ್ಮ ಕೆಲಸ ನಡಿಸಿದರಾಯಿತು. ನಾನು ನಿಮ್ಮವನೇ ಆಗಿದ್ದೇನೆ. ನಿವು ಬಾ ಅಂದರೆ ಬರುತ್ತೇನೆ. ಹೋಗು ಅಂದರೆ ಹೋಗುತ್ತೇನೆ." ಎಂದರು ಗೋವಿಂದರಾಯರು.

ನಾಗಪ್ಪ ನಗುತ್ತಾ "ಎಲ್ಲಿ ಹಾಗಾದರೆ ಈಗ ಕೂಡಿ" ಎಂದರು. ಗೋವಿಂದರಾಯರು ತಕ್ಷಣ ನಿಂತ ಜಾಗದಲ್ಲೇ ಕೂತರು. ನಾಗಪ್ಪ ಪುನಃ 'ಏಳಿ' ಎಂದರು. ತಕ್ಷಣ ಛಂಗನೆ ಮೇಲಕ್ಕೆ ಎದ್ದು ನಿಂತರು. ಇವರಿಬ್ಬರ ಹುಡುಗಾಟವನ್ನು ನೋಡುತ್ತ ರಂಗವ್ವ ಹುಸಿನಗುನಗುತ್ತಾ ನಿಂತಿದ್ದರು. ಅಲ್ಲಿಯೇ ವರಂಡಾದಲ್ಲಿ ಆಡುತ್ತಿದ್ದ ಸರೂ, ತಂದೆ ಕೂತು ನಿಂತು ಮಾಡಿದ್ದನ್ನು ನೋಡಿ ಆಶ್ಚರ್ಯದಿಂದ ಒಳಕ್ಕೆ ಬಂದು ತಂದೆಯನ್ನು ಕುರಿತು "ಇದೇಕಣ್ಣಾ ನೀನು ಹೀಗೆ 'ಊಟ್ ಬೈಸ್' ಮಾಡುತ್ತಿದ್ದೀಯಾ, ಪ್ರೈಮರಿ ಸ್ಕೂಲಿನ ಹುಡುಗರು ಮಾಡುವಂತೆ?" ಎಂದು ಕೇಳಿ ನಗಲಾರಂಭಿಸಿದಳು.

"ಹೌದು ಮಗೂ, ನಿನಗೆ ಆ ಒಂದು ಮದುವೆ ಅನ್ನೋದನ್ನ ಮಾಡಬೇಕಾದರೆ ಹೀಗೂ ಮಾಡಬೇಕು; ಆ ಬೀಗ ಅನ್ನಿಸಿಕೊಳ್ಳೋ ಮಹಾರಾಯನಿಗೆ ಹೀಗೆ ದೀರ್ಘದಂಡನೂ ಹಾಕಬೇಕು." ಎಂದು ಅಲ್ಲಿಯೇ ದೀರ್ಘವಾದ ನಮಸ್ಕಾರಮಾಡಿದರು. ನಾಗಪ್ಪ, .ರಂಗವ್ವ ಇಬ್ಬರೂ ಗೊಳ್ಳೆಂದು ನಕ್ಕರು. ಆದರೆ ಸರೂಗೆ ಮಾತ್ರ ನಗುವು ಬರಲಿಲ್ಲ. ತನ್ನ ತಂದೆ ತನ್ನ ಮದುವೆಗಾಗಿ ಅಷ್ಟು ಕೀಳಾಗಿ ನಡೆಯಬೇಕಾದರೆ, ತನಗೆ ಆ ಮದುವೆಯೇ ಬೇಡಾ ಅನ್ನುವಂತಾಯಿತು ಆವಳಿಗೆ. ತನ್ನ ತಂದೆ ಯಾರಿಗೂ ನಮಸ್ಕರಿ

ಸಿದ್ದುದನ್ನು ಅವಳು ನೋಡಿರಲೇ ಇಲ್ಲ. ಹಿರಿಯರು ದೇವರಿಗೆ ಮಾತ್ರ ನಮಸ್ಕ ಸುತ್ತಾರೆಯೇ ಹೊರತು, ಇನ್ನೊಬ್ಬರಿಗೆ ಹೀಗೆ ದೇವರಿಗೆ ಮಾಡುವಂತೆ ನಮ ಸ್ಕಾರ ಮಾಡವುದಿಲ್ಲ ಎಂಬುದು ಅವಳ ಭಾವನೆಯಾಗಿತ್ತು. ಈಗ ತಂದೆ ಈ ರೀತಿ ಆಚರಿಸಿದ್ದುದಕ್ಕಾಗಿ ಅವಳಿಗೆ ನಿಜಕ್ಕೂ ಬಹಳ ವ್ಯಥೆಯಾಯಿತು.

ಕಣ್ಣಲ್ಲಿ ಮೂಡುತ್ತಿದ್ದ ನೀರನ್ನು ತಡೆದು ಹೇಳಿದಳು ಸರೂ, "ಅಣ್ಣಾ, ನೀನು ಇಷ್ಟೆಲ್ಲಾ ಕಷ್ಟಪಡಬೇಕಾದರೆ, ನನಗೆ ಆ ಮದುವೆಯೇ ಬೇಡಾಣ್ಣಾ. ನೀನು ಚಿಕ್ಕ ಹುಡುಗರ ಹಾಗೆ ಯಾರಿಗೂ ನಮಸ್ಕಾರ ಮಾಡಬೇಡಾಣ್ಣಾ." ಎಂದು ಹೇಳುತ್ತಿರುವಾಗಲೇ ಅಳು ತಡೆಯಲಾರದೆ ರೂಮಿನೊಳಕ್ಕೆ ಓಡಿದಳು.

ಕ್ಷಣಕಾಲ ಯಾರೂ ಮಾತಾಡದೆಯೇ ಇದ್ದರು.

"ಪರವಾಗಿಲ್ಲಪ್ಪಾ ನಿಮ್ಮ ಮಗಳು. ಏನೋ ಅಂತಿದ್ದೆ. ಬಹಳ ಚಾಲಾಕಾದ ಹುಡುಗಿ. ಆ ಪುಟ್ಟ ಹೃದಯಕ್ಕೆ ಇಷ್ಟೆಲ್ಲಾ ಭಾವನಾತರಂಗಗಳು ಹೇಗೆ ಹುಟ್ಟಿದುವು ಅಂತೀನಿ? ಏನೋಪ್ಪಾ ಈಗಿನ ಕಾಲದ ಹುಡುಗಿಯರೇ ಹಾಗೆ, ಒಂದು ಕ್ಷಣಮಾತ್ರದಲ್ಲಿ ಭಾವನಾವೇಶಕ್ಕೊಳಗಾಗುತ್ತಾರೆ. ಇದೇನು ಒಳ್ಳೆ ಯದೋ ಕೆಟ್ಟದೋ ನಾ ಬೇರೆ ಕಾಣೆ!" ಅಂದರು ನಾಗಪ್ಪ, ಶಲ್ಲೆಯನ್ನು ಹೆಗಲ ಮೇಲೆ ಹಾಕಿಕೊಳ್ಳುತ್ತಾ.

"ನಾಳೆ ದಿನ ಹತ್ತು ಗಂಟೆಗೆ ಹೊರಡುವುದು. ಮರೆತಿಲ್ಲಾ ತಾನೆ? ಊಟ ಮಾಡಿಕೊಂಡು ರೆಡಿಯಾಗಿರಿ. ನಾನೂ ಊಟ ಮುಗಿಸಿಕೊಂಡು ಬರು ತ್ತೇನೆ. ಇಲ್ಲಿಂದ ಹತ್ತೂವರೆ ಗಂಟೆಗೆ ಬಸ್ ಹೊರಡುತ್ತದೆ. ಅದರಲ್ಲಿ ಹೊರಟ ರಾಯಿತು." ಎಂದರು ನಾಗಪ್ಪ.

"ಹಾಗಾದರೆ ನಾಳೆಗೆ ರಜಾ ತೆಗೆದುಕೊಳ್ಳಬೇಕಲ್ಲಾ ಮತ್ತೆ?" ಎಂದರು ರಂಗಮ್ಮ ಆತಂಕದಿಂದ.

"ನಾಳೆ ಭಾನುವಾರವಲ್ಲವೇ ತಾಯೀ? ಇನ್ನು ರಜಾ ಕೇಳೋದು ಎಲ್ಲಿ ಬಂತು?"

"ಹಾಗಾದರೆ ನಾಗಪ್ಪನವರೇ, ನಾಳೆ ಇಲ್ಲಿಗೇ ಊಟಕ್ಕೆ ಬಂದುಬಿಡಿ. ನಮ್ಮ ನಿಮ್ಮ ಪರಿಚಯವಾದ ಸುಮುಹೂರ್ತದಲ್ಲಿ, ಒಂದು ಪಾಯಸದ ಊಟವೂ ಆಗಿ ಹೋಗಲಿ. ಏನೋ ನನ್ನ ಕೈಲಾದದ್ದು ಮಾಡುತ್ತೇನೆ." ಅಂದರು ರಂಗಮ್ಮ.

"ಈ ರೇಷನ್ ಕಾಲದಲ್ಲಿ ಊಟಕ್ಕೆ ಕರೆದರೆ ಯಾರು ತಾನೆ ಬರುವದಿಲ್ಲಾ ಅನ್ನುತ್ತಾರೆ? ಅಗತ್ಯವಾಗಿ ಬರುತ್ತೇನೆ. ಆದರೆ ನೀವು ಹುಷಾರಾಗಿರಬೇಕು

ನೋಡಿ. ಅಚ್ಚೇರು ಅಕ್ಕಿ ಹೆಚ್ಚಾಗಿ ಹಾಕಿದ್ದರೋ ಸರಿ, ಇಲ್ಲದಿದ್ದರೆ ನನಗೆ ಗೊತ್ತಿಲ್ಲ. ಆಮೇಲೆ ಅನ್ನ ಸಾಲದು ಅಂತ ಅರ್ಧಹೊಟ್ಟೇಲೇ ನನ್ನ ಕಳಿಸ ಬೇಕಾಗುತ್ತೆ. ಆದ್ದರಿಂದ ಈಗಲೇ ಹೇಳಿಬಿಟ್ಟಿದ್ದೀನಿ" ಎಂದು ಹೇಳಿ ಮೆಟ್ಟಿ ಲಿಳಿದು ಹೊರಟು ಹೋದರು. ಹೋಗುವಾಗ 'ನಮಸ್ಕಾರ ತಾಯಿ, ನಮ ಸ್ಕಾರ ಗೋವಿಂದರಾಯರೇ' ಎಂದು ಕೂಗುತ್ತಲೆ 'ಅಚ್ಚೇರು ಅಕ್ಕೀ ಜ್ಞಾಪಕಾ' ಅಂತ ಹೇಳಿದರು ನಾಗಪ್ಪ.

"ಪಾಪ, ಎಂಥಾ ಒಳ್ಳೇ ಮನುಷ್ಯ! ಮಗುವಿನಂತಹ ಮನಸ್ಸು. ಅದೇನು ಹಾಸ್ಯ, ಅದೇನು ನಗು!" ಎಂದರು ರಂಗಮ್ಮ ಅವರು ಹೋದ ದಾರಿಯನ್ನೇ ಗಮನಿಸುತ್ತಾ.

"ನಾನೂ ಈಗ ಎರಡು ವರ್ಷಗಳಿಂದಲೂ ಈತನನ್ನು ನೋಡುತ್ತಲೇ ಇದ್ದೀನಿ ಅಕ್ಕಾ. ಆತನಲ್ಲಿ ಒಂದು ಎಳ್ಳಷ್ಟೂ! ಬದಲಾವಣೆಯಾಗಿಲ್ಲ. ಬಹಳ ಸಾದಾ ಮನುಷ್ಯ. ಹತ್ತು ಜನಕ್ಕೆ ಬೇಕಾದವ. ಏನಾದರೇನು, ಮನೆಯಲ್ಲಿ ಬೇರೆ ಈತನಿಗೆ ಸುಖವಿಲ್ಲ." ಎಂದರು ಗೋವಿಂದರಾಯರು.

"ಅದೇಕೆ? ಮನೆಯಲ್ಲಿ ಏನು ತೊಂದರೆ?"

"ಗೊತ್ತೇ ಇದೆಯಲ್ಲ. ಅತ್ತೆ-ಸೊಸೆಯರ ಜಗಳ. ವಯಸ್ಸಾದ ತಾಯಿ ಇದ್ದಾಳೆ. ಸೊಸೆ ಬಹಳ ವಾಚಾಳಿ, ಜಗಳಗಂಟಿ. ಬೆಳಗ್ಗೆ ಸುರು ಆದ ಜಗಳ ರಾತ್ರಿಯಾದರೂ ತಪ್ಪುವುದಿಲ್ಲ. ಅದಕ್ಕೆ ಕೊನೆ ಇಲ್ಲ ಮೊದಲಿಲ್ಲ. ಈತ ಮನೆಗೆ ಹೋದೊಡನೆಯೇ ಶುರು ಮಾಡುತ್ತಾರೆ, ಒಬ್ಬೊಬ್ಬರೂ ಚಾಡಿ ಹೇಳಿಕೊಳ್ಳಲು. ತಾಯಿ, ಸೊಸೆಯದೇ ತಪ್ಪು ಅಂತ, ಸೊಸೆ ತನ್ನದು! ಏನೂ ತಪ್ಪಿಲ್ಲಾ. ಎಲ್ಲಾ ಈ ಅತ್ತೆಯಿಂದ, ಎಂದು ಅವಳು ಹೇಳಲು ಶುರುಮಾಡುತ್ತಾಳೆ. ಮೊದಲೇ ಮೃದು ಸ್ವಭಾವದವ ಇವನು. ಈಕಡೆ ಹೆಂಡತಿಯನ್ನೂ ಬಯ್ಯಲಾರ, ತಾಯಿಯನ್ನೂ ಬಿಟ್ಟುಕೊಡಲಾರ. ಹೀಗಾಗಿ ಅವನ ಬಾಳು ಅಡಕೋತಿನಲ್ಲಿ ಸಿಕ್ಕ ಅಡಕಿ ಯಂತಾಗಿದೆ ಪಾಪ! ಹೆರವರಿಗೆ ಉಪಕಾರಿ, ಮನೆಗೆ ಮಾರಿಯಂತಾಗಿದೆ ಅವನ ಜೀವನ. ಎಲ್ಲರ ಮನೆ ಸರಿಮಾಡಿದರೂ ತನ್ನ ಮನೆಯನ್ನೆ ಸರಿಯಾಗಿಟ್ಟು ಕೊಳ್ಳಲಾರದೆ ಪೇಚಾಡುತ್ತಾನೆ!"

"ಅಂತೂ ಒಬ್ಬೊಬ್ಬರ ಮನೆ ಒಂದೊಂದು ರೀತಿ. ಅಂದ ಹಾಗೆ ನಿನ್ನನ್ನು ಕೇಳಲು ಮರೆತಿದ್ದೆ. ಈಗ ಯಾರ ಮನೆಗೆ ಹೋಗುತ್ತೀಯೆ ವರ ನೋಡಲು?"

"ಗುಂಡರಾಮಯ್ಯನವರು ಇಲ್ಲವೆ? ಅವರ ಮನೆಗೆ. ಹಿರಿಯ ಹುಡುಗ

msc ಓದುತ್ತಿದ್ದಾನೆ, ಇನ್ನೂ ಮೂರು ಜನ ಅವನಿಗೆ ತಮ್ಮಂದಿರು ಇದ್ದಾರಂತ. ಕಾಣುತ್ತೆ. ಆ ದೊಡ್ಡ ಹುಡುಗನಿಗೆ ನೋಡೋಣಾ ಅಂತ."

"ಅವರೆ ಗೋವಿಂದ್ದೂ, ಅವರ ಮನೆಯ ಹುಡುಗರೆಲ್ಲಾ ಕಪ್ಪು ಅಲ್ಲ ವೇನೊ? ಬಹಳ ದಿನಗಳ ಹಿಂದೆ ಏನೋ ನೋಡಿದ ಜ್ಞಾಪಕ." ಎಂದು ದನಿ ಯೆಳೆದರು ರಂಗಮ್ಮ

"ಹೂಂ, ಸ್ವಲ್ಪ ಕಪ್ಪೇನೆ. ಗಂಡಸಿಗೆ ರೂಪು ಯಾಕೆ ಅಕ್ಕಾ? ವಿದ್ಯೆ, ಗುಣ, ಹೆಂಡತಿಯನ್ನು ಮಾನವಾಗಿ ಸಾಕುವ ಯೋಗ್ಯತೆ ಇದ್ದರೆ ಆಯಿತು. ಕಪ್ಪಾದರೇನೂ ಬಿಳುಪಾದರೇನು? ರೂಪು, ಎಲ್ಲಾ ಬರೀ ಹೆಂಗಸರಿಗೆ ಮಾತ್ರ." ಎಂದರು ಗೋವಿಂದರಾಯರು ಅದೇನೂ ಅಷ್ಟು ಮಹತ್ವದ ವಿಷಯ ವಲ್ಲ ಎಂಬಂತೆ.

"ಹಾಗಂದರೆ ಹೇಗೋ? ಬರೀ ವಿದ್ಯೆ ಇದೆ ಅಂತ ಯಾವುದೋ ಒಂದು ಕರೀ ಹುಡುಗನಿಗೆ ಕೊಡೋದ ಸರೂನ್ನ? ಮೊದಲೇ ಅವಳು ನನಗೆ ಬಿಳೀ ಹುಡುಗಾನೇ ಬೇಕು, ಇಲ್ಲದಿದ್ದರೆ ನಾನು ಮದುವೆಯನ್ನೇ ಮಾಡಿಕೊಳ್ಳೋ ದಿಲ್ಲ ಅಂತ ಅಂತೀದ್ದಾಳೆ. ಅವಳ ಇಷ್ಟ ತಿಳಿದೂ ತಿಳಿದೂ ನೀನು ಈಗ ಕರೀ ಹುಡುಗನನ್ನೇ ನೋಡೋಕೆ ಹೊರಟಿದ್ದೀಯಾ. ನನಗೆ ಜೇರೆ ಇಷ್ಟ ಇಲ್ಲಾಪ್ಪ ಇದು."

"ಏನಕ್ಕಾ, ಆ ಹುಡುಗೀ ಮಾತು ಕೇಳಿಕೊಂಡು ನೀನು ಹೀಗೆ ಹೇಳುತ್ತೀಯಲ್ಲಾ? ಇದಕ್ಕೆ ಏನನ್ನಬೇಕೋ ನಾ ಜೇರೆ ಕಾಣೆ. ಎಲ್ಲರೂ ಹಾಗೇ ಕುಣೀತಿರುತ್ತಾರೆ, ನಾಳೆ ಮದುವೆಯಾಗಿ ಗಂಡ ಸಂಪಾದಿಸಿದ ದುಡ್ಡನ್ನ ಇವರ ಕೈಲಿ ತಂದು ಕೊಟ್ಟರೆ ಆಗ ಆ ಕರೀ ಗಂಡನೇ ಮನ್ಮಥನಾಗುತ್ತಾನೆ, ನಿನಗೇನು ಗೊತ್ತು?"

"ನೋಡು ಗೋವಿಂದ್ದೂ, ನೀನು ಸುಮ್ಮನೆ ತಮಾಷೆ ಮಾಡಬೇಡ. ನಾನು ಸರೂನ್ನ ಇಷ್ಟು ಇದ್ದ ಮಗೂವಿನಿಂದಲೂ ನೋಡುತ್ತಾ ಬಂದಿದ್ದೇನೆ. ಅವಳ ಸ್ವಭಾವ ನನಗೆ ಚೆನ್ನಾಗಿ ಗೊತ್ತು. ಇಷ್ಟಕ್ಕೂ ಮದುವೆಯಾಗಿ ಬಾಳ ಬೇಕಾದವಳು ಅವಳು ತಾನೇ? ಅವಳಿಗೆ ಬೆಳ್ಳಗಿರುವ ಹುಡುಗ ಬೇಕು. ಅದನ್ನು ನೆರವೇರಿಸಲು ಪ್ರಯತ್ನಮಾಡು. ಅವಳು ಇಷ್ಟ ಪಡದ ಹುಡುಗನಿಗೆ ಏನೇ ಆಗಲೀ ನಾನು ಅವಳನ್ನು ಕೊಡುವುದಿಲ್ಲ. ಮುಖ್ಯ ಅವಳು ಸುಖವಾಗಿರ ಬೇಕು. ಅದೇ ನಮಗೆ ಬೇಕಾದ್ದು. ನಾನೂ ಹೇಳುವಷ್ಟು ಹೇಳಿದ್ದೇನೆ. ನಿನ್ನ

ಇಷ್ಟ ಬಂದಂತೆ ಮಾಡು.” ಎಂದು ಸುಮ್ಮನಾದರು ರಂಗಮ್ಮ.

“ಈಗಾಗಲೇ ಮದುವೆ ಗೊತ್ತುಮಾಡಿದಂತೆ ಹೇಳುತ್ತಿದ್ದೀಯಲ್ಲಾ ಅಕ್ಕಾ. ನಾಳೆ ಹೋಗಿ ಯಾವುದೂ ನೋಡಿಕೊಂಡು ಬರುತ್ತೇನೆ. ನಂತರ ಯಾವುದೂ ಮಾತಾಡೋಣಾ. ಈಗಿಂದ ಯಾಕೆ ವೃಥಾ ಕಂಠಶೋಷಣೆ?” ಎಂದು ಮಾತನ್ನು ಮುಗಿಸಿದರು ಗೋವಿಂದರಾಯರು.

“ಅನ್ನಕ್ಕೆ ಇಟ್ಟಿದ್ದೆ ಏನಾಯ್ತೋ ಏನೋ, ಮಾತಿನಲ್ಲಿ ಗಮನವೇ ಬರಲಿಲ್ಲ?” ಎಂದುಕೊಂಡು ರಂಗಮ್ಮ ಅಡುಗೆಮನೆಗೆ ತೆರಳಿದರು.

ರಂಗಮ್ಮ ದಿನಕ್ಕಿಂತ ಮುಂಚಿತವಾಗಿಯೇ ಎದ್ದರು. ಎದ್ದವರೇ ನೀರೊಲೆಗೆ ಉರಿ ಹಾಕಿ, ನೀರು ಕಾದ ಕೂಡಲೇ ಸ್ನಾನ ಮಾಡಿ ಕಾಫಿಯನ್ನು ಮಾಡಿಟ್ಟು ಅಡುಗೆ ಕೆಲಸಕ್ಕೆ ತೊಡಗಿದರು. ಸರೂಗೆ ಇನ್ನೂ ಬೆಳಗಾಗಿರಲಿಲ್ಲ.

“ಗೋವಿಂದೂ, ಯಾವುದಾದರೂ ಒಂದಿಷ್ಟು ತರಕಾರೀ ತಗೊಂಡು ಬಾರೊ, ಮನೆಯಲ್ಲಿ ಯಾವುದೂ ಇಲ್ಲ. ಬಸ್ ಹೊತ್ತಿಗೆ ಅಡುಗೆ ಆಗಬೇಕು.” ಎಂದರು ರಂಗಮ್ಮ ಒಲೆಯ ಮೇಲೆ ನೀರನ್ನಿಡುತ್ತಾ.

“ಏನೇನು ಬೇಕೋ ಹೇಳು ಅಕ್ಕಾ, ಎಲ್ಲಾ ಬರೆದುಕೊಂಡು ಹೋಗಿ ತರುತ್ತೇನೆ. ನೀನು ಹೀಗೆ ಹೇಳಿದರೆ ನನಗೆ ಎಲ್ಲಾ ಮರೆತೇ ಹೋಗುತ್ತೆ.”

“ಹೂಂ, ಬರೆದುಕೊಂಡೇ ಹೋಗುವಿಯಂತೆ, ಮುಂಚೆ ಕಾಫಿ ಕುಡಿದು ಹೋಗು.” ಎಂದು ಲೋಟಾಕ್ಕೆ ಕಾಫಿ ಹಾಕಿದರು. ಗೋವಿಂದರಾಯರು ಕಾಫಿ ಕುಡಿದು, ಸಾಮಾನುಗಳ ಪಟ್ಟಿಯನ್ನೂ ಹಿಡಿದು ಮಾರ್ಕೆಟ್‌ಗೆ ತೆರಳಿದರು.

ಗಡಿಯಾರ ಎಂಟು ತೋರಿಸಿತು. ಸರೂ ಆಗ ತಾನೇ ಕಣ್ಣು ಬಿಟ್ಟಳು.

ಎದ್ದ ಕೂಡಲೇ ನೇರವಾಗಿ ಬಚ್ಚಲು ಮನೆಗೆ ಹೋಗಿ ಮುಖ ತೊಳೆದ ಶಾಸ್ತ್ರ ಮಾಡಿ ಅತ್ತೆಯ ಬಳಿಗೆ ಒಂದೇ ನೆಗೆತಕ್ಕೆ ಬಂದು 'ಅತ್ತೆ, ಕಾಫೀ' ಎಂದಳು.

"ಬೆಳಗಾಯಿತೇನೇ ಸರೂ, ಎಂಟು ಗಂಟೆಗೆ? ನಾಳೆ ಅತ್ತೆಮನೆಯಲ್ಲಿಯೂ ಹೀಗೆ ಮಲಗಿದರೆ ಕೆಲಸ ಯಾರೇ ಮಾಡಬೇಕು? ನಿಮ್ಮ ಅತ್ತೆ ಸುಮ್ಮನಿರು ತ್ತಾಳೆಯೆ?"

"ನಾನು ಕೆಲಸಾನ್ನೇ ಮಾಡೋಲ್ಲಾ. ಆ ಪದ್ದಕ್ಕನ ಮನೇ ಅಡುಗೆ ಯವನು ಇಲ್ಲವಾ? ಹಾಗೇ ನಾನೂ ಒಬ್ಬ ಅಡುಗೆಯವನ್ನ ಇಟ್ಟುಕೊಳ್ಳುತ್ತೀನಿ. ಅಲ್ಲಿಯೂ ಹೀಗೇ ಮಲಕ್ಕೋತೀನಿ" ಎಂದಳು ಸರೂ ಕಾಫಿ ಕುಡಿಯುತ್ತಾ.

"ಅದೇನೇನು ಮಾಡುತ್ತೀಯೋ ನೋಡೋಣ. ಸದ್ಯ ನಿನ್ನ ಆಸೆಗೆ ತಕ್ಕಂತ ಗಂಡ ಸಿಕ್ಕಿದರೆ ಸಾಕು." ಎಂದುಕೊಂಡು ಕೆಲಸಕ್ಕೆ ತೊಡಗಿದರು! ರಂಗಮ್ಮ.

ಸರೂ ಮೈಮುರಿಯುತ್ತಾ ರೂಮಿಗೆ ತೆರಳಿದಳು. ಅಂದು ಅವಳಿಗೆ ಸ್ಕೂಲಿನಲ್ಲಿ ಟೆಸ್ಟ್ ಇದ್ದುದರಿಂದ ಅವಳ ಓದು ಬಹಳ ಜೋರಿನಿಂದ ಸಾಗಿತ್ತು. ಅದರಿಂದ ಅವಳನ್ನು ರಂಗಮ್ಮ ಯಾವುದಕ್ಕಾಗಲೀ ಕೂಗುವುದು ಸಾಧ್ಯವೇ ಇರಲಿಲ್ಲ.

ಸಾಮಾನಿನ ಚೀಲವನ್ನು ಕೈಲಿ ಹಿಡಿದು, ನಾಗಪ್ಪನವರೊಡನೆ ಮಾತ ನಾಡುತ್ತಾ ಗೋವಿಂದರಾಯರು ಬಂದರು. ಮಾತುಕತೆಯಾಡುತ್ತಿರುವಾಗಲೇ ವೇಳೆ ಸಮೀಪಿಸುತ್ತಾ ಬಂದಿತು. ರಂಗಮ್ಮ ಒಳಗಿಂದಲೇ "ಗೋವಿಂದೂ, ಏಳಪ್ಪಾ ಊಟಕ್ಕೆ, ಎಲೆ ಹಾಕಿದ್ದೇನೆ." ಅಂದರು. ರಂಗಮ್ಮ ಆ ವೇಳೆಗೆ ಒಂದು ಸಣ್ಣ ಹಬ್ಬದ ಅಡುಗೆಯನ್ನೇ ಮಾಡಿದ್ದರು.

"ಇದೇನೂ ತಾಯಿ ಈಗಲೆ ನನಗೆ ಬೀಗರ ಔತಣವನ್ನೇ ಮಾಡಿಬಿಟ್ಟಿರಿ ಇನ್ನೂ ಮದುವೆಗೆ ಮೊದಲು?" ಎಂದರು ನಾಗಪ್ಪ ಹುಳಿಯನ್ನದ ತುತ್ತನ್ನು ಬಾಯಲ್ಲಿ ಹಾಕುತ್ತಾ.

"ಇದೆಲ್ಲಾ ಯಾವ ಮಹಾಸಂಪತ್ತು ನಾಗಪ್ಪನವರೇ? ಏನೋ ಶುಭ ಕಾರ್ಯಕ್ಕಾಗಿ ಹೊರಟಿದ್ದೀರಿ ಅಂತ ಒಂದು ಪಾಯಸದ ನೀರು ಮಾಡಿದೆ.

ನಿಧಾನವಾಗಿ ಊಟ ಮಾಡಿ." ಎಂದು ಉಪಚಾರ ಹೇಳುತ್ತಾ ಒಂದು ಹಿಡಿ ಜೋಂಡಾ ಬಡಿಸಿದರು.

"ನೀವು ಅಂದರೆ ಸಾಕ್ಷಾತ್ ಅನ್ನಪೂರ್ಣೆಯೇ ಸರಿ ತಾಯಿ. ಅದೇನು ಅಡುಗೆ! ಅಮೃತ! ಕೈಯೂ ಸಮೃದ್ಧ." ಎಂದು ನಾಗಪ್ಪನವರು ಮನದಣಿಯುವಂತೆ ಊಟ ಮಾಡಿದರು.

ಊಟ ಮಾಡಿದ ನಂತರ ತಾಂಬೂಲ ಸೇವನೆಯೂ ಆಯಿತು.

ಗೋವಿಂದರಾಯರು ಸಾದಾ ಪಂಚೆಯನ್ನೇ ಉಟ್ಟು, ಜರೀ ರುಮಾಲು ತಲೆಗೆ ಸುತ್ತಿದರು. ಅವರದ್ದೇ ಆಗಿದ್ದ ಒಂದೇ ಒಂದು 'ಟ್ವೀಡ್' ಕೋಟನ್ನು ಧರಿಸಿದರು. ಒಂದು ಬ್ಯಾಗಿಗೆ ಹಣ್ಣು, ಹೂವು, ವೀಳೆದೆಲೆ ಎಲ್ಲಾ ತುಂಬಿದ್ದಾಯ್ತು. ಇನ್ನೊಂದರಲ್ಲಿ ಅವರ ಬಟ್ಟೆಬರೆಗಳನ್ನೂ ತುಂಬಿದ್ದಾಯ್ತು. ಗಂಟೆ ಹತ್ತಾಯಿತು. ಗೋವಿಂದರಾಯರು ದೇವರಿಗೆ ನಮಸ್ಕರಿಸಿ ಬಂದರು. "ಹೋಗಿ ಬರುತ್ತೇನೆ ಅಕ್ಕಾ, ನಾಳೆ ಬೆಳಗ್ಗೆ ಬಂದುಬಿಡುತ್ತೇನೆ" ಎಂದರು.

"ಹಾಗೇ ಆಗಲೀಪಾ, ಹೋದ ಕೆಲಸ ಒಳ್ಳೆಯದಾಗಲಿ. ಸುಖವಾಗಿ ಹೋಗಿಬನ್ನಿ" ಎಂದರು ರಂಗಮ್ಮ ಬೀದಿಯ ಬಾಗಿಲಿಗೆ ಬಂದು. ಬಸ್ ನಿಲ್ದಾಣ ಹೆಚ್ಚಿಗೆ ದೂರವೇನೂ ಇಲ್ಲದ್ದರಿಂದ ನಡೆದುಕೊಂಡೇ ಹೊರಟರು.

"ಸ್ಕೂಲಿಗೆ ಹೊತ್ತಾಗಲಿಲ್ಲವೇನೇ ಸರೂ?" ಎಂದುಕೊಂಡು ರಂಗಮ್ಮ ಒಳಕ್ಕೆ ತೆರಳಿದರು.

ಗೋವಿಂದರಾಯರು ಮೈಸೂರು ತಲುಪಿದಾಗ ಗಂಟೆ ಎರಡಾಗಿತ್ತು. ಗುಂಡುರಾಮಯ್ಯನವರ ಮನೆ ಚಾಮುಂಡಿಪುರದಲ್ಲಿ ಇದ್ದುದರಿಂದ ಅಲ್ಲಿಗೆ ಟಾಂಗಾ ಮಾಡಿಕೊಂಡೇ ಹೋದರು. ಅವರ ಮನೆಯ ವಿಳಾಸ ನಾಗಪ್ಪನವರಿಗೆ ಗೊತ್ತಿದ್ದುದರಿಂದ ಮನೆ ಸಿಗುವುದು ಪ್ರಯಾಸವೇನೂ ಆಗಲಿಲ್ಲ.

ನಾಗಪ್ಪನವರು ಮನೆಯೊಳಗೆ ಕಾಲಿಟ್ಟಾಗ ಗುಂಡುರಾಮಯ್ಯ ಅದೇ ತಾನೇ ಊಟ ಮುಗಿಸಿ ತಾಂಬೂಲ ಮೆಲ್ಲುತ್ತಿದ್ದರು. ನಾಗಪ್ಪನವರನ್ನು ನೋಡುತ್ತಲೇ "ಏನು ನಾಗಪ್ಪನವರೇ, ಇಷ್ಟು ಅಪರೂಪ! ಯಾವಾಗ ದಯ

ಮಾಡಿಸಿಪ್ಪು?" ಅನುತ್ತಾ ಅಲ್ಲಿಯೇ ಇದ್ದ ಚಾಪೆ ಹಾಸಿದರು.

"ಬನ್ನಿ ಗೋವಿಂದರಾಯರೇ, ಒಳಗೆ ಬನ್ನಿ" ಎಂದು ಗೋವಿಂದರಾಯರೊಡನೆ ಬಂದು ಚಾಪೆಯ ಮೇಲೆ ಕೂತರು ನಾಗಪ್ಪ.

"ಏನು ಯಾವಾಗ ಹೊರಟಿದ್ದು? ಎಲ್ಲಿಂದ?" ಎಂದರು ಗುಂಡುರಾಮಯ್ಯ.

"ಬೆಂಗಳೂರಿಂದ ಬೆಳಿಗ್ಗೆ ಹತ್ತು ಗಂಟೆಗೆ ಹೊರಟೆವು. ಈಗ ಇಲ್ಲಿ ಬಂದೆವು." ಎಂದರು ನಾಗಪ್ಪ.

"ಏಳಿ ಹಾಗಾದರೆ, ಕೈಕಾಲು ತೊಳೆದುಕೊಳ್ಳಿ" ಎಂದು ಹೇಳಿ. "ಲೇ ಪುಟ್ಟೊ, ಇವರಿಬ್ಬರಿಗೂ ಎಲೆ ಹಾಕೇ" ಎಂದು ಕೂಗಿ ಹೇಳಿದರು.

"ಇಲ್ಲಾ ಸ್ವಾಮೀ, ನಾವು ಊಟ ಮುಗಿಸಿಕೊಂಡೇ ಹೊರಟೆವು. ಈಗೇನೂ ಅದರ ಅವಶ್ಯಕತೆ ಇಲ್ಲಾ. ಇವರು ನಿಮ್ಮ ಚಂದ್ರಶೇಖರಯ್ಯನವರ ಹಿರಿಯ ಮಕ್ಕಳು, ಗೋವಿಂದರಾಯರು. ಬೆಂಗಳೂರಿನಲ್ಲಿಯೇ ವಾಸ. ಅಲ್ಲಿಯೇ ಒಂದು ಅಂಗಡಿಯಲ್ಲಿ ಕಾರಕೂನರಾಗಿ ಕೆಲಸಕ್ಕೆ ಸೇರಿದ್ದಾರೆ. ಇವರ ಪೂರ್ವೋತ್ತರಗಳೆಲ್ಲಾ ನಿಮಗೆ ತಿಳಿದೇ ಇದೆ." ಎಂದರು ನಾಗಪ್ಪ.

"ನಿಮ್ಮ ಪರಿಚಯವಾದ್ದು ಬಹಳ ಸಂತೋಷ ಸ್ವಾಮಿ. ನಿಮ್ಮ ತಂದೆಯವರನ್ನು ನಾನು ಬಹಳ ದಿನಗಳಿಂದಲೂ ಬಲ್ಲೆ. ಅವರು ಇದ್ದಾಗ ಊರಿಗೇ ಒಂದು ಬಗೆಯ ಕಳೆಯಿತ್ತು. ಅವರು ಹೋಗೇ ಹೋದರು, ಈಗ ಆ ಊರೂ ಹಾಳು ಸುರಿಯುತ್ತಿದೆ ಸ್ವಾಮಿ. ಏನೋ ಯಾವ ಗಳಿಗೆ ಎಂತಹದೋ ಏನೋ, ಅಂಥವರಿಗೂ ಈ ಸ್ಥಿತಿ ಬಂತು. ಇವೆಲ್ಲಾ ಅವರವರ ಹಣೆಯಬರಹ ಅಷ್ಟೇ!" ಎಂದು ಲೋಕಾಭಿರಾಮವಾಗಿ ನಾಲ್ಕು ಮಾತುಗಳನ್ನಾಡಿದರು.

ಗೋವಿಂದರಾಯರು ತಾವು ಬಂದ ವಿಷಯವನ್ನು ಪ್ರಸ್ತಾಪಿಸುವಂತೆ ಕಣ್ಣುಸನ್ನೆಯಿಂದಲೇ ನಾಗಪ್ಪನವರಿಗೆ ತಿಳಿಸಿದರು. ಸ್ವಲ್ಪಹೊತ್ತು ಯಾರೂ ಮಾತನಾಡಲಿಲ್ಲ.

"ನೋಡಿ ಗುಂಡುರಾಮಯ್ಯನವರೇ, ಸುಮ್ಮನೇ ಕಾಲ ಯಾಕೆ ಕಳೆಯಬೇಕು? ನಾವು ಬಂದ ವಿಷಯ ತಿಳಿಸಿಬಿಡುತ್ತೇವೆ. ಈ ನಮ್ಮ ಗೋವಿಂದರಾಯರಿಗೆ ಮದುವೆಯಾಗತಕ್ಕ ಮಗಳೊಬ್ಬಳಿದ್ದಾಳೆ. ವರನ ಶೋಧನಕ್ಕಾಗಿ ನಾವು ಇಲ್ಲಿಗೆ ಬಂದಿದ್ದೇವೆ. ನಿಮ್ಮ ಹಿರಿಯ ಮಗ ಕೃಷ್ಣಮೂರ್ತಿಗೆ ನೋಡೋಣ ಅಂತ ಬಂದಿದ್ದೀವಿ." ಎಂದು ಪಿಠಿಕೆ ಹಾಕಿದರು.

ಮದುವೆಯ ವಿಷಯ ಬಂದೊಡನೆ ಗುಂಡುರಾಮಯ್ಯನವರ ಮುಖ

ಚರ್ಯೆ ಬದಲಾಯಿಸಿತು. ಕೆಲವು ಕಾಲ ಗಂಭೀರವಾಗಿ ಕೂತಿದ್ದು ಹೇಳಿದರು: "ನೋಡಿ ನಾಗಪ್ಪನವರೇ, ನಮ್ಮ ಹುಡುಗನಿಗಿನ್ನೂ ಹೆಚ್ಚು ವಯಸ್ಸೇ ಆಗಿಲ್ಲ. ಅದರಿಂದ ಈ ವರ್ಷ ಅವನಿಗೆ ಮದುವೆ ಮಾಡುವ ಯೋಚನೆಯನ್ನೇ ನಾವು ಇನ್ನೂ ಮಾಡಿಲ್ಲ." ಎಂದು ಹೇಳಿ ಅಡುಗೆಮನೆಯ ಕಡೆ ನೋಡಿದರು, ತಾವು ಹೇಳಿದದು ತಮ್ಮ ಪತ್ನಿಗೆ ಕೇಳಿಸಿತೋ ಇಲ್ಲವೋ ಎಂದು. ನಾಗಪ್ಪನವರು ಅವರ ಇಂಗಿತವನ್ನು ಅರಿತರು.

"ನಿಮ್ಮ ಕುಟುಂಬವೂ ಬರಲಿ, ಅವರನ್ನೂ ಕೇಳೋಣಾ, ಅದಕ್ಕೇನು? ಅವರ ಒಪ್ಪಿಗೆ ಪಡೆಯದೆ ಹೇಗೆ ಆಗುತ್ತೆ?" ಎಂದರು ನಾಗಪ್ಪ.

ಗುಂಡುರಾಮಯ್ಯ ಅಡುಗೆಮನೆಗೆ ಹೋಗಿ ನೋಡಿ ಬಂದು "ಊಟ ಮಾಡುತ್ತಾ ಇದ್ದಾಳೆ. ಇನ್ನೇನು ಆಯ್ತು." ಎಂದರು.

ಕಾಮಾಕ್ಷಮ್ಮ ಐದು ನಿಮಿಷದಲ್ಲಿ ಊಟ ಮುಗಿಸಿ ಬಂದರು.

"ಮನೆಯಲ್ಲಿ ಎಲ್ಲರೂ ಆರೋಗ್ಯವೇ ತಾಯೀ? ಹುಷಾರಾಗಿದ್ದೀರಾ?" ಎಂದರು ನಾಗಪ್ಪ.

"ದೇವರ ದಯದಿಂದ ಇಷ್ಟರಮಟ್ಟಿಗೆ ಇದ್ದೀವಪ್ಪಾ. ಊರಲ್ಲಿ ಎಲ್ಲರೂ ಚೆನ್ನಾಗಿದ್ದಾರೆಯೇ?"

"ನಿಂತೆ ಇದ್ದೀರಲ್ಲಾ, ಕೂಡಿ ತಾಯಿ. ಇವರೂ ನಿಮ್ಮವರೇನೆ. ನಿಮ್ಮ ಸಂಬಂಧ ಮಾಡಲು ಇಷ್ಟಪಟ್ಟು ನಿಮ್ಮ ಮನೆಗೆ ಬಂದಿದ್ದಾರೆ. ಏನೋ ನೀವು ದೊಡ್ಡಮನಸ್ಸು ಮಾಡಿದರೆ, ತಾಯಿ ಇಲ್ಲದ ಮಗೂನ್ನ ಕಾಪಾಡಿದ ಪುಣ್ಯ ಬರುತ್ತೆ."

"ಋಣಾನುಬಂಧ ಇದ್ದರೆ ಅದನ್ನು ತಪ್ಪಿಸಲು ಯಾರಿಗೆ ಸಾಧ್ಯ ಹೇಳಿ? ದೇವರ ದಯೆ ಇದ್ದರೆ ಆಗಲೇಳಿ, ಅದಕ್ಕೇನಂತೆ. ಆದರೆ ನಮ್ಮ ಮೂರ್ತಿ ಇನ್ನೂ ಮುಂದಕ್ಕೆ ಓದಬೇಕೂಂತ ಇದ್ದಾನೆ. ಅದರಿಂದ ಇಷ್ಟು ಬೇಗ ಮದುವೆ ಮಾಡೋದು ಬೇಡಾ ಅಂತ ನಮ್ಮ ಇಷ್ಟ. ಅವನೂ ಹಾಗೇ ಅಂತಿದ್ದ. ಓದು ಮುಗಿಯುವ ತನಕ ಮದುವೆ ಬೇಡಾ ಅಂತ." ಎಂದು ಕಾಮಾಕ್ಷಮ್ಮ ಕೊಂಕು ನುಡಿದಳು.

"ಮದುವೆಯಾದರೆ ಓದುವುದು ಬೇಡಾ ಅಂತ ಯಾರು ಅನ್ನುತ್ತಾರೆ ತಾಯೀ? ಹುಡುಗಿ ಇನ್ನೂ ಚಿಕ್ಕವಳು, ಈಗ ತಾನೇ ಹನ್ನೆರಡು ತುಂಬಿವೆ. ಮದುವೆ ಶಾಸ್ತ್ರ ಒಂದು ನಡೆದು ಹೋಗಲಿ, ನಿಮ್ಮ ಹುಡುಗನ ಓದು ಮುಗಿ

ಯುವ ವರೆಗೆ, ಹುಡುಗಿಯೂ ತನ್ನ ವ್ಯಾಸಂಗವನ್ನು ಮುಗಿಸಿರುತ್ತಾಳೆ. ಆ ಮೇಲೆ ಮನೆ ತುಂಬಿಸಿಕೊಂಡರಾಯಿತು. ಮದುವೆಯಿಂದ ಓದಿಗೇನೂ ಅಡ ಚಣೆಯಾಗುವುದಿಲ್ಲಾ ತಾಯೀ."

"ನಾವು ಸ್ವಲ್ಪ ಹಿಂದಿನ ಕಾಲದವರು. ನಮಗೆ ಜಾತಕ-ಗೀತಕ ಇದ ರಲ್ಲಿ ನಂಬುಕೆ. ಅದರಿಂದ ಜಾತಕ ನೋಡದೇ ಯಾವುದೂ ಹೇಗೆ ಹೇಳುವುದು?"

"ನಿಮ್ಮ ಇಷ್ಟ ಬಂದ ಕಡೆ ನೋಡಿಸಿ. ನಿಮ್ಮ ಮನಸ್ಸಿಗೆ ಒಪ್ಪಿಗೆಯಾದರೆ ತಿಳಿಸಿ. ಅದಕ್ಕೇನೂ ಅಭ್ಯಂತರವಿಲ್ಲ. ತೆಗೆದುಕೊಳ್ಳಿ ಇದು ಹುಡುಗಿಯ ಜಾತಕ." ಎಂದು ಒಂದು ಕುಂಡಲಿಯನ್ನು ಬರೆದ ಕಾಗದವನ್ನು ಕಾಮಾಕ್ಷಮ್ಮ ನವರ ಕೈಗಿತ್ತರು.

"ಹಾಗೆಯೇ ನಿಮ್ಮ ಹುಡುಗನದ್ದೂ ಕೊಟ್ಟಿದ್ದರೆ ಆಗಿತ್ತು." ಎಂದು ತಡವರಿಸಿದರು.

"ನಮ್ಮ ಮೂರ್ತಿಯ ಜಾತಕ ನಾವು ಬರೆಸಿಲ್ಲಾ. ಅವನ ನಕ್ಷತ್ರ, ಹುಟ್ಟಿದ ತಾರೀಖು ಬೇಕಾದರೆ ತಿಳಿದುಕೊಂಡು ಅದರ ಮೂಲಕವೇ ಜಾತಕ ಬರೆಸಬಹುದು." ಎಂದು ನಕ್ಷತ್ರ ತಿಥಿ ಎಲ್ಲಾ ಹೇಳಿದರು ಕಾಮಾಕ್ಷಮ್ಮ. ನಾಗಪ್ಪ ಅವನ್ನು ಒಂದು ಕಾಗದದಲ್ಲಿ ಬರೆದುಕೊಂಡರು.

ಕಾಮಾಕ್ಷಮ್ಮ ಅನುಮಾನಿಸುತ್ತಿರುವುದನ್ನು ನೋಡಿ ನಾಗಪ್ಪ "ನಿಮ್ಮ ಮನಸ್ಸಿನಲ್ಲಿ ಏನಿದೆಯೋ ಅದನ್ನು ಸ್ಪಷ್ಟವಾಗಿ ಹೇಳಿಬಿಡೀಮ್ಮ. ನೀವು ಹುಡುಗಿ ನೋಡಬೇಕೂ ಅಂತ ಅಂದರೆ ನಾವೇ ಬೇಕಾದರೂ ಕರಕೊಂಡು ಬರುತ್ತೇವೆ. ಇಲ್ಲವಾದರೆ ನೀವುಗಳೇ ಬಂದರೂ ಸರಿ. ನೀವು ಹೇಗೆ ಹೇಳು ತ್ತೀರೋ ಹಾಗೆ ನಡೆಯಲು ನಾವು ಸಿದ್ಧ." ಎಂದರು.

"ನಾವೇನೂ ನೋಡಬೇಕಾದ್ದುದಿಲ್ಲ. ಮುಖ್ಯ ಹುಡುಗ ಒಪ್ಪಿದರೆ ಆಯಿತು ಅಷ್ಟೇ." ಎಂದು ಹೇಳಿ ತಮ್ಮ ಮೇಲಿನ ಜವಾಬ್ದಾರಿಯನ್ನು ಕಳೆದು ಕೊಂಡರು. ಗುಂಡುರಾಮಯ್ಯನವರು ಯಾವ ಮಾತಿಗೂ ಬರದೆ, ಸುಮ್ಮನೇ ಕೇಳುತ್ತಾ ಕೂತಿದ್ದರು.

"ಹೇಗಿದ್ದರೂ ಕೃಷ್ಣಮೂರ್ತಿ ಬೆಂಗಳೂರಿನಲ್ಲಿಯೇ ಇದ್ದಾನಲ್ಲವೆ? ಒಂದು ದಿನ ಕರೆದುಕೊಂಡು ಬಂದು ಹುಡುಗಿಯನ್ನು ತೋರಿಸಿದರಾಯಿತು. ಅವನು ಮೆಚ್ಚಿದರೆ ಯಾವುದೂ ಮುಂದೆ ಮಾತಾಡೋಣ." ಎಂದು ನಾಗಪ್ಪ ಎದ್ದರು.

"ನೋಡೀಪ್ಪ ದೊಡ್ಡ ಮನಸ್ಸು ಮಾಡಿ. ಹೆಣ್ಣು ಹೆತ್ತವರ ಕಷ್ಟ ನಿಮಗೆ ತಿಳಿದೇ ಇದೆ. ಹೇಳಬೇಕಾದುದೇನೂ ಇಲ್ಲ." ಎಂದು ಗೋವಿಂದ ರಾಯರು ವಿನಯವಾಗಿ ಕೇಳಿಕೊಂಡರು.

"ನಮ್ಮದು ಏನು ತಾನೇ ನಡೆಯುತ್ತದೆ? ಎಲ್ಲಾ ಅವನ ದಯೆ ಇದ್ದರೆ ಸುಖವಾಗಿ ಸಾಗುತ್ತದೆ. ನೀವು ಹೇಳಿದ ಹಾಗೆ ನಮ್ಮ ಮೂರ್ತಿನ್ನ ಕೇಳಿ ಯಾವುದನ್ನೂ ತಿಳಿಸುತ್ತೇನೆ." ಎಂದರು ಕಾಮಾಕ್ಷಮ್ಮ.

ನಾಗಪ್ಪನವರು ಎದ್ದುದನ್ನು ನೋಡಿ "ನೀವ್ಯಾಕೆ ಹೊರಡುತ್ತೀರಾ? ಊಟವನ್ನಂತೂ ಮಾಡಲಿಲ್ಲ. ಒಂದಿಷ್ಟು ಕಾಫಿಯನ್ನಾದರೂ ಕುಡಿಯಬಾರದು ಎಂತಲೋ ನಿಮ್ಮ ಅಭಿಪ್ರಾಯ?" ಎಂದು ಬೇಗನೆ ಎದ್ದು ಕಾಫಿಯ ತಯಾರಿ ಗಾಗಿ ಅಡುಗೆಮನೆ ಹೊಕ್ಕರು. ಒಳಗೆ ಮಲಗಿದ್ದ ಪ್ರಭಾ ಇವರ ಮಾತಿನ ಗಲಾಟೆಯಿಂದ ಎಚ್ಚತ್ತು ಹೊರಬಂದಳು. "ಬಾರೆ ಇಲ್ಲೀ, ಪಂಬೀ." ಎಂದು ಕರೆದು ತೊಡೆಯ ಮೇಲೆ ಕೂರಿಸಿಕೊಂಡರು, ಗುಂಡುರಾಮಯ್ಯ.

"ಏನು ಮೊಮ್ಮಗಳೋ?" ನಾಗಪ್ಪ ಕೇಳಿದರು.

"ಹೂಂ ನನ್ನ ಮಗಳ ಮಗಳು. ಈಗ ಹೆತ್ತಿದ್ದಾಳೆ ಗಂಡುಮಗೂನ್ನಾ, ಇವರ ಹಿಂದೆ" ಎಂದರು ಪ್ರಭಾನ್ನ ಮುದ್ದಾಡುತ್ತಾ.

ಕಾಮಾಕ್ಷಮ್ಮ ಕಾಫಿ ತಂದು ಎಲ್ಲರಿಗೂ ಕೊಟ್ಟರು. ಕಾಫಿ ಕುಡಿದ ನಂತರ ಹಣ್ಣು ಹೂವುಗಳನ್ನು ಅಲ್ಲಿಯೇ ಚಾಪೆಯ ಮೇಲೆ ಇಟ್ಟು ಗೋವಿಂದ ರಾಯರು ಎದ್ದರು.

"ಇದೇನು ಹೊರಟೇಬಿಟ್ಟಿರಾ? ರಾತ್ರಿ ಇದ್ದು ನಾಳೆ ಹೊರಡಬಹು ದಾಗಿತ್ತು." ಅಂದರು ಕಾಮಾಕ್ಷಮ್ಮ.

"ನೆಂಟಸ್ತನ ಅಂತ ಮಾಡಿದ ಮೇಲೆ ನಿಮ್ಮನೇಗೆ ಬಂದುಊಟ ಮಾಡ ದಿದ್ದರಾಗುತ್ತದೆಯೆ? ಇನ್ನೊಂದು ಸಲ ಬಂದಾಗ ನೇರವಾಗಿ ನಿಮ್ಮಲ್ಲಿಯೇ ಬರುತ್ತೇನೆ. ನಾನು ನಾಳೆ ಕೆಲಸದ ಮೇಲಿರಬೇಕು. ಆದರಿಂದ ಈ ದಿನ ಖಂಡಿತ ಇಲ್ಲಿಂದ ಹೊರಡಲೇಬೇಕು. ಬರ್‍ತೀನಿ ಸ್ವಾಮಿ, ವಿಶ್ವಾಸವಿರಲಿ." ಎಂದು ಗುಂಡುರಾಮಯ್ಯನವರಿಗೆ ವಂದನೆಮಾಡಿ, ಹೊರಟರು ಗೋವಿಂದರಾಯರು. ನಾಗಪ್ಪನವರೂ ಇನ್ನೊಂದು ಸಲ ವಿಷಯವನ್ನು ಒತ್ತಿಹೇಳಿ ಮನೆಯ ಬಾಗಿಲು ದಾಟಿದರು.

"ಹೋಗಿಬರುತ್ತೀರಾ? ಒಳ್ಳೆಯದು" ಎಂದು ಗುಂಡುರಾಮಯ್ಯ ಬಾಗಿ

ಲಲ್ಲೆ ನಿಂತು ಇಬ್ಬರಿಗೂ ಕೈ ಮುಗಿದರು. ಕಾಮಾಕ್ಷಮ್ಮ ಒಳಬಾಗಿಲಲ್ಲೇ ನಿಂತು ಅವರು ಹೋಗುವುದನ್ನೆ ನೋಡುತ್ತಾ ನಿಂತಿದ್ದರು.

ನಾಗಪ್ಪ ನೇರವಾಗಿ, ಗೋವಿಂದರಾಯರನ್ನು ತಮ್ಮ ಅಕ್ಕನ ಮನೆಗೆ ಕರೆದೊಯ್ದರು. ರಾತ್ರಿಯ ಊಟ ಅಲ್ಲಿಯೇ ಆಯಿತು. ರಾತ್ರಿ ಹತ್ತು ಗಂಟೆಯ ರೈಲಿಗೆ ಹೊರಟರು. ಗಾಡಿಯೊಳಗೆ ಕೂತ ಮೇಲೆ ಗೋವಿಂದರಾಯರು ಮಾತಿಗಾರಂಭಿಸಿದರು:

"ಅಲ್ಲಾ ನಾಗಪ್ಪನವರೇ, ನೋಡೋದರಲ್ಲಿ ಎಲ್ಲಕ್ಕೂ ಆಕೆಯ ಮಾತೇ ಮುಖ್ಯ ಎಂದು ಕಾಣುತ್ತೆ. ಪಾಪ ಆತ ಬಹಳ ಸಾಧುಪ್ರಾಣಿಯ ಹಾಗೆ ಕಾಣು ತ್ತಾನೆ. ಈಗ ಇವರು ನಮ್ಮ ಸಂಬಂಧಕ್ಕೆ ಒಪ್ಪಿದರೋ ಇಲ್ಲವೋ ಗೊತ್ತಾಗ ಲಿಲ್ಲವಲ್ಲಾ?"

"ಮನೆಯ ಯಜಮಾನ ಅಂತ ಹೆಸರಿಗೆ ಗುಂಡುರಾಮಯ್ಯ ಇದ್ದರೂ, ಮನೆಯ ಪ್ರತಿಯೊಂದು ಆಗು-ಹೋಗುಗಳೂ ಆಕೆಯ ಅನುಮತಿ ಇಲ್ಲದೆ ನಡೆ ಯುವುದಿಲ್ಲ. ಹಿರಿಯ ಮಗನಿಂದ ಹಿಡಿದು ಮನೆಯ ಕೆಲಸದವಳ ವರೆಗೂ ಆಕೆಯ ಮಾತನ್ನು ಮೀರುವ ಧೈರ್ಯ ಯಾರಿಗಿದೆ?ಈಗ ಆಕೆಯ ಮಾತಿನ ಸರಣಿ ಯನ್ನು ನೋಡಿದರೆ ವರದಕ್ಷಿಣೆ ತೆಗೆದುಕೊಳ್ಳುವ ಆಸೆ ಇದೆ ಎಂದು ತೋರುತ್ತೆ. ಯಾವುದೂ ಇನ್ನು ಹುಡುಗ ಒಪ್ಪಿದ ಮೇಲೆ ತಾನೆ?"

ಹಾಗೆಯೇ ಮಾತಾಡುತ್ತಿದ್ದಂತೆಯೇ ಇಬ್ಬರಿಗೂ ನಿದ್ರೆ ಬಂದಿತು. ಮಧ್ಯೆ ಮಧ್ಯೆ ಸ್ಟೇಷನ್‌ಗಳಲ್ಲಿ ರೈಲು ನಿಂತಾಗ ಗೋವಿಂದರಾಯರಿಗೆ ಎಚ್ಚರವಾಗು ತ್ತಲೇ ಇತ್ತು. ನಾಗಪ್ಪನವರಿಗೆ ನಿರಾಲೋಚನೆಯಾಗಿದ್ದುದರಿಂದ ಅವರು ಸುಖವಾಗಿ ಪವಡಿಸಿಯೇ ಇದ್ದರು. ರೈಲು ಬೆಂಗಳೂರನ್ನು ತಲಪಿದಾಗ ಗೋವಿಂದರಾಯರೇ ಅವರನ್ನು ಎಬ್ಬಿಸಬೇಕಾಯಿತು.

ಗಾಡಿಯಿಂದಿಳಿದು· ಇಬ್ಬರೂ ಸ್ಟೇಷನ್‌ದಿಂದ ಹೊರಗೆ ಬಂದರು. ಗೋವಿಂದರಾಯರು "ಇನ್ನು ಮುಂದಿನ ಏರ್ಪಾಡು ಯಾವಾಗ ಮಾಡುತ್ತೀರಿ ನಾಗಪ್ಪನವರೆ?" ಎಂದರು.

"ಯಾವುದಕ್ಕೂ ನಾನು ಈ ದಿನ ಸಾಯಂಕಾಲ ನಿಮ್ಮ ಮನೆಗೆ ಬಂದು ತಿಳಿಸುತ್ತೇನೆ. ಈಗಾಗಲೇ ಗಂಟೆ ಏಳಾಗುತ್ತಾ ಬಂತು. ಇನ್ನು ಮನೆಗೆ ಹೋಗುವವೇಳೆಗೆ ಮಿಲ್ ತೆಗೆಯುವ ಸಮಯವೇ ಆಗುತ್ತೆ. ಆದುದರಿಂದ ನಾನು ಹೀಗೆ ಸೀದಾ ಮಿಲ್‌ಗೆ ಹೋಗುತ್ತೇನೆ. ಅಲ್ಲಿನದೆಲ್ಲವನ್ನೂ ನಿಮ್ಮ ಅಕ್ಕಾವರಿಗೆ ತಿಳಿಸಿ. ಪಾಪ ಬಹಳ ಆತಂಕದಲ್ಲಿರುತ್ತಾರೆ. ಹೂಂ ಇನ್ನು ನಾನು ಹೊರಡಲೇ?" ಎಂದು ಗೋವಿಂದರಾಯರ ಮುಖ ನೋಡಿದರು. 'ಒಳ್ಳೇದು' ಎಂದು ಗೋವಿಂದರಾಯರು ತಲೆಯಾಡಿಸಿದರು. ನಾಗಪ್ಪ ಕೈಲಿದ್ದ ಬೆತ್ತವನ್ನು ಬೀಸುತ್ತಾ ವೇಗವಾಗಿ ನಡೆದು ಹೋದರು.

ಸಿಟೀ ಬಸ್ ಬಿಡುವುದಕ್ಕೆ ಇನ್ನೂ ಒಂದು ಗಂಟೆಯ ಕಾಲ ಕಾಯ ಬೇಕಾಗಿತ್ತು. ರಾತ್ರಿ ಎಲ್ಲಾ ನಿದ್ರೆ ಕೂಡಾ ಸರಿಯಾಗಿ ಬಂದಿರಲಿಲ್ಲ. ಜೊತೆಗೆ ಪ್ರಯಾಣದ ಆಯಾಸ ಬೇರೆ. ಆದರಿಂದ ಅಷ್ಟು ಹೊತ್ತು ಯಾರು ಕಾಯು ವರು ಎಂದುಕೊಂಡು, ಜಟಕಾ ಮಾಡಿಕೊಂಡೇ ಮನೆಗೆ ತೆರಳಿದರು ಗೋವಿಂದರಾಯರು.

ರಂಗಮ್ಮ ಅದೇ ತಾನೇ ಮಡಿಯುಟ್ಟು ದೇವರಿಗೆ ದೀಪ ಹತ್ತಿಸು ತ್ತಿದ್ದರು, ಗೋವಿಂದರಾಯರು ಮನೆಗೆ ಬಂದಾಗ. ಆತುರಾತುರವಾಗಿ ಬೇಗ ದೀಪ ಹತ್ತಿಸಿ, ನಮಸ್ಕಾರ ಮಾಡಿ ಒಂದೇ ನಿಮಿಷಕ್ಕೆ ಬಂದರು ರಂಗಮ್ಮ.

"ಏನಾಯ್ತು ಗೋವಿಂದೂ, ಹೋದ ಕೆಲಸ? ಅವರು ಏನಂದರು? ನಮ್ಮ ಮನೆ ಸಂಬಂಧ ಅವರಿಗೆ ಇಷ್ಟವಾಯಿತೇ? ಅವರ ಗುಣ ಹೇಗೆ? ಸ್ವಭಾವ ಎಂತಹದು?" ಎಂದು ಒಂದೇ ಉಸುರಿಗೆ ಪ್ರಶ್ನೆಗಳ ಮಳೆಯನ್ನೇ ಸುರಿಸಿಬಿಟ್ಟರು.

"ಎಲ್ಲಾನ್ನೂ ಒಂದೇ ಸಲ ಹೇಗೆ ಹೇಳೋದಕ್ಕೆ ಆಗುತ್ತೆ ಅಕ್ಕಾ? ಸ್ವಲ್ಪ ನಿಧಾನಿಸು. ಅವರೇನೋ ಮುಕ್ಕಾಲು ಪಾಲು ಒಪ್ಪಿಕೊಂಡಿದ್ದಾರೆಂದು ಕಾಣುತ್ತೆ. ಆದರೆ ಹುಡುಗ, ಹುಡಿಗೀನ್ನ ನೋಡಬೇಕು ಅಂತ ಅಂದಿದ್ದಾರೆ. ಕೃಷ್ಣಮೂರ್ತಿ ಈ ಊರಲ್ಲಿಯೇ ಓದುತ್ತಿದ್ದಾನೆ ಎಂ.ಎಸ್‌ಸಿಗೆ. ಇನ್ನೂ ಮುಂದೆ ಓದಬೇಕೂ ಅಂತ ಆಸೆ ಇದೆಯಂತೆ." ಎಂದು ವಿವರವಾಗಿ ಎಲ್ಲಾ ಹೇಳಿದರು.

"ನೀರು ಕಾದಿದೆಯೇ ಅಕ್ಕಾ? ಸ್ನಾನ ಮಾಡಬೇಕು. ಹಾಳಾದ್ದು, ರೈಲಿನಲ್ಲಿ ಆ ತಿಗಣೆ ಕಾಟದಿಂದ ಒಂದು ಸ್ವಲ್ಪವೂ ನಿದ್ದೆಯಾಗಲಿಲ್ಲ, ಮೈ ಎಲ್ಲಾ ನೋವೆ."

"ನೀರು ಕಾಯಿಸೇ ಏನು ಬಂತು? ಆಗಲೇ ಒಲೆ ಉರಿ ಹಾಕಿದ್ದೆ. ಈ ನಿನ್ನ ಮೈಸೂರು ವಿಷಯ ಕೇಳೋದರಲ್ಲಿ, ಹಾಲು ಒಲೆಯ ಮೇಲಿಟ್ಟಿದ್ದೆ, ಏನಾಯ್ತೋ ಏನೋ" ಎಂದು ರಂಗಮ್ಮ ಒಳಕ್ಕೆ ಹೋದರು.

ಗೋವಿಂದರಾಯರು ಸ್ನಾನಕ್ಕಾಗಿ ಬಚ್ಚಲ ಮನೆಗೆ ತೆರಳಿದರು.

'ಸಾಕಪ್ಪಾ ಸಾಕು, ಈ ಹುಡುಗರನ್ನ ಕೇಳೋದೂ ಸಾಕು, ಅವರನ್ನು ಒಪ್ಪಿಸೋದೂ ಸಾಕು' ಎಂದುಕೊಂಡು ನಾಗಪ್ಪ ಸುಸ್ತಾಗಿ ಬಂದು ಕೂತರು. ಗೋವಿಂದರಾಯರು ಆಗ ತಾನೇ ಉಪಹಾರ ತೆಗೆದುಕೊಳ್ಳಲು ತೊಡಗಿದ್ದರು. ನಾಗಪ್ಪನವರ ಧ್ವನಿ ಕೇಳಿದ ಕೂಡಲೇ ಕೈಲಿ ತಿಂಡಿಯ ತಟ್ಟೆಯನ್ನು ಹಿಡಿದು ಹೊರಗೇ ಬಂದರು.

"ಏನಾಯ್ತು ಸ್ವಾಮೀ, ನಿಮಗೆ ಅಷ್ಟು ಬೇಸರವಾಗುವಹಾಗೆ ಆಗಿದ್ದು? ಯಾವ ಹುಡುಗ, ಯಾರನ್ನು ಒಪ್ಪಿಸಬೇಕು? ನಿಮ್ಮ ಭಾಷೇನೇ ತಿಳಿಯೋದಿಲ್ಲ ವಲ್ಲಪ್ಪಾ!"

"ಪಾಪ, ಪಾಪ, ನಿಮಗೆ ಹೇಗೆ ತಿಳೀಬೇಕು ನೋಡಿ, ಮದುವೆ ಮಾಡಿಸೋ ಕಷ್ಟ! ಮಾತಾಡಿ ಆಡಿ ನನಗೆ ಗಂಟಲು ಒಣಗಿ ಹೋಗಿದೆ. ಮೊದಲು ಒಂದು ಲೋಟ ನೀರು ಕೊಟ್ಟು ನನ್ನ ಬದುಕಿಸಿ ಸ್ವಾಮಿ. ಆಮೇಲೆ ಎಲ್ಲಾ ಕೇಳುವಿರಂತೆ."

ನಾಗಪ್ಪ ಹೆಗಲಮೇಲಿದ್ದ ಉತ್ತರೀಯದಿಂದ ಗಾಳಿ ಹಾಕಿಕೊಳ್ಳಲಾರಂಭಿಸಿದರು. ಅವರು ನಿಜವಾಗಿಯೂ ಅಷ್ಟು ಸುಸ್ತಾಗಿ ಬಂದಿರುವಾಗ, ತಾವು ಅವರನ್ನು ತಮಾಷೆ ಮಾಡಿದುದಕ್ಕಾಗಿ ಗೋವಿಂದರಾಯರಿಗೆ ಕೆಡುಕೆನಿಸಿತು. ಕೂಡಲೇ ಹೋಗಿ ನೀರು ತಂದು ಕೈಗಿತ್ತರು. ಒಂದು ಲೋಟಾ ನೀರನ್ನು ಒಂದೇ ಗುಟುಕಿಗೆ ಕುಡಿದು 'ಉಸ್ಸಪ್ಪಾ!' ಎಂದು ;ಗೋಡೆಗೊರಗಿ ಕೂತರು ನಾಗಪ್ಪ.

ರಂಗಮ್ಮ ಕಾಫಿ ತಿಂಡಿಗಳನ್ನು ತಂದು ಅವರ ಮುಂದಿಟ್ಟರು.

"ಇದೇನು ತಾಯಿ, ಬಂದು ಬಂದಾಗಲೆಲ್ಲಾ ಈ ಉಪಚಾರ? ಈಗ

ಹದಿನೈದು ದಿನದಿಂದ ನನಗೆ ನಿಮ್ಮ ಕೈಯ ತಿಂಡಿ ತಿಂದೂ ತಿಂದೂ, ಅಜೀರ್ಣ ವಾಗಿ ಬಿಟ್ಟಿದೆ. ಇನ್ನು ಮೇಲೆ ಹೀಗೆ ದಿನಾ ಕೊಡಲು ಶುರು ಮಾಡಿದರೆ ನಾನು ಇಲ್ಲಿಗೆ ಬರುವುದನ್ನೇ ನಿಲ್ಲಿಸಬೇಕಾಗುತ್ತೆ ನೋಡಿ. ಆಮೇಲೆ ನನ್ನ ನಿಷ್ಠೂರ ಮಾಡಬೇಡಿ." ಎನ್ನುತಲೇ ತಟ್ಟೆಗೆ ಕೈ ಹಾಕಿದರು.

"ನೀವು ಹೀಗೆಲ್ಲಾ ಅಂದರೆ ನನಗೆ ನಿಜವಾಗಿಯೂ ಸಿಟ್ಟು ಬರುತ್ತೆ ನೋಡಿ. ನಾನು ನಿಮಗಿಂತ ಒಂದು ವರ್ಷ ದೊಡ್ಡವಳಿರಬಹುದು. ನಾನು ನಿಮ್ಮ ಅಕ್ಕ, ಅದರಿಂದ ನನಗೆ ನೀವು ಪ್ರತಿಯಾಡಬಾರದು ತಿಳಿಯಿತೆ? ಪ್ರೀತಿ ಯಿಂದ ಅಕ್ಕ ಕೊಟ್ಟದ್ದನ್ನು ತಿನ್ನುವುದಿಲ್ಲವೇ?"

"ತಪ್ಪಾಯ್ತು ತಾಯೀ, ತಪ್ಪಾಯ್ತು. ನಿಮ್ಮ ಮಾತಿಗೆ ಪ್ರತಿಹೇಳಲು ಯಾರಿಗೆ ತಾನೇ ಸಾಧ್ಯ ತಾಯೀ? ಸಾಕ್ಷಾತ್ ಅನ್ನಪೂರ್ಣಾದೇವಿಯ ವರದ ಹಸ್ತವೇ ನೀವಾಗಿರುವಾಗ ಇನ್ನು ನಿಮ್ಮನ್ನು ಮಾತಿನಲ್ಲಿ ಗೆಲ್ಲಲು ಯಾರಿಗೆ ಸಾಧ್ಯ?"

"ಸರಿ, ಮಾತೆತ್ತಿದರೆ, ನನ್ನ ಹೊಗಳುವುದು ಬಿಟ್ಟು ಬೇರೇನೂ ಗೊತ್ತಿಲ್ಲ ನಿಮಗೆ. ಅದಿರಲಿ, ಈಗ ನೀವು ಹೋದ ಕೆಲಸವೇನಾಯ್ತು ಮೊದಲು ಹೇಳಿ?"

"ನೋಡೀ ತಾಯೀ, ಈ ಬೆಳಗಿನಿಂದ ಅವನನ್ನು ಹುಡುಕೋದರಲ್ಲೇ ಕಾಲಕಳೆದಿದ್ದೀನಿ. ಅವನು ಹಾಸ್ಟೆಲ್‌ನಲ್ಲಿದ್ದಾನೆಯೇ ಅಥವಾ ಯಾರದಾದರೂ ಮನೆಯಲ್ಲಿದ್ದಾನೆಯೇ ಎಂಬುದನ್ನು ಮೈಸೂರಿನಲ್ಲಿ ಕೇಳಿ ತಿಳಿದುಕೊಳ್ಳದೆ ಪೆದ್ದು ಕೆಲಸ ಮಾಡಿದೆ. ಈ ಬೆಳಿಗ್ಗೆ ಎಲ್ಲಾ ಹಾಸ್ಟೆಲ್‌ಗಳನ್ನೂ ಹುಡುಕಿದ್ದಾಯ್ತು. ಅಲ್ಲಿ ಯಾರೂ ಜಿ. ಕೃಷ್ಣಮೂರ್ತಿ ಅಂತ ಇರಲಿಲ್ಲ. ಈ ಬೆಂಗಳೂರಲ್ಲಿ ಲೆಕ್ಕ ವಿಲ್ಲದಷ್ಟು ಕಾಲೇಜುಗಳಿವೆ. ಯಾವುದೂ ಅಂತ ಹುಡುಕೋದು? ಲಾ, ಮೆಡಿ ಕಲ್, ಇಂಜನಿಯರಿಂಗ್ ಇವು ಮೂರು ಕಾಲೇಜು ಬಿಟ್ಟು ಇನ್ನು ಬಾಕಿ ಕಾಲೇಜುಗಳಲ್ಲಿ ಹುಡುಕೋದು ಅಂತ. ಆ ಹುಡುಗನ್ನ ನಾನೂ ನೋಡಿಲ್ಲ. ಮತ್ತೆ ಅವನ್ನ ಗುರಿತಿಸುವುದು ಹೇಗೆ? ಕಾಲೇಜ್ ನಡೆಯುತ್ತಿರುವಾಗಲೇ ಹೋಗಿ ಕೇಳೋಣಾ ಅಂದರೆ, ಅಲ್ಲಿ ಯಾರನ್ನು ಕೇಳುವುದು? ಹೀಗೆಲ್ಲಾ ಯೋಚನೆ ಮಾಡಿ ಕಡೆಗೆ ಮಧ್ಯಾಹ್ನ ಹೊರಟೆ. ಅಲ್ಲಿಯೇ ಮುಂದುಗಡೆ ಸುಮ್ಮನೆ ಸುತ್ತಾಡುತ್ತಾ ನಿಂತಿದ್ದೆ. ಹೊರಗಡೆ ನಿಂತಿದ್ದ ಜವಾನ ನನ್ನನ್ನು ನೋಡಿ "ಯಾರು ಬೇಕು ಸ್ವಾಮಿ ನಿಮಗೆ? ಹೀಗೇಕೆ ಸುತ್ತಾಡುತ್ತಿದ್ದೀರಾ?" ಅಂದ. "ನಾನು ಒಬ್ಬ ಹುಡುಗನ್ನ ನೋಡಬೇಕು. ಬೇಕಾದರೆ ಇಲ್ಲಿ ಯಾರನ್ನ ಕೇಳ

ಬೇಕು?" ಅಂತ ಅವನನ್ನೇ ಕೇಳಿದೆ. "ಅದಕ್ಕೇನೂ ಸ್ವಾಮೀ, ಒಂದು ಚೀಟಿ ಯಲ್ಲಿ ಹೆಸರು ಬರೆದು ಕಳಿಸಿದರೆ, ಅವರೇ ಬರುತ್ತಾರೆ. ಅದಕ್ಕೇನು ಕಷ್ಟಾ" ಎಂದ. ಆ ಜವಾನನಿಗೆ ತಿಳಿಯುವಷ್ಟು ನನ್ನ ಈ ಮಂದ ಬುದ್ಧಿಗೆ ತಿಳಿಯಲಿಲ್ಲ ವಲ್ಲಾ ಅಂದುಕೊಂಡೆ. ಕೂಡಲೇ 'ಜಿ. ಕೃಷ್ಣಮೂರ್ತಿ BSc. ಬೇಕಾಗಿ ದ್ದಾರೆ.' ಎಂದು ಬರೆದು ತೆಗೆದುಕೊಂಡು ಹೋಗಿ ಅಲ್ಲಿಯೇ ಒಂದು ಕ್ಲಾಸ್‌ಗೆ ಆ ಜವಾನನ ಕೈಲೇ ಕೊಟ್ಟುಕಳಿಸಿದೆ. ಆದರೆ ಆ ವಿಭಾಗವು ಇಂಟರ್‌ಮೀಡಿ ಯೇಟ್ ತರಗತಿ ಎಂದು ತಿಳಿಯಬಂತು. BSc. ಎಂದು ಹೇಳಿದ ಮೇಲೆ, ಅವನು ತನಗೆ ಗೊತ್ತಿದ್ದುದರಿಂದ ಸರಿಯಾದ ಭಾಗಕ್ಕೆ ತೆಗೆದುಕೊಂಡು ಹೋದ. ಅಲ್ಲಿಯೂ ಎರಡು ಮೂರು ರೂಮುಗಳ ಓಡಾಟವಾದ ಮೇಲೆ ಈ ನಮ್ಮ ಹುಡುಗ ಕೃಷ್ಣಮೂರ್ತಿ ಒಂದು ಸಲಕ್ಕೆ ಹೊರಬಂದ. ನಾನು ಅಲ್ಲಿಯೇ ಆವರಣದಲ್ಲಿ ನಿಂತಿದ್ದೆ. ಜವಾನ ಬಂದು ಅವನನ್ನು ಇಲ್ಲಿಗೆ ಕರೆತಂದ. ಹುಡುಗ ಸಂಕೋಚದ ಸ್ವಭಾವದವನು ಎಂದು ಕಾಣುತ್ತೆ. ನನ್ನನ್ನು ನೋಡಿ ಏನೂ ಮಾತನಾಡದೆ ಸುಮ್ಮನೇ ನಿಂತುಬಿಟ್ಟ. ನಾನೇ ಮಾತಿಗೆ ಶುರುಮಾಡಿದೆ: "ನೀನೇ ಏನಪ್ಪಾ ನಮ್ಮ ಗುಂಡರಾಮಯ್ಯನವರ ಮಗ ಕೃಷ್ಣಮೂರ್ತಿ?" ಎಂದು ಕೇಳಿದೆ. "ಹೌದು." ಎಂದು ಹೇಳಿ ಸುಮ್ಮನೇ ನೆಲ ನೋಡುತ್ತ ನಿಂತ............"

"ಹುಡುಗ ಹೇಗಿದ್ದಾನೆ ನಾಗಪ್ಪನವರೇ?" ಎಂದು ಮಧ್ಯದಲ್ಲಿಯೆ ಪ್ರಶ್ನಿಸಿದರು ರಂಗಮ್ಮ.

"ಹುಡುಗ ಲಕ್ಷಣವಾಗಿದ್ದಾನೆ ತಾಯೀ. ಆಳು ಕಟ್ಟುಮಸ್ತಾಗಿದ್ದಾನೆ. ಆದರೆ ಬಣ್ಣ ಮಾತ್ರ ಕಪ್ಪು. ಕಪ್ಪು ಅಂದರೆ ಅಷ್ಟೇನೂ ಅಲ್ಲ, ಆದರೆ ಸರೂ ಹೇಳುವ ಬೆಳ್ಳಗೆ ತೆಳ್ಳಗೆ ಇರುವ ಹುಡುಗನಾಗಿಲ್ಲ."

"ತಡೀ ಅಕ್ಕಾ, ಅವರು ಪೂರ್ತಿ ಹೇಳೋದ ಕೇಳದೆ, ಆಗಲೇ ಮಾತಿಗ ಶುರುಮಾಡುತ್ತೀಯಾ!" ಅಂದರು ಗೋವಿಂದರಾಯರು, ಹಾಗೆ ಮಾತಿನ ಮಧ್ಯೆ ಮಾತನಾಡಿದುದು ತಮಗೆ ಸರಿಬೀಳಲಿಲ್ಲ ಎನ್ನುವಂತೆ.

"ಕೇಳಲಿ ಬಿಡೀ ಸ್ವಾಮೀ. ಅವರವರ ಕುತೂಹಲ ಅವರವರಿಗೆ. ಸರಿ, ನಾನು ಸ್ವಲ್ಪದರಲ್ಲಿಯೇ ನಮ್ಮ ವಿಷಯವನ್ನೆಲ್ಲಾ ಹೇಳಿದೆ. ಆದರೆ ಅವನು ಮೊದಲು ಅದಕ್ಕೆ ಒಪ್ಪಲಿಲ್ಲ. ತನ್ನ ತಂದೆ ತಾಯಿಯರ ಅನುಮತಿ ಇಲ್ಲದೆ ತಾನು ಯಾವ ಹುಡುಗಿಯನ್ನೂ ನೋಡುವುದಕ್ಕೂ ಬರುವುದಿಲ್ಲವೆಂದೂ,

ಮತ್ತು ಈಗ ತನಗೆ ಮದುವೆ ಬೇಡವೆಂಬುದಾಗಿ ಬಹಳ ಹೇಳಿದ. ನಾನೂ ಹೇಳಿದೆ: "ನಿಮ್ಮ ತಾಯಿಯ ಅಪ್ಪಣೆಯನ್ನು ನಾವು ಪಡೆದಿದ್ದೇವೆ. ಅವರೇ ಹೇಳಿದರು 'ಮೂರ್ತಿಗೆ ಹುಡುಗೀನ್ನ ನೀವೇ ಬೇಕಾದರೆ ತೋರಿಸಿ' ಎಂದು. ಈಗ ನೀನು ನಿನ್ನ ಅಭಿಪ್ರಾಯವನ್ನು ಯಾರಿಗೂ ಹೇಳಲೇಬೇಡ. ಸುಮ್ಮನೇ ಬಂದು ಕಣ್ಣಲ್ಲಿ ಹುಡುಗೀನ್ನ ನೋಡಿಕೊಂಡು ಹೋಗು. ನಿನ್ನ ಕಾಲೇಜಿಗೆ ರಜವಿದ್ದ ದಿನವೇ ಹೇಳು, ನಾನು ಬಂದು ನಿನ್ನನ್ನು ಕರೆದುಕೊಂಡು ಹೊಗುತ್ತೀನಿ. ಈ ವಿಷಯದಲ್ಲಿ ನಿನಗೆ ಯಾವ ತರದ ತೊಂದರೆಯೂ ಆಗದಂತೆ ನಾನು ನೋಡಿ ಕೊಳ್ಳುತ್ತೀನಿ. ನಿನಗೆ ಹುಡುಗಿಯ ವಿಷಯವಾಗಿ ಮೆಚ್ಚಿಗೆ ಅಥವಾ ಇಲ್ಲಾ ಎಂಬುದನ್ನು ನೀನು ನಿನ್ನ ತಾಯಿಗೇ ಬರೆದು ತಿಳಿಸು. ನಿನ್ನನ್ನು ಇಲ್ಲಿ ಯಾರೂ ಆ ರೀತಿ ಕೇಳುವದಿಲ್ಲಾ. ಒಂದು ಗಂಟೆ ಕಾಲ ಬಂದು ಹೋಗು." ಹಾಗೆ ಹೀಗೆ ಅಂತ ಹೇಳಿದ ಮೇಲೆ, ಮಹಾರಾಯ ಒಂದು ಸಲಕ್ಕೆ 'ಹೂಂ' ಅಂದ. ಈಗ ನಾಳೆಯ ಭಾನುವಾರ ಬೆಳಗ್ಗೆ ಹತ್ತರ ವೇಳೆಗೆ ಬರುವಂತೆ ಒಪ್ಪಿಕೊಂಡಿ ದ್ದಾನೆ. ಹುಡುಗ ಬಹಳ ಯೋಗ್ಯ. ತಂದೆ ತಾಯಿಯರಲ್ಲಿ ಗೌರವವುಳ್ಳವ. ನನಗೆ ನೋಡಿದ ಕೂಡಲೇ ಅನ್ನಿಸಿತು ತಾಯಿ, ಹುಡುಗ ಕಪ್ಪಾದರೂ ನಮ್ಮ ಸರೂ ಒಪ್ಪುತ್ತಾಳೆ ಅಂತ. ನಾನೂ ನೋಡಿದ್ದರಲ್ಲಿ ಬಹಳ ಗುಣವಂತ, ಹುಡುಗ. ನಾಳೆ ಮಾನವಾಗಿ ಹೆಂಡತಿಯನ್ನು ಸುಖವಾಗಿ ಸಾಕುತ್ತಾನೆ, ಅದಕ್ಕೇನೂ ಯೋಚನೆ ಇಲ್ಲ. ನನ್ನ ಹೊರೆಯನ್ನು ನಾನು ಇಳಿಸಿದ್ದಾಯ್ತು. ಇನ್ನು ನಿಮ್ಮ ಭಾವೀ ಅಳಿಯನನ್ನು ನೋಡಿಕೊಳ್ಳುವುದು ನಿಮ್ಮ ಕೆಲಸ."

"ಈಗಲೇ ನಿಮ್ಮ ಕೆಲಸ ಮುಗಿದುಹೋಯಿತೂ ಅಂತ ತಿಳಿದು ಕೊಂಡಿರಾ? ಸರೂ ಮದುವೆ ಮಾಡಿ, ಅವಳನ್ನು ಅತ್ತೆಮನೆಗೆ ಕಳಿಸಿಕೊಡು ವುದೂ ನಿಮ್ಮದೇ. ಅಲ್ಲಿಯ ವರೆಗೂ ನಿಮಗೆಲ್ಲಿ ಪುರಸೊತ್ತು?" ಎಂದು ಅವರ ಮಾತನ್ನು ಅವರಿಗೇ ತಿರುಗಿಸಿದರು ರಂಗಮ್ಮ.

ಅಂದು ಭಾನುವಾರ. ರಂಗಮ್ಮನವರ ಓಡಾಟಕ್ಕೆ ಕೊನೆ ಮೊದಲೇ ಇರಲಿಲ್ಲ. ಬೆಳಗಿನ ಜಾವಕ್ಕೇ ಎದ್ದು ಮನೆಕೆಲಸಗಳಿಗೆ ತೊಡಗಿದರು. ಹಾಲ

ನ್ನೆಲ್ಲಾ ಚೆನ್ನಾಗಿ ಒರಿಸಿ, ಚೆನ್ನಾಗಿರುವ ಎರಡು ಚಾಪೆ ಹಾಸಿದರು. ಎಲ್ಲಾ ಸಾಮಾನುಗಳನ್ನೂ ತೆಗೆದು ಓರಣವಾಗಿ ಜೋಡಿಸಿಟ್ಟರು. 'ಸರೂ ಬೇಗ ಏಳೇ, ಈವತ್ತೂ ಎಂಟರ ವರೆಗೆ ಮಲಗಬೇಡ.' ಎಂದು ಸರೂನ್ನ ಏಳು ಗಂಟೆಗೇ ಎಬ್ಬಿಸಿದರು. ಸರೂ ಬೆಳಗಿನ ಜಾವಕ್ಕೆ ಎದ್ದವಳಂತೆ ಕಣ್ಣುಜ್ಜುತ್ತಾ ಎದ್ದು ಕುಳಿತಳು.

"ಗೋವಿಂದು, ಈ ದಿನವಾದರೂ ಬೇಗ ನಿನ್ನ ಜಪತಪ ಮುಗಿಸು. ಆ ಹುಡುಗ ಬರೋವರೆಗೂ ನೀನು ಮೂಗು ಹಿಡಿದುಕೊಂಡು ಕೂಡಬೇಡ. ಬೇಗ ಏಳು." ಎಂದು ಅವನನ್ನೂ ಆತುರಪಡಿಸಿದರು.

ಪೆಟ್ಟಿಗೆಯಲ್ಲಿದ್ದ ಬೆಳ್ಳಿ ತಟ್ಟೆ ಲೋಟಾಗಳನ್ನೂ ತೆಗೆದು ಚೆನ್ನಾಗಿ ತೊಳೆದಿಟ್ಟರು. ಬೀದಿಯ ಬಾಗಿಲನ್ನು ತಾವೆ ಸಾರಿಸಿ ಲಕ್ಷಣವಾಗಿ ರಂಗೋಲಿ ಇಟ್ಟರು, ಕೆಲಸದವಳು ಬರುವುದು ಎಷ್ಟು ಹೊತ್ತಾಗುತ್ತೋ ಏನೋ ಎಂದುಕೊಂಡು.

ಸರೂಗೆ ಲಕ್ಷಣವಾಗಿ ತಲೆ ಬಾಚಿ, ತಲೆ ತುಂಬಾ ಹೂವು ಮುಡಿಸಿದರು. ಕಮಲಾಕ್ಷಿ ಕೊಟ್ಟಿದ್ದ ತಿಳಿ ನೀಲಿ ಬಣ್ಣದ ಸಿಲ್ಕ್ ಸೀರೆಯುಡಿಸಿದರು. ಕತ್ತಿಗೆ ಎರಡೆಳೆ ಸರ ತೊಡಿಸಿದರು. ಹೇಗೆ ಹೇಗೆ ಅಲಂಕರಿಸಿದರೆ ಸರೂಗೆ ಚೆನ್ನಾಗಿ ಕಾಣುತ್ತೆ ಎಂದು ತೋರಿತೋ ಹಾಗೆ, ತಮ್ಮ ಮನ ಒಪ್ಪುವಂತೆ ಸಿಂಗರಿಸಿ, ಇನ್ನು ಮೈಲಿಗೆಯಲ್ಲಿ ಯಾವ ಕೆಲಸವೂ ಬಾಕಿ ಇಲ್ಲಾ ಎಂದಾದ ಮೇಲೆ ಮಡಿಗೆ ತೆರಳಿದರು.

"ಲೇ ಸರೂ, ಈವತ್ತಾದರೂ ಸ್ವಲ್ಪ ನಿನ್ನ ಹುಡುಗುತನದ ಚೆಲ್ಲಾಟ ಬಿಟ್ಟು ಗಂಭೀರವಾಗಿರು. ಹಾಗೇ ಹೀಗೇ ಅಂತ ಹುಡುಗಾಟ ಮಾಡ ಹೋಗ ಬೇಡ." ಎಂದು ಅವಳಿಗೆ ತಾಕೀತು ಮಾಡಿದರು.

ಸಜ್ಜಿಗೆ, ಬೊಂಬಾಯಿ ಬೋಂಡಾ, ಹಾಲು, ಖೀರು ಮಾಡುವುದೆಂದು ಮೊದಲೇ ಗೊತ್ತಾಗಿತ್ತು. ಸಜ್ಜಿಗೆಯನ್ನು ಮಾಡಿ ಇದ್ದಲು-ಒಲೆಯ ಮೇಲೆ ಸಣ್ಣ ಕೆಂಡ ಹಾಕಿ ಬೆಚ್ಚಗೆ ಇಟ್ಟರು. ಆಲೂಗಡ್ಡೆಯನ್ನು ಬೇಯಿಸಿ, ಪಲ್ಯ ತಯಾರು ಮಾಡಿ, ಬೋಂಡಾಕ್ಕೆ ಹಿಟ್ಟು ಕಲೆಸಿ ಸಿದ್ಧಮಾಡಿಟ್ಟರು. ತಮ್ಮ ಕೆಲಸವೆಲ್ಲಾ ಮುಗಿದ ಮೇಲೆ ಬೀದಿಯ ಬಾಗಿಲಿಗೂ ಒಳಗೂ ಆತಂಕದಿಂದ ತಿರುಗಾಡಲಾರಂಭಿಸಿದರು.

ನಾಗಪ್ಪ, ಕೃಷ್ಣಮೂರ್ತಿಯೊಡನೆ ಒಂಭತ್ತು ಗಂಟೆಗೆ ಸರಿಯಾಗಿ

ಬಂದರು.

"ಬಾಪ್ಪಾ, ಹೀಗೆ ಕೂತುಕೋ" ಎಂದರು ಗೋವಿಂದರಾಯರು ಕೃಷ್ಣ ಮೂರ್ತಿಯನ್ನಾದರಿಸುತ್ತಾ. ಅವನು ಇರುವುದು, ಓದು, ಎಲ್ಲಾ ಎಲ್ಲಿ ಹೇಗೆ? ಎಂದು ಅವನನ್ನೇ ಕೇಳಿ ತಿಳಿದುಕೊಂಡರು. ಈಗಿನ ವಿದ್ಯಾಭ್ಯಾಸ, ಕಾಲೇಜು, ಸ್ಕೂಲು ಮೊದಲಾದವುಗಳ ವಿಷಯವಾಗಿ ಮಾತುಕತೆಯಾಯಿತು.

ರಂಗಪ್ಮ ಅಡುಗೆ ಮನೆಯಲ್ಲಿ ಬೋಂಡಾ ತಯಾರಿಗೆ ತೊಡಗಿದ್ದರು.

"ಎಲ್ಲಿ ನಿಮ್ಮ ಹುಡುಗಿ ಕಾಣಿಸೋದಿಲ್ಲವಲ್ಲಾ? ಈ ದಿನ ಏನು ಎಲ್ಲೂ ಇಲ್ಲದ ನಾಚಿಕೆ ಬಂದುಬಿಟ್ಟಿದೆ?" ಎಂದು ನಾಗಪ್ಪನವರು ಮಾತೆತ್ತಿದರು.

ಸ್ವಲ್ಪ ಹೊತ್ತಿನೊಳಗಾಗಿ ಸರೂ, ಮದುವಣಗಿತ್ತಿಯಂತೆ ನಾಚಿಕೆ ಯಿಂದ ತಲೆ ಬಗ್ಗಿಸಿಕೊಂಡು, ಬಂದು ತಿಂಡಿಯ ತಟ್ಟೆಗಳನ್ನು ತಂದು ಎಲ್ಲರ ಮುಂದೆಯೂ ಇಟ್ಟು ಅಡುಗೆಮನೆಗೆ ಹೋಗಿ, ರಂಗಮ್ಮನವರು ಸಿದ್ಧಪಡಿಸಿಟ್ಟ ಕಾಫಿಯನ್ನು ತಂದು ಎಲ್ಲರಿಗೂ ಒಂದೊಂದು ಲೋಟ ಕೊಟ್ಟಳು. ಮುಂದೆ ಏನು ಮಾಡಬೇಕೆಂದು ತಿಳಿಯದೆ ಅಲ್ಲಿಯೇ ಒಂದೆಡೆ ಸುಮ್ಮನೆ ನಿಂತಳು. ರಂಗಮ್ಮ ತಮ್ಮ ಕೆಲಸ ಮುಗಿದುದರಿಂದ ಅಡುಗೆಮನೆ ಬಿಟ್ಟು ನಡುಮನೆಯ ಬಾಗಿಲಲ್ಲಿ ಬಂದು ನಿಂತರು.

"ಇದೇನೇ ಸರೂ, ಈಗಲೇ ಮದುವಣಗಿತ್ತಿಯಂತೆ ನಿಂತುಬಿಟ್ಟೆ! ನೋಡು ನಿನ್ನ ಗಂಡ ನಿನ್ನನ್ನೇ ನೋಡುತ್ತಿದ್ದಾನೆ. ನೀನೂ ಒಂದು ಬಾರಿ ಕತ್ತೆತ್ತಿ ನೋಡು." ಎಂದರು ನಾಗಪ್ಪ ಬೋಂಡಾ ಬಾಯಿಗೆ ಹಾಕಿಕೊಳ್ಳುತ್ತಾ. ಸರೂ ಅದೂ ನಿಜವೇನೋ ಎಂದು ತಲೆಯೆತ್ತಿ ನೇರವಾಗಿ ಕೃಷ್ಣಮೂರ್ತಿಯ ಕಡೆ ನೋಡಿದಳು. ಅವನೂ ಇವಳನ್ನು ನೋಡುವುದಕ್ಕೂ ಇವಳೂ ಅವ ನನ್ನು ದಿಟ್ಟಿಸುವುದಕ್ಕೂ ಸರಿಯೇ ಹೋಯಿತು. ಒಂದು ಕ್ಷಣ ಇಬ್ಬರ ಕಣ್ಣು ಗಳೂ ಸೇರಿದವು. ಸರೂ ನಾಚಿದವಳಂತೆ ದೃಷ್ಟಿಯನ್ನು ಕೆಳಮಾಡಿದಳು. ಕೃಷ್ಣಮೂರ್ತಿಯ ಮನಸ್ಸಿಗೆ ಒಂದೇ ಬಾರಿಗೆ ಸರೂ ಹಿಡಿಸಿದಳು.

ರಂಗಮ್ಮ ಅಲ್ಲಿಂದಲೇ ಹುಡುಗನನ್ನು ನೋಡಿದರು. 'ಹುಡುಗ ಕಪ್ಪಾ ದರೂ ಪರವಾಗಿಲ್ಲ. ನಮ್ಮ ಸರೂಗೆ ತಕ್ಕ ಜೊತೆಯಾಗುತ್ತಾನೆ. ಅವಳ ಅದೃಷ್ಟ ಹೇಗಿದೆಯೋ?' ಎಂದುಕೊಂಡರು.

"ಸರೂ ಈ ವರ್ಷ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕಟ್ಟಿದ್ದಾಳೆ. ಓದೋ ದರಲ್ಲಿ ಬಹಳ ಚುರುಕು" ಎಂದು ಸರೂವನ್ನು ಸ್ವಲ್ಪ ಹೊಗಳಿದರು ನಾಗಪ್ಪ.

ಕೃಷ್ಣಮೂರ್ತಿ ಹುಡುಗಿಯನ್ನೊಪ್ಪಿದ್ದಾನೆಂದು ಅವನ ಮುಖದಲ್ಲಿಯೇ ಕಾಣಬರುತ್ತಿತ್ತು.

ತಿಂಡಿ, ತೀರ್ಥಗಳೆಲ್ಲಾ ಮುಗಿದ ಮೇಲೆ ನಾಗಪ್ಪ ಹೆಗಲ ಮೇಲೆ ಶಲ್ಲೆ ಹೊದ್ದುಕೊಳ್ಳುತ್ತಾ ಎದ್ದುನಿಂತರು. ಅವರು ಎದ್ದುದನ್ನು ನೋಡಿ ಕೃಷ್ಣಮೂರ್ತಿಯೂ ಎದ್ದುನಿಂತ. ರಂಗಮ್ಮ ಹೊರಗಡೆ ಬಂದು, "ಹೋಗಿ ಬರುತ್ತೀಯಾಪ್ಪಾ, ವಿಶ್ವಾಸವಿರಲಿ." ಎಂದರು. "ಹಾಗೇ ಆಗಲೀ ಅಮ್ಮಾ." ಎಂದು ಕೃಷ್ಣಮೂರ್ತಿ ಹೊರಟನು.

"ಕಾಲೇಜಿಗೆ ರಜಾ ಇದ್ದಾಗ ಒಂದೊಂದು ದಿನ ಬಾಪ್ಪಾ." ಎಂದರು ಗೋವಿಂದರಾಯರು, ಬೀದಿಯ ಬಾಗಿಲಿಗೆ ಬಂದು.

"ನಾವಿನ್ನು ಹೊರಡುತ್ತೀವಮ್ಮಾ, ಹೋಗಿಬರೋಣವೇ?" ಎಂದರು ನಾಗಪ್ಪ.

"ಒಳ್ಳೆದು." ಎಂದು ರಂಗಮ್ಮ ಸಮ್ಮತಿಸಿದರು.

ನಾಗಪ್ಪ, ಕೃಷ್ಣಮೂರ್ತಿಯೊಡನೆ ಹೊರಟು ಹೋದರು. ಸರೂ ಅಲ್ಲಿಯೇ ನಿಂತು ಅವರು ಹೋಗುವುದನ್ನೇ ನೀರೀಕ್ಷಿಸುತ್ತಾ ನಿಂತಿದ್ದಳು.

"ಪರವಾಗಿಲ್ಲ. ಹುಡುಗ ಚೆನ್ನಾಗಿದ್ದಾನೆ." ಮಾತಿಗಾರಂಭಿಸಿದರು ಗೋವಿಂದರಾಯರು.

"ನಮ್ಮದೆಲ್ಲಾ ಸರಿ. ಈ ನಮ್ಮ ರಾಣಿ ಏನನ್ನುತ್ತಾಳೋ? ಏನೇ ಸರೂ, ಒಪ್ಪಿದೆ ಏನೇ ನಿನ್ನ ಗಂಡನ್ನಾ?" ಎಂದು ಸರೂನ್ನ ಹಾಸ್ಯಮಾಡಿದರು ರಂಗಮ್ಮ.

"ಥೂ, ಹೋಗತ್ತೇ! ನಾನೇನೂ ಹೇಳೋಲ್ಲಾ ಹೋಗು. ನಂಗೆ ಈ ಸೀರೆ ಬೇಜಾರಾಯ್ತು. ಇನ್ನು ಲಂಗ ಹಾಕಿಕೊಳ್ಳಲೇ ಅತ್ತೆ?" ಎಂದಳು ಸರೂ ಮುಖ ಸಿಂಡರಿಸುತ್ತಾ.

"ಅಲ್ಲವೇ ಸರೂ, ಹನ್ನೆರಡು ವರ್ಷವಾದರೂ ಇನ್ನೂ ಸೀರೆ ಉಡೋಕೆ ಬೇಜಾರು ಅಂತೀಯಲ್ಲಾ! ಈ ವಯಸ್ಸಿಗೆ ನಿನ್ನ ದೊಡ್ಡಮ್ಮನ ಮದುವೆಯಾಗಿ ಎರಡು ವರ್ಷ ಆಗಿತ್ತು ಕಣೇ! ಅದೇನೋ ಈಗಿನ ಕಾಲದ ಹುಡುಗರ ನಡವಳಿಕೇನೇ ತಿಳಿಯೋಲ್ಲಾ." ಎಂದುಕೊಂಡು ಒಳಗೆ ಕೆಲಸಕ್ಕೆ ತೆರಳಿದರು ರಂಗಮ್ಮ.

* * * *

ಸಂಜೆಯ ಬಸ್‌ನಿಂದ ಬಂದ ನಾಗಪ್ಪ, ನೇರವಾಗಿ ಗೋವಿಂದರಾಯರ

ಮನೆಗೇ ಹೋದರು. ಮುಖದ ಮೇಲೆ ಬೇಸರದ ಚಿನ್ಹೆ ಒಡೆದು ಕಾಣುತ್ತಿತ್ತು. ಮನೆಗೆ ಹೋದವರೇ ಯಾವ ಮಾತೂ ಆಡದೆ ಹಾ:ಲಿನಲ್ಲಿ ಬಂದು ಕುಳಿತರು. ಗೋವಿಂದರಾಯರು ಯಾವದೊ ಗ್ರಂಥವನ್ನೋದುತ್ತಾ, ಅದರಲ್ಲಿಯೇ ತಲ್ಲೀನ ರಾಗಿದ್ದರು. ರಂಗವ್ಮ ಹಿತ್ತಲು ಕಡೆ ಹಾಕಿದ್ದ ಸೌದೆ ಜೋಡಿಸುತ್ತಿದ್ದರು. ನಾಗಪ್ಪನವರು ಬಂದಿದ್ದು ಯಾರಿಗೂ ತಿಳಿಯಲಿಲ್ಲ.

ಸರೂ ಹೊರಗಡೆ ಆಟವಾಡಲು ಹೋಗಿದ್ದವಳು ಹಿಂತಿರುಗಿ ಬಂದು ನಾಗಪ್ಪ ಕುಳಿತಿರುವುದನ್ನು ನೋಡಿ "ಯಾವಾಗ ಬಂದಿರಿ ಮಾವ, ಊರಿಂದ?" ಎಂದಳು.

"ಈಗ ತಾನೇ ಬಂದೆ ಮಗೂ." ಎನ್ನುವಾಗ ಅವರ ಧ್ವನಿ ಭಾರವಾಗಿತ್ತು.

ನಾಗಪ್ಪನವರ ಧ್ವನಿ ಕೇಳಿ ಗೋವಿಂದರಾಯರು ಪುಸ್ತಕವನ್ನು ಕೆಳ. ಗಿಟ್ಟು, ಕುರ್ಚಿಯಿಂದೆದ್ದು ಬಂದರು. "ಸರೂ, ಲೈಟು ಹಚ್ಚು ಕತ್ತಲಾಗುತ್ತಾ ಬಂತು." ಎಂದರು.

ಸರೂ 'ಸ್ವಿಚ್' ಹಾಕಿದಳು.

"ಅಮ್ಮ ಎಲ್ಲಿ ಕಾಣೋಲ್ಲಾ?" ಸುತ್ತಲೂ ನೋಡಿದರು ನಾಗಪ್ಪ.

"ಅಕ್ಕಾ, ನಾಗಪ್ಪನವರು ಕರೀತಾರೆ." ಅಲ್ಲಿಂದಲೇ ಕೂಗಿದರು ಗೋವಿಂದರಾಯರು.

ರಂಗವ್ಮ ಕೈ-ಕಾಲು ತೊಳೆದುಕೊಂಡು ಒಳಬಂದರು.

"ಹೋದ ಕೆಲಸ ಏನಾಯ್ತು ನಾಗಪ್ಪನವರೇ, ಹಣ್ಣೋ ಕಾಯೊ?"

"ಒಂದು ಭಾಗಕ್ಕೆ ಹಣ್ಣಾದರೂ, ಅದು ನಮ್ಮ ಪಾಲಿಗೆ ಕಾಯೇ ಅನ್ನಿಸುತ್ತದೆ."

"ಯಾಕೆ, ಏನಾಯ್ತು? ಅವರು ಒಪ್ಪಿಕೊಳ್ಳಲಿಲ್ಲವೇ?" ಆತಂಕದಿಂದ ಕೇಳಿದರು ರಂಗವ್ಮ.

"ನಾನು ಆಗಲೇ ಹೇಳಲಿಲ್ಲವೇ? ಅವರಿಗೆ ಹಣದಾಸೆ ಇದೆ ಎಂದು. ಅವರು ಹುಡುಗನ್ನ ಎಮ್. ಸಿ. ಎಸ್. ಅಂದರೆ ಮೈಸೂರ್ ಸಿವಿಲ್ ಸರ್ವೀಸ್‌ಗೆ ಓದಿಸಬೇಕಂತೆ. ತಾವು ಬಡವರು, ಅದನ್ನು ಓದಿಸಲು ತಮ್ಮ ಕೈಲಾಗುವುದಿಲ್ಲ, ಅವರಿಂದ ಹೆಣ್ಣು ಕೊಡುವವರೇ ಓದಿಸಬೇಕು. ಮತ್ತು ಎರಡೂ ಖರ್ಚನ್ನೂ ಅವರೇ ಮಾಡಬೇಕು. ಇಷ್ಟರ ಮೇಲೆ ಅಳಿಯನ ವರೋಪಚಾರಕ್ಕೆ ಸ್ವಲ್ಪವೂ ಲೋಪ ಬರದಂತೆ ಮಾಡಬೇಕು. ಇದು ಅವರ ಷರತ್ತು. ಕೃಷ್ಣಮೂರ್ತಿ

ಏನೋ ಹುಡುಗೀನ ಒಪ್ಪಿದೆ ಎಂದು ಕಾಗದ ಬರೆದಿದ್ದನಂತೆ. ಜಾತಕವೂ ಚೆನ್ನಾಗಿಯೇ ಕೂಡಿಬಂದಿದೆ. ಆದರೆ ಮಧ್ಯೆ ಈಗ ಈ ಹಣದ್ದೊಂದು ದೊಡ್ಡ ಸಮಸ್ಯೆಯಾಗಿ ಕೂತಿದೆ."

ಗೋವಿಂದರಾಯರು ಮಾತನ್ನೇನೂ ಆಡಲಿಲ್ಲ.

"ಅವರು ಹೇಳಿದ್ದಕ್ಕೆಲ್ಲಾ ಈಗ ನಾವು ಒಪ್ಪಿಕೊಳ್ಳಬೇಕಾದರೆ, ಈಗ ನಾಲ್ಕೈದು ಸಾವಿರವಾದರೂ ಬೇಡವೇ ನಾಗಪ್ಪನವರೆ? ಅಷ್ಟು ದುಡ್ಡು ಎಲ್ಲಿಂದ ತರೋದಕ್ಕಾಗುತ್ತೆ? ಹಿಂದೆ ನಮಗಿದ್ದ ಸ್ಥಿತಿಯಲ್ಲಿ ಈ ದುಡ್ಡು, ಅದೇನೂ ಹೆಚ್ಚಿಗೆಯ ಮಾತಾಗಿರಲಿಲ್ಲ. ಆದರೆ ಈಗ ಅದೇ ಒಂದು ದೊಡ್ಡ ಬೆಟ್ಟವಾಗಿ ಕೂತಿದೆ. ನಮ್ಮ ಕಷ್ಟ ಸುಖಗಳನ್ನೂ ಸ್ವಲ್ಪ ಹೇಳಿ ನೋಡಬೇಕಾಗಿತ್ತು?" ರಂಗಮ್ಮ ನುಡಿದರು.

"ನಾನೂ ಹೇಳುವುದನ್ನೆಲ್ಲಾ ಹೇಳಿದೆ ತಾಯೀ. ಆದರೆ ಆಕೆ ಹಿಡಿದ ಪಟ್ಟು ಬಿಡಲಿಲ್ಲ. ತಮ್ಮ ಇಷ್ಟ ಪ್ರಕಾರ ಒಪ್ಪಿಕೊಂಡು ಯಾರು ಹೆಣ್ಣು ಕೊಡುತ್ತಾರೋ ಅವರನ್ನೇ ಮಾಡಿಕೊಳ್ಳುತ್ತಾರಂತೆ. ಇಲ್ಲದಿದ್ದರೆ ಅವರಿಗೆ ಮದುವೆಯೇ ಬೇಡಾ, ಅಂತ ಆಕೆಯ ಹಟ. ಅವರ ಮನಸ್ಸು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲಾ ತಾಯೀ. ಆಕೆಗೆ ಬೇಕಾದುದು ಸೊಸೆಯಲ್ಲ, ಸೊಸೆಯ ಮೂಲಕ ಬರುವ ಹಣ. ಅದೊಂದಕ್ಕಾಗಿ ಯಾವ ಕುರೂಪಿಯನ್ನಾದರೂ ಸೊಸೆಯನ್ನಾಗಿ ಮಾಡಿಕೊಳ್ಳಲು ಸಿದ್ಧಳಾಗಿದ್ದಾಳೆ. ಈ ವಿಷಯದಲ್ಲಿ ಮಗ, ತನ್ನ ಗಂಡ ಯಾರ ಮಾತನ್ನೂ ಕೇಳಬೇಕಾದುದಿಲ್ಲ. ತಾಯಿಯ ಮಾತನ್ನು ಮೀರಲಾರದೆ ಆ ಹುಡುಗ ತನಗೆ ಇಷ್ಟವಿಲ್ಲದ ಹುಡುಗಿಯನ್ನಾದರೂ ಮಾಡಿಕೋ ಎಂದರೆ ಮಾಡಿಕೋಬೇಕು. ಹೀಗಿದೆ ಅವರ ಮನೆಯ ಕಾರುಭಾರು. ಈಗ ಈ ಸಮಸ್ಯೆಯನ್ನು ಹೇಗೆ ಬಿಡಿಸುವುದೋ ಗೊತ್ತಿಲ್ಲ." ಎಂದು ಸುಮ್ಮನಾದರು ನಾಗಪ್ಪ.

"ಮಾಡುವುದೇನು ಬಂತು? ಆ ಹುಡುಗನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ನಮಗೆ ಅದೃಷ್ಟವಿಲ್ಲಾ ಎನ್ನುವುದು, ಸುಮ್ಮನಿರುವುದು. ಅದೊಂದೇ ದಾರಿ. ಅಷ್ಟು ಅಪಾರವಾದ ಹಣವನ್ನು ಸಾಲಮಾಡಿ, ನನಗೆ ಬರುವ ಈ ಅರವತ್ತು ರೂಪಾಯಿ ಸಂಬಳದಲ್ಲಿ, ನನ್ನ ಜೀವಮಾನದಲ್ಲಿ ಎಲ್ಲಾ ದುಡಿದು ತೀರಿಸಿದರೂ ತೀರುವುದೋ ಇಲ್ಲವೋ? ಆಗಲೀ ಸರೂಗೆ ಏನು ಮಹಾ ವಯಸ್ಸಾಗಿರುವುದು? ವರದಕ್ಷಿಣೆ ತೆಗೆದು ಕೊಳ್ಳದ ಮನೆ ಸಿಗುವರೆಗೂ,

ನಾನು ಮದುವೆಯೇ ಮಾಡುವದಿಲ್ಲ. ದೇವರು ಅವಳಿಗೆ ಮದುವೆಯನ್ನು ಹಣೆಯಲ್ಲಿ ಬರೆಯದೆಯೇ ಹೋಗುತ್ತಾನೆಯೆ?"

"ಸರೀ ಹಾಗಾದರೆ. ಈ ಸಂಬಂಧ ಕೈ ಬಿಟ್ಟಂತೆಯೇ ಅನ್ನಿ." ರಂಗಮ್ಮ ನಿಟ್ಟುಸಿರುಬಿಟ್ಟರು.

"ಇನ್ನೇನಮ್ಮಾ, ನಮ್ಮ ಪಾಲಿಗೆ ಹಾಗಾದಂತೆಯೇ ಸರಿ. ಇನ್ನೂ ಎರಡು-ಮೂರು ಕಡೆ ನೋಡೋಣಾ. ಆದರೆ ಈಗ ಯಾವುದಕ್ಕೂ ದುಡ್ಡು ಇಲ್ಲದೆ ಮಾತೇ ಇಲ್ಲ. ಹೂಂ, ನಾನಿನ್ನು ಬರ್‍ತೀನಮ್ಮಾ, ಮನೇಲಿ ಏನಾಗಿ ದೆಯೋ ಏನೊ?"

"ಇಲ್ಲೇ ಊಟ ಮಾಡಿಕೊಂಡು ಹೋದರಾಗದೇ? ಅಡುಗೆ ಆಗುತ್ತಾ ಬಂತು."

"ಇಲ್ಲಾಮ್ಮಾ, ಪಾಪ ಮನೇಲಿ ಅಮ್ಮ ನನಗಾಗಿ ಕಾದಿರುತ್ತಾಳೆ. ಮೊನ್ನೆ ದಿನ ಮನೆ ಬಿಟ್ಟವನು, ಏನಿದೆಯೋ ಇಲ್ಲವೋ ವಿಚಾರಿಸಬೇಡವೆ?" ನಾಗಪ್ಪ ಹೊರಟುಹೋದರು.

"ಪಾಪ, ಎಲ್ಲರಿಗಾಗೂ ಒದ್ದಾಡುತ್ತಾನೆ ಪ್ರಾಣಿ! ಅವನ ಮನೇಲಿ ಅವನಿಗೆ ಪಾಪ ಎಳ್ಳಷ್ಟೂ ಸುಖವಿಲ್ಲ. ಒಬ್ಬೊಬ್ಬರ ಮನೆ ಒಂದೊಂದು ತರಹ." ಗೋವಿಂದರಾಯರು ಅನುಕಂಪ ಪಟ್ಟರು.

ನಾಗಪ್ಪನವರ ಇತರ ಪ್ರಯತ್ನಗಳೂ ಸಫಲವಾಗಲಿಲ್ಲ. ಎಲ್ಲಿ ನೋಡಿ ದರೂ ವಿದ್ಯಾಭ್ಯಾಸ, ಇಲ್ಲವೆ ವರದಕ್ಷಿಣೆ ಇವುಗಳನ್ನು ಬಿಟ್ಟು ಬೇರೆ ಮಾತೇ ಇರಲಿಲ್ಲ. ಗೋವಿಂದರಾಯರು ನಿರಾಶೆಗೊಂಡು ಅಂದಿನಿಂದ ಮದುವೆಯ ಪ್ರಯತ್ನವನ್ನೇ ಬಿಟ್ಟುಬಿಟ್ಟರು. ನಾಗಪ್ಪನವರು ಮಾತ್ರ ಎಂದಿನಂತೆ ಅವರ ಮನೆಗೆ ಬಂದು ಹೋಗುತ್ತಿದ್ದರು.

ಸರೂ ಈಗ ಹದಿನೈದು ವರ್ಷದ, ಪ್ರಾಯದ ಹುಡುಗಿ. ಈ ಸಲ ಮೆಟ್ರಿಕ್ ಪರೀಕ್ಷೆಗೆ ಕೂತಿದ್ದಾಳೆ. ಮೊದಲಿನ ಹುಡುಗಾಟ, ಚೆಲ್ಲಾಟ, ಎಲ್ಲಾ ಅಳಿಸಿಹೋಗಿ, ಈಗ ಗಂಭೀರ ಭಾವನೆ ಬಂದಿದೆ. ಯಾವಾಗಲಾದರೂ

ಮದುವೆಯ ಮಾತು ಬಂದಿತೆಂದರೆ, ಅವಳ ಕಣ್ಣುಗಳು ಕೃಷ್ಣಮೂರ್ತಿಯನ್ನೇ ಕಾಣುತ್ತಿದ್ದುವು. ಆತನ ತಾಯಿ ವರದಕ್ಷಿಣೆಗಾಗಿ ಆಸೆ ಪಡದೆ, ಒಪ್ಪಿದ್ದರೆ, ಈ ವೇಳೆಗೆ ನಾನು ಮದುವೆಯಾಗಿ ಅವನ ಜೊತೆ ಸಂಸಾರ ಮಾಡಿಕೊಂಡಿರ ಬಹುದಾಗಿತ್ತು. ಹಾಗೆ ಆಗಿದ್ದರೆ ತನ್ನ ತಂದೆಗೆ ಅದರಿಂದ ಎಷ್ಟು ನಿರಾ ಲೋಚನೆಯಾಗುತ್ತಿತ್ತು? ಆದರೆ....ಆದರೆ ಅದು ಹಾಗಾಗಲೇ ಇಲ್ಲ. ತನ್ನ ತಂದೆ ದಿನ ಕಳೆದಂತೆ ತನ್ನ ಯೋಚನೆಯಿಂದಲೇ ಕೃಶರಾಗುತ್ತ ಇದ್ದರು. ತನಗೊಬ್ಬಳಿಗಾಗಿ, ತನ್ನ ಸುಖಕ್ಕಾಗಿ, ತಂದೆ ಎಷ್ಟು ಕಷ್ಟ ಪಡುತ್ತಿದ್ದಾರೆ? ಅತ್ತೆ ತನಗಾಗಿ, ನಿತ್ಯವೂ ದೇವರಲ್ಲಿ ಎಷ್ಟು ಬಗೆಯಿಂದ ಬೇಡಿಕೊಳ್ಳುತ್ತಾರೆ? ಇವರೆಲ್ಲರ ದುಃಖನಿವಾರಣೆ ಒಂದೇ ಬಾರಿಗೆ ಆಗುವಂತೆ ನಾನು ಸತ್ತು ಹೋಗಲೇ? ಎಂದು ಸರೂ ಅನೇಕ ಬಗೆಯಲ್ಲಿ ಚಿಂತಿಸುವಳು. ಆದರೆ ಮರು ಕ್ಷಣ ಅವಳ ನೆನಪು ತನ್ನ ತಾಯಿಯ ಮಾತುಗಳನ್ನು ಜ್ಞಾಪಿಸುತ್ತಿದ್ದಿತು. 'ಈ ಪ್ರಪಂಚದಲ್ಲಿ ಹೆಂಗಸಾಗಿ ಹುಟ್ಟಿದುದಕ್ಕೆ, ತನ್ನ ಗಂಡನ ಸೇವೆಯನ್ನು ಮನ ಮುಟ್ಟಿ ಮಾಡಿದರೆ ಅದೇ ಅವಳಿಗೆ ಸಿಗುವ ಮೋಕ್ಷ. ಇಹ-ಪರ ಎರಡರಲ್ಲಿಯೂ ಸದ್ಗತಿ ಹೊಂದಬೇಕಾದರೆ ಆ ಒಬ್ಬ ಗಂಡನ ಮೂಲಕವೇ.' ಎಂದು ತನ್ನ ತಾಯಿ ಪದೇಪದೇ ಹೇಳುತ್ತಿದ್ದ ಮಾತು ಜ್ಞಾಪಕಕ್ಕೆ ಬರುತ್ತಿತ್ತು. ತನ್ನ ತಾಯಿಯ ವಿಷಯ ಹೆಚ್ಚಾಗಿ ನೆನಪಿನಲ್ಲಿರಲಿಲ್ಲವಾದರೂ, ಆ ದಿನ, ಅವಳು ಸಾಯುವ ಮುನ್ನಾ ದಿನ, ತನ್ನೊಡನೆ ಹೇಳಿದ ಮಾತುಗಳು, ಈಗಲೂ ಪ್ರತಿಧ್ವನಿಯಾಗುತ್ತಿದೆಯೋ ಎನ್ನುವಂತಿದೆ. ಆಗ ತಾನು ಕೇವಲ ಎಂಟು ವರ್ಷದ ಹುಡುಗಿ. ಅವಳಿಗೆ ಅದರ ಅರ್ಥ ಲೇಶಮಾತ್ರವೂ ಆಗುತ್ತಿರಲಿಲ್ಲ. ಆದರೆ ಈಗ ಆ ಪ್ರತಿಯೊಂದು ಮಾತೂ, ತನಗೆ ಚೆನ್ನಾಗಿ ಮನದಟ್ಟಾಗಿದೆ. ಅದರಿಂದ ತಾನು ಹುಟ್ಟಿದುದು ಸಾಯುವುದಕ್ಕಲ್ಲಾ, ತನ್ನ ಕರ್ತವ್ಯವನ್ನು ಮಾಡಿಯೇ ತೀರಬೇಕು, ತನ್ನ ತಾಯಿಯ ಬಯಕೆಯನ್ನು ಈಡೇರಿಸಬೇಕು, ಹಾಗೆ ಮಾಡಿದರೇ ತನ್ನ ಜನ್ಮ ಸಾರ್ಥಕ ಎಂದು ಸರೂ ಯೋಚಿಸುತ್ತಲೇ ಕೂತಿದ್ದಳು. ಅಳಿದು ಹೋದ ತಾಯಿಯ ನೆನಪು ಬಂದು ಸರೂವಿನ ಕಣ್ಣುಗಳು ಹನಿಗೂಡಿದವು. ಹೀಗೆಯೇ, ತನ್ನ ಯೋಚನೆಯಲ್ಲಿ ಮುಳುಗಿದ ಸರೂಪಿಗೆ ಹೊತ್ತು ಎಷ್ಟಾಯಿತು ಎಂಬುದೇ ತಿಳಿಯಲಿಲ್ಲ. ಹಾಗೆಯೇ ಕಲ್ಲಿನಲ್ಲಿ ಕೊರೆದ ಪ್ರತಿಮೆಯಂತೆ ಗೋಡೆಯನ್ನೊರಗಿ, ರೂಮಿನಲ್ಲಿ ಕೂತೇ ಇದ್ದಳು ಸರೂ.

ರಂಗಮ್ಮನವರಿಗೂ ವಯಸ್ಸಾಗುತ್ತಾ ಬಂದಿತ್ತು. ಹಿಂದಿನಂತೆ ಚಟು

ವಟಿಕೆಯಿಂದ ಬೇಗ ಬೇಗ ಕೆಲಸ ಮಾಡಲಾಗುತ್ತಿರಲಿಲ್ಲ. ಸ್ವಲ್ಪ ಛಳಿ ಗಾಳಿಯಾದರಂತೂ ತಿರಿಯೇ ಹೋಯಿತು, ಕೆಮ್ಮು ನೆಗಡಿಯಿಂದ ಮಲಗಿಯೇ ಬಿಡುತ್ತಿದ್ದರು.

ಆಕಾಶವೆಲ್ಲಾ ಮೋಡದಿಂದ ತುಂಬಿಹೋಗಿತ್ತು. ಗಾಳಿಯೂ ಬಲ ವಾಗಿಯೇ ಬೀಸುತ್ತಿತ್ತು. ರಂಗಮ್ಮ ಕೆಮ್ಮುತಲೇ ಎದ್ದು ಕಿಡಿಕಿ ಬಾಗಿಲು ಗಳನ್ನು ಹಾಕಿ ದೀಪ ಹತ್ತಿಸಿವರು. ಸರೂ ಯಾವುದೂ ತಿಳಿಯದವಳಂತೆ ಅಲ್ಲಿಯೇ ಕೂತಿದ್ದಳು. ರಂಗಮ್ಮ ಹತ್ತಿರ ಬಂದು "ಯಾಕೆ ಮಗೂ, ಈ ಮುಚ್ಚಂಜಿ ಹೊತ್ತಿನಲ್ಲಿ ಹೀಗೆ ಕೂತಿರುವೆ? ಏಳು, ಹಾಗೆಲ್ಲಾ ಕೂಡಬಾರದು." ಎಂದು ಕೈ ಹಿಡಿದು ಎಬ್ಬಿಸಿದರು. ದೀಪದ ಬೆಳಕಿನಲ್ಲಿ ಸರೂವಿನ ದುಃಖದಿಂದ ಕಂದಿ ಹೋದ ಮುಖ ಕಾಣಿಸಿತು. "ಯಾಕೆ ಸರೂ, ಹೀಗೆ ಯಾವಾಗ ಅಂದರೆ ಆವಾಗ ಅಳುತ್ತಿರುವೆ? ಈ ಚಿಕ್ಕ ವಯಸ್ಸಿನಲ್ಲಿಯೇ ಇಲ್ಲದ ಯೋಚನೆಗಳನ್ನು ತಲೆಯಲ್ಲಿ ತುಂಬಿಕೊಂಡು ಅಳುತ್ತಾ ಕೂತರೆ ಆಯಿತು. ಮನುಷ್ಯನ ಜೀವ ಮಾನ ಒಂದೇ ಬಗೆಯಲ್ಲಿರುವುದಿಲ್ಲಾ ಮಗೂ. ಕಷ್ಟವೂ ಬರುತ್ತೆ, ಸುಖವೂ ಬರುತ್ತೆ. ಅದಾವುದಕ್ಕೂ ಧೈರ್ಯಗೆಡದೆ ತನ್ನ ಬಾಳ್ವೆಯನ್ನು ಅನುಸರಿಸಿಕೊಂಡು ಹೋಗುವುದೇ ಅವನ ಕರ್ತವ್ಯ. ಇಷ್ಟಕ್ಕೇ ನೀನು ಹೀಗೆ ಯೋಚನೆ ಪಟ್ಟರೆ ಮುಂದೆ ನೀನು ಸಂಸಾರದಲ್ಲಿ ಹೇಗೆ ಬಾಳುತ್ತೀಯೋ ನಾ ಬೇರೆ ಕಾಣೆ! ಹುಚ್ಚು ಹುಡುಗಿ, ಏಳು, ದೇವರಿಗೆ ದೀಪ ಹಚ್ಚಿ ನಮಸ್ಕಾರ ಮಾಡಿ, ನಿನ್ನ ಪಾಠ ಓದಿಕೋ ಹೋಗು." ಎಂದು ಕಣ್ಣೀರನ್ನು ತಮ್ಮ ಸೆರಗಿನಿಂದಲೇ ಒರಸಿದರು.

"ನನ್ನಿಂದ ನಿನಗೇ, ಅಣ್ಣನಿಗೆ ಎಷ್ಟು ಕಷ್ಟ ಅಲ್ಲವೇ ಅತ್ತೆ?" ಎಂದು ಸರೂ ಬಿಕ್ಕಳಿಸಿದಳು.

"ಕಷ್ಟಾ ಎಂದರೆ ಹೇಗೆ ಸರೂ? ನಮ್ಮ ವಂಶಕ್ಕೆಲ್ಲಾ ಇರುವವಳು ನೀನೊಬ್ಬಳು. ಇನ್ನೇನು ಆ ಗೋಪಾಲನಿಗಂತೂ ಆಗೋ ಹಾಗೆ ಕಾಣೋಲ್ಲಾ. ನಾಗರಪ್ರತಿಷ್ಠೆ ಆಯಿತು, ಹರಕೆ, ದೇವರು ದಿಂಡರು ಎಂದು ಎಲ್ಲಾ ಆಯ್ತು. ನಮ್ಮ ವಂಶದ ಕುಡಿ ನೀನೊಬ್ಬಳು. ಬಳ್ಳಿಗೆ ಕಾಯಿ ಭಾರವೇ ಅನ್ನುವ ಹಾಗೆ, ನೀನು ನನಗೆ ಹೊರೆಯೇ ಸರೂ? ಏನೋ ಇನ್ನೂ ಸಮಯ ಬಂದಿಲ್ಲ; ಗುರು ಬಲ ಒದಗಿ ಬಂದರೆ, ಯಾರಿಂದಲೂ ನಿಲ್ಲಿಸಲಾಗುವುದಿಲ್ಲ. ಆಗೇ ಆಗುತ್ತೆ, ಅದಕ್ಕೆ ಇಷ್ಟು ಯೋಚನೆ ಮಾಡುತ್ತಾರೆಯೇ? ಏಳು." ರಂಗಮ್ಮ ಕೈ ಹಿಡಿದು ಸರೂನ್ನ ಕರೆದುಕೊಂಡು ದೇವರ ಮನೆಗೆ ತೆರಳಿದರು.

ಸರೋಜಾ, ಶೀಲಾ, ಸರೂವಿನ ಗೆಳತಿಯರು. ಸ್ಕೂಲ್‌ಗೆ ಹೋಗು ವಾಗ ಬರುವಾಗ ಯಾವಾಗಲೂ ಅವರು ಮೂರು ಜನ ಒಂದು ಗುಂಪು. ಸರೋಜಾ ಹರಟೇಮಲ್ಲಿ. ಯಾವಾಗ ನೋಡಿದರೂ ಬರಿ ಮಾತು. ಊರಿನ ವಿಷಯವೆಲ್ಲಾ ಅವಳಿಗೆ ಗೊತ್ತು. ಮಾತಿನಲ್ಲಿ ಹೇಗೆಯೋ ಓದಿನಲ್ಲಿಯೂ ಹಾಗೆಯೇ. ಶೀಲಾ ಹೆಚ್ಚು ಮಾತಿನವಳಲ್ಲ. ಅದರಿಂದ ಸರೂವಿಗೂ ಅವ ಳಿಗೂ ಬಹಳ ಹೊಂದಿಹೋಗಿತ್ತು.

ನಾಲ್ಕೂವರೆಗೆ ಸ್ಕೂಲ್ ಬಿಟ್ಟ ನಂತರ ಮೂವರೂ ಕೂಡಿಯೇ ಮನೆ ಗಳಿಗೆ ಬರುತ್ತಿದ್ದರು. ಸರೂ ಯಾವ ಮಾತನ್ನೂ ಆಡದೆ ಸುಮ್ಮನೇ ಹೆಜ್ಜೆ ಹಾಕುತ್ತಿದ್ದಳು. "ನೋಡು ಶೀಲಾ, ಸರೂ ಈಗ ಮಾತನ್ನೇ ಆಡುವುದಿಲ್ಲ. ಮುಂಚೆ ನಾವು ಮಿಡಲ್ ಸ್ಕೂಲ್‌ಗೆ ಹೋಗುತ್ತಿದ್ದೆವಲ್ಲಾ ಆಗ ಎಷ್ಟು ನಗು, ಎಷ್ಟು ಮಾತು, ಹಾಸ್ಯ ಎಲ್ಲಾ ಮಾಡುತ್ತಿದ್ದಳು. ಯಾವ ಕಾಂಪಿಟಿಷನ್, ರನ್ನಿಂಗ್ ರೇಸ್, ಮ್ಯುಜಿಕಲ್ ಛೇರ್ ಇವುಗಳಲ್ಲೆಲ್ಲಾದರಲ್ಲೂ ಭಾಗ ವಹಿಸಿ ಮೊದಲನೆಯ ಬಹುಮಾನವನ್ನೇ ತೆಗೆದುಕೊಳ್ಳುತ್ತಿದ್ದಳು. ಆದರೆ ಈಗ ಯಾಕೆ ಹೀಗೆ ಮಂಕುಬಡಿದವಳಂತೆ, ಮಾತೂ ಕೂಡಾ ಆಡದೆ ಇದ್ದಾ ಳೆಯೆ?" ಎಂದಳು ಸರೋಜ.

"ಹೌದು ಕಣೇ, ನನಗೂ ಅದೇ ಅರ್ಥ ಆಗೋಲ್ಲಾ. ನೋಡು ಕ್ಲಾಸಿ ಗೆಲ್ಲಾ ಫಸ್ಟ ಆಗಿ ಬರೀತಾಳೆ 'ಎಸ್ಸೇ'ನ್ನಾ. ಮೊನ್ನೇ ದಿನ ನಮ್ಮ 'ಯೂನಿ ಯನ್ ಡೇ' ಸಮಾರಂಭದಲ್ಲಿ ಪ್ರಬಂಧಸ್ಪರ್ಧೆ ಇತ್ತಲ್ಲಾ, ಅದರಲ್ಲಿ ಭಾಗ ವಹಿಸೂ ಅಂತ ನಮ್ಮ ಇಂಗ್ಲೀಷ್ ಟೀಚರರೇ ಖುದ್ದಾಗಿ ಹೇಳಿದರು. ಆದರೂ "ನನಗೆ ಆ ಇಷ್ಟವಿಲ್ಲಾ ಸಾರ್, ಬರೆಯೋದಿಲ್ಲಾ." ಅಂತ ಅಂದುಬಿಟ್ಟಳು. ಪಾಪ ಅವರು ಇನ್ನೇನು ಅನ್ನೋದಕ್ಕಾಗುತ್ತೆ, ಸುಮ್ಮನಾಗಿಬಿಟ್ಟರು. ಅದೇಕೆ ಹೀಗಾಡುತ್ತಾಳೋ ನನಗೂ ಗೊತ್ತಿಲ್ಲಾ?"

ಸರೂ ಈ ಮಾತು ತನ್ನ ವಿಷಯವಾಗಿ ಅಲ್ಲವೇ ಅಲ್ಲಾ ಅನ್ನುವಂತೆ ಯಾವುದನ್ನೂ ಕಿವಿಗೆ ಹಾಕಿಕೊಳ್ಳದೆ ಸುಮ್ಮನೇ ನಡೆದು ಬರುತ್ತಿದ್ದಳು.

"ಅಲ್ಲವೇ ಶೀಲಾ, ನೀನೇ ಅವಳ ಮನೆಯ ಹತ್ತಿರ ಇರುವವಳು. ಅವರ ಮನೇ ವಿಷಯ ನಿನಗೇ ಹೆಚ್ಚು ಗೊತ್ತಿಲ್ಲಾ ಅಂದ್ರೆ?"

"ನಾನೂ ನಿನ್ನ ಹಾಗೆ ವಾಚಾಳಿಯಾಗಿದ್ದರೆ, ಏನೂ ಎಂತೂ ಅಂತ ಎಲ್ಲಾ ತಿಳಿಕೋತಿದ್ದೆ. ಆದರೂ ನನಗೆ ಗೊತ್ತಿರೋ ಹಾಗೆ, ಅವರ ಮನೇಲಿ

ಮದುವೆ ಮಾತು-ಕತೆ ಈಗ ಮೂರು ವರ್ಷದ ಕೆಳಗೆ ನಡೆದಿತ್ತು. ಹುಡುಗಾನೂ ಒಪ್ಪಿಕೊಂಡಿದ್ದನಂತೆ. ಆದರೆ ವರದಕ್ಷಿಣೆಯನ್ನು ಕೇಳಿದ್ದರಿಂದ ಮದುವೆ ವಿಷಯ ಅಲ್ಲಿಗೇ ನಿಂತಿತು. ಬಹುಷಃ ಅದನ್ನೇ ಸರೂ ಮನಸ್ಸಿಗೆ ಹಚ್ಚಿ ಕೊಂಡಿರಬಹುದು." ಎಂದಳು ಶೀಲಾ.

"ಓಹೋ, ಅಮ್ಮಾವ್ರದ್ದು ಹೀಗಿದೆಯೋ ಸಮಾಚಾರ! ಪಾಪ ಕಣೇ ಶೀಲಾ, ನಮ್ಮ ಸರಸು, 'Love Sick' ಆಗಿಬಿಟ್ಟಿದ್ದಾಳೆ ಕಣೇ." ಎಂದು ಸರೂವಿನ ಕಡೆ ತಿರುಗಿ "ಸರೂ, ನಿನ್ನ ಮದುವೆಗೆ ನನ್ನ ಮರೆಯಬೇಡಾ ತಿಳಿ ಯಿತೇ? ನೀನು ನಿನ್ನ ಗುಟ್ಟು ಬಿಡದೇ ಇದ್ದರೆ ಬೇಡ. ನಾನೇ ಈ ದಿನ ಸಾಯಂಕಾಲ ನಿಮ್ಮ ಮನೇಗೆ ಬಂದು ನಿಮ್ಮತ್ತೇನ್ನೇ ಕೇಳಿ ತಿಳಿದುಕೋತೀನಿ. ಗೊತ್ತಾಯಿತೆ?" ಎಂದು ಸರೂವಿನ ಮುಖವನ್ನು ಮೇಲಕ್ಕೆ ಎತ್ತಿದಳು.

ಸರೂ ನಗು ತಡೆಯಬೇಕೆಂದರೂ ಸಾಧ್ಯವಾಗಲಿಲ್ಲ. "ಥೂ ಹೋಗೇ, ನೀನೊಬ್ಬಳು ನಾಚಿಕೆಗೆಟ್ಟವಳು, ಏನೇನೋ ಹೇಳ್ತಾಳೆ!" ಎಂದು ಸರೋಜ ಳನ್ನೇ ದುರುಗುಟ್ಟಿ ನೋಡಿದಳು ಸರೂ.

"ಈಗ ಗೊತ್ತಾಗುತ್ತೆ ಯಾರು ಮಾನವಂತರು, ಯಾರು ನಾಚಿಕೆಗೆಟ್ಟ ವರು, ಅಂತ. ಯಾರು ಮೊದಲು ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋಗುತ್ತಾರೆ ನೋಡೋಣಾ?"ಎಂದು ಸರೋಜ ಪ್ರತಿ ಸವಾಲನ್ನು ಹಾಕಿದಳು.

"ಆ ಮಾತೆಲ್ಲಾ ಈಗ ಯಾಕೆ? ನಾಳೆ 'Physics test' ಇದೆ. ಓದಿ ಕೊಳ್ಳದೆ, ಏನೋ ಬರೀ ಮಾತಿನಲ್ಲಿ ಕಾಲ ಕಳೀತಾಳೆ!" ಸರಸು ಆ ಮಾತನ್ನು ಅಲ್ಲಿಗೇ ಮುಗಿಸಿದಳು.

ಈ ವೇಳೆಗೆ ಮನೆ ಸಮೀಪಿಸಿದ್ದುದರಿಂದ ಅವರವರ ಮನೆಗಳಿಗೆ ಅವರವರು ತೆರಳಿದರು.

ಸರೂ ಈಗ ಹಿಂದಿನಂತೆ ಎಂಟು ಗಂಟೆಯ ತನಕ ಮಲಗುತ್ತಲಿರಲಿಲ್ಲ. ಬೆಳಿಗ್ಗೆ ಆರು ಗಂಟೆಗೇ ಎದ್ದು ಸ್ನಾನ ಮುಗಿಸಿ ದೇವರಿಗೆ ನಮಸ್ಕಾರ ಮಾಡಿದ ನಂತರವೇ ಕಾಫಿ ಕುಡಿಯುತ್ತಿದ್ದಳು. ಯಾವಾಗಾದರೂ ಚಿಕ್ಕ ಪುಟ್ಟ ಕೆಲಸ

ಗಳಲ್ಲಿ ಅತ್ತೆಗೆ ನೆರವಾಗುತ್ತಿದ್ದಳು. ಆದರೆ ಅಡುಗೆಯ ಕೆಲಸಕ್ಕೆ ಇನ್ನೂ ರಂಗಮ್ಮ ಇವಳನ್ನು ಬಿಟ್ಟಿರಲಿಲ್ಲ. ರಂಗಮ್ಮನವರಿಗೆ ಹುಷಾರಿಲ್ಲದ ದಿನ ಗೋವಿಂದರಾಯರೇ ಅಡುಗೆ ಮಾಡಿಟ್ಟು, ತಾವೂ ಊಟ ಮಾಡಿ, ಸರೂವಿಗೂ ಬಡಿಸಿ, ಮಿಕ್ಕಿದ್ದನ್ನು ರಂಗಮ್ಮನವರಿಗೆ ಮುಚ್ಚಿಟ್ಟು ಅಂಗಡಿಗೆ ತೆರಳುತ್ತಿದ್ದರೇ ವಿನಾ, ಒಂದು ದಿನವೂ ಸರೂ ಅಡುಗೆ ಮಾಡಲು ಬಿಡುತ್ತಿರಲಿಲ್ಲ. "ನಾನೇ ಈ ದಿನ ಅಡುಗೆ ಮಾಡುತ್ತೀನಣ್ಣಾ. ನಾನೂ ಕಲಿತುಕೊಂಡ ಹಾಗಾಗುತ್ತೆ." ಅಂದರೆ, "ಅಯ್ಯೊ, ಹೆಂಗಸಾಗಿ ಹುಟ್ಟಿದ ಮೇಲೆ ಮಾಡಬೇಕಾದ್ದು ಇದ್ದೇ ಇದೆಯೋ ಮಗೂ? ನಾಳೆ ನಿನ್ನ ಅತ್ತೆಯ ಮನೆಯಲ್ಲಿ ಮಾಡಿದರೆ ಸಾಕು. ಅದಕ್ಕೆ ಈಗಿನಿಂದಲೂ ಏನು ಅವಸರ?" ಎಂದು ಅವಳ ಮಾತನ್ನು ಹಾರಿಸಿಬಿಡುತ್ತಿದ್ದರು ಗೋವಿಂದರಾಯರು. ಹೀಗಾಗಿ ಸರೂ ಇನ್ನೂ ಅಡುಗೆ ಮನೆಯ ಮುಖವನ್ನೇ ಸರಿಯಾಗಿ ನೋಡಿರಲಿಲ್ಲ.

ಸರೂ ಎಂದಿನಂತೆ ತನ್ನ ಕೆಲಸ ಮುಗಿಸಿ ಪಾಠ ಓದಲು ರೂಮಿಗೆ ಹೋದಳು. ಆ ದಿನವೇ 'physics test' ಇದ್ದುದರಿಂದ ಅದನ್ನು ಮೊದಲಿನಿಂದಲೂ ಚೆನ್ನಾಗಿ ಓದಿಕೊಳ್ಳಲಾರಂಭಿಸಿದಳು.

"ಸರೂ, ಈ ದಿನ ರಂಗರಾಯರ ಮನೆಗೆ ಹೋಗಬೇಕು ಮಗೂ. ಅವರ ಮಗನಿಗೆ ಉಪನಯನವಂತೆ. ಊಟಕ್ಕೆ ಬರಬೇಕು ಎಂದು ಎಲ್ಲರನ್ನೂ ಕರೆದಿದ್ದಾರೆ. ಈ ದಿನ ಸ್ಕೂಲಿಗೆ ಹೋಗಬೇಡಾ. ರಜಾ ಕೇಳಿಕೋ." ಎಂದು ರಂಗಮ್ಮ ರವೆ ಹುರಿಯುತ್ತಾ ಅಡುಗೆಮನೆಯಿಂದಲೇ ಕೂಗಿ ಹೇಳಿದರು.

"ಈ ದಿನ ನನಗೆ 'ಟೆಸ್ಟ್' ಇದೆ ಅಮ್ಮಾ, ನಂಗೆ ಬರೋಕಾಗೋದಿಲ್ಲಾ. ಏನು ಅವರ ಮನೆಗೆ ಹೋಗೇ ತೀರಬೇಕೂಂತ ಶಾಸ್ತ್ರ? ಕರೆದವರ ಮನೆಗೆಲ್ಲಾ ನಾನು ಬರೋದಿಲ್ಲಾಮ್ಮಾ."

"ಹಾಗೆಲ್ಲಾ ಅಂದರೆ ಹೇಗೆ ಮಗೂ? ನಮ್ಮ ಜನ, ನಮ್ಮವರು, ನೆಂಟರು ಇಷ್ಟರು ಇವರ ಮನೆಗಳಿಗೆ ಹೋಗದೆ ಇರುವುದಕ್ಕಾಗುತ್ತದೆಯೇ? ಈಗ ನಾವು ಅವರ ಮನೆಗೆ ಹೋಗದೆ ಇದ್ದರೆ, ನಾಳೆ ಅವರು ನಮ್ಮ ಮನೆಗೆ ಕರೆದಾಗ ಬರುತ್ತಾರೆಯೆ? ನಮ್ಮವರು ಅಂದ ಮೇಲೆ ಹೋಗಿ ಬಂದು ಮಾಡಬೇಕಮ್ಮಾ. ಗೋವಿಂದೂ ಕೂಡಾ ಕೆಲಸ ಬೇಗ ಮುಗಿಸಿಕೊಂಡು ನೇರವಾಗಿ ಅಲ್ಲಿಗೇ ಬರುತ್ತೇನೆಂದು ಹೇಳಿ ಹೋಗಿದ್ದಾನೆ. ನೀನು ಬೇಕಾದರೆ ನಿನ್ನ ಆ ಟೆಸ್ಟೋ-ಗಿಸ್ಟೋ ಮುಗಿಸಿಕೊಂಡು ರಜಾ ಕೇಳಿಕೊಂಡು ಬಾ, ಒಂದು ಗಂಟೆಯ

ವೇಳೆಗೆ. ಖಂಡಿತಾ ಈ ದಿನ ಹೋಗಲೇಬೇಕು. ನೀನು ಸುಮ್ಮನೆ ಇಲ್ಲದು ದಕ್ಕೆ ಹಟ ಮಾಡಬೇಡ." ಎಂದು ರಂಗಮ್ಮ ಹುರಿಯುತ್ತಿದ್ದ ರವೆಯನ್ನು ಕೆಳಗಿಟ್ಟು ರೂಮಿನ ಬಳಿ ಬಂದು ಹೇಳಿದರು.

"ಹುಂ, ಆಗಲೀ ಆತ್ತೆ. ನೀನು ಬರಲೇಬೇಕು ಅಂದರೆ ಬರುತ್ತೇನೆ ಆಯಿತೋ?" ಎಂದು ಓದುತ್ತಿದ್ದ ಪುಸ್ತಕದ ಕಡೆ ಮುಖ ತಿರುಗಿಸಿದಳು.

ಶ್ರೀಕಂಠಯ್ಯ 'ದಿ ಬ್ಯಾಂಗಲೂರ್ ಟ್ರೇಡಿಂಗ್ ಕಂಪನಿ'ಯ ಯಜಮಾನ. ಮಲ್ಲೇಶ್ವರದ ಬಡಾವಣೆಯಲ್ಲಿರುವ ಸ್ವಂತ ಮನೆಯಲ್ಲಿ ವಾಸ. ಇವರ ಧರ್ಮ ಪತ್ನಿ ಜಾನಕೀಬಾಯಿ.

ಶ್ರೀಕಂಠಯ್ಯ ನಾಲ್ಕು ಜನ ಅಣ್ಣಂದಿರು, ಇಬ್ಬರು ಅಕ್ಕಂದಿರ ಜೊತೆ ಯಲ್ಲಿ ಬೆಳೆದವರು. ಕೇವಲ ಚಿಕ್ಕ ವಯಸ್ಸಿನಲ್ಲಿಯೇ ತಂದೆ-ತಾಯಿಯವ ರನ್ನು ಕಳೆದುಕೊಂಡು, ಅಣ್ಣಂದಿರ ಪೋಷಣೆಯಲ್ಲಿರಬೇಕಾಯಿತು. ಸ್ವಲ್ಪ ಬುದ್ಧಿ ತಿಳಿದ ಮೇಲೆ ತಮ್ಮ ಹಳ್ಳಿಯಾದ ಹುಣಸೂರನ್ನು ಬಿಟ್ಟು ಬೆಂಗಳೂರಿಗೆ ಬಂದು, ವಾರ, ಭಿಕ್ಷಾನ್ನ ಮಾಡಿಕೊಂಡು ಇಂಟರ್‌ಮೀಡಿಯೇಟ್ ಪರೀಕ್ಷೆ ಯಲ್ಲಿ ತೇರ್ಗಡೆಯಾದಾಗ ಅವರಿಗೆ ಆಗಲೇ ಇಪ್ಪತ್ತೆರಡು ವರ್ಷ ವಯ ಸ್ಸಾಗಿತ್ತು.

ಬಡತನದಲ್ಲಿ ಬೆಳೆದಿದ್ದುದರಿಂದ ದೇಹಾರೋಗ್ಯ ಚೆನ್ನಾಗಿಯೇ ಇತ್ತು. ಹುಡುಗ ಕಟ್ಟುಮಸ್ತಾಗಿದ್ದು ನೋಡಲು ಲಕ್ಷಣವಾಗಿದ್ದ. ಇವನು ವಾರದ ಊಟಕ್ಕೆ ಹೋಗುತ್ತಿದ್ದ ಇಂಜನಿಯರ್ ರಾಘವೇಂದ್ರರಾಯರಿಗೆ ಒಬ್ಬಳೇ ಮಗಳು ಜಾನಕಿ. ಸರಿ ಅವರ ಗಮನ ಶ್ರೀಕಂಠನ ಮೇಲೆ ಬಿತ್ತು.

ಜಾನಕಿ ಬಣ್ಣದಲ್ಲಿ ಕಪ್ಪು, ಕುಳ್ಳು. ಸಾಲದುದಕ್ಕೆ ಹಲ್ಲು ಬೇರೆ ಉಬ್ಬಾ ಗಿತ್ತು. ಅದರಿಂದ ಅವಳಿಗೆ ವರ್ಷ ಹದಿನೆಂಟಾಗಿದ್ದರೂ ಇನ್ನೂ ಕನ್ಯಾ ಕುಮಾರಿಯೇ ಆಗಿದ್ದಳು. ವರಶೋಧನಕ್ಕೆ ತಿರುಗಿ-ತಿರುಗಿ ರಾಘವೇಂದ್ರ ರಾಯರಿಗೆ ಮುಪ್ಪು ಬಂದಿತ್ತು. ಹೀಗೆ ತೀರ ಬೇಸರದ ಸ್ಥಿತಿಯಲ್ಲಿರುವಾಗಲೇ ಅವರಿಗೆ ಶ್ರೀಕಂಠಯ್ಯನ್ನ ಒಂದು ಮಾತು ಯಾಕೆ ಕೇಳಿಬಿಡಬಾರದು ಎಂಬ

ಯೋಚನೆ ಬಂದು, ಒಂದು ದಿನ ಶ್ರೀಕಂಠಯ್ಯನ ಕುಲ ಗೋತ್ರಗಳನ್ನೆಲ್ಲಾ ಕೇಳಿ ತಿಳಿದುಕೊಂಡರು. ಅವನು ತಮ್ಮ ಜಾತಿಯವನೇ ಎಂದು ತಿಳಿದ ಮೇಲಂತೂ ಅವರ ಸಂತೋಷಕ್ಕೆ ಕೊನೆಯೇ ಇರಲಿಲ್ಲ.

ಶ್ರೀಕಂಠಯ್ಯ ಅಣ್ಣಂದಿರೊಡನೆ ಜಗಳವಾಡಿಕೊಂಡು ಬಂದುದರಿಂದ ಅವರೊಡನೆ ಮಾತುಕತೆಯನ್ನೂ ಆಡುತ್ತಿರಲಿಲ್ಲ. ಹೀಗೆ ಒಬ್ಬಂಟಿಗನಾಗಿದ್ದ ತನಗೆ, ರಾಘವೇಂದ್ರರಾಯರು ತಮ್ಮ ಮಗಳನ್ನು ಕೊಡಲು ಸಿದ್ಧರಾಗಿರುವು ದನ್ನು ಕಂಡು ಅತ್ಯಂತ ಸಂತೋಷವೂ ಆಯ್ತು. ಅವರು ಕೇಳಿದ ಕೂಡಲೇ ತನ್ನ ಒಪ್ಪಿಗೆಯನ್ನೂ ಕೊಟ್ಟನು.

ಒಂದು ಶುಭ ದಿನ ಶ್ರೀಕಂಠಯ್ಯ-ಜಾನಕಿಯರ ವಿವಾಹ ವಿಜೃಂಭಣೆ ಯಿಂದ ರಾಘವೇಂದ್ರರಾಯರ ಮನೆಯಲ್ಲಿಯೇ ನಡೆಯಿತು. ಶ್ರೀಕಂಠಯ್ಯನ ಅಣ್ಣಂದಿರಾರೂ ಮದುವೆಗೆ ಬರಲೇ ಇಲ್ಲ. ಮದುವೆಯ:ನಂತರ ಶ್ರೀಕಂಠಯ್ಯ ನಿಗೆ ಮಾವನ ಮನೆಯೇ ನೆಲೆಯಾಯಿತು.

ತನಗೆ ಯಾವ ಕೆಲಸಕ್ಕೂ ಸೇರಲಿಕ್ಕೆ ಇಷ್ಟವಿಲ್ಲವೆಂದೂ, ತಾನು ಯಾರಿಗೂ ಅಡಿಯಾಳಾಗಿ ಇರುವುದಿಲ್ಲವೆಂದೂ, ತಾನೇ ಸ್ವಂತ ಯಾವುದಾ ದರೂ ವ್ಯಾಪಾರ ಮಾಡುವೆನೆಂದೂ ಶ್ರೀಕಂಠಯ್ಯ ತನ್ನ ಮಾವನಿಗೆ ತಿಳಿಸಿದಾಗ, ಅವರೂ ಅನೇಕ ಬಗೆಯಲ್ಲಿ ಹೇಳಿ ನೋಡಿದರು: 'ಇನ್ನೂ ಮುಂದಕ್ಕೆ ಓದು, ಎಲ್ಲಿಯ ವರೆಗೆ ಬೇಕಾದರೂ ಓದಿಸುತ್ತೇನೆ. ಈ ವ್ಯಾಪಾರ ಅದೆಲ್ಲಾ ನಮ್ಮಂತಹ ವರಿಗೆ ಸರಿಯಾಗುವುದಿಲ್ಲ. ಅದರಿಂದ ಯಾವುದಾದರೂ ಒಳ್ಳೆಯ ಕೆಲಸ ನಾನು ಕೊಡಿಸುತ್ತೇನೆ.' ಎಂದು. ಆದರೆ ಅದಾವುದಕ್ಕೂ ಶ್ರೀಕಂಠಯ್ಯ ಜಗ್ಗ ಲಿಲ್ಲ. ಕೊನೆಗೆ ವಿಧಿಯಿಲ್ಲದೆ ರಾಘವೇಂದ್ರರಾಯರು ಅಳಿಯನ ಹಟಕ್ಕೆ ತಲೆ ಬಾಗಬೇಕಾಯಿತು. ಅಳಿಯನನ್ನು ಕರೆದು ತಮ್ಮ ಗಳಿಕೆಯಾದ ಹತ್ತುಸಾವಿರ ರೂಪಾಯಿಗಳನ್ನು ಅವನ ವಶಕ್ಕೆ ಕೊಟ್ಟು, ಅದನ್ನು ಅವನ ವ್ಯಾಪಾರದ ಉದ್ಯೋಗಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಹೇಳಿದಾಗ, ಶ್ರೀಕಂಠಯ್ಯ ನಿಗೆ ಮಾತುಗಳೇ ಹೊರಡಲಿಲ್ಲ.

"ದಯವಿಟ್ಟು ಕ್ಷಮಿಸಿ ಮಾವ, ಇದುವರೆಗೂ ನಿಮ್ಮ ಋಣದಲ್ಲಿಯೇ ಇದ್ದಿದ್ದಾಯ್ತು. ಇನ್ನು ಇದನ್ನು ತೆಗೆದುಕೊಂಡು, ನಾನು ಸಾಯುವ ವರೆಗೂ ನಿಮ್ಮ ಹಂಗಿನಲ್ಲಿಯೇ ಬದುಕಲಾರೆ. ನಿಮ್ಮ ಈ ಉಪಕಾರಕ್ಕೆ ನಾನು ನಿಮಗೆ ನನ್ನ ಜೀವಾದ್ಯಂತ ಋಣಿ. ಇದೊಂದು ವಿಷಯದಲ್ಲಿ ಮಾತ್ರ ನನ್ನನ್ನು ಈ ರೀತಿ

ಬಂಧಿಸಬೇಡಿ" ಎನ್ನುವಾಗ ಶ್ರೀಕಂಠಯ್ಯನ ಕೊರಳು ಬಿಗಿದು ಬಂತು. ಅಳಿಯನ ಆ ಆತ್ಮಾಭಿಮಾನವನ್ನು ನೋಡಿ ಅವರಿಗೂ ಒಂದು ಬಗೆಯ ಗೌರವ ಬಂದಿತು. ಆ ಮಾತನ್ನು ಪುನಃ ರಾಘವೇಂದ್ರರಾಯರು ಅಳಿಯನ ಮುಂದೆ ಪ್ರಸ್ತಾಪಿಸಲಿಲ್ಲ.

ಎರಡು-ಮೂರು ವರ್ಷಗಳ ಕಾಲ ಶ್ರೀಕಂಠಯ್ಯ ಎಲ್ಲಾ ಬಗೆಯ ಕಾರ್ಖಾನೆಗಳಲ್ಲಿಯೂ ಕೆಲಸ ಮಾಡಿ, ಅದರ ವಿಷಯವಾಗಿ ತಿಳುವಳಿಕೆ ಹೊಂದಿದನು. ಮಾವನವರ ಅನುಮತಿ ಪಡೆದು, ಅವರ ಮೂಲಕ ಹತ್ತು ಸಹಸ್ರ ರೂಪಾಯಿಗಳನ್ನು ಸಾಲ ತೆಗೆದು ಒಂದು ಪುಟ್ಟ ಕಾರ್ಖಾನೆಯನ್ನು ತೆಗೆದನು. ಅದು ಮನೆಯಿಂದ ಕೇವಲ ಎರಡು ಫರ್ಲಾಂಗುಗಳ ದೂರದಲ್ಲಿದ್ದಿತು. ರಾಘವೇಂದ್ರ ರಾಯರೂ ಉತ್ಸಾಹದಿಂದ ಅಳಿಯನ ಜೊತೆಗೂ ಓಡಾಡಿ, ಕಾರ್ಖಾನೆಯ ಪ್ರಾರಂಭೋತ್ಸವವನ್ನು ಚೆನ್ನಾಗಿಯೇ ನಡೆಸಿದರು.

ಕಾರ್ಖಾನೆಯಲ್ಲಿ ಕೆಲಸ ಮಾಡಲು ಮುಂಚೆ ಕೇವಲ ಹತ್ತು ಜನರನ್ನು ನೇಮಿಸಿಯಾಯಿತು. ಎರಡು 'ಲೇಥ್', ಒಂದು ಮೋಟಾರ್, ಇವುಗಳಿಂದ ಕೆಲಸ ಶುರು ಆಯಿತು. ಅದರಲ್ಲಿ ಕೆಲಸ ಮಾಡಲು 'ಟರ್ನರ್' 'ಫಿಟರ್' ಎಂದು ಎಲ್ಲಾ ಜನರನ್ನು ನೇಮಿಸಿಯಾಯಿತು. ಹಿತ್ತಾಳೆಯ ಪಾತ್ರೆಗಳನ್ನು ತಯಾರುಮಾಡುವುದು, ಕಂಚಿನ ಸಾಮಾನು ತಯಾರುಮಾಡುವುದು, ಕಲಾಯುಮಾಡುವುದು ಮುಂತಾದ ಈ ಚಿಕ್ಕ ಪುಟ್ಟ ಕೆಲಸಗಳಿಂದ ಶುರು ಆಯಿತು.

ಕಾರ್ಖಾನೆಯಲ್ಲಿ ತಿಂಗಳಿಗೆ ಸಾಕಷ್ಟು ವರಮಾನ ಬರುತ್ತದೆ ಎಂಬುದು ಖಚಿತವಾದ ಮೇಲೆ ಶ್ರೀಕಂಠಯ್ಯ ಬೇರೆ ಸಂಸಾರ ಹೂಡಲು ಮಾವನರ ಅನುಮತಿಯನ್ನು ಕೇಳಿದಾಗ, ಅವರಿಗೆ ಅದು ಸುಲಭವಾಗಿ ದೊರಕಲಿಲ್ಲ. "ಇಲ್ಲಿಯೇ ಇದ್ದರೆ ನಿನಗೆ ಬಾಧಕವೇನು ? ಇದು ನಿಮ್ಮ ಮನೆಯಲ್ಲವೇನು ? ನೀವಿಬ್ಬರೂ ಹೊರಟು ಹೋದರೆ ಈ ದೊಡ್ಡ ಮನೆಯಲ್ಲಿ ನಾನೊಬ್ಬನೇ ಹೇಗೆ ಕಾಲ ಕಳೆಯಲಿ ? ಹೇಳು ? " ಎಂದರು ರಾಘವೇಂದ್ರರಾಯರು.

"ನೀವು ಏನೂ ತಿಳಿದುಕೊಳ್ಳಬೇಡಿ ಮಾವ. ನೀವೂ ಕೂಡ ನಮ್ಮ ಜೊತೆಯಲ್ಲಿಯೇ ಬರಬಹುದಲ್ಲಾ?" ಎಂದ ಶ್ರೀಕಂಠಯ್ಯ. ಆದರೆ ಶ್ರೀಕಂಠಯ್ಯ ಮನೆ ಗೊತ್ತುಮಾಡಿ ಸಂಸಾರ ಹೂಡಬೇಕೆನ್ನುವುದರಲ್ಲಿಯೇ, ಒಂದು ದುರ್ಘಟನೆ ನಡೆಯಿತು. ಒಂದು ದಿನ ಸಂಜೆ ರಾಘವೇಂದ್ರರಾಯರು ಆಫೀಸಿನಿಂದ

ಮನೆಗೆ ಬಂದವರೇ ತಲೆನೋವೆಂದು ಮಲಗಿದರು. ಅಸಾಧ್ಯವಾದ ತಲೆ ನೋವು ಬಂದುದರಿಂದ ತಲೆಗೆ ಒದ್ದೆಬಟ್ಟೆ ಹಾಕಿಕೊಂಡು ಮಲಗಿದರು. ಆದರೆ ಕೆಲವೇ ಗಂಟೆಗಳೊಳಗಾಗಿ ರಾಘವೇಂದ್ರರಾಯರು ಈ ಇಹಲೋಕವನ್ನೇ ತ್ಯಜಿಸಿದ್ದರು !

ರಾಘವೇಂದ್ರರಾಯರಿಗೆ ಜಾನಕಿ ಒಬ್ಬಳೇ ಮಗಳಾದ್ದುದರಿಂದ ಅವರ ಆಸ್ತಿ ಎಲ್ಲವೂ ಅವಳಿಗೇ ಬಂದಿತು. ದೊಡ್ಡದಾದ ಬಂಗಲೆ, ಇನ್‌ಷ್ಯೂರೆನ್ಸ್ ಹಣ ಹತ್ತುಸಾವಿರ ರೂಪಾಯಿ ಇವೆಲ್ಲವೂ ಜಾನಕಿಯ ಹೆಸರಿಗೇ ಬಂದುದ ರಿಂದ, ಮೊದಲೇ ಮೆರೆಯುತ್ತಿದ್ದ ಅವಳಿಗೆ ಈಗ ಇನ್ನೂ ಹೆಚ್ಚಿನ ಅಹಂಕಾರ ಬಂದಿತು.

ಶ್ರೀಕಂಠಯ್ಯ ಮನೆ ಗೊತ್ತುಮಾಡುವ ಆಸೆಯನ್ನು ಅಲ್ಲಿಗೇ ಬಿಡಬೇಕಾ ಯಿತು. ವರ್ಷಗಳು ಕಳೆದ ಮೇಲೆ, ತನ್ನ ಕಾರ್ಖಾನೆಯಲ್ಲಿ ತಯಾರಾದ ಸಾಮಾನುಗಳನ್ನು ಬಿಕರಿ ಮಾಡಲು ಒಂದು ಹೊಸ ಅಂಗಡಿಯನ್ನು ತೆರೆದು ಅದಕ್ಕೆ 'ದಿ ಬ್ಯಾಂಗಲೂರ್ ಟ್ರೇಡಿಂಗ್ ಕಂಪನಿ' ಎಂದು ಹೆಸರಿಟ್ಟಾಯಿತು. ಬರುತ್ತಿದ್ದ ವರಮಾನ, ಜಾನಕೀಬಾಯಿಯ ಕೈವಾಡದಲ್ಲಿ, ಮನೆಯ ಖರ್ಚಿಗೇ ಸರಿಹೋಗುತ್ತಿತ್ತು. ಕಾರ್ಖಾನೆಗಾಗಿ ಮಾಡಿದ ಸಾಲ ತೀರಿಸಲು ಶ್ರೀಕಂಠಯ್ಯ ಮಾಡಿದ್ದ ಪ್ರಯತ್ನವೆಲ್ಲವೂ ನೀರಿನಲ್ಲಿ ಮಾಡಿದ ಹೋಮವಾಗಿತ್ತು. ಸಾಲವು ಬಿಟ್ಟದಂತೆ ಕರಗದೆಯೇ ಕೂತಿತ್ತು. ಜೊತೆಗೆ ಸಂಸಾರವೂ ಬೆಳೆಯುತ್ತಾ ಹೋಗಿತ್ತು. ಶ್ರೀಕಂಠಯ್ಯನೀಗ ದೊಡ್ಡ ಸಂಸಾರಸ್ಥ. ಆರು ಜನ ಗಂಡು ಮಕ್ಕಳು ಮತ್ತು ಒಬ್ಬ ಮಗಳ ತಂದೆಯಾಗಿದ್ದಾನೆ. ಸಂಸಾರ ಬೆಳೆದಂತೆ ಜಾನಕೀಬಾಯಿಯ ನೇತೃತ್ವದಲ್ಲಿ, ಶ್ರೀಕಂಠಯ್ಯನ ಸಾಲವೂ ಬೆಳೆಯುತ್ತ ನಡೆದಿದೆ.

ರಂಗಮ್ಮ, ಸರೂವಿನೊಡನೆ ಗಾಡಿಯಿಂದ ಇಳಿದು, ಚಪ್ಪರ ಹೊಕ್ಕರು. ಚಪ್ಪರದ ತುಂಬಾ ಗಂಡಸರು ಮಾತುಕತೆಯಾಡುತ್ತಾ ಕುಳಿತಿದ್ದರು. ಇನ್ನೂ ಕಾರ್ಯಾರಂಭವಾಗಿರಲಿಲ್ಲ. ಸರೂ, ಅಚ್ಚ ಹಸಿರು ಬಣ್ಣದ ಜರಿಯ ಸೀರೆ

ಉಟ್ಟು, ಅದಕ್ಕೊಪ್ಪುವ ರವಕೆ ತೊಟ್ಟಿದ್ದಳು. ಮಧ್ಯಕ್ಕೆ ಬೈತಲೆ ತೆಗೆದು, ಮೇಲಕ್ಕೆ ಬಾಚಿ, ಜಡೆ ಹೆಣೆದು, ತುದಿಯನ್ನು ಹಾಗೆಯೇ ಸುರುಳಿ ಸುತ್ತಿ ಬಿಟ್ಟಿದ್ದಳು. ಹಣೆಯಲ್ಲಿ ಅಗಲವಾದ ಕುಂಕುಮ, ಕತ್ತಿನಲ್ಲಿ ಎರಡೆಳೆ ಸರ, ಕೈಗೆ ಚಿನ್ನದ ಬಳೆಗಳು, ಕಾಲಿಗೆ ಚಪ್ಪಲಿ ಧರಿಸಿ ಬಂದ ಸರೂವನ್ನು, ಎಲ್ಲರೂ ತಿರುಗಿ ನೋಡಿದರು.

ರಂಗಮ್ಮ ಅಲ್ಲಿಯೇ ಕೆಲವು ನಿಮಿಷ ಯಾರ ಜೊತೆಯಲ್ಲಿಯೋ ಮಾತಾ ಡುತ್ತಾ ನಿಂತರು. ಸರೂಗೆ ಅಷ್ಟು ಜನ ಗಂಡಸರ ಮಧ್ಯೆ ನಿಲ್ಲುವುದು ಸಾಧ್ಯ ವಾಗದೆ ಒದ್ದಾಡಿದಳು. ಮೊದಲೇ ನಾಚಿಕೆಗೊಂಡ ಸರೂ, ಈಗ ಅಷ್ಟು ಜನ ಗಂಡಸರೂ ತನ್ನನ್ನು ನೋಡುತ್ತಿದ್ದಾರೆಂಬುದನ್ನು ತಿಳಿದು ಇನ್ನೂ ಕಂಪಿಸುತ್ತಾ ತಲೆ ತಗ್ಗಿಸಿ ಅತ್ತೆಯ ಪಕ್ಕದಲ್ಲಿಯೇ ನಿಂತಿದ್ದಳು.

ಅಲ್ಲಿಯೇ ಮಾತನಾಡುತ್ತಾ ಕುಳಿತ ಶ್ರೀಕಂಠಯ್ಯ ಸರೂವನ್ನು ಆಪಾದ ಮಸ್ತಕ ನೋಡಿದರು. ಒಂದೇ ಬಾರಿಗೆ ಸರೂ ಅವರ ಮನಸ್ಸಿಗೆ ಬಂದಳು. ಸರೂ ಒಳಗೆ ಹೋಗುವ ವರೆಗೂ ಅವಳನ್ನೇ ನಿಟ್ಟಿಸುತ್ತಿದ್ದರು.

ಸರೂ ಅತ್ತೆಯೊಡನೆ ಮನೆಯೊಳಕ್ಕೆ ನಡೆದಳು. ಮೊದಲೇ ಗಂಭೀರ ಳಾಗಿದ್ದ ಸರೂ, ಈಗ ತೀರಾ ಮಾತು ಬಾರದ ಮೂಕಿಯಂತೆ ಸುಮ್ಮನೇ ಅತ್ತೆ ಎಲ್ಲಿಗೆ ಹೋದರೆ ಅಲ್ಲಿ, ಎಲ್ಲಿ ಕೂತರೆ ಅಲ್ಲಿ, ಇರುತ್ತಿದ್ದಳು.

ಬ್ರಹ್ಮೋಪದೇಶವೂ ಆಯಿತು. ಭಿಕ್ಷಾಪಾತ್ರೆಗೆ ಹೆಂಗಸರೆಲ್ಲರೂ ಭಿಕ್ಷೆ ಹಾಕಿ ಬಂದರು. ರಂಗಮ್ಮ ಎಲ್ಲವನ್ನೂ ಅಣಿಮಾಡಿಕೊಂಡೇ ಹೋಗಿದ್ದರು. " ಹೋಗು ಸರೂ, ನೀನೂ ಹೋಗಿ ಬಟುವಿಗೆ ಭಿಕ್ಷೆ ಹಾಕಿ ಬಾ " ಎಂದರು.

" ಇಲ್ಲಾ ಅತ್ತೇ, ನನಗೆ ನಾಚಿಕೆಯಾಗುತ್ತೆ, ನಾನು ಹೋಗೋಲ್ಲಾ ಅಲ್ಲೀ." ಎಂದಳು ಸರೂ, ಅಲ್ಲಿಗೆ ಹೋಗಬೇಕಾದೀತೆಂಬ ಭಯದಿಂದ.

" ಅದೆಂಥಾ ನಾಚಿಗೇನೇ, ಅಲ್ಲೇನು ನಿನ್ನ ಗಂಡ ಬಂದು ಕೂತಿದ್ದಾ ನೆಯೇ ನಿನ್ನ ನೋಡೋಕೆ ? " ಎಂದರು ಅಲ್ಲೇ ಕೂತಿದ್ದವರೊಬ್ಬರು.

ವಿಧಿಯಿಲ್ಲದೇ, ಜೇಪಾನ ಕೈಲಿ ಹಿಡಿದುಕೊಂಡು, ಹೆಂಗಸರ ಗುಂಪ ನ್ನೆಲ್ಲಾ ದಾಟಿ ಹಸೆಮಣೆಯನ್ನು ತಲಪುವ ವೇಳೆಗೆ, ಸರೂ ಬೆವೆತು ಹೋಗಿ ಪಾತ್ರೆಗೆ ಅಕ್ಕಿಯನ್ನೂ ರೂಪಾಯನ್ನೂ ಹಾಕುವಾಗ ಅವಳ ಕೈ ನಡಗುತ್ತಿತ್ತು. ಹಣೆಯ ತುಂಬಾ ಬೆವರು ಕಾಣಿಸಿತು.

" ಅದೇಕಮ್ಮಾ ಅಷ್ಟು ದಿಗಿಲು ? ನಿಧಾನವಾಗಿ ಹಾಕು. ಆತುರಪಟ್ಟು

ಎಲ್ಲಾದರೂ ತಟ್ಟೆಯನ್ನೇ ಕೆಳಗೆ ಹಾಕೀಯಾ ? " ಎಂದರು ಜಾನಕೀಬಾಯಿ, ತಮ್ಮ ದೊಡ್ಡಿಸ್ತಿಕೆಯಿಂದ.

ಹಾಗೂ ಹೀಗೂ ಅಲ್ಲಿಯ ಕೆಲಸ ಮುಗಿಸಿ ಸರೂ ಕೊನೆಗೊಮ್ಮೆ ಬಂದು ತನ್ನ ಜಾಗದಲ್ಲಿ ಕೂತಳು. ಅವಳ ಮುಖದಲ್ಲಿ ಮೂಡಿದ್ದ ಬೆವರನ್ನು ನೋಡಿ ರಂಗಮ್ಮ "ಅದ್ಯಾಕೆ ಸರೂ ಅಷ್ಟು ಸಾಚಿಕೋತೀಯೆ ? ಚೆನ್ನಾಯ್ತು." ಎಂದು ಮರುಕದಿಂದ ಅವಳ ಮುಖದ ಬೆವರನ್ನು ತಾವೇ ಒರಸಿದರು.

ಮುಹೂರ್ತದ ವೇಳೆಗೆ ಗೋವಿಂದರಾಯರೂ ಬಂದರು. ಹುಡುಗ ನಿಗೆ ಐದು ರೂಪಾಯಿ ಓದಿಸಿದ್ದೂ ಆಯಿತು. ರಂಗಮ್ಮ ಜಾನಕೀಬಾಯಿ ಯನ್ನು ಕುರಿತು ಮದುವೆಯ ವಿಷಯವನ್ನು ಸೂಕ್ಷ್ಮವಾಗಿ ಎತ್ತಿದ್ದರು. "ಇಲ್ಲಾಮ್ಮಾ, ನಾವು ಇನ್ನೂ ಈ ವರ್ಷ ಮದುವೆ ಮಾಡುವ ಯೋಚನೆಯನ್ನೇ ಮಾಡಿಲ್ಲಾ. ಇನ್ನೂ ನಮ್ಮ ಮಾಧೂಗೆ ಈಗ ತಾನೇ ಇಪ್ಪತ್ತೆರಡಾಯಿತು." ಎಂದು ಆ ವಿಷಯವನ್ನು ಬೆಳೆಯಗೊಡದೆ ಅಲ್ಲಿಗೇ ಮುಗಿಸಿದರು. ರಂಗಮ್ಮ ನಿಟ್ಟುಸಿರೊಂದನ್ನು ಬಿಟ್ಟು ಸುಮ್ಮನಾದರು.

ಊಟ ಮುಗಿಯುವುದೇ ಮಧ್ಯಾಹ್ನ ಗಂಟೆ ನಾಲ್ಕಾಯಿತು. ಸಾಯಂ- ಕಾಲ ಆರು ಗಂಟೆಗೆ ಆರತಿ. ಅದಕ್ಕಾಗಿ ಸಂಗೀತ. ಎಲ್ಲವನ್ನೂ ಮುಗಿಸಿ ಕೊಂಡು, ಎಲೆ ಅಡಿಕೆ, ಬಾಗಿಣ ಎಲ್ಲಾ ತೆಗೆದುಕೊಂಡು, ಮನೆಗೆ ಹೊರಡುವ ಹೊತ್ತಿಗೆ ಸಾಯಂಕಾಲ ಏಳು ಗಂಟೆಯಾಗಿತ್ತು.

" ನಡೆದುಕೊಂಡೇ ಹೋಗೋಣ ಅತ್ತೇ. ಒಂದೇ ಕಡೆ ಕೂತು ಕೂತು ಕಾಲೆಲ್ಲಾ ಹಿಡಿದುಬಿಟ್ಟಿದೆ." ಎಂದಳು ಸರೂ ಮೈಮುರಿಯುತ್ತಾ.

" ಈ ಶೇಷಾದ್ರಿಪುರದಿಂದ ನಮ್ಮ ಮನೆಗೆ ನಡೆಯೋದೂ ಅಂದರೆ ಸಾಮಾನ್ಯ ಎಂದು ತಿಳಿದೆಯಾ ಮಗೂ ? ನಾವೇನೋ ನಡೀಬಹುದು. ಆದರೆ ಅಕ್ಕಹೇಗೆ ನಡೆಯುತ್ತಾಳೆ" ಎಂದು ಗೋವಿಂದರಾಯರು ಗಾಡಿಯನ್ನೇ ಗೊತ್ತು ಮಾಡಿದರು. ಹೊತ್ತಾಗಿ ಊಟ ಮಾಡಿದ್ದರಿಂದ ಹಸಿವು ಯಾರಿಗೂ ಇರ ಲಿಲ್ಲ. ಎಲ್ಲರೂ ಹಾಸಿಗೆಯ ಮೇಲೆ ಮಲಗಿದರು. ಸರೂ ಅತ್ತೆಯ ಮಗ್ಗು ಲಲ್ಲೇ ಮಲಗಿದಳು. ಗೋವಿಂದರಾಯರು ಅಲ್ಲಿಯೇ ಹಾಲಿನಲ್ಲಿದ್ದ ಮಂಚದ ಮೇಲೆ ಮಲಗಿದರು.

"ಆ ಶ್ರೀಕಂಠಯ್ಯನವರ ಮಗ ಹೇಗಿದ್ದಾನೆ ನೋಡಿದೆಯಾ ಅಕ್ಕಾ ? ಈ ಸಲ B.Sc.ಗೆ ಕಟ್ಟಿದ್ದಾನಂತೆ. ಎತ್ತರ, ದಪ್ಪವಾಗಿ ಹುಡುಗ ಬಹಳ

ಚೆನ್ನಾಗಿದ್ದಾನೆ ನೋಡು. ಅವರನ್ನ ಒಂದು ಮಾತು ಕೇಳಬೇಕು."

"ನಾನೆಲ್ಲಾ ಕೇಳಿಯಾಯ್ತುಪ್ಪಾ. ಅವರು ಈ ವರ್ಷ ಮದುವೆ ಮಾಡು ವುದಿಲ್ಲವಂತೆ. ಅವರೇ ಹೇಳಿದರು ಜಾನಕೀಬಾಯಿ."

"ಓ, ಹಾಗೇನೂ? ಹಾಗಾದರೆ ಸರಿಹೋಯ್ತು ಬಿಡು."

"ನಮ್ಮ ಸರೂಗೆ ಅದ್ಯಾವಾಗ ಗುರುಬಲ ಕೂಡಿ ಬರುತ್ತೋ, ಅದ್ಯಾವಾಗ ಮದುವೆಯಾಗುತ್ತೋ ನಾ ಬೇರೆ ಕಾಣೆ!" ಎಂದು ರಂಗಮ್ಮ ಪಕ್ಕಕ್ಕೆ ತಿರುಗಿ ಹೊದಿಕೆ ಹೊದ್ದುಕೊಂಡರು.

"ಮೊನ್ನೆ ದಿನ ರಂಗರಾಯರ ಮನೇಗೆ ನಾವು ಹೋಗಿರಲಿಲ್ಲವೇ, ಆಗ ಬಂದಿದ್ದ ಹಸಿರು ಸೀರೆ ಉಟ್ಟ ಹುಡುಗಿ ಯಾರು ಗೊತ್ತೇ ಜಾನಕಿ?" ಶ್ರೀಕಂಠಯ್ಯ ಪತ್ನಿಯನ್ನು ಪ್ರಶ್ನಿಸಿದರು.

"ನೀವು ಹೇಳೇದೂ ಸರೀ ಅಂದ್ರೆ. ಎಷ್ಟೋ ಜನ ಹಸಿರು ಸೀರೆ ಉಟ್ಟವ ರಿದ್ದರು. ಯಾರು ಅಂತ ಹೇಳೋದು?"

"ಹೆಂಗಸಲ್ಲವೇ; ಹುಡುಗಿ. ಇನ್ನೂ ಮದುವೆಯಾಗದ ಹುಡುಗಿ. ಒಬ್ಬ ಮಡಿ ಹೆಂಗಸಿನ ಜೊತೆ ಬಂದಿದ್ದಳು. ನನಗೆ ಅವರು ಯಾರು ಅನ್ನುವುದು ತಿಳೀಲಿಲ್ಲ ನೋಡು."

"ತಿಳಿದಿದ್ದರೆ ಏನು ಮಾಡುತ್ತಿದ್ದಿರಿ?"

"ಗುರುತಿದ್ದರೆ ನನ್ನ ಸೊಸೆಯನ್ನಾಗಿ ನಿಮ್ಮ ಹುಡುಗಿಯನ್ನು ಕೊಡು ವಿರಾ, ಎಂದು ಕೇಳುತ್ತಿದ್ದೆ."

"ಏನೂ, ಆ ಗೋವಿಂದರಾಯರ ಮಗಳನ್ನೇ ನೀವು ಹೇಳುವುದು? ಆ ಕರೀ ಹುಡುಗಿನ್ನಾ? ನೀವಾದರೂ ಇಷ್ಟರ ಮಟ್ಟಿಗೆ ಒಪ್ಪಿದಿರಲ್ಲಾ ಸದ್ಯ." ಜಾನಕೀಬಾಯಿ ಮುಖ ತಿರುವಿದರು.

"ಸ್ವಲ್ಪ ಕಪ್ಪಾದರೆ ಏನಂತೆ? ಆ ಕಣ್ಣುಗಳೊಂದೇ ಸಾಕು, ನಾಗರಹಾವಿ ನಂತಹ ಕಪ್ಪಗೆ ಹೊಳೆಯುವ, ಬೊಗಸೆಗಣ್ಣುಗಳು. ಆ ಹುಡುಗಿಯ ಬಣ್ಣ ಒಂದು ಬಿಟ್ಟು, ಇನ್ನೂ ಅವಳಂತಹ ಲಕ್ಷಣವಂತೆಯಾದ ಹುಡಗಿನ್ನಾ, ನಮ್ಮ

ಜಾತಿಯಲ್ಲಿ ಹುಡುಕು, ನೋಡೋಣಾ?ಎಷ್ಟು ಗಂಭೀರವಾಗಿ ನಿಂತಿದ್ದಳು ಅಂತೀ, ಒಂದು ಸಲವೂ ತಲೆಯೆತ್ತಿ ನೋಡಲಿಲ್ಲ ಗೊತ್ತೇ? ಚಿನ್ನದಂಥಾ ಹುಡುಗಿ!"

"ಒಳ್ಳೇ ವರ್ಣನೆಯಾಯಿತಲ್ಲಾ ಈಗ! ನೀವೇನೇ ಅನ್ನೀ, ಇನ್ನೆಷ್ಟೇ ಹೊಗಳೀ, ನನಗೆ ಬೇರೆ ಆ ಬಡವರ ಮನೆಯ ಹುಡುಗಿ ಬೇಡಾ. ನಮ್ಮ ಮಾಧುವಿನ ಬೆಳ್ಳಗಿನ ಬಣ್ಣಕ್ಕೂ, ಅವಳ ಆ ಕರೀ ಬಣ್ಣಕ್ಕೂ ಬಹಳ ಚೆನ್ನಾಗುತ್ತೆ ನೋಡಿ!"

"ನೋಡು ಜಾನಕಿ, ನೀನು ಬಡವ ಬಲ್ಲಿದ ಅಂತಾ ಜರೀಬೇಡಾ. ನಾನೂ ಬಡವನೇ. ನೀನೇನೋ ದೊಡ್ಡ ಇಂಜನಿಯರ ಮಗಳಾಗಿರಬಹುದು. ಆದರೆ ನಾನು ಕೇವಲ ಒಬ್ಬ ಶ್ಯಾನುಭೋಗನ ಮಗ, ತಿಳಿಯಿತೆ? ನಮಗೆ ಬೇಕಾದವಳು ಗುಣವಂತಳಾದ ಸೊಸೆ ಅಷ್ಟೇ? ಐಶ್ವರ್ಯದ ಮದದಿಂದ ಮೆರೆಯುತ್ತಾ ಬರುವ ಅಹಂಕಾರಿಯಲ್ಲ. ನಾನೂ ಅಲ್ಲಿ ಕೇಳಿದೆ ಯಾರನ್ನೋ ಅವರ ವಿಷಯವಾಗಿ. ವರದಕ್ಷಿಣೆ ಕೊಡಲು ಶಕ್ತಿ ಇಲ್ಲದೆ ಇದ್ದಾರೆಂದು ಹೇಳಿದರು. ನಾವು ಏನೂ ವರದಕ್ಷಿಣೆ ಕೇಳಬೇಕಾಗಿಲ್ಲ. ದೇವರು ಅಂತಹ ಕೀಳು ದರ್ಜೆಯನ್ನುಂಟುಮಾಡಿಲ್ಲ. ಆದರಿಂದ ಆ ಹುಡುಗಿಯನ್ನ ನಮ್ಮ ಮನೇಗೆ ತಂದುಕೊಂಡರೆ, ಅವರಿಗೂ ಒಂದು ಬಗೆಯಲ್ಲಿ ಸಹಾಯಮಾಡಿದ ಹಾಗಾಗುತ್ತೆ."

"ನೀವೇನೋ ಬೇಕಾದ್ದು ಹೇಳಿ, ನನಗೇನೋ ಆ ತೀರಾ ಬಡವರ ಹುಡುಗಿಯನ್ನು ತಂದುಕೊಳ್ಳುವುದು ಸ್ವಲ್ಪವೂ ಇಷ್ಟವಿಲ್ಲ. ಒಂದು ನಡತೆ ಇಲ್ಲ, ನುಡತೆ ಇಲ್ಲ. ಅವರ ಮನೆಯ ಹೆಣ್ಣನ್ನು ತಂದುಕೊಂಡು ಏನು ಸುಖ ಪಡಬೇಕೋ ಏನೋ?"

"ಜಾನಕಿ, ನೀನು ಎಲ್ಲದಕ್ಕೂ ನಿನ್ನ ಹಟವನ್ನೇ ನಡೆಸುತ್ತಾ ಬಂದಿರುವೆ. ಆದರೆ ಇದೊಂದರಲ್ಲಿ ನನಗೂ ಅವಕಾಶ ಕೊಡು. ಆ ಹುಡುಗಿಯನ್ನು ನೋಡಿದ ತಕ್ಷಣ ಅವಳು ನಮ್ಮ ಮನೆಯವಳು ಅಂತ ಒಂದು ಭಾವನೆ ಉಂಟಾಯಿತು. ಸೊಸೆ ಅಂದರೆ ಬರೀ ಹೆಣ್ಣು ಅಲ್ಲಾ ಜಾನಕಿ, ಹೆಣ್ಣಿನ ರೂಪದಲ್ಲಿ ಬರುವ ಲಕ್ಷ್ಮಿ; ನೀನು ಇದಕ್ಕೆ ಅಡ್ಡಿ ಬರಬೇಡ. ನಾನು ಕೇಳಿ ನೋಡುವೆ." ಎಂದು ಶ್ರೀಕಂಠಯ್ಯ ಗಡಿಯಾರದ ಕಡೆ ನೋಡಿ "ಗಂಟೆ ಹನ್ನೆರಡೂ ಕಾಲಾಯಿತು, ಊಟ ಇಲ್ಲವೇನು ಈವತ್ತು?" ಎಂದರು.

"ಪಾಪ, ಆ ಹುಡುಗಿಯ ಧ್ಯಾನದಲ್ಲೇ ನಿಮಗೆ ಹೊಟ್ಟೆ ತುಂಬಿ

ಹೋಗಿದೆ. ಇನ್ನು ಬೇರೆ ಊಟ ಬೇಕೆ ? " ನಗೆಯಾಡಿದಳು ಜಾನಕಿ.

"ನೀನು ಹಾಕುವ ಹಾಗಿದ್ದರೆ ಹಾಕು, ಇಲ್ಲವಾದರೆ ಇಲ್ಲಾ ಅನ್ನು. ನಾನು ಈಗಲೇ ಕಾರ್ಖಾನೆಗೆ ಹೋಗುತ್ತೇನೆ ಅಷ್ಟೇ." ಶ್ರೀಕಂಠಯ್ಯ ಸಿಡುಕಿದರು.

ಗಂಡನಿಗೆ ಕೋಪ ಬಂದುದನ್ನು ನೋಡಿ ಜಾನಕೀಬಾಯಿ ಬೇರಾವ ಮಾತಾಡದೆ ಒಳಕ್ಕೆ ಹೋದರು.

" ಮಾಧೂ ಇನ್ನೂ ಬಂದಿಲ್ಲವೇ, ಬೆಳಿಗ್ಗೆ ಹೋದವನು?" ಎಂದು ಊಟ ಮಾಡುತ್ತಾ ಕೇಳಿದರು ಶ್ರೀಕಂಠಯ್ಯನವರು.

" ಇನ್ನೂ ಇಲ್ಲಾ." ಜಾನಕೀಬಾಯಿ ಹೇಳಿದರು.

ಅದೇ ವೇಳೆಗೆ ಮಾಧವ ಬಂದ. " ಎಲ್ಲಿಗೆ ಹೋಗಿದ್ದೆ ಮಾಧೂ, ಬೆಳಗ್ಗಿನಿಂದ ? "

" ಇಲ್ಲೇ ಪೇಟೆಗೆ ಹೋಗಿದ್ದೆ. ರಾಣೋಜಿ ನಿನ್ನೆ ಹಣಕ್ಕೆ ಬರಹೇಳಿದ್ದ, ಹೋಗಿದ್ದೆ. "

" ಏನೆಂದಾ ಅವನು ? "

" ಅವನ ಬಿಲ್ ಫೈಸಲ್ ಮಾಡಬೇಕೂ ಅಂತಾನೆ. ಹಳೇ ಹಿತ್ತಾಳೆ ಎರಡು ಮಣವಷ್ಟು ಇತ್ತು. ಅದನ್ನ ಕಳಿಸುವಂತೆ ಹೇಳಿದೆ."

" ಹೂಂ, ಅದಿರಲಿ, ನೀನು ಬೇಗ ಬ್ಯಾಂಕಿಗೆ ಹೋಗಿ ಒಂದು ನೂರು ರೂಪಾಯಿ ತೆಗೆದುಕೊಂಡು ಬಾ. ಈಗ ಯಾತಕ್ಕೇ ಅಂದರೂ ಕೈಲಿ ಒಂದು ಕಾಸೂ ಇಲ್ಲಾ."

" ಹೂಂ ಹೋಗ್ತೀನಿ. "

" ಹೋಗ್ತೀನಿ ಅಂತಾ ನಿಂತಿದ್ದೀಯಲ್ಲಾ ಮತ್ತೆ ? ಊಟ ಆಯಿತೋ ಇಲ್ಲವೋ ನಿನ್ನದು ? ಇಲ್ಲದಿದ್ದರೆ ಬೇಗ ಊಟ ಮಾಡಿಕೊಂಡು ಹೊರಡು. ಅಲ್ಲೀ ಇಲ್ಲೀ ನಿಂತು ಕಾಲ ಕಳೀಬೇಡಾ."

" ಬರ್ರಿ ಏನೋ ಮಾಧೂ ಊಟಕ್ಕೇ? ತಟ್ಟೆ ಹಾಕಲೇ ? " ಎಂದರು ಜಾನಕೀಬಾಯಿ.

"ಊಹುಂ, ನಾನು ಬಂದೇ ಊಟಮಾಡುತ್ತೀನಿ. ಸ್ವಲ್ಪ ಕಾಫಿ ಇದ್ದರೆ ಕೊಡು." ಬಾಗಿಲಿಗೆ ಬಂದು ಕೇಳಿದ ಮಾಧವ.

" ಒಂದು ಸ್ವಲ್ಪ ಇದೆ ತಡೀ, ಬಿಸಿ ಮಾಡಿ ಕೊಡುತ್ತೀನಿ " ಎಂದು ಒಳಕ್ಕೆ ಹೋಗುವವರಲ್ಲಿದ್ದರು.

"ನಿನ್ನಿಂದಲೇ ಹಾಳಾದ್ದು ಎಲ್ಲರು? ಆ ಹಾಳು ಕಾಫೀನಾ ಬರುತ್ತಾ ಹೋಗುತ್ತಾ ಕುಡಿಯೋಕೆ ಕಲಿಸಿದ್ದು ನೀನೇ. ಅದೇನು ಕಾಫಿಯೋ ಏನೋ!" ಶ್ರೀಕಂಠಯ್ಯ ಒಳಕ್ಕೆ ಹೆರಟುನಿಂತ ಹೆಂಡತಿಯನ್ನಂದರು.

ಮಾಧು ತಾಯಿಯ ಮುಖ ನೋಡಿ ನಕ್ಕ. ಜಾನಕೀಬಾಯಿ ಗಂಡನ ಮಾತಿಗೆ ಗಮನ ಕೊಡದೆ, ಒಳಗೆ ಹೋಗಿ ಕಾಫಿ ತಂದು ಕೊಡಲು ಅದನ್ನು ಕುಡಿದವನೇ ನೇರವಾಗಿ ಸೈಕಲ್ ಹತ್ತಿ ಹೊರಟ ಮಾಧು.

"ಎಷ್ಟು ಹೊತ್ತಾಯಿತು ನೋಡು ನಿನ್ನಿಂದ? ಇನ್ನು ಹತ್ತು ನಿಮಿಷ ಇದೆ ಒಂದು ಗಂಟೆಗೆ. ನಾನೂ ಹೊರಡುತ್ತೇನೆ." ಎಂದು ಜಾನಕಿ ಕೊಟ್ಟ ವೀಳ್ಯವನ್ನು ಬಾಯಿಗೆ ಹಾಕಿಕೊಂಡು ಕೂಡಲೆ ಎದ್ದು ಹೊರಟರು ಶ್ರೀಕಂಠಯ್ಯನವರು.

"ಅಕ್ಕಾ, ಅಕ್ಕಾ, ಬೇಗ ಬಾ." ಕಾಗದವನ್ನು ಕೈಲಿ ಹಿಡಿದುಕೊಂಡೇ ಕೂಗಿದರು ಗೋವಿಂದರಾಯರು.

ಸಾರಿಗೆ ಒಗ್ಗರಣೆಯನ್ನು ಹಾಕುತ್ತಿದ್ದ ರಂಗಮ್ಮ ಸೌಟನ್ನು ಕೈಲೇ ಹಿಡಿದು ಗಾಬರಿಯಾಗಿ ಹೊರಬಂದರು.

"ಶ್ರೀಕಂಠಯ್ಯ ಕಾಗದ ಬರೆದಿದ್ದಾರೆ ಅಕ್ಕಾ! ನನ್ನ ಕೈಲಿ ಮಾತಾಡುವ ದಿದೆಯಂತೆ. ಅದಕ್ಕಾಗಿ ನನ್ನನ್ನು ಬರಹೇಳಿದ್ದಾರೆ. ಅವರಿಗೆ ಈಗ ಪುರಸತ್ತು ಇಲ್ಲದಿದ್ದುದರಿಂದ ಬರಲಾಗಲಿಲ್ಲವೆಂದೂ, ಅದಕ್ಕೆ ಏನೂ ತಿಳಿದುಕೊಳ್ಳದೆ, ನನ್ನನ್ನು ಬರಬೇಕೆಂದೂ ಬರೆದಿದ್ದಾರೆ."

"ಯಾತಕ್ಕೆ ಇರಬಹುದು ಗೋವಿಂದೂ?"

"ನನಗೇನು ಗೊತ್ತು ಅಕ್ಕಾ? ಈ ದಿನ ಸಾಯಂಕಾಲ ಹೋಗುತ್ತೇನೆ."

"ಹೊಗೋದಾದರೆ, ಒಬ್ಬಂಟಿಗನಾಗಿ ಹೋಗಬೇಡ. ನಾಗಪ್ಪನವರನ್ನೂ ಕರೆದುಕೊಂಡು ಹೋಗು. ಸಮಯ ಸಂದರ್ಭ ಹೇಗೆ ಒದಗುತ್ತೋ. ಅವರು ಇದ್ದರೆ ವಾಸಿ, ಚನ್ನಾಗಿ ಮಾತು ಕತೆಯಾಡುತ್ತಾರೆ."

"ಹೂಂ ಹಾಗೇ ಆಗಲೀ, ಅವರಿಗೂ ಮಿಲ್ಲಿನಲ್ಲಿಯೇ ತಿಳಿಸುತ್ತೇನೆ. ಸರೂ, ನನಗೆ ಸಂಜೆಯ ಹೊತ್ತಿಗೆ ಒಂದು ಚೊಕ್ಕಟವಾದ ಪಂಚೆಯನ್ನು, ಆಮೇಲೆ

ಆ ಟ್ವೀಡ್ ಕೋಟನ್ನೂ ತೆಗೆದಿಟ್ಟಿರಮ್ಮಾ.” ಎಂದು ಊಟಕ್ಕೆ ಹೋದರು.

ನಾಗಪ್ಪನವರೊಡನೆ ಗೋವಿಂದರಾಯರು ಮಲ್ಲೇಶ್ವರವನ್ನು ತಲುಪಿದಾಗ ಆರುವರೆಯಾಗಿತ್ತು. ಕಾಗದದಲ್ಲಿಯೇ ಇದ್ದ ವಿಳಾಸದ ಮೂಲಕ ಮನೆಯನ್ನು ಸುಲಭವಾಗಿಯೇ ತಲುಪಿದರು. ಮನೆ ಭವ್ಯವಾಗಿತ್ತು. ದೊಡ್ಡದಾದ ಕಾಂಪೌಂಡು, ಬೀದಿಯ ಗೇಟಿನ ಎರಡು ಕಡೆಗಳಲ್ಲೂ ಬೆಳೆದ ತೆಂಗಿನಮರಗಳು, ಮಧ್ಯದಲ್ಲಿ ನೀರಿನ ಕಾರಂಜಿ, ಅದರ ಸುತ್ತಲೂ ಬಗೆಬಗೆಯ ಬಣ್ಣದ ಹೂಗಳು ಇವೆಲ್ಲವೂ ಮನೆಯ ಸೌಂದರ್ಯಕ್ಕೆ ಕಳೆಕೊಟ್ಟಂತೆ ಇದ್ದಿತು. ಮನೆಯ ಮುಂಭಾಗದಲ್ಲಿ ವೃತ್ತಾಕಾರವಾಗಿರುವ ವೆರಾಂಡಾದಲ್ಲಿಯೇ ನಾಲ್ಕಾರು ಬೆತ್ತದ ಕುರ್ಚಿಗಳೂ ನಡುವೆ ಒಂದು ಮೇಜೂ, ಅದರ ಮೇಲೆ ಹೂವಿನ ಕುಂಡವೂ ಬಂದವರಿಗಾಗಿ ಸ್ವಾಗತ ತೋರುತ್ತಿದ್ದವು.

ಗೋವಿಂದರಾಯರು ನಾಗಪ್ಪನವರೊಡನೆ ವೆರಾಂಡಕ್ಕೆ ಬಂದಾಗ ಶ್ರೀಕಂಠಯ್ಯ ಅಲ್ಲಿಯೇ ಖುರ್ಚಿಯ ಮೇಲೆ ಪೇಪರ್ ಓದುತ್ತಾ ಕೂತಿದ್ದರು. ಶ್ರೀಕಂಠಯ್ಯ ಗೋವಿಂದರಾಯರನ್ನು ನೋಡಿಯೇ ಇರಲಿಲ್ಲವಾದ್ದರಿಂದ, ಇವರು ಯಾರು ಎಂಬುದೇ ಅವರಿಗೆ ತಿಳಿಯಲಿಲ್ಲ. ಅದನ್ನು ತೋರ್ಗೊಡದೆ “ಬನ್ನಿ ಕೂತುಕೊಳ್ಳಿ.” ಎಂದು ಕುರ್ಚಿಯನ್ನು ಸರಿಸಿದರು. ಗೋವಿಂದ-ರಾಯರೂ, ನಾಗಪ್ಪನವರೂ ಪಕ್ಕಪಕ್ಕದಲ್ಲಿ ಕೂತರು.

“ ನಿಮ್ಮ ಕಾಗದ ಈ ದಿನ ಬೆಳಿಗ್ಗೆ ಹತ್ತರ ವೇಳೆಗೆ ತಲುಪಿತು. ಅದರಿಂದ ನನ್ನ ಡ್ಯೂಟಿ ಮುಗಿಸಿಕೊಂಡು ಬರುವ ವೇಳೆಗೆ ಇಷ್ಟು ಸಮಯವಾಯ್ತು.” ಎಂದರು ಗೋವಿಂದರಾಯರು. ಶ್ರೀಕಂಠಯ್ಯನವರಿಗೆ ತಕ್ಷಣ ನೆನಪಾಯಿತು, ಬೆಳಗ್ಗೆ ತಾವು ಅವರಿಗೆ ಕಾಗದ ಬರೆದಿದ್ದು. ಅದರಿಂದ ಅವರೇ ಗೋವಿಂದ ರಾಯರಿರಬೇಕೆಂದು ತಿಳಿದು “ನೀವು ಬಂದುದು ಬಹಳ ಸಂತೋಷ. ನಾನೇ ನಿಮ್ಮ ಕಡೆ ಬರಬೇಕೆಂದಿದ್ದೆ. ಆದರೆ, ಈ ಕಾರ್ಖಾನೆ ಒಂದಿದೆಯಲ್ಲಾ, ಅದನ್ನ ಬಿಟ್ಟು ಅಲ್ಲಾಡುವುದೂ ಸಹ ನನಗೆ ಆಗುವುದೇ ಇಲ್ಲ. ಮನೆಯಲ್ಲಿ ಎಲ್ಲರೂ ಚನ್ನಾಗಿದ್ದಾರೆಯೆ? ಇವರು ಯಾರು, ನನಗೆ ತಿಳಿಯಲಿಲ್ಲ?” ಅಂದರು ನಾಗಪ್ಪನವರನ್ನು ನೋಡುತ್ತಾ.

“ ಇವರು ಬಳೇಪೇಟೆಯಲ್ಲಿರುವ ಫ್ಲೋರ್ ಮಿಲ್ ಯಜಮಾನರು. ನಾಗಪ್ಪ ಎಂಬುದು ಹೆಸರು. ಎಲ್ಲಾ ವಿಧದಲ್ಲಿಯೂ ನನಗೆ ಹಿರಿಯ ಅಣ್ಣನಂತೆ ಇದ್ದಾರೆ.”

"ನಿಮ್ಮ ಪರಿಚಯವೂ ಆದ್ದು ಬಹಳ ಸಂತೋಷ ನಾಗಪ್ಪನವರೇ." ಎಂದರು ಶ್ರೀಕಂಠಯ್ಯ.

"ನಮ್ಮದೆಲ್ಲಾ ಏನು ಮಹಾ ಬಿಡಿ ಸ್ವಾಮೀ." ಎಂದರು ನಾಗಪ್ಪ.

"ಒಂದೇ ನಿಮಿಷ,ಬರುತ್ತೀನೆ."ಎಂದು ಶ್ರೀಕಂಠಯ್ಯ ಒಳಕ್ಕೆ ತೆರಳಿದರು.

ಸ್ವಲ್ಪ ಹೊತ್ತಿನೊಳಗಾಗಿ ಶ್ರೀಕಂಠಯ್ಯ ಹಿಂದಿರುಗಿ ಬಂದರು. ಅವರ ಹಿಂದೆಯೇ, ದೊಡ್ಡದಾದ ಟ್ರೇಯನ್ನು ಹಿಡಿದಿರುವ ಹುಡುಗನೊಬ್ಬ ಬಂದ. ಶ್ರೀಕಂಠಯ್ಯನವರೇ ಅದರಲ್ಲಿದ್ದ ಗಾಜಿನ ತಟ್ಟೆಗಳನ್ನು ತೆಗೆದು ಮೇಜಿನ ಮೇಲೆ ಇಟ್ಟರು. ವಾಂಗೀಭಾತ್, ಬಾದಾಮಿ ಹಲ್ವ, ಶಂಕರಪೋಳಿ ಇವುಗಳಿಂದ ತುಂಬಿದ ಮೂರು ಮೂರು ತಟ್ಟೆಗಳನ್ನೂ ಚಮಚ ಸಹಿತವಾಗಿ, ಗೋವಿಂದರಾಯರು ನಾಗಪ್ಪ ಇವರ ಮುಂದೆ ಇಟ್ಟು ತಾವೂ ತೆಗೆದುಕೊಂಡರು. ಇನ್ನೊಂದು ಸಲ ಟ್ರೇಯಲ್ಲಿ ಟೀ ಸೆಟ್ ಬಂತು. ಶ್ರೀಕಂಠಯ್ಯನವರೇ, ಕೆಟಲ್‌ನಿಂದ ಟೀಯನ್ನು ಕಪ್ಪುಗಳಿಗೆ ಹಾಕಿ, ಸಾಸರನಲ್ಲಿ ಇಟ್ಟು ಅವರಿಬ್ಬರಿಗೂ ಕೊಟ್ಟು ತಮಗಾಗಿ ಒಂದು ಕಪ್ ಹಾಕಿಕೊಂಡರು. ಹುಡುಗ ಹೊರಟುಹೋದ.

"ತೆಗೆದುಕೊಳ್ಳೀ ಸ್ವಾಮೀ, ಏಕೆ ಹಿಂದೆ ಮುಂದೆ ನೋಡುವಿರಿ? ಇದೂ ನಿಮ್ಮ ಮನೆಯೆಂದೇ ತಿಳಿಯಿರಿ." ಎಂದು ಉಪಚರಿಸುತ್ತಾ ವಾಂಗೀಭಾತ್ ತಿನ್ನಲು ಶುರು ಮಾಡಿದರು ಶ್ರೀಕಂಠಯ್ಯ.

ಗೋವಿಂದರಾಯರು ಮಾತನ್ನೇನೂ ಆಡದೆ ತಿನ್ನಲಾರಂಭಿಸಿದರು. ಯಾವ ಹೆಚ್ಚಿನ ಮಾತೂ ಇಲ್ಲದೆ ಉಪಹಾರವು ಮುಗಿಯಿತು. ಎಲ್ಲರೂ ಟೀ ಕುಡಿದಾದ ನಂತರ "ರಾಜೂ...."ಎಂದು ಕೂಗಿದರು ಶ್ರೀಕಂಠಯ್ಯ.

"ಬಂದೆ ಮಾವಾ...." ಎಂದು ಉತ್ತರ ಕೊಡುತ್ತಲೇ ಮುಂಚೆ ಬಂದಿದ್ದ ಹುಡುಗ ಓಡಿ ಬಂದ.

"ಇದೆಲ್ಲಾ ತೆಗೆದು, ಇಲ್ಲಿ ಸ್ವಲ್ಪ ಒರಸು." ಶ್ರೀಕಂಠಯ್ಯ ಹೇಳಿದರು.

ರಾಜೂ ಹೇಳಿದಷ್ಟೂ ಮಾಡಿ ಹೊರಟು ಹೋದ.

"ನಾನು ನಿಮ್ಮನ್ನು ಒಂದು ವಿಷಯ ಕೇಳಬೇಕೂ ಅಂತ ಇಲ್ಲಿಗೆ ಬರಮಾಡಿದೇ ಸ್ವಾಮೀ ನಿಮ್ಮನ್ನ." ಮಾತಿಗೆ ಉಪಕ್ರಮಿಸಿದರು ಶ್ರೀಕಂಠಯ್ಯ, ಗೋವಿಂದರಾಯರನ್ನು ಕುರಿತು.

"ಯಾವುದಿದ್ದರೂ ತಾವು ಧಾರಾಳವಾಗಿ ಕೇಳಬಹುದು."

"ಆ ದಿನ ರಂಗರಾಯರ ಮನೆಯ ಉಪನಯನಕ್ಕೆ ನಾನೂ ಹೋಗಿದ್ದೆ. ಅಲ್ಲಿ ನಿಮ್ಮ ಮಗಳನ್ನು ನೋಡಿದೆ. ನೋಡಿದ ತಕ್ಷಣ ಅನ್ನಿಸಿತು: 'ಈ ಹುಡುಗಿ ನಮ್ಮ ಮನೆ ಸೊಸೆಯಾಗಲು ತಕ್ಕವಳು' ಎಂದು. ನಾನು ನಿಮ್ಮ ಹುಡುಗಿಯನ್ನು ಮನಸಾರೆ ಒಪ್ಪಿರುವೆ. ನೀವು ದೊಡ್ಡ ಮನಸ್ಸು ಮಾಡಿ ಅವಳನ್ನು ನನ್ನ ಸೊಸೆಯಾಗಿ ಕಳಿಸುವಿರಾದರೆ, ನಾನು ನಿಮಗೆ ಬಹಳ ಕೃತಜ್ಞನಾಗಿರುವೆ."

ಗೋವಿಂದರಾಯರಿಗೆ, ತಾವು ಕೇಳುತ್ತಿರುವುದು ನಿಜವೋ ಅಥವಾ ಸ್ವಪ್ನವೋ ಎನ್ನುವ ಹಾಗಾಯಿತು. ಕೇವಲ ಗುಮಾಸ್ತನಾದ ತಾನೆಲ್ಲಿ, ಆ ದೊಡ್ಡ ಕಾರ್ಖಾನೆಯ ಯಜಮಾನನೆಲ್ಲಿ. ಇದೇನು ಇವರು ಹೀಗೆ ಕೇಳಿ ತನ್ನನ್ನು ಪರಿಹಾಸ ಮಾಡುತ್ತಿಲ್ಲವಷ್ಟೇ, ಎಂದು ಯೋಚಿಸಿಯೂ ಆಯಿತು. ಈ ಬಗೆಯ ಒಂದು ಅನಿರೀಕ್ಷಿತ ಸಂತೋಷದಿಂದ ಕ್ಷಣಕಾಲ ಅವರಿಗೆ ಬಾಯಿಂದ ಮಾತೇ ಹೊರಡಲಿಲ್ಲ. ನಾಗಪ್ಪನವರು ಇದನ್ನು ಕೇಳಿ ಸಂತೋಷಗೊಂಡವರಾದರೂ, ಗೋವಿಂದರಾಯರ ಹಾಗೆ ಅವರು ಮತಿಗೆಡಲಿಲ್ಲ.

"ನಿಜವಾಗಿ....ನಿಜವಾಗಿ, ಈ ಬಡವನ ಮಗಳನ್ನು ನಿಮ್ಮ ಸೊಸೆಯನ್ನಾಗಿ ಮಾಡಿಕೊಳ್ಳುವಿರಾ, ದೇವರೂ? ಅದು ನಿಜವಾದ ಪಕ್ಷದಲ್ಲಿ ನಾನು ಎಂದೆಂದಿಗೂ ನಿಮಗೆ ಋಣಿಯಾಗಿರುತ್ತೇನೆ ಸ್ವಾಮೀ. ನನ್ನ ಸರೂನ್ನ ಬದುಕಿಸಿದಿರಿ ಸ್ವಾಮೀ. ತಾಯಿ ಇಲ್ಲದ ತಬ್ಬಲಿ ಮಗುವನ್ನು ಕಾಪಾಡಿದ ಪುಣ್ಯ ನಿಮ್ಮದೇ ದೇವರು. ಇದಕ್ಕಾಗಿ ನಿಮ್ಮನ್ನು ನಾನು ಹೇಗೆ ವಂದಿಸುವುದೋ ತಿಳಿಯದಾಗಿದೆ!" ಎಂದೆನ್ನುವಾಗ ಸಂತೋಷಾತಿರೇಕದಿಂದ ಅವರ ಕೊರಳ ಸೆರೆಯುಬ್ಬಿ, ಕಣ್ಣುಗಳಿಂದ ಹನಿ ಉದುರಿದುವು. ಆ ಸಂತೋಷದ ಸಮಯದಲ್ಲಿ ಸೀತೂವಿನ ನೆನಪು ಬಂದು ಗೋವಿಂದರಾಯರು ಅವಳಿಗಾಗಿ ಮರುಗಿದರು.

ಗೋವಿಂದರಾಯರ ಆ ಸಂತೋಷವನ್ನು ನೋಡಿ, ಶ್ರೀಕಂಠಯ್ಯನವರಿಗೂ ಸಹೃದಯಭಾವಸ್ಪಂದನದಿಂದ ಸಂತೋಷವೆನಿಸಿತು.

ನಾಗಪ್ಪ ಈ ಎರಡು ಸಂತೋಷಪ್ರವಾಹಗಳಿಗೆ ದಂಡೆಯಾಗಿ ನಿಂತು ನಿರ್ವಿಕಾರಚಿತ್ತನಾಗಿ ಅವರಿಬ್ಬರನ್ನೂ ನೋಡುತ್ತಿದ್ದರು.

ಸ್ವಲ್ಪ ಹೊತ್ತಾದ ಮೇಲೆ ಗೋವಿಂದರಾಯರು ತಮ್ಮ ಭಾವನಾವೇಗದಿಂದ, ಎಚ್ಚರಗೊಂಡರೂ, ಸ್ವಲ್ಪ ಹೊತ್ತು ಯಾರೂ ಯಾವ ಮಾತನ್ನೂ

ಆಪಲಿಲ್ಲ.

"ಹಾಗಾದರೆ ಇದೇ ವರ್ಷ ಮದುವೆಗೆ ಏರ್ಪಾಡು ಮಾಡಿದ್ದರೆ ಚೆನ್ನಾಗಿತ್ತು. ಹುಡುಗಿಗೂ ವಯಸ್ಸಾಗುತ್ತ ಬಂತು. ಸುಮ್ಮನೆ ದಿನ ಯಾಕೆ ಕಳೆಯಬೇಕೂಂತ?" ನಾಗಪ್ಪ ಹೇಳಿದರು.

"ತಮ್ಮಲ್ಲಿ ಇನ್ನೊಂದು ಮಾತು ದೇವರೂ. ನಾನು ಬಡವ. ನನ್ನ ಕೈಲಾದಷ್ಟು ನಾನೂ ಮಾಡುವೆ. ಆದರೆ ನಿಮ್ಮ ಯೋಗ್ಯತೆಗೆ ತಕ್ಕಂತೆ ಮಾಡು ವುದು ನನಗೆ ಸಾಧ್ಯವಿಲ್ಲ. ವರೋಪಚಾರ, ಮದುವೆ ಖರ್ಚು ಎಲ್ಲಾ ನಾನು ನನಗೆ ಸಾಧ್ಯವಿದ್ದಷ್ಟು ಮಾಡುತ್ತೇನೆ. ನಂತರ ನೀವು ಏನೂ ತಿಳಿಯಬಾರದು. ಅದಕ್ಕಾಗಿ ಈಗಲೇ ಹೇಳಿದ್ದೇನೆ."

"ನೀವು ಯಾವ ಯೋಚನೆಯನ್ನೂ ಮಾಡಬೇಡಿ ಗೋವಿಂದರಾಯರೇ. ಮದುವೆಯಲ್ಲಿ ನಮ್ಮ ಖರ್ಚು ನಾವು ಮಾಡುತ್ತೇವೆ. ನಿಮ್ಮದು ನೀವು ಮಾಡಿ ಕೊಳ್ಳಿ. ನಿಮ್ಮ ಸಂತೋಷಕ್ಕೆ ತಕ್ಕಂತೆ ನಿಮಗೆ ಇಷ್ಟಬಂದಷ್ಟು ನಿಮ್ಮ ಅಳಿಯ ನಿಗೆ ಕೊಡಿ. ನಾವೇನೂ ನಿಮ್ಮನ್ನು ಇಂತಹದೇ ಆಗಬೇಕು, ಹಾಗೆ ಹೀಗೆ ಎಂದು ನಿರ್ಬಂಧಪಡಿಸುವುದಿಲ್ಲ. ನಿಮಗೆ ಸಾಧ್ಯವಾಗದಿದ್ದಲ್ಲಿ ನೀವೇನನ್ನೂ ಕೊಡಲಿಬೇಡಿ. ನಮಗೆ ಬೇಕಾದದ್ದು ನಮ್ಮ ಮನೆಗೆ ಬರುವ ಸೊಸೆ. ಅದೊಂದು ವಸ್ತುವನ್ನು ಬಿಟ್ಟು ಬೇರಾವ ಒಂದು ಚಿಕ್ಕ ಕವಡೆಯನ್ನೂ ನಾನು ಬಯಸುವು ದಿಲ್ಲ. ತಿಳಿಯಿತೆ?"

"ಈಗಿನ ಕಾಲದಲ್ಲಿ ನಿಮ್ಮ ಹಾಗೆ ಹೇಳುವವರು ಸಾವಿರಕ್ಕೆ ಒಬ್ಬ ರಾದರೂ ಸಿಗುವರೋ ಇಲ್ಲವೋ ಸಂದೇಹ ಸ್ವಾಮಿ. ಹಣ ಹಣ ಎಂದು ಬಾಯಿ ಬಾಯಿ ಬಿಡುವ ಈ ಕಾಲದಲ್ಲಿ ನಿಮ್ಮಂತಹ ಉದಾರಿಗಳೂ, ಸ್ವಾರ್ಥ ತ್ಯಾಗಿಗಳೂ ಯಾರಿದ್ದಾರೆ? ಮುಖ್ಯ ನಮ್ಮ ಸರೂ ಪುಣ್ಯವಂತೆ." ಎಂದರು ನಾಗಪ್ಪ, ಶ್ರೀಕಂಠಯ್ಯನವರ ಗುಣವನ್ನು ಮೆಚ್ಚಿಕೊಳ್ಳುತ್ತಾ.

ಗೋವಿಂದರಾಯರ ಕಣ್ಣುಗಳೇ ಅವರ ಕೃತಜ್ಞತೆಯನ್ನು ಸೂಸು ತ್ತಿದ್ದುವು.

ಶ್ರೀಕಂಠಯ್ಯನವರಿಂದ ಬೀಳ್ಕೊಂಡು, ಗೋವಿಂದರಾಯರು ಮನೆ ತಲುಪಿದಾಗ ರಾತ್ರಿಯಾಗಿತ್ತು. ನಾಗಪ್ಪನವರು ನೇರವಾಗಿ ತಮ್ಮ ಮನೆಗೇ ಹೊರಟು ಹೋಗಿದ್ದರು.

ರಂಗಮ್ಮ ತಮ್ಮನ ಬರುವಿಗಾಗಿ ಕಾದು ಕೂತಿದ್ದರು. ಸರೂ ಅದೇ

ತಾನೇ ನಿದ್ರೆಹೋಗಿದ್ದಳು. ಗೋವಿಂದರಾಯರ ಮುಖವನ್ನು ನೋಡಿದ ಕೂಡಲೇ ತಿಳಿದರು ರಂಗಮ್ಮ, ಒಂದು ಸಂತೋಷ ಸುದ್ದಿ ತಮಗಾಗಿ ಕಾದಿದೆ ಎಂದು.

"ನಮ್ಮ ಸರೂವಿನ ಅದೃಷ್ಟ ಚೆನ್ನಾಗಿದ್ದ ಅಕ್ಕಾ! ಶ್ರೀಕಂಠಯ್ಯ ಅವಳನ್ನು ಸೊಸೆಯಾಗಿ ಮಾಡಿಕೊಳ್ಳಲು ಇಷ್ಟಪಟ್ಟು, ಮಾತು ಕೊಟ್ಟಿದ್ದಾರೆ. ನಮ್ಮ ಖರ್ಚು ನಮಗೆ, ಅವರದ್ದು ಅವರಿಗೆ. ವರದಕ್ಷಿಣೆಯ ಬಾಬ್ತೇ ಇಲ್ಲ. ದೇವರು ದೊಡ್ಡವನು, ನಮ್ಮನ್ನು ಪಾರು ಮಾಡಿದ."

" ಈ ವರ್ಷವೇ ಮಾಡಬೇಕೂ ಅಂತ ಹೇಳಬೇಕಾಗಿತ್ತು ?"

"ಎಲ್ಲಾ ಮಾತು-ಕತೆಯೂ ಆಯಿತು ಅಕ್ಕಾ. ಒಂದು ದಿನ ಗೊತ್ತು ಮಾಡಿ ಲಗ್ನಪತ್ರಿಕೆ ಬರೆಸುವುದೊಂದೇ ಬಾಕಿ. ಹೇಗಿದ್ದರೂ ಸರೂವಿಗೂ ಪರೀಕ್ಷೆ ಮುಗಿದಿದೆ. ಇದೇ ಜೂನ್ ತಿಂಗಳಲ್ಲೇ ಮಾಡಬಹುದು."

"ಈಗ ಹಣಕ್ಕೆ ಏನು ಮಾಡುವೆ ಗೋವಿಂದೂ ?"

"ಆ ಇನ್‌ಷೂರೆನ್ಸ್ ಹಣ ಮೂರು ಸಾವಿರ ಹೋದ ವರ್ಷವೇ ಬಂದಿತ್ತಲ್ಲಾ ಅದು ಬ್ಯಾಂಕಿನಲ್ಲಿಯೇ ಇದೆ. ಅದನ್ನೇ ಖರ್ಚು ಮಾಡಿದರಾಯಿತು. ಇನ್ನೇನು ಆಸ್ತಿಯನ್ನೂ ನಾನು ಮಾಡಲಾಗಲಿಲ್ಲ. ಅವೆಲ್ಲದಕ್ಕಿಂತ ಹೆಚ್ಚಾಗಿ ಬಂಗಾರದಂಥಾ ಹುಡುಗನಿದ್ದಾನೆ. ನಾಳೆ ಸರೂ ಸುಖವಾಗಿರುತ್ತಾಳೆ. ನಾನು ಸರೂವಿಗೆ ಕೊಟ್ಟಿರುವ ದೊಡ್ಡ ಆಸ್ತಿ ಎಂದರೆ ಅದು ಅವಳ ಗಂಡ. ಅದಕ್ಕಾಗಿ ನಾನೇನೂ ಪ್ರಯತ್ನ ಮಾಡದಿದ್ದರೂ, ದೈವಸಂಕಲ್ಪದಿಂದ ಹಾಗೆ ಒದಗಿ ಬಂತು. ಒಳ್ಳೆಯ ಕಡೆ ನೋಡಿ ಕೊಡುವುದು ತಂದೆ-ತಾಯಿಯರ ಕರ್ತವ್ಯ. ಅಷ್ಟು ಮಾಡಿದೆವೆಂದರೆ ನಮ್ಮ ಹೊಣೆ ತೀರಿದಂತಾಯಿತು." ಹೀಗೆಯೇ ಗೋವಿಂದರಾಯರು ಇನ್ನೂ ಎಷ್ಟು ಹೊತ್ತು ಭಾವನಾವಶರಾಗುತ್ತಿದ್ದರೋ ಗೊತ್ತಿಲ್ಲ. ಆದರೆ ರಂಗಮ್ಮ ನಡುವೆಯೇ ತಡೆದರು :

"ಗಂಟೆ ಹತ್ತಾಗುತ್ತಾ ಬಂದಿತೆಂದು ತೋರುತ್ತೆ. ಏಳಪ್ಪಾ ಊಟಕ್ಕೆ."

"ಅವರ ಮನೆಯಲ್ಲಿಯೇ ಭರ್ಜರಿ ತಿಂಡಿ, ಕಾಫಿ ಎಲ್ಲಾ ಆಯಿತೂ ಅಕ್ಕ. ನನಗೆ ಹಸಿವಿಲ್ಲಾ. ನಿನ್ನ ಫಲಾಹಾರ ಮುಗಿಯಿತೋ ಇಲ್ಲವೋ ?"

"ನಂದೇನಪ್ಪಾ, ಸಂಜೆ ಮಾಡಿದ್ದೇ ಇಷ್ಟು ಉಪ್ಪಿಟ್ಟು ಇತ್ತು. ಅದನ್ನೇ ತಿಂದೆ. ಅದಿರಲಿ ಈಗ ಇನ್ನೇನು ಮದುವೆ ಗೊತ್ತಾದ ಹಾಗೇ ಅನ್ನು?"

"ಅಂಥಾವರು ಮಾತಿಗೆ ತಪ್ಪುತ್ತಾರೆಯೇ ಅಕ್ಕಾ, ಅವರೇ ಅಷ್ಟೊಂದು

ಬಗೆಯಲ್ಲಿ ಹೇಳಿರೋವಾಗ ?"

"ಜಾತಕ ನೋಡಿಸಬೇಡವೇಪ್ಪಾ?"

"ಅಯ್ಯೋ ಸರಿಹೊಯ್ತು ಬಿಡು ಅಕ್ಕಾ. ಇದು ವರೆಗೂ ಜಾತಕ-ನಕ್ಷತ್ರ ತಿರುಗೀ ತಿರುಗೀ ಬಂದದ್ದೇನು ? ನಾನೂ ಕೇಳಿ ನೋಡಿದೆ. ಅವರಿಗೆ ಅದೆಲ್ಲಾ ಸರಿಬೀಳುವುದಿಲ್ಲವಂತೆ. ಅವರಿಗೆ ಹುಡುಗಿ ಒಪ್ಪಿದರಾಯಿತು. ಇನ್ನೇನೂ ನೋಡುವವರಲ್ಲ."

ರಾತ್ರಿಯೆಲ್ಲಾ ಇಬ್ಬರೂ ಮಾತಾಡುತ್ತಲೇ ಇದ್ದರು. ಸಂತೋಷಭರದಲ್ಲಿ ರಾತ್ರಿ ಜಾರಿ ಹೋದದ್ದೂ ಅವರಿಗೆ ಗೊತ್ತಾಗಲಿಲ್ಲ.

ಶ್ರೀಕಂಠಯ್ಯ, ಜಾನಕೀಬಾಯಿ, ಅವರ ಮಗಳು ಸುಂದರಿ, ಮತ್ತು ಕಿರಿಯ ಹುಡುಗ ಆನಂದ, ಇಷ್ಟು ಜನ ಸಂಜೆ ಆರರ ವೇಳೆಗೆ, ಟ್ಯಾಕ್ಸಿಯಿಂದಿಳಿದು ಗೋವಿಂದರಾಯರ ಮನೆ ತಲುಪಿದರು. ಗೋವಿಂದರಾಯರು ಬಾಗಿಲಲ್ಲೇ ನಿಂತಿದ್ದು ಉಪಚರಿಸಿ ಒಳಗೆ ಕರೆದೊಯ್ದರು. ಹಾಃಲಿನಲ್ಲಿದ್ದ ಮಂಚ, ಕುರ್ಚಿ ಎಲ್ಲಾ ತೆಗೆದು ಹಾಃಲಿನ ಉದ್ದಕ್ಕೂ ಜಮಖಾನಿ ಹಾಸಿದ್ದರು. "ಬನ್ನೀ ಸ್ವಾಮಿ, ಹೀಗೆ ಕೂಡಿ." ಎಂದು ಕರೆದು ಜಮಖಾನೆಯ ಮೇಲೆ ಕೂಡಿಸಿದರು ನಾಗಪ್ಪ, ಶ್ರೀಕಂಠಯ್ಯನವರನ್ನು. ಆನಂದನೂ ಬಂದು ಅವರ ಪಕ್ಕದಲ್ಲಿಯೇ ಕೂತ.

"ಹೀಗೆ ಬನ್ನೀಮ್ಮಾ ಒಳಗೇ." ಎಂದು ರಂಗಮ್ಮ, ಜಾನಕೀಬಾಯಿ ಸುಂದರಿಯರನ್ನು ನಡುಮನೆಗೆ ಕರೆದೊಯ್ದರು. ಜಾನಕೀಬಾಯಿ ಠೀವಿಯಿಂದಲೇ ಬಂದು ಅಲ್ಲಿಯೇ ಹಾಸಿದ್ದ ಚಾಪೆಯ ಮೇಲೆ ಕೂತರು. ಸ್ವಲ್ಪ ಹೊತ್ತಿನೊಳಗಾಗಿ ಅಕ್ಕಪಕ್ಕದ ಮನೆಯ ಹೆಂಗಸರೂ, ಗಂಡಸರೂ ಎಲ್ಲಾ ಬಂದು ಕೂತರು. ಶಾಸ್ತ್ರೋಕ್ತವಾಗಿ ನಿಶ್ಚಯದ ಕಾರ್ಯ ನಡೆಯಿತು.

"ಮುಂದಿನ ತಿಂಗಳು, ಪಂಚಮಿ ಒಂದು, ಆಮೇಲೆ ದಶಮಿ ಒಂದು, ಹೀಗೆ ಎರಡೇ ಲಗ್ನಮುಹೂರ್ತಗಳಿವೆ; ಈ ಸಲ ಹೆಚ್ಚಿಗೆ ಲಗ್ನಮುಹೂರ್ತಗಳೇ ಇಲ್ಲಾ." ಅಂದರು ಅವಧಾನಿಗಳು ಪಂಚಾಂಗ ನೋಡುತ್ತಾ.

"ಈ ಅನುಕೂಲ, ಅನಾನುಕೂಲ ಎಲ್ಲಾ ಹೆಂಗಸರಿಗೆ ತಾನೇ. ಯಾವುದಕ್ಕೂ ಅವರನ್ನು ಕೇಳಿ ನೋಡಬೇಕು." ಎಂದರು ನಾಗಪ್ಪ. ಒಳಗಡೆ ಸ್ವಲ್ಪ ಹೊತ್ತು ಮಾತುಕತೆಯಾದನಂತರ ಪಂಚಮಿಯ ಲಗ್ನ ಅನುಕೂಲ-ವೆಂದು ತಿಳಿಯಬಂತು.

ಎಲ್ಲಾ ಒಕ್ಕಣಿ, ವಿವರಗಳು ಸಹಿತ, ಸಾಂಗೋಪಾಂಗವಾಗಿ ಎರಡೂ ಕಡೆಯವರ ಲಗ್ನಪತ್ರಿಕೆಯ ಪ್ರತಿಗಳನ್ನು ಬರೆದು, ಅವಧಾನಿಗಳು ಪೂಜೆ ಮಾಡಿದರು. ಇಷ್ಟೆಲ್ಲಾ ಆಗುವ ವೇಳೆಗೆ ಸುಮಾರು ಸಮಯವೇ ಆಯಿತು.

"ಹುಡುಗಿಯನ್ನ ಕರೆದು, ಅತ್ತೆ-ಮಾವಂದಿರು, ಹಿರಿಯರು ಎಲ್ಲರಿಗೂ ನಮಸ್ಕಾರಮಾಡಿಸಿ." ಅಂದರು ಅವಧಾನಿಗಳು.

"ಸರೂ....ಬಾಮ್ಮಾ" ಕೂಗಿದರು ಗೋವಿಂದರಾಯರು.

ಸರೂ ನಾಚುತ್ತಾ, ತಲೆಬಗ್ಗಿಸಿಕೊಂಡು ಬಂದು ನಿಂತಳು. ತಂದೆಯವರು ತೋರಿಸಿದ ಹಿರಿಯರಿಗೆಲ್ಲಾ ನಮಸ್ಕಾರ ಮಾಡಿದಳು. ಹೆಂಗಸರಿಗೂ ನಮಸ್ಕಾರ ಮಾಡಿಯಾಯಿತು. ಶ್ರೀಕಂಠಯ್ಯನವರ ಕಣ್ಣುಗಳಿಗೆ ಸರೂ ಅಂದಿ-ಗಿಂತ ಇನ್ನೂ ಹತ್ತುಪಾಲು ಹೆಚ್ಚು ಚೆಲುವೆಯಾಗಿದ್ದಳು. ಎಲ್ಲರಿಗೂ ನಮಸ್ಕರಿಸಿಯಾದ ಮೇಲೆ ಸರೂ ಒಳತೆರಳಿದಳು.

ರವೆಯ ಕೇಸರೀಭಾತ್, ಆಲೂಗೆಡ್ಡೆ ಉಪ್ಪೇರಿ, ಬಾಳೆಯಹಣ್ಣು, ಕುಡಿಯಲು ಬಾದಾಮಿ ಹಾಲು, ಇವೆಲ್ಲವನ್ನೂ ಗಂಡಸರಿಗೆ ಕೊಡಲು ನಾಗಪ್ಪನವರೇ ಎದ್ದು ನಿಂತರು. 'ಈ ಶುಭಕಾರ್ಯದಲ್ಲಿ ನಾನು ಯಾಕೆ ಕೊಡಲು ಹೋಗಲೀ' ಎಂದು ರಂಗಮ್ಮ ತಾವು ಸರಬರಾಜು ಕೆಲಸಕ್ಕೆ ಮುಂದು ಬರಲಿಲ್ಲ. ಬದಲಾಗಿ ಅದು ಸರೂವಿನ ಸ್ನೇಹಿತೆ ಸರೋಜಾಗೇ ವಹಿಸಲ್ಪಟ್ಟಿತು. ಅವಳು ಒಬ್ಬಳೇ ಮಾಡಲಾರದೆ ತನ್ನ ಜೊತೆಗೆ ಶೀಲಾಳನ್ನೂ ಎಳೆದಳು. ಇಬ್ಬರೂ ಹುಡುಗಿಯರೂ ಸೇರಿ ಹೆಂಗಸರು ಮಕ್ಕಳಿಗೆಲ್ಲಾ ಹಂಚಿದರು. ಉಪಹಾರದ ನಂತರ, ಕೊಬ್ಬರಿ-ಸಕ್ಕರೆ, ತೆಂಗಿನಕಾಯಿ, ಎಲೆ-ಅಡಿಕೆ ತೆಗೆದು ಕೊಂಡು ಒಬ್ಬೊಬ್ಬರಾಗಿ ಹೊರಟುಹೋದರು. ನಾಗಪ್ಪನ ಮನೆಯವರೂ ಅಂದು ಬಂದಿದ್ದು ಒಂದು ವಿಶೇಷ.

"ನೀವು ಬಂದಿದ್ದು ಬಹಳ ಸಂತೋಷ ಅಮ್ಮಾ. ಎಲ್ಲಾ ನಿಮ್ಮ ಆಶೀರ್ವಾದದ ಬಲ." ಎಂದರು ರಂಗಮ್ಮ, ನಾಗಪ್ಪನವರ ವೃದ್ಧೆಯಾದ ತಾಯಿಯನ್ನು ಕುರಿತು.

ಅವಧಾನಿಗಳೂ ತಮ್ಮ ಸಂಭಾವನೆಯನ್ನು ತೆಗೆದುಕೊಂಡು ಹೊರಟು ಹೋದರು. ಇನ್ನು ಉಳಿದವರೆಂದರೆ ಶ್ರೀಕಂಠಯ್ಯನವರ ಪರಿವಾರ.

" ನಿಮ್ಮ ಇತರ ಹುಡುಗರೆಲ್ಲಿ ಕಾಣುವುದಿಲ್ಲಾ ? ಅವರನ್ನೂ ಕರೆತರ ಬಹುದಾಗಿತ್ತು? " ಎಂದರು ಗೋವಿಂದರಾಯರು.

" ಅವರಿಗೆಲ್ಲಾ ಇಂಥಾ ಒಂದು ಸಮಾರಂಭ, ಒಂದು ಉತ್ಸವ ಎಂದರೆ ಬರಲು ನಾಚಿಗೆ. ಅದರಿಂದ ನಾನೇನೂ ಹೆಚ್ಚಿಗೆ ಹೇಳ ಹೋಗಲಿಲ್ಲ"

"ಹಾಡು ಹೇಳಲು ಕಲಿತಿದ್ದೀಯಾಮ್ಮಾ?" ಜಾನಕೀಬಾಯಿ ಸರೂವನ್ನೇ ಕೇಳಿದರು.

ಸರೂ ಯಾವ ಉತ್ತರವನ್ನೂ ಕೊಡದೆ ಸುಮ್ಮನೇ ಇದ್ದಳು. ಅಲ್ಲೇ ಇದ್ದ ಸರೋಜಾ ಹೇಳಿದಳು: "ಇಲ್ಲಾರೀ, ನಮ್ಮ ಸರಸು ದೇವರನಾಮ ಬಹಳ ಚೆನ್ನಾಗಿ ಹೇಳುತ್ತಾಳೆ. ನಮ್ಮ ಕ್ಲಾಸ್‌ನಲ್ಲಿ ನಡೆದ ಹಾಡುಗಾರಿಕೆಯ ಸ್ಪರ್ಧೆಯಲ್ಲಿ ಇವಳಿಗೇ ಮೊದಲನೇ ಬಹುಮಾನ ಬಂದಿದ್ದು." ತನ್ನ ವಾಕ್ಚಾತುರ್ಯವನ್ನು ಅವರೆಮುರಿಗೂ ಪ್ರದರ್ಶಿಸಿದಳು.

ಸರೂ ಆವಳ ಮಾತನ್ನು ತಡೆಯಬೇಕೆಂದು ಮಾಡಿದ ಯತ್ನವೆಲ್ಲಾ ವಿಫಲವಾಯ್ತು.

" ಹಾಗಾದರೆ ನಾವೂ ಕೇಳಬಹುದಲ್ಲಾ?" ಎಂದಳು ಸುಂದರಿ.

" ಹೇಳು ಮಗೂ, ಒಂದೆರಡು ಹಾಡುಗಳನ್ನಾ." ರಂಗಮ್ಮ ಹೇಳಿದರು.

ಸರೂ ವಿಧಿಯಿಲ್ಲದೆ, ಹಾಡಬೇಕಾಗಿ ಬಂತು. ರಾಗಬದ್ಧವಾಗಿ, ತಾಳಬದ್ಧವಾಗಿ, ಶ್ರುತಿ ಕೆಡದಂತೆ, ಲಕ್ಷಣವಾಗಿ ಎರಡು ದೇವರನಾಮುಗಳನ್ನು ಹೇಳಿ ಮುಗಿಸಿದಳು. ಜಾನಕೀಬಾಯಿಯವರೂ ಸೊಸೆಯ ಕಂಠ ಚೆನ್ನಾಗಿದೆ ಎಂದುಕೊಂಡರು. " ಸಾಕ್ಷಾತ್ ಸರಸ್ವತೀದೇವಿಯಂತೆ ಹಾಡಿದೆಯಲ್ಲೇ ತಾಯಿ ! ಏನು ಸುಶ್ರಾವ್ಯವಾದ ಕೋಮಲವಾದ ಕಂಠವೇಮ್ಮಾ ನಿನ್ನದು !" ಎಂದು ಶ್ರೀಕಂಠಯ್ಯ ಸೊಸೆಯನ್ನು ಮನಸಾರೆ ಕೊಂಡಾಡಿದರು. ಬರುವಾಗ ಜಾನಕೀಬಾಯಿ, ಬರಿಗೈಲೇನೂ ಬಂದಿರಲಿಲ್ಲ. ಎರಡು ಬೆಳ್ಳಿಯ ತಟ್ಟೆಯ ತುಂಬಾ ಬಗೆಬಗೆಯ ಹಣ್ಣುಗಳೂ, ವೀಳ್ಯೆದೆಲೆ, ಅಡಿಕೆ, ನಾಲ್ಕು ಕುಚ್ಚು ದುಂಡುಮಲ್ಲಿಗೆಹೂವೂ, ಜೊತೆಗೆ ಮೂರು ಬೆಟ್ಟು ಅಗಲ ಜರೀ ಇರುವ ಆರು ಗಜದ ಒಂದು ಧರ್ಮಾವರದ ಸೀರೆಯನ್ನು ಸೊಸೆಗಾಗಿ ತಂದಿದ್ದರು. ಎದ್ದು, ಸರೂವಿನ ಹಣೆಗೆ ಕುಂಕುಮ ಹಚ್ಚಿ, ಆ ಸೀರೆಯನ್ನು ಎಲೆ ಅಡಿಕೆ

ಸಹಿತ ಅವಳಿಗೆ ಕೊಟ್ಟು "ಇದನ್ನು ಉಟ್ಟುಕೊಂಡು ಬಾ" ಎಂದರು. ಸರೂ ಬೇರಾವ ಮಾತನ್ನೂ ಆಡದೇ ರೂಮಿಗೆ ತೆರಳಿ, ಆ ಹೊಸ ನೀಲೀ ಬಣ್ಣದ ಸೀರೆಯನ್ನುಟ್ಟು ಬಂದಳು. "ಅವರಿಗೆಲ್ಲಾ ನಮಸ್ಕಾರ ಮಾಡು ಮಗು, ಹೊಸ ಸೀರೆಯುಟ್ಟಿದ್ದೀಯಾ." ಅಂದರು ರಂಗಮ್ಮ. ಸರೂ ಅತ್ತೆ, ಮಾವ, ನಾಗಪ್ಪ, ತಂದೆ, ಅತ್ತೆ ಎಲ್ಲರಿಗೂ ನಮಸ್ಕರಿಸಿ ಸುಂದರಿಗೂ ನಮಸ್ಕರಿಸಲು ಬಗ್ಗಬೇಕೆನ್ನುವಷ್ಟರಲ್ಲಿ "ಅವಳು ನಿನ್ನ ನಾದಿನಿ. ವಯಸ್ಸಿನಲ್ಲಿ ಅವಳು ನಿನಗಿಂತ ಹಿರಿಯವಳಾದರೂ, ವಾವೆಯಲ್ಲಿ ನಿನಗಿಂತ ಕಿರಿಯಳು. ನೀನು ಅವಳ ಅತ್ತಿಗೆಯಾಗುವವಳು. ಅದಕ್ಕೆ, ನೀನು ಅವಳಿಗೆ ನಮಸ್ಕರಿಸ-ಬೇಡಾ." ಎಂದು ಹೇಳಿದರು ಅವಳ ಭಾವೀ ಅತ್ತೆಮ್ಮ. ಸರೂ ಹಾಗೆಯೇ ಮೇಲಕ್ಕೆ ಎದ್ದಳು.

"ಇನ್ನು ಹೊರಡೋಣವೇ ?" ಶ್ರೀಕಂಠಯ್ಯ ಅಲ್ಲಿಂದಲೇ ಕೇಳಿದರು.

"ಹೂಂ, ನನ್ನದೇನೂ ಇಲ್ಲಾ, ನಾನು ಸಿದ್ಧವಾಗಿಯೇ ಇದ್ದೀನಿ."

ರಂಗಮ್ಮ ಅವರು ತಂದಿದ್ದ ತಟ್ಟೆಗಳನ್ನು ಖಾಲಿಮಾಡಿಟ್ಟರು. ಸರೂ ಳಿನ ಕೈಲಿ ಕುಂಕುಮ ತಾಂಬೂಲ ಎಲ್ಲಾ ಕೊಡಿಸಿದ್ದಾಯ್ತು. ಎಲ್ಲರೂ ಹೊರಟುನಿಂತರು.

"ತಾವು ದೊಡ್ಡ ಮನಸ್ಸು ಮಾಡಿ ಈ ಮನೆಯ ಸಂಬಂಧ ಬೆಳೆಸಿದಿರಿ. ಅದಕ್ಕೆ ನಾನು ನಿಮಗೆ ಆಜನ್ಮ ಕೃತಜ್ಞನಾಗಿದ್ದೇನೆ. ಈ ಶುಭ ದಿನದಿಂದ ನಮ್ಮ ಪರಸ್ಪರ ವಿಶ್ವಾಸವು ಬೆಳೆಯಲೀ, ಇಂದಿನ ದಿನ ಮುಂದೆ ಬರುವ ಸುಖದ ದಿನಗಳಿಗೆ ನಾಂದಿಯಾಗಲೀ, ಎಂದು ನಾನು ದೇವರಲ್ಲಿ ಬೇಡುವೆ" ಎಂದು ಸಂತೋಷದಿಂದ ನುಡಿದರು ಗೋವಿಂದರಾಯರು.

"ನಾನಾವ ಮಹತ್ಕಾರ್ಯವನ್ನು ಮಾಡಿದೆ ಎಂದು ನೀವು ಅಡಿಗಡಿಗೆ ನನ್ನನ್ನು ಹೊಗಳುವಿರಿ ? ಮಗನಿಗೆ ಯೋಗ್ಯಳಾದ ಹೆಂಡತಿಯನ್ನು ತರುವುದು ನನ್ನ ಕರ್ತವ್ಯ. ಅದನ್ನು ನಾನು ಮಾಡಿದೆ. ನೀವು ನಿಮ್ಮ ಮಗಳಿಗೆ ತಕ್ಕ ಪತಿಯನ್ನು ದೊರಕಿಸಿ, ನಿಮ್ಮ ಕರ್ತವ್ಯವನ್ನು ನೀವೂ ಮಾಡಿರುವಿರಿ. ಇದರಲ್ಲಿ ಯಾರು ಹೆಚ್ಚು, ಯಾರು ಕಡಿಮೆ ? ಇದರಲ್ಲಿ ಬಡವನಾದರೂ ಅಷ್ಟೇ, ಬಲ್ಲಿದನಾದರೂ ಅಷ್ಟೇ; ಅವರವರ ಕೆಲಸಗಳನ್ನು ನಿರ್ವಹಿಸುವದರಲ್ಲಿ ಯಾರಿಗೆ ಯಾರೂ ಕಡಿಮೆಯಲ್ಲ. ಎಲ್ಲರೂ ತನ್ನಂತೆಯೇ ಎಂದು ತಿಳಿದು ನಡೆದರೆ ಸಾಕು. ಅದಕ್ಕಿಂತ ಬೇರೆ ಯಾವ ದೊಡ್ಡ ಗುಣವೂ ಇಲ್ಲಾ. ಪ್ರತಿ

ಯೊಂದು ಕೆಲಸವೂ, ಅವನ ಪ್ರೇರಣೆಯಿಂದಲೇ ಆಗುತ್ತೆ, ಅದು ನಡೆಯಲು ನಾವುಗಳು ಕೇವಲ ನಿಮಿತ್ತಮಾತ್ರವಷ್ಟೇ." ಎಂದು ಒಂದು ಮರಿ ಉಪ ನ್ಯಾಸವನ್ನೇ ಮಾಡಿದರು ಶ್ರೀಕಂಠಯ್ಯ.

"ಈಗ ಹೊರಡಲು ಗಾಡಿ ಕರೆತರಲೇ?" ಎಂದರು ಗೋವಿಂದರಾಯರು.

"ಏನಿಲ್ಲಾ, ಆ ಟ್ಯಾಕ್ಸಿಯವನಿಗೇ ಬರಲು ಹೇಳಿದ್ದೇವೆ." ಎಂದು ತಮ್ಮ ಶ್ರೀಮಂತಿಕೆಯನ್ನು ಎತ್ತಿ ತೋರಿಸುತ್ತಾ ಆಡಿದರು ಜಾನಕೀಬಾಯಿ.

ಹೊರಗಡೆ ಕಾರಿನ ಶಬ್ದ ಕೇಳಬಂತು. ಡ್ರೈವ್ಹರ ಬಂದು "ಬರ್ತೀರಾ ಸ್ವಾಮೀ ?" ಎಂದ.

"ಒಂದು ನಿಮಿಷ ಇರಪ್ಪಾ ಬಂದೇ" ಎಂದು ರಂಗಮ್ಮ ಒಳಕ್ಕೆ ಹೋಗಿ, ತಟ್ಟೆಯಲ್ಲಿ ಉಪಹಾರವನ್ನೂ ಲೋಟಾದಲ್ಲಿ ಹಾಲನ್ನೂ ತಂದು ಅವನ ಕೈಗಿತ್ತರು. 'ನಮಗೆಲ್ಲಾ ಏನು ತಾಯೀ' ಎಂದು ತಿನ್ನಲು ಶುರುಮಾಡಿದ. ಆ ವೇಳೆಗೆ ಎಲ್ಲರೂ ಕಾರಿನಲ್ಲಿ ಕೂತರು. ತಿಂಡಿ ತಿಂದು, ಹಾಲು ಕುಡಿದು ಡ್ರೈವರ್ 'ಬರ್ತೀನಿ ತಾಯೀ. ಯಾವಾಗ ಮದುವೆ? ಮದುವೇಲಿ ನನ್ನ ಮರೀಬೇಡೀ." ಎನ್ನುತ್ತಾ ಹೋಗಿ ಕಾರ್‌ನೊಳಗೆ ಕೂತ. ರಂಗಮ್ಮ, ಗೋವಿಂದರಾಯರು, ನಾಗಪ್ಪ ಎಲ್ಲರೂ ಬೀದಿಯ ಬಾಗಿಲಿಗೆ ಬಂದು ನಿಂತರು.

"ಹೋಗಿ ಬರ್ತೀನಿ ಗೋವಿಂದರಾಯರೇ, ವಿಶ್ವಾಸವಿರಲಿ." ಎನ್ನುತ್ತಿರುವಾಗಲೇ ಕಾರ್ ಸ್ಟಾರ್ಟ್ ಆಗಿ ಮುಂದಕ್ಕೆ ಹೋಯಿತು. ಶ್ರೀಕಂಠಯ್ಯ ಕೈ-ಯನ್ನು ಬೀಸುತ್ತಲೇ ಇದ್ದರು. ಒಂದೆರಡು ನಿಮಿಷಗಳೊಳಗಾಗಿ ಕಾರು ಕಣ್ಮರೆಯಾಯಿತು.

ಸರೋಜಾ, ಶೀಲಾ, ತಾಂಬೂಲ ತೆಗೆದುಕೊಂಡು, ಸರೂವನ್ನು ಹೋಗುವಾಗಲೊಮ್ಮೆ ಕೀಟಲೆ ಮಾಡಿ, ರಂಗಮ್ಮನವರಿಗೆ ಹೇಳಿ ಹೋದರು. ಸರೋಜಳ ಮನೆ ದೂರವಿದ್ದುದರಿಂದ "ನಾನೇ ಬರಲೇ ಮಗೂ, ನಿನ್ನ ಜೊತೇಗೆ, ಒಬ್ಬಳೇ ಹೋಗುತ್ತೀಯಲ್ಲಾ?" ಅಂದರು ರಂಗಮ್ಮ.

"ಇಲ್ಲಾ, ನನ್ನ ತಮ್ಮ ಬಂದಿದ್ದಾನೆ, ಅವನ ಜೊತೇಗೆ, ಹೋಗ್ತೀನಿ." ಎಂದು ಸರ ಸರ ನಡೆದಳು ಸರೋಜಾ.

"ಹೂಂ. ಇನ್ನು ನನಗೂ ಅಪ್ಪಣೆ ಕೊಡುತ್ತೀರಾ ತಾಯೀ?" ಎನ್ನುತ್ತಾ ನಾಗಪ್ಪನವರು ಇಳಿದು ಹೋದರು.

"ಸದ್ಯ ಮದುವೆ ಅನ್ನುವುದೊಂದು, ದೃಢವಾಯಿತಲ್ಲಾ. ಇನ್ನು ಮುಂದೆ

ಮದುವೆ ತಯಾರಿ ಮಾಡಬೇಕು.” ರಂಗಮ್ಮ ಮಾತಿಗೆ ಉಪಕ್ರಮಿಸಿದರು.

“ಏನೂ ಯೋಚನೆ ಮಾಡಬೇಡಾ ಅಕ್ಕಾ, ಎಲ್ಲದಕ್ಕೂ ಜನರನ್ನು ಗೊತ್ತುಮಾಡುತ್ತೀನಿ. ಹಿಂದಿನಂತೆ ನಿನಗೆ ಕೆಲಸ ಮಾಡಲು ಚೈತನ್ಯವಾದರೂ ಎಲ್ಲಿ?”

“ಗೋಪಾಲನಿಂದ ಕಾಗದವೇನಾದರೂ ಬಂದಿತ್ತೇ? ಇರುವವ ಅವ ನೊಬ್ಬ. ಕಾಗದ ಬರೆದಿದ್ದರೂ ಬರಲೇ ಇಲ್ಲಾ. ಏನೋಪ್ಪಾ ಅವನ ನಡವಳಿ ಕೇನೇ ತಿಳಿಯೋದಿಲ್ಲಾ.”

“ಅಲ್ಲಿ ಅವರ ಸಮಯ ಸಂದರ್ಭ ಹೇಗಿರುತ್ತೋ ಏನೊ? ತನಗೆ ಬೇಗನೆ ಬರುವುದಕ್ಕಾಗುವುದಿಲ್ಲವಾದರೂ ಹೆಂಡತಿಯನ್ನಾದರೂ, ಒಂದು ತಿಂಗಳ ಮುಂಚೆ ಕಳಿಸು ಎಂದು ಬರೆಯುತ್ತೇನೆ. ಈವತ್ತು ಆಗಲೇ ತಾರೀಖು ಹತ್ತು. ಇನ್ನು ಸರಿಯಾಗಿ ಇಪ್ಪತ್ತೈದು ದಿನ ಇದೆ ನೋಡು. ಅವಳೂ ಬಂದರೆ ನಿನಗೂ ನೆರವಾಗುತ್ತೆ.”

“ಪಾಪ, ಅವಳು ತಾನೇ ಅವನ್ನ ಕಟ್ಟಿಕೊಂಡು ಏನು ಸುಖಪಟ್ಟಳು? ಅವಳಿಗೂ ಏನೋ ಒಂದು ಮಗುವಾಗಿದ್ದರೂ, ಹೇಗೋ ಸಾವರಿಸಿಕೊಂಡಿರ ಬಹುದಾಗಿತ್ತು. ಪುಣ್ಯಕ್ಕೆ ಅದೂ ಇಲ್ಲಾ. ಇಲ್ಲಾದರೂ ಬಂದು ಸ್ವಲ್ಪ ದಿನ ಇರಲಿ.” ಎಂದು ಕಮಲಳಿಗಾಗಿ ಮರುಗಿದರು ರಂಗಮ್ಮ.

ಗೋವಿಂದರಾಯರ ಕಾಗದವನ್ನು ನೋಡಿದೊಡನೆಯೇ ಸಂತೋಷ ದಿಂದ ಉಬ್ಬಿಹೋದಳು ಕಮಲಾ. ಸರೂವಿಗೆ ಮದುವೆ ಗೊತ್ತಾದ ಬಗೆ ಯನ್ನೂ, ಲಗ್ನಪತ್ರಿಕೆಯಾದುದನ್ನೂ ಎಲ್ಲವನ್ನೂ ವಿವರವಾಗಿ ಬರೆದಿದ್ದರು ಗೋವಿಂದರಾಯರು. ತಾನು ಬೆಂಗಳೂರಿಗೆ ಹೋಗಬಹುದು, ತನ್ನ ಈ ಕಾರ್ಪ ಣ್ಯದ ಸಂಸಾರವನ್ನು ಕೆಲ ದಿನಗಳ ಮಟ್ಟಿಗಾದರೂ ಮರೆತು ಹಾಯಾಗಿ ಇರ ಬಹುದು ಎಂದು ಎಳೆಯ ಹುಡುಗಿಯಂತೆ ಕುಣಿದು ಕುಪ್ಪಳಿಸಿದಳು ಕಮಲಾ. ಅವಳ ಆ ಗೆಲುವಿನಲ್ಲಿ ಒಲೆಯ ಮೇಲಿದ್ದ ಅನ್ನ ಸೀದು ಹೋಗುವುದೂ ಅವಳ ಗಮನಕ್ಕೆ ಬರಲಿಲ್ಲ. ಅದೇ ಗುಂಗಿನಲ್ಲಿಯೇ ಮನೆ ಕೆಲಸ ಮುಗಿಸಿದಳು.

"ನಮ್ಮ ಸರಸೂಗೆ ಮದುವೆಯಂತೆ ಕಣ್ರೀ. ನನ್ನನ್ನು ಈಗಲೇ ಕಳಿಸು ಎಂದು ಬರೆದಿದ್ದಾರೆ ನಮ್ಮ ಭಾವ" ಎಂದು ತನ್ನ ನೆರೆಹೊರೆಯವರಿಗೆಲ್ಲಾ ತಿಳಿಸಿ ಬಂದಳು. ಅಡುಗೆ ಮುಗಿಸಿ ಮುಚ್ಚಿಟ್ಟು, ಗೋಪಾಲನಿಗಾಗಿ ದಾರಿ ಕಾಯುತ್ತಾ ಕೂತಳು. ಹಿಂದಿನ ಆ ಕಳೆದು ಹೋದ ದಿನಗಳೆಲ್ಲಾ ಒಂದೊಂದಾಗಿ ಕಣ್ಮುಂದೆ ಬರಲಾರಂಭಿಸಿದವು. ಆ ದಿನ ಎಷ್ಟು ಪ್ರೀತಿಯಿಂದ ಆದರ ದಿಂದ, ಸಂತೋಷದಿಂದ ತನ್ನನ್ನು ಸಿನೀಮಾಗೆ ಕರೆದೊಯ್ದಿದ್ದ ! ತನ್ನ ಸಾಗರ ಪ್ರತಿಷ್ಠೆಯನ್ನು ಕೂಡಲೇ ಒಪ್ಪಿಕೊಂಡು ಸಾಕಷ್ಟು ಚೆನ್ನಾಗಿಯೇ ಮಾಡಿದ್ದ ! ತನ್ನ ಪತಿ ತನ್ನ ಹಿಂದಿನ ದುರ್ನಡತೆಗಳನ್ನೆಲ್ಲಾ ಬಿಟ್ಟಿದ್ದಾನೆ, ಇನ್ನು ಮುಂದೆ ಯಾದರೂ ನೆಮ್ಮದಿಯಿಂದ ಎಲ್ಲರಂತೆ ತಾನೂ ಸುಖವಾಗಿರಬಹುದು, ಎಂಬ ಆಶಾಕಿರಣವು, ಎಷ್ಟು ದಿನ ತಾನೇ ಉಳಿಯಿತು ? ಅದ್ಯಾವ ದೇವರು ಬುದ್ಧಿ ಕೊಟ್ಟನೋ, ಅದು ಯಾವ ಪೂರ್ವಜನ್ಮದ ಸುಕೃತವೋ, ಅವನಿಗೆ ದೇವರ ಸೇವೆಯನ್ನು ಮಾಡುವ ಬುದ್ಧಿಯುಂಟಾಯಿತು. ಅದರಿಂದ ತನ್ನ ತಮ್ಮ ಕೆಟ್ಟು ಹೋದ ಎಂದು ಮರಗುತ್ತಿದ್ದ ಗೋವಿಂದರಾಯರಿಗೂ ಬಹಳ ಆನಂದ ವಾಗಿತ್ತು. ಕಮಲುವಿಗಂತೂ ಸ್ವರ್ಗವೇ ಸಿಕ್ಕಂತಾಯಿತು. ಆದರೆ ಈ ಎಲ್ಲಾ ಆಸೆ-ಆಕಾಂಕ್ಷೆಗಳು ಕೊನೆಯ ವರೆಗೂ ಹಾಗೆಯೇ ಉಳಿದಿದ್ದರೆ ಚೆನ್ನಾಗಿತ್ತು. ಆದರೆ ವಿಧಿ ಅವರನ್ನು ಹಾಗೆಯೇ ಸಂತೋಷದಿಂದ ಇರಗೊಡಿಸಲಿಲ್ಲ.

ದಿನ ಕಳೆದಂತೆ ಗೋಪಾಲ ಯಥಾಪ್ರಕಾರ ತನ್ನ ಹಿಂದಿನ ದಾರಿಯನ್ನೇ ಹಿಡಿದ. ಕೈಗೆ ಬಂದ ಸಂಬಳದಲ್ಲಿ ಕಮಲಳ ಕೈಗೆ ಬರುತ್ತಿದ್ದುದು ಕೇವಲ ನಾಲ್ಕರಲ್ಲಿ ಒಂದು ಭಾಗ ಮಾತ್ರ. ಸಂಬಳದಿಂದ ಬಂದ ದಿನ, ಗೋಪಾಲ ಮನೆಯನ್ನು ಕಾಣುತ್ತಿದ್ದುದು ರಾತ್ರಿ ಹನ್ನೊಂದು ಅಥವಾ ಹನ್ನೆರಡು. ಕಮಲಾ ಯಾವ ಮಾತನ್ನೂ ಆಡುತ್ತಿರಲಿಲ್ಲ. 'ಊಟಕ್ಕೆ ಏಳುವಿರಾ ?' ಎಂದು ಕೇಳಿದರೆ ಒಂದೊಂದು ದಿನ 'ಹೂಂ, ಇಲ್ಲಾ' ಎಂಬ ಉತ್ತರದಲ್ಲಿ ಯಾವುದಾದರೂ ಒಂದು ದೊರಕುತ್ತಿತ್ತು. ಊಟ ಮಾಡುವುದಾದರೆ ಅವನಿಗೆ ಬಡಿಸಿ, ನಂತರ ತಾನು ಊಟ ಮಾಡಿ, ಮಲಗುತ್ತಿದ್ದಳು. ಗೋಪಾಲ ನಿದ್ರೆ ಹೋದ ನಂತರ, ಅವನ ಕೋಟಿನ ಜೇಬುಗಳನ್ನೆಲ್ಲಾ ತಡಕಿ ಅಲ್ಲಿ ಇರುತ್ತಿದ್ದ ಇಪ್ಪತ್ತೋ ಮೂವತ್ತೋ ರೂಪಾಯಿಗಳನ್ನು ತೆಗೆದಿಟ್ಟುಕೊಳ್ಳುತ್ತಿದ್ದಳು. ಮಾರನೆಯ ದಿನ ಗೋಪಾಲ, ಜೇಬು ಖಾಲಿಯಾಗಿರುವುದನ್ನು ನೋಡಿ, ಕಮಲಳನ್ನು ಮನಸ್ವಿಯಾಗಿ ಬೈದು, ಕೂಗಾಡಿ, ಅವಳಿಂದ ಏನಾದರೂ ಮಾತು ಬಂದರೆ

ಸರಿ, ಅವಳನ್ನು ತನ್ನ ಮನ ಬಂದಂತೆ ಹೊಡೆದು ಊಟವನ್ನೂ ಮಾಡದೆ ಹಾಗೆಯೇ ಹೋದ ದಿನಗಳೂ ಉಂಟು. ಗೋಪಾಲ ಅಷ್ಟಕ್ಕೇ ಬಿಡುತ್ತಿರ ಲಿಲ್ಲ. ತನಗೆ ಬೇಕಾದ, ಸಮಯ ಒದಗಿದರೆ, ಕಮಲಳ ಬಳಿಯಲ್ಲಿರುವ ಹಣವನ್ನೂ ಅವಳಿಂದ, ಬೈದೋ ಅಂದೋ, ಕಿತ್ತುಕೊಂಡು ಹೋಗುತ್ತಿದ್ದ. ಒಡವೆ, ಸೀರೆ, ಆಟ-ನೋಟ ಇವುಗಳಿಲ್ಲದೇ ಹೋದರೂ, ಮನುಷ್ಯನಾದವ ನಿಗೆ ಹೊಟ್ಟೆಗಾದರೂ ದುಡ್ಡು ಬೇಕೇ ಬೇಕಲ್ಲವೆ? ಸಂಸಾರ ಅಂದ ಮೇಲೆ ಏನು ಬೇಕು, ಯಾಕೆ ಬೇಡ, ಪ್ರತಿಯೊಂದು ಆಗಲೇಬೇಕು. ಹಾಲು ಮೊಸರಿ ನವರು, ಮನೆ ಬಾಡಿಗೆಯವರು ಎಷ್ಟು ದಿನಾ ಅಂತ ತಡೆಯುತ್ತಾರೆ? ಹೆಚ್ಚು ಎಂದರೆ ಒಂದೆರಡು ತಿಂಗಳು ಸುಮ್ಮನಿರಬಹುದು. ನಂತರ ಅವರ ತಗಾದೆ ಜೋರಾಯಿತು. ಅವರಿಗೆಲ್ಲಾ ಎಲ್ಲಿಂದ ಹಣವನ್ನು ತರುವುದು? ಹೇಗೆ ಕೊಡು ವುದು? ಗೋಪಾಲನ ಗುಣವನ್ನು ಕಂಡವರು ಯಾರು ತಾನೇ ಸಾಲವನ್ನು ಕೊಡುತ್ತಾರೆ? ಈ ವ್ಯವಹಾರವನ್ನು ಫೈಸಲ್ ಮಾಡುವುದು ಹೇಗೆ, ಎಂಬುದು ಬಗೆಹರಿಯದೆ, ಕಡೆಗೆ ಒಂದು ನಿಶ್ಚಯಕ್ಕೆ ಬಂದಳು ಕಮಲಾ. ಅತ್ತೆಯ ಮನೆ ಯಲ್ಲಿಟ್ಟಿದ್ದ ಒಡವೆಗಳು ಕಡಮೆ ಏನೂ ಇರಲಿಲ್ಲ. ಗೋಪಾಲನಿಗೆ ತಿಳಿಯ ದಂತೆ ಒಂದು ಜೊತೆ ಚಿನ್ನದ ಬಳೆಯನ್ನು ಪಕ್ಕದ ಮನೆಯವರ ಮೂಲಕ ಮಾರಿಸಿ, ಅದರಿಂದ ಬಂದ ಹಣದಲ್ಲಿ ಸಾಲವನ್ನೆಲ್ಲಾ ತೀರಿಸಿ ಮಿಕ್ಕಿದ್ದಕ್ಕೆ ಮನೆ ಗಾಗುವ ಸಾಮಾನು ತರಿಸಿದಳು. ಹಣವನ್ನು ಬಳಿ ಇದ್ದರೇನೇ ತಾನೇ ಗೋಪಾಲ ತೆಗೆದುಕೊಳ್ಳುವುದು, ಎಂದು ಕೈಲಿ ಒಂದು ಕಾಸನ್ನೂ ಇಟ್ಟು ಕೊಳ್ಳುತ್ತಲಿರಲಿಲ್ಲ.

ಹೀಗೆಯೇ ಎಷ್ಟು ದಿನಾ ಅಂತ ಸಾಗುತ್ತದೆ? ಕಮಲಳ ಮೈಮೇಲಿದ್ದ ಒಡವೆಗಳೆಲ್ಲಾ ಒಂದೊಂದಾಗಿ ಮಾಯವಾಗುತ್ತಾ ಬಂದುವು. ಕತ್ತಿನಲ್ಲಿಯ ಎರಡೆಳೆಯ ಸರ ಬಿಟ್ಟರೆ ಬೇರಾವ ಒಡವೆಯೂ ಅವಳ ಮೈಮೇಲೆ ಉಳಿಯಲಿಲ್ಲ.

ಕೇವಲ ಮೂವತ್ತೈದು ವರ್ಷದವಳಾದ ಕಮಲಾ, ತೀರಾ ಮುದಿಕಿ ಯಂತಾದಳು. ತಲೆ ಎಲ್ಲಾ ಬೆಳ್ಳಗಾಗುತ್ತಾ ಬಂದಿತು. ಕಣ್ಣುಗಳು ಕಾಂತಿ ಹೀನವಾಗಿ, ಒಳಕ್ಕೆ ಹೋಗಿದ್ದುವು. ಹಿಂದೆ ನೋಡಿದ್ದವರು ಅವಳನ್ನು ಕಮಲಾ ಎಂದು ಗುರ್ತಿಸುವುದೇ ಕಷ್ಟವಾಗಿತ್ತು.

ಗೋಪಾಲನ ಸ್ಥಿತಿಯೂ ಅದೇ ತೆರನಾಗಿತ್ತು. ಇಲ್ಲದ ದುರ್ವ್ಯಸನ, ದುಶ್ಚಟಗಳಿಗೆ ಬಲಿಯಾಗಿ, ಆನೆಯಂತಿದ್ದವನು ಆಡಿನಂತಾದ. ಹೊತ್ತು

ಹೊತ್ತಿಗೆ ಅನ್ನ ಆಹಾರಗಳಿಲ್ಲದೆ ಅವನೂ ಸೊರಗಿಹೋದ. ಅವನ ಕೆಟ್ಟ ನಡತೆಗಳಿಂದಾಗಿ ಅವನಿಗೆ ಹಲವಾರು ಬೇನೆಗಳೂ ಅಂಟಿಕೊಂಡವು. ಅವನ ದೇಹಸ್ಥಿತಿ ದಿನೇ ದಿನೇ ಕೆಡುತ್ತಾ ಬಂದಿತು.

ಕಮಲಾ, ಗೋಪಾಲ ಮನೆಗೆ ಬಂದೊಡನೆಯೇ ಕಾಗದವನ್ನು ಕೈಗಿತ್ತಳು. ಗೋಪಾಲನಿಗೆ ಈಗ ಯಾರ ಮೇಲೂ ವ್ಯಾಮೋಹವೇ ಇರಲಿಲ್ಲ. ಕಾಗದವನ್ನು ನೋಡಿ ಅವನು ಯಾವ ಬಗೆಯ ಸಂತೋಷವನ್ನೂ ವ್ಯಕ್ತ ಪಡಿಸಲಿಲ್ಲ.

ಊಟಕ್ಕೆ ಬಡಿಸುತ್ತಾ ಕೇಳಿದಳು ಕಮಲಾ "ಭಾವನವರು ಬರೆದಿರುವಂತೆ ನನ್ನನ್ನು ಕಳಿಸಿಕೊಡುವಿರಾ?"

"ನಾನು ನಿನಗೆ ಯಾವುದಕ್ಕೆ ಅಡ್ಡಿ ಬಂದಿದ್ದೇನೆ? ಇಷ್ಟ ಬಂದರೆ ಹೋಗು. ಇಲ್ಲವಾದರೆ ಬಿಡು, ನನಗೇನು? ನಿನ್ನ ಮಗಳ ಮದುವೆಗೆ ನೀನೊಬ್ಬಳೇ ಓಡಾಡಿದರೆ ಸಾಕು." ಕಮಲಾ ತನಗೆ ಏನೂ ಸಂಬಂಧವಿಲ್ಲ ವೆಂಬಂತೆ ಮಾತಾಡಿದ ಗೋಪಾಲ.

"ನೀವು ಹೀಗೆ ಅಂದರೆ, ನಾನು ಹೇಗೆ ಹೋಗಲಿ, ನೀವೇ ಹೇಳಿ? ನೀವು ಹೋಗೂ ಅಂದರೆ ಹೋಗುತ್ತೀನೆ, ಇಲ್ಲವಾದರೆ ಇಲ್ಲಾ." ತನ್ನ ಆಸೆ ಎಲ್ಲವನ್ನೂ ಅದುಮಿ ಮಾತಾಡಿದಳು ಕಮಲಾ. ಆ ಮಾತಿನಿಂದ ಗೋಪಾಲ ನಿಗೆ ಏನೆನ್ನಿಸಿತೋ ಏನೋ! "ನಾನು ಕಾಗದ ಬರೆಯುತ್ತೇನೆ, ಅಣ್ಣನಿಗೆ ನಿನ್ನನ್ನು ಸ್ಟೇಷನ್ನಿನಿಂದ ಕರೆದುಕೊಂಡು ಹೋಗುವಂತೆ. ಇಲ್ಲಿ ಕೂಡಿಸಿದರೆ ಅಲ್ಲಿ ಇಳಿಯಲು, ಹೆದರಿಕೆ ಏನೂ ಇಲ್ಲವಷ್ಟೇ? ನನ್ನ ಕಾಗದ ನಾಳೆಗೇ ತಲಪುತ್ತೆ. ನೀನು ನಾಡಿದ್ದು ಬೆಳಗಿನ ಆರರ ಗಾಡಿಗೇ ಹೊರಟು ಬಿಡು" ಗೋಪಾಲ ಮಜ್ಜಿಗೆ-ಅನ್ನ ಊಟ ಮಾಡುತ್ತಾ ಹೇಳಿದ. ಕಮಲಾ ಆನಂದ ದಿಂದ ಉಬ್ಬಿಹೋದಳು. ಆದರೆ ಮರುಕ್ಷಣ, ಇವರ ಮನಸ್ಸು ಗಳಿಗೆ ಗಳಿಗೆಗೂ ಬದಲಾಗುತ್ತಾ ಇರುತ್ತೆ. ಮತ್ತೆ ಯಾವ ಗಳಿಗೆಯಲ್ಲಿ ಮನ ತಿರುಗಿ, ಬೇಡಾ-ಅನ್ನುತ್ತಾರೋ, ಯಾವುದಕ್ಕೂ ಈಗಲೇ ಆತುರ ಪಡಬಾರದು ಎಂದುಕೊಂಡು ಊಟಕ್ಕೆ ಕೂತಳು ಕಮಲಾ.

ಆ ನಾಳಿನ, ಒಂದು ದಿನವನ್ನು ಕಳೆಯುವುದು ಕಮಲಳಿಗೆ ಒಂದು ಯುಗದಂತೆ ತೋರಿತು. ಚಿಕ್ಕ ಪುಟ್ಟ ಸಾಲಗಳನ್ನೆಲ್ಲಾ ತನ್ನ ಬಳಿ ಇದ್ದ ಪುಡಿ ಕಾಸುಗಳಿಂದಲೇ ತೀರಿಸಿದಳು. ತನಗೆ ಬೇಕಾಗುವ ಬಟ್ಟೆಬರೆ ಎಲ್ಲಾ

ಒಂದು ಪುಟ್ಟ ಸೂಟಕೇಸ್‌ಗೆ ಹಾಕಿ, ತನ್ನ ಹಾಸಿಗೆಯನ್ನೂ ರಾತ್ರಿಯೇ ಕಟ್ಟಿಟ್ಟು, ಬರಿಯ ಚಾಪೆಯ ಮೇಲೆಯೇ ಮಲಗಿದಳು. ಕಮಲಾ ಸಂಶಯಗೊಂಡಂತೆ ಗೋಪಾಲ ತನ್ನ ಮನಸ್ಸನ್ನೇನೂ ಬದಲಾಯಿಸಿರಲಿಲ್ಲ. ಸ್ನೇಹಿತರ ಬಳಿ ಬೇಡಿ ಹತ್ತು ರೂಪಾಯಿ ಸಾಲ ತಂದಿದ್ದ. ಗೋಪಾಲ ತಾನೇ ಕಮಲಳ ಜೊತೆಗೆ ಹೋಗಿ, ಟಿಕೇಟು ತೆಗೆದುಕೊಟ್ಟು, ಗಾಡಿಯಲ್ಲಿ ಕೂರಿಸಿದ.

ಕಮಲಾ ಮೈಸೂರಿಗೆ ಬಂದಾರಭ್ಯ ಒಂದು ದಿನವೂ ಊರು ಬಿಟ್ಟು ಹೊರಗೆ ಹೋಗಿಯೇ ಇರಲಿಲ್ಲ. ಅವಳ ಮೊದಲ ಪ್ರಯಾಣವೆಂದರೆ ಇದೇನೇ. ಹೊರಡುವಾಗ ಸಂತೋಷದಿಂದ ಹೊರಟ ಕಮಲಳಿಗೆ ಈಗ ತನ್ನ ಗಂಡನ ಊಟ ತಿಂಡಿಯ ನೆನಪಾಯಿತು. ತಾನಿರುವಾಗಲೆ ಅವನು ಮನೆಗೆ ಬರುತ್ತಿದ್ದುದು ಅಷ್ಟಕಷ್ಟೆ. ಇನ್ನು ತಾನೂ ಇರದ ಮೇಲೆ, ಅವನನ್ನು ಕೇಳುವವರೇ ಇಲ್ಲ. ಅವರ ದೇಹಸ್ಥಿತಿ ಬೇರೆ ಸರಿಯಾಗಿಲ್ಲ, ಅವರನ್ನು ಹಾಗೆಯೇ ಬಿಟ್ಟರೆ, ಇನ್ನೇನು ಮಾಡಿಕೊಳ್ಳುತ್ತಾರೋ ಎಂದು ಕಳವಳಪಟ್ಟಳು. ಆದರೆ ಈಗ ಹೊರಟಾಯಿತು. ಟಿಕೀಟೂ ತೆಗೆದುಕೊಂಡದ್ದಾಗಿದೆ. ಇನ್ನು ಹಿಂತಿರುಗುವ ಹಾಗಿಲ್ಲ. ಅದರ ವಿಷಯವಾಗಿ ಮಾತೆತ್ತಿದರೆ, ಅದಕ್ಕೆ ಬರುವ ಉತ್ತರವೂ ಅವಳಿಗೆ ಗೊತ್ತಿತ್ತು. ಹೀಗಾಗಿ ಕಮಲಾ ಯಾವ ಮಾತನ್ನೂ ಆಡಲಿಲ್ಲ. "ಹೋಗಿಬರುತ್ತೇನೆ, ನೀವೂ ಮದುವೆಗೆ ಖಂಡಿತಾ ಬನ್ನಿ. ಬರದೇ ಇರಬೇಡಿ." ಎಂದು ಕಮಲಾ ಕಣ್ಣಲ್ಲಿ ಸೂಸಿಬರುತ್ತಿದ್ದ ಅಳುವನ್ನು ತಡೆದು ಹೇಳಿದ್ದಳು. "ಹೂಂ, ನೋಡೋಣಾ." ಎಂದು ಗೋಪಾಲ ಬೇಸರದಿಂದ ಉತ್ತರವಿತ್ತಿದ್ದ.

"ಗಾರ್ಡು ಸೀಟಿ ಊದಿ, ಹಸಿರು ಬಾವುಟ ತೋರಿಸಿದ. ರೈಲು ಮುಂದಕ್ಕೆ ಹೋರಟಿತು. ಕಮಲಾ ಕಿಟಿಕೆಯಲ್ಲಿ ಮುಖವಿಟ್ಟು ನೋಡುತ್ತಲೇ ಇದ್ದಳು, ಗೋಪಾಲ ಕಣ್ಮರೆಯಾಗುವ ತನಕ.

ರೈಲು ಬೆಂಗಳೂರನ್ನು ತಲುಪಿದಾಗ ಹನ್ನೊಂದೂವರೆ ಗಂಟೆಯಾಗಿತ್ತು. ಕಮಲಾ ಪ್ರಯಾಣಕ್ಕೆ ಹೊಸಬಳಾದ್ದರಿಂದ, ಗಾಡಿಯಿಂದಿಳಿದು ಎಲ್ಲಿಗೆ

ಹೋಗಬೇಕೋ ಎಂದು ತಿಳಿಯದೆ ಅಲ್ಲಿಯೇ ಪ್ಲಾಟಫಾರಂನ ಮೇಲೆ ನಿಂತು, ಯಾರಾದರೂ ಬಂದಿದ್ದಾರೇನೊ ಎಂದು ಸುತ್ತಲೂ ನೋಡಿದಳು. ಯಾರೂ ಕಾಣಿಸಲಿಲ್ಲ. ಜನಸಂದಣಿ ಎಲ್ಲಾ ಕಡಿಮೆಯಾದ ನಂತರ, ಗೋವಿಂದ ರಾಯರು ದೂರದಲ್ಲಿ ಬರುತ್ತಿದ್ದುದು ಕಾಣಿಸಿತು. ಕಮಲಳಿಗೆ ಜೀವ ಬಂದಂತೆ ಆಯಿತು. ಗೋವಿಂದರಾಯರು ಎಲ್ಲಾ ಗಾಡಿಗಳನ್ನೂ ನೋಡಿಕೊಂಡು, ಕಮಲಳ ಬಳಿಗೆ ಬಂದರು. ನೋಡಿದ ಕೂಡಲೇ ಅವರಿಗೆ ಕಮಲಳನ್ನು ಗುರ್ತಿಸಲಾಗಲಿಲ್ಲ. ತೀರಾ ಹತ್ತಿರಕ್ಕೆ ಬಂದ ಮೇಲೆ ಕಮಲಾ ಎಂದು ತಿಳಿಯಿತು. "ಗೋಪಾಲ ಚನ್ನಾಗಿರುವನೇನಮ್ಮಾ?" ಎಂದರು ಗೋವಿಂದ ರಾಯರು ಸಾಮಾನುಗಳನ್ನು ತೆಗೆದುಕೊಳ್ಳುತ್ತಾ. "ಹೂಂ" ಎಂದು ಹಾಸಿಗೆಯನ್ನೆತ್ತಿ ಹೊರಟಳು. "ತಾಮ್ಮಾ ಇಲ್ಲೀ, ನಾನು ತೊಗೊಂಡು ಬರುತ್ತೇನೆ, ಏನು ಮಹಾ ದೊಡ್ಡದು." ಎಂದು ಅವಳ ಕೈಯಿಂದ, ಬೇಡ ವೆಂದರೂ ಕೇಳದೆ ತಾವೇ ತೆಗೆದುಕೊಂಡು ಹೊರಟರು. ಹೊರಗೆ ಬಂದು ಗಾಡಿ ಮಾಡಿಕೊಂಡು ಮನೆ ತಲಪುವ ವೇಳೆಗೆ ಹನ್ನೆರಡು ಗಂಟೆಯಾಗಿತ್ತು. ಸರೂವಿಗೆ ಪರೀಕ್ಷೆ ಮುಗಿದಿದ್ದರಿಂದ ಮನೆಯಲ್ಲಿಯೇ ಇದ್ದಳು. ಗಾಡಿಯ ಶಬ್ದ ಕೇಳಿದೊಡನೆ "ಅತ್ತೇ, ಚಿಕ್ಕಮ್ಮಾ ಬಂದರು ಎಂದು ಕಾಣುತ್ತೆ." ಎಂದವಳೇ ಬೀದಿಯ ಬಾಗಿಲಿಗೆ ಧಾವಿಸಿದಳು. ಕಮಲಾ ಗಾಡಿಯಿಂದಿಳಿದು ಒಳಗೆ ಬಂದಳು.

"ಇದೇನು ಚಿಕ್ಕಮ್ಮಾ, ಹೀಗಾಗಿಬಿಟ್ಟಿದ್ದೀಯೇ, ಗುರುತೇ ಸಿಗದ ಹಾಗೆ!" ಎಂದಳು ಸರೂ ಆಶ್ಚರ್ಯದಿಂದ.

"ಚೆನ್ನಾಗಿರುವೆಯಾ ಮಗೂ? ನೀನು ಒಂದು ವಿಧದಲ್ಲಿ ಬದಲಾಯಿ ಸಿದ್ದರೆ, ನಾನು ಒಂದು ವಿಧ. ಅಂತೂ ಇಬ್ಬರಲ್ಲೂ ಬದಲಾವಣೆಯಾಗಿರುವುದು ನಿಜ ಅಲ್ಲವೆ?" ಎಂದು ನಕ್ಕಳು ಕಮಲಾ.

ಕಮಲಳ ಆಗಿನ ಸ್ಥಿತಿಯನ್ನು ನೋಡಿಕೊಂಡು, ರಂಗಮ್ಮನವರಿಗೆ ಕಣ್ಣಲ್ಲಿ ನೀರೇ ಬಂದಿತು. "ಆಗಲೇ ಮುದುಕಿಯಾಗಿಬಿಟ್ಟೆಯೇನೇ ಕಮಲಾ!" ಅಂದರು ಕಣ್ಣೊರಿಸಿಕೊಳ್ಳುತ್ತಾ.

"ಇನ್ನೇನು ವಯಸ್ಸಾಗಲಿಲ್ಲವೇ ಅತ್ತಿಗೆ?" ಎಂದು ನಕ್ಕಳು ಕಮಲಾ. ಅವಳ ಆ ನಗೆ ಪ್ರೇತ ನಗೆಯಂತಿತ್ತು. ಚಿಕ್ಕಮ್ಮ ಹೀಗೇಕೆ ಅವಳು ಎಂಬುದೇ ಸರೂವಿಗೆ ತಿಳಿಯಲಿಲ್ಲ.

ಆ ದಿನ ಭಾನುವಾರವಾಗಿದ್ದರಿಂದ ಗೋವಿಂದರಾಯರು ಮನೆಯಲ್ಲಿಯೇ ಇದ್ದರು. ಪರಸ್ಪರ ಮಾತುಕತೆಯಾದ ಮೇಲೆ ಎಲ್ಲರಿಗೂ ಊಟ ಬಡಿಸಿ, ನಂತರ ತಾವೂ ಊಟಮಾಡಿದರು ರಂಗಮ್ಮ. ಕಮಲಾ ಹೊಟ್ಟೆಯ ತುಂಬ ತೃಪ್ತಿಯಾಗುವಂತೆ ಊಟಮಾಡಿದುದೆಂದರೆ ಅಂದೇ.

ರಂಗಮ್ಮ, ಅಲ್ಲಿನ ವಿಷಯವನ್ನೆಲ್ಲಾ ಏನೂ ಎಂತೂ ಅಂತ ಕೇಳಿ ತಿಳಿದುಕೊಂಡರು. ಗೋಪಾಲ ಆ ಸ್ಥಿತಿಗೆ ಬರುವಂತೆ ಆಗಿದ್ದರಿಂದ ಅವರಿಗೆ ಬಹಳ ದುಃಖವಾಯಿತು. ಅವರ ಮಾತು ಕೇಳುತ್ತಾ ಸರೂ ಅಲ್ಲಿಯೇ ಚಿಕ್ಕಮ್ಮನ ಪಕ್ಕದಲ್ಲಿ ಕೂತಳು. ಗೋವಿಂದರಾಯರು ಹಾಗೆಯೇ ಅಡ್ಡಾಗಿದ್ದರು.

ಕಮಲಾ ಹೇಳತೊಡಗಿದಳು: "ನನಗೆ ಪ್ರಪಂಚದಲ್ಲಿ ಇರುವ ಆಸೆ ಎಂದರೆ ಅವರೊಬ್ಬರದು. ಅವರು ಸರಿಯಾಗಿದ್ದುಬಿಟ್ಟಿದ್ದರೆ, ನನಗೆ ಏನೂ ಯೋಚನೆ ಇರಲಿಲ್ಲ. ಏನೋ ಹುಡುಗುತನದಲ್ಲಿ ಹಾಗಾಡಿದರೆ ಕಡೇಗಾದರೂ ಸರಿಯಾಗುತ್ತೆ ಎಂದು ಒಂದೇ ಒಂದು ಆಸೆ ಇಟ್ಟುಕೊಂಡಿದ್ದೆ ಅತ್ತಿಗೆ; ಆದರೆ ಈಗ ಆ ಒಂದು ಆಸೆಯೂ ಕಮರಿಹೋಯಿತು. ಮುಂಚೆ ಮುಂಚೆ ಪ್ರತಿದಿನವೂ ಎಷ್ಟು ಹೊತ್ತಾಗಲೀ ಮನೆಗೆ ಬರುತ್ತಿದ್ದರು; ಈಚೆಗೆ, ಮನೆಗೆ ಬಂದರೆ ಬಂದರು, ಇಲ್ಲದಿದ್ದರೆ ಇಲ್ಲಾ. ಏನೋ ಒಂದು ಮಗುವಾದರೂ ಆಗಿದ್ದರೆ, ಅದರ ಮೇಲಿನ ವ್ಯಾಮೋಹಕ್ಕಾಗಿಯಾದರೂ ಬರುತ್ತಿದ್ದರೋ ಏನೋ! ನನ್ನಂಥಾ ಹತಭಾಗಿನಿಗೆ ಅದೂ ಹಣೆಯಲ್ಲಿ ಬರೆಯಿಲಿಲ್ಲ." ಎಂದು ಹೇಳ ಹೇಳುತ್ತಿರುವಾಗಲೇ ಅವಳ ಕಣ್ಣೀರು ಕೋಡಿಯಾಗಿ ಹರಿಯಿತು. "ನಾನೂ ಹೇಳುವಷ್ಟು ಹೇಳಿದೆ, ಅತ್ತೆ, ಕರೆದೆ, ಕೂಗಾಡಿದೆ, ಕೋಪಮಾಡಿಕೊಂಡೆ, ಉಪವಾಸವಿದ್ದು ಸಾಯುವೆ ಎಂದೆಲ್ಲಾ ಹೇಳಿದೆ. ಆದರೆ ಅವರು ಅದಾವುದಕ್ಕೂ ಜಗ್ಗದೆ ನಿರ್ಲಿಪ್ತರಾದ ಯೋಗಿಯಂತಿದ್ದುಬಿಟ್ಟರು. ನಾನೂ ಹೇಳಿದೆ 'ಬೇರೆ ಮದುವೆಯನ್ನಾದರೂ ಮಾಡಿಕೊಳ್ಳಿ. ಆ ಬರುವವಳ ದೆಸೆಯಿಂದಲಾದರೂ ಮಕ್ಕಳಾಗಲೀ' ಎಂದು. 'ನೀನೊಬ್ಬಳು ಸಾಲದುದಕ್ಕೆ ಇನ್ನೊಬ್ಬಳೂ ಬರಬೇಕೇ?' ಎಂದು ನನ್ನ ಮಾತನ್ನೇ ತಳ್ಳಿಹಾಕಿದರು. ನಾನು ಅವರಿಂದ ಏನೂ ಬಯಸುವದಿಲ್ಲ ಅತ್ತಿಗೆ. ಆ ಕಾಲವೆಲ್ಲಾ ಕನಸಾಯಿತು. ನಾನು ಹೇಳುವುದು ಇಷ್ಟೇ. 'ಹೊತ್ತಿಗೊತ್ತಿಗೆ ಮನೆಗೆ ಬನ್ನಿ, ಊಟಮಾಡಿ, ಆ ಹಾಳು ಹೋಟಲಿಗೆ ಹೋಗಬೇಡಿ, ನಿಮಗೆ ನಿಮ್ಮ ಹವ್ಯಾಸ ಬಿಡುವುದು ಕಷ್ಟ, ಅದಾಗುವದಿಲ್ಲ, ಅದು ನನಗೂ ಗೊತ್ತಿದೆ. ಆದರೆ ನಿಮಗೆ ಬರುವ ಹಣ

ದಲ್ಲಿ ಕಾಲುಭಾಗವಾದರೂ ಮನೆಯ ಖರ್ಚಿಗೆ ತೆಗೆದಿಟ್ಟು, ಇನ್ನು ಬಾಕಿ ತೆಗೆದುಕೊಳ್ಳಿ. ಹೆಚ್ಚಾಗಿ ನಿದ್ದೆ ಕೆಡಬೇಡಿ. ಇದಿಷ್ಟು ಮಾಡಿ ಪುಣ್ಯಕಟ್ಟಿಕೊಳ್ಳಿ' ಎಂದು ನಾನು ಇನ್ನಿಲ್ಲಾ ಅನ್ನುವ ಹಾಗೆ ಕೇಳಿದೆ. ಅದೆಲ್ಲಾ ಬೋರ್ಗಲ್ಲ ಮೇಲೆ ಮಳೆ ಸುರಿದಂತೆ ಅಷ್ಟೆ." ಎಂದು ದುಃಖ ಹೆಚ್ಚಾಗಿ ಮಾತು ನಿಲ್ಲಿಸಿದಳು.

ಇದ್ದಕ್ಕಿದ್ದಂತೆ ರಂಗಮ್ಮನವರ ಗಮನ ಕಮಲಳ ಮೈಮೇಲೆ ಹೋಯಿತು. ಗಾಬರಿಯಾಗಿ ಕೇಳಿದರು " ಒಡವೆ ಎಲ್ಲಾ ಏನಾಯ್ತು ಕಮಲಾ ?"

"ಹಿರಿಯರು ದುಡಿದು ಕೊಟ್ಟ ಆಸ್ತಿಯನ್ನೇ ಉಳಿಸಿಕೊಳ್ಳಲು ನಮ್ಮ ಹಣೆಯಲ್ಲಿ ಬರೆದಿಲ್ಲ. ಯಾವುದೂ ಬೇಡಾ ಅಂದರೆ, ಹೊಟ್ಟೆಗೆ ಒಂದಿಷ್ಟು ಅನ್ನಾನಾದರೂ ಬೇಡವೆ? ತಂದ ಸಂಬಳವೆಲ್ಲಾ ಅವರ ಇಸ್ಪೇಟಿಗೆ ಹೋದರೆ, ಜೀವನಕ್ಕೆ ಏನು ಮಾಡುವುದು ? ಆಸ್ತಿ ಎಲ್ಲಾ ಯಾವ ದಾರಿ ಹಿಡಿಯಿತೋ ಅದರ ಹಾಗೇ ಅವೂ ಹೋದುವು. ಇದುವರೆಗೂ ಏನೋ ಪುಣ್ಯಾತ್ಮರು ಕೊಟ್ಟ ಒಡವೆ-ವಸ್ತುಗಳಿದ್ದುವು, ಬದುಕಿದೆ. ಇನ್ನು ಮೇಲೆ ಜೀವನಕ್ಕೆ ಏನು ಮಾಡಲಿ ? ಎಂಬುದೊಂದೇ ನನಗೆ ಚಿಂತೆಯಾಗಿದೆ ಅತ್ತಿಗೆ. ಹೀಗೆ ನನ್ನನ್ನು ನರಳಿಸುವುದಕ್ಕಿಂತಲೂ, ನನಗೆ ಸಾವನ್ನು ಯಾಕೆ ಕೊಡುವುದಿಲ್ಲವೋ ಆ ದೇವರು, ನಾ ಕಾಣೆ!" ಕಮಲಳಿಗೆ ಬದುಕೇ ಒಂದು ಹೊರಲಾರದ ಹೊರೆ ಯಾಗಿತ್ತು.

"ಚಿಕ್ಕಪ್ಪ ಹಾಗಿದ್ದ ಮೇಲೆ, ಮದುವೆಯನ್ನೇ ಮಾಡಿಕೊಳ್ಳಬಾರ ದಾಗಿತ್ತು. ಅಂಥವರಿಗೆ ಮದುವೆ ಏಕೋ ?" ಎಂದು ಸರೂ ಅನುಕಂಪ ದಿಂದ ನುಡಿದಳು. ಚಿಕ್ಕಮ್ಮನ ಕರುಣ ಕಥೆ ಕೇಳಿ ಅವಳ ಮನಸ್ಸು ಕದಡಿ ಹೋಗಿತ್ತು.

"ಓ, ಸರೂ! ನೀನೂ ಇಲ್ಲೇ ಇದ್ದೀಯಾ ? ನಿನ್ನ ಗಮನವೇ ಮರೆತು ಹೋಗಿತ್ತು. ಇದೆಲ್ಲಾ ಮನಸ್ಸಿಗೆ ಹಾಕಿಕೊಳ್ಳಬೇಡ ಮಗೂ. ನೀನು ನಾಳೆ ಮದುವೆಯಾಗಿ, ಗಂಡನ ಮನೆಗೆ ಹೋಗುವ ಹುಡುಗಿ. ಮನಸ್ಸಿನಲ್ಲಿ ಒಳ್ಳೆಯ ಭಾವನೆ ತುಂಬಿರಬೇಕು. ಅದು ಬಿಟ್ಟು ಈ ನನ್ನ ವಿಷಯವೆಲ್ಲಾ ಕೇಳಿ ಬೇಜಾರು ಮಾಡಿಕೋಬೇಡಾ ತಿಳಿಯಿತೇ ? ಮನುಷ್ಯನಿಗೆ ಸುಖವೂ ಬರುತ್ತೆ, ದುಃಖವೂ ಬರುತ್ತೆ. ಅದನ್ನು ಒಂದೇ ಸಮನೆ ಕಂಡುಕೊಂಡು, ಬಾಳ್ವೆ ಸಾಗಿಸುವುದೇ ಮನುಷ್ಯನ ಧೈರ್ಯ. ಮುಖ್ಯ ನಿನ್ನೆದುರು ನಾನು ಇದೆಲ್ಲಾ ಹೇಳಿದ್ದೇ ತಪ್ಪು. ಹೋಗಲಿ, ಈಗ ಆ ಮಾತು ಬೇಡ. ಬೆಳಿಗ್ಗೆ

ಅದೇನೋ ಕಸೂತಿ ಹಾಕುತ್ತಿದ್ದೆಯಲ್ಲಾ, ತೆಗೆದುಕೊಂಡು ಬಾ ನೋಡೋಣ" ಎಂದು ವಿಷಯ ಬದಲಾಯಿಸಿದಳು ಕಮಲಾ. ಸರೂ ಕಣ್ಣೊರೆಸಿಕೊಳ್ಳುತ್ತಾ ಎದ್ದು ಹೋದಳು.

"ನಾನೆಂಥಾ ಹುಚ್ಚಿ ಅತ್ತಿಗೇ, ಮಗುವಿನೆದುರಿಗೇ ಹೇಳಿಬಿಡೋದೆ? ಪಾಪ ಎಷ್ಟು ನೊಂದುಕೊಂಡಳೋ ಏನೋ!" ಎಂದು ಕಳವಳದಿಂದ ನುಡಿದಳು ಕಮಲಾ.

ರಂಗಮ್ಮ ಯಾವ ಮಾತನ್ನೂ ಆಡದೆ ಶಿಲಾಪ್ರತಿಮೆಯಂತೆ ಕೂತಿದ್ದರು. ಅವರ ಹೃದಯ ದುಃಖವನ್ನು ಉಂಡೂ ಉಂಡೂ ಹಸಿವೆಯನ್ನೇ ನೀಗಿತ್ತು.

ಸರೂ, ಚಿಕ್ಕಮ್ಮಾ....ಚಿಕ್ಕಮ್ಮಾ ಎಂದು ಬಲು ಬೇಗ ಹೊಂದಿಕೊಂಡಳು. ರಂಗಮ್ಮ ರಾತ್ರಿ ಮಲಗುವಾಗ ಗೋವಿಂದರಾಯರಿಗೆ, ಎಲ್ಲಾ ವಿಷಯವನ್ನು ಹೇಳಿದರು. "ಕಡೆಗೂ ಗೋಪಾಲ ಈ ಗತಿಗೆ ಬಂದನೇ ?" ಎಂದು ಪರಿತಾಪ ಪಟ್ಟರು. ರಾತ್ರಿ ಬಹಳ ಹೊತ್ತಿನ ತನಕ ಅಕ್ಕ-ತಮ್ಮಂದಿರ ಮಾತು ನಡೆದೇ ಇತ್ತು. ರಂಗಮ್ಮ ಕಣ್ಣು ಮುಚ್ಚಿದಾಗ ಮೂರು ಗಂಟೆಯಾಗಿತ್ತು.

ಕಮಲಾ ಬಂದ ಮೂರು-ನಾಲ್ಕು ದಿನ ಬರೀ ಗೋಪಾಲನ ವಿಷಯವೇ ನಡೆದಿತ್ತು. ಒಂದು ದಿನ ಗೋವಿಂದರಾಯರು ಊಟ.ಮಾಡಿದ ನಂತರ ಸರೂವನ್ನು ಕೂಗಿ ಹೇಳಿದರು: "ಸರೂ, ನಿಮ್ಮ ಚಿಕ್ಕಮ್ಮನ್ನ ಹೊರಗೆ ಹೊರಡೋದಕ್ಕೆ 'ರೇಡಿ'ಯಾಗೂ ಅಂತ ಹೇಳು. ಆಫೀಸಿನಲ್ಲಿ ಅವರ ಕೆಲಸವಾಗಬೇಕಾಗಿದೆ."

ಸರೂ ಚಿಕ್ಕಮ್ಮನಿಗೆ ತಿಳಿಸಿದಳು. 'ನನ್ನಿಂದ ಯಾವ ಕೆಲಸ ? ನಾನು ಯಾಕೆ ಬರಬೇಕು?' ಎಂದು ಕಮಲಾ ಆಕ್ಷೇಪಣೆ ಎತ್ತಿದಳು.

"ಸುಮ್ಮನೇ ಹೋಗಿ ಬಾ ತಾಯೀ, ಅವನು ಕಾದು ನಿಂತಿದ್ದಾನೆ, ಬೇಗ ಏಳು." ಎಂದರು ರಂಗಮ್ಮ. ಕಮಲಾ ವಿಧಿಯಿಲ್ಲದೆಯೇ ತಲೆ ಬಾಚಿ, ಹೊಸ ಸೀರೆಯುಟ್ಟು ಬಂದಳು. ಹೋಗುವುದು ಎಲ್ಲಿಗೆ? ಏನು? ಯಾತಕ್ಕೆ? ಎಂಬುದೊಂದೂ ತಿಳಿಯಲಿಲ್ಲ. ಗೋವಿಂದರಾಯರು ಗಾಡಿಮಾಡಿಕೊಂಡು ರಿಜಿಸ್ಟ್ರಾರ್ ಅವರ ಆಫೀಸ್ ತಲಪಿದರು. ಕಮಲಾ ಯಾವ ಮಾತೂ ಇಲ್ಲದೆ ಅವರನ್ನು ಹಿಂಬಾಲಿಸಿ ನಡೆದಿದ್ದಳು. ಅಲ್ಲಿ ಅವರಿವರ ಕೈಲಿ ಮಾತಾಡಿ, ಕಾಗದ-ಪತ್ರ ಎಲ್ಲಾ ತರಿಸಿದರು. ಒಂದು ರಿಜಿಸ್ಟರ್ ಆದ ಪತ್ರವನ್ನು ತಂದು ಕಮಲಳ ಕೈಗಿತ್ತು, 'ಇಲ್ಲಿ ನಿನ್ನ ಹೆಸರು ಬರೀ ತಾಯೀ.' ಅಂದರು ಗೋವಿಂದರಾಯರು.

ಕಮಲಾ, ಅಲ್ಲಿಯೇ ಇದ್ದ ಲೇಖನಿಯಿಂದ ತನ್ನ ಹೆಸರನ್ನು ಮುದ್ದಾಗಿ ಬರೆದಳು. ಹಾಗೆಯೇ ಇನ್ನೂ ಕೆಲವು ಕಾಗದಗಳಿಗೆ ಸಹಿ ಮಾಡಿದಳು. ಅಲ್ಲಿಗೆ ಅವಳ ಕೆಲಸ ಮುಗಿಯಿತು. ಕ್ರಯಪತ್ರ, ಹಣ ಸಂದ ರಸೀದಿಯ ಪತ್ರ, ರಿಜಿಸ್ಟರ್ ಆದ ಪತ್ರ ಎಲ್ಲವನ್ನೂ ತೆಗೆದು ಕಮಲಳ ಕೈಗಿತ್ತು "ಇದು ನಿನ್ನ ಬಳಿಯಲ್ಲಿಯೇ ಜೋಪಾನವಾಗಿರಲಿ. ಏನು ಮಾಡಿದರೂ ಗೋಪಾಲನಿಗೆ ತಿಳಿಸಬೇಡ. ತಿಳಿದರೆ ಅದನ್ನೂ ಉಳಿಯಗೊಡಿಸುವುದಿಲ್ಲ." ಎಂದರು. ತನ್ನ ಜೀವನೋಪಾಯಕ್ಕಾಗಿ ಏನನ್ನೋ ಮಾಡಿದ್ದಾರೆಂಬುದಂತೂ ಖಚಿತವಾದಂತಾಯ್ತು. ಏನು ಎಂದು ಕೇಳೋಣಾ ಎಂದರೆ ಭಾವನವರ ಕೈಲಿ ಒಂದು ದಿನವೂ ಮುಖಕೊಟ್ಟು ಮಾತನಾಡಿದವಳಲ್ಲ. ಹೀಗೆ ತನ್ನ ಕುತೂಹಲವನ್ನು ಮನೆ ತಲಪುವವರೆಗೂ ಅದುಮಿ ಹಿಡಿಯಬೇಕಾಯ್ತು.

ಗಾಡಿಯಿಂದ ಇಳಿದವಳೇ ಕಮಲಾ ನೇರವಾಗಿ ಅಡುಗೆಮನೆಗೆ ಓಡಿದಳು. ರಂಗಮ್ಮ ಮೈದಾ ಹಿಟ್ಟು ಕಲೆಸಿಕೊಂಡು ಅದರಲ್ಲಿ ಶ್ಯಾವಿಗೆ ಚೆನ್ನಾಗಿ ಬರುತ್ತವೆಯೇ ಇಲ್ಲವೇ ನೋಡೋಣ ಎಂದುಕೊಂಡು ಶ್ಯಾವಿಗೆ ಎಳೆ ಮಾಡುತ್ತಾ ಕೂತಿದ್ದರು. ಅಡುಗೆ ಮನೆಗೆ ಓಡಿ ಬಂದ ಕಮಲಾ, ರಂಗಮ್ಮ ಮಡಿಯಲ್ಲಿದ್ದಾರೆಂಬುದನ್ನೂ ಮರೆತಳು. ಬಂದವಳೇ ಕಾಲು ಬಳಿ ಕೂತು, ಕೈಲಿದ್ದ ಪತ್ರಗಳನ್ನೆಲ್ಲಾ ಅವರ ಪಾದಗಳ ಬಳಿಯಲ್ಲಿಟ್ಟು, "ಅತ್ತಿಗೇ....ಅತ್ತಿಗೇ, ನೀವೇನು ಮಾಡತೊಡಗಿದ್ದೀರಿ? ಇದೇನು ಈ ಕಾಗದಪತ್ರ? ನನಗೆ ಒಂದೂ ತಿಳಿಯುತ್ತಾ ಇಲ್ಲಾ, ಹೇಳಿ ಅತ್ತಿಗೇ ನಿಮ್ಮ ದಮ್ಮಯ್ಯ!" ಎಂದು ಉದ್ವಿಗ್ನಳಾಗಿ ಕೇಳಿದಳು.

"ಇಷ್ಟೇಕೆ ಗಾಬರಿಯಾಗುವೆ ಕಮಲಾ? ನಿನಗಾಗಿ ನಾವು ಏನನ್ನೂ ಮಾಡಿಲ್ಲ. ಗೋಪಾಲ, ನನಗೆ ತಮ್ಮನಲ್ಲವೆ? ಅವನು ಒಡಹುಟ್ಟಿದವನಲ್ಲವೆ? ಏನೋ ಅವನ ಪ್ರಾರಬ್ಧಕರ್ಮ, ಅವನು ಈ ಗತಿಗೆ ಬಂದ. ಅವನಿಂದಾಗಿ, ಮನೆಗೆ ಲಕ್ಷ್ಮಿಯಂತಿರುವ ಸೊಸೆ ನೀನು ಬಳಲಬಾರದಷ್ಟೇ? ನಿನ್ನ ಆಯುಸ್ಸು ಆರುವ ತನಕ ಬದುಕಲೇ ಬೇಕಾದರೆ ಹೊಟ್ಟೆಗೆ ಏನಾದರೂ ಗತಿ ಕಾಣಿಸಬೇಡವೆ? ನನಗಾಗಿ, ನನ್ನ ಕಷ್ಟಸುಖಕ್ಕೆ ಇರಲೆಂದು ನಮ್ಮ ತಂದೆ ನನಗೆ ಐದು ಸಾವಿರ ರೂಪಾಯಿ ನಗದು ಕೊಟ್ಟಿದ್ದರು. ಅದು ಆಗಲಿಂದ ನನ್ನ ವಶದಲ್ಲಿಯೇ ಇತ್ತು. ತೀರಾ ಕಷ್ಟಸಮಯ ಬಂದರೆ ಉಪಯೋಗಿಸುವಾ ಎಂದು ಇಟ್ಟಿದ್ದೆ. ಆ ಗುಂಡುರಾಮಯ್ಯ ವರದಕ್ಷಿಣೆ ಕೇಳಿದಾಗ ಅದನ್ನು ತೆಗೆದು

ಕೊಂಡು ಮದುವೆ ಮಾಡು ಅಂದೆ. ಅದಕ್ಕೆ ಅವನು ಒಪ್ಪಲಿಲ್ಲ. ಇನ್ನು ಆ ಹಣ ಇಟ್ಟುಕೊಂಡು ನಾನೇನು ಮಾಡಬೇಕು. ಹೇಗಿದ್ದರೂ ನನಗೂ ವಯ ಸ್ಸಾಗುತ್ತಾ ಬಂತು. ಹಿಂದೆ ಇದ್ದಷ್ಟು ದಿನ ಇನ್ನು ಮುಂದೆ ಇರಲಾರೆ. ಆ ಸೀತೂ, ನನಗೆ ಈ ಮಗುವನ್ನು ಕಟ್ಟಿ ಹೋದಳು. ಇನ್ನೇನು ಅವಳೂ ಮದುವೆ ಯಾಗಿ ಅತ್ತೆಯ ಮನೆಗೆ ಹೋದಳೆ, ನನ್ನ ಸೀತೂನ ಕೆಲಸ ಪೂರ್ತಿಯಾದಂತೆ ಆಗುತ್ತೆ. ಬದುಕಿದ್ದರೆ ಕಾಶೀಯಾತ್ರೆ ಮಾಡಬೇಕೆಂಬ ಆಸೆ ಒಂದಿದೆ. ನೋಡೋಣಾ. ಇದೇನೂ ಇತರರ, ಅನ್ಯಾಯದ, ಪಾಪದ ಹಣವಲ್ಲಾ. ನನ್ನ ತಂದೆ ಬೆವರು ಸುರಿಸಿ ದುಡಿದು ಗಳಿಸಿದ ಹಣ, ತಿಳಿಯಿತೇ ಕಮಲಾ? ನನ್ನ ತಮ್ಮನಿಂದಾಗಿ, ಹೆಣ್ಣುಮಗಳು ನೀನು ಕಣ್ಣೀರು ಹಾಕಬಾರದು. 'ಹೆಣ್ಣು ಮಕ್ಕಳು ಅಸ ಎಂದು ದುಃಖದಿಂದ ಸುರಿಸಿದ ಕಣ್ಣೀರು ಆ ಮನೆಗೆ ದೊಡ್ಡ ಶಾಪವಾಗುತ್ತೆ' ಎಂದು ನಮ್ಮ ತಾಯಿ ಹೇಳುತ್ತಿದ್ದರು. ನಮ್ಮ ಮನೆಯವಳೇ ಆದ ನೀನು ದುಃಖಿಸಬಾರದು. ಹಿಂದೆ ನಡೆದುದೆಲ್ಲಾ ಮರೆತುಬಿಡು. ಆ ನನ್ನ ಹಣದಲ್ಲಿ ನಾಲ್ಕು ಸಾವಿರಕ್ಕೆ ಎರಡು ಎಕರೆ ಗದ್ದೆ, ತಲಕಾಡು ಕಡೆ ಯಲ್ಲಿ ಖರೀದಿ ಮಾಡಿಸಿದೆ. ಅದು ಇನ್ನು ಮೇಲೆ ನಿನ್ನದು. ಅದರಿಂದ ಬರು ವುದು ನಿಮ್ಮಿಬ್ಬರಿಗೆ ಸಾಕು. ಅಲ್ಲಿ ಫಸಲು ಚೆನ್ನಾಗಿ ಬರುವುದೆಂದೂ ಕೇಳಿದ್ದೇನೆ. ನಿಮಗೆ ಆಗಿಯೂ ಮಿಗುವಷ್ಟು ಬಂದರೆ ಅದನ್ನು ಮಾರಿಕೊಂಡು ಮೇಲಿನ ಖರ್ಚಿಗೆ ಬಳಸಿಕೋ. ಹೇಗೋ ವರ್ಷಕ್ಕೆ ಅಷ್ಟು ಭತ್ತವಾದರೂ ಬಂದರೆ, ಇನ್ನೇನಿಲ್ಲದಿದ್ದರೂ ಬರಿಯ ಅನ್ನವಾದರೂ ಎರಡು ಹೊತ್ತು ದೊರೆಯುತ್ತದೆ. ಈ ಪತ್ರಗಳನ್ನು ಜೋಪಾನ ಮಾಡಿ ತೆಗೆದಿರಿಸು. ರೈತರಿಗೇ ಹೇಳಿ ನಿನ್ನ ಮನೆಗೆ ಭತ್ತವನ್ನು ಅವರೇ ತಂದು ಕೊಡುವಂತೆಯೂ ಏರ್ಪಾಡು ಮಾಡಿಸು ತ್ತೇನೆ. ಗೋಪಾಲ ಕೇಳಿದರೆ ನಾನು ಕಳಿಸುತ್ತೇನೆಂದು ಹೇಳು. ಇಲ್ಲಿಗೆ ಬಂದಾಗ ನಾನೂ ಹೇಳುತ್ತೇನೆ. ಇನ್ನು ಒಂದು ಸಾವಿರ ರೂಪಾಯಿ ಬಾಕಿ ಇದೆ ಎಂದು ಕಾಣುತ್ತೆ. ಅದರಲ್ಲಿ ಸರೂವಿಗೆ ಒಂದು ಜತೆ ವಜ್ರದ ಓಲೆ ತರ ಬೇಕೆಂದಿದ್ದೇನೆ. ಸರೂ, ನೀನು, ನೆಮ್ಮದಿಯಿಂದಿದ್ದರೆ ಸಾಕು. ಅದೇ ನನಗೆ ಎಲ್ಲಾ ಕಾಶೀ, ರಾಮೇಶ್ವರ." ಎಂದು ಹೇಳುತ್ತಾ ಹೇಳುತ್ತಾ ರಂಗಮ್ಮನವರ ಕಂಠ ಬಿಗಿದುಬಂತು. ಕಮಲಾ ಮಂತ್ರಮುಗ್ಧಳಾದವಳಂತೆ ಸುಮ್ಮನೇ ಕೇಳುತ್ತಾ ಕೇಳುತ್ತಾ ಕೂತೇ ಇದ್ದಳು. ರಂಗಮ್ಮನವರ ಉದಾರತೆಯನ್ನು ನೋಡಿ ಕಮಲಾ ಮಾತು ಬಾರದ ಮೂಕಿಯಂತಾದಳು. ಬಾಯಿಂದ ಮಾತೇ

ಗಿತ್ತು. ಅವರ ಮನೆಗೆ ಸಮೀಪವಾಗಿಯೇ ಇದ್ದ ಹಾಸ್ಟೆಲ್ ಒಂದನ್ನು ಗೋವಿಂದರಾಯರಿಗಾಗಿ ತೆರವು ಮಾಡಿಸಿಟ್ಟಿದ್ದರು. ಗೋವಿಂದರಾಯರ ಮನೆ ನೆಂಟರಿಂದ ತುಂಬಿಹೋಗಿತ್ತು. ಅವರ ಮನೆ ಸಾಕಷ್ಟು ವಿಸ್ತಾರವಾಗಿಲ್ಲದ್ದ ರಿಂದ, ಗೋವಿಂದರಾಯರು ನಾಲ್ಕು ದಿನ ಮುಂಚಿತವಾಗಿಯೇ ಅವರ ಬಿಡಟ ಮನೆಯನ್ನು ಸೇರಿದರು. ಎತ್ತಿನ ಗಾಡಿಯ ಮೂಲಕ ಸಾಮಾನುಗಳೆಲ್ಲ ವನ್ನೂ ಸಾಗಿಸಿದರು. ರೈತ ಮಾದ, ಐನೂರು ತೆಂಗಿನಕಾಯಿ, ಇನ್ನೂರು ಗಿಟಕು ಕೊಬ್ಬರಿ, ಬಾಳೆಎಲೆ ಬಾಳೇಹಣ್ಣು ಎಲ್ಲವನ್ನೂ ತೆಗೆದುಕೊಂಡು ದೇವರ ಸಮಾರಾಧನೆಯ ದಿನ ಬಂದ. ಎಲ್ಲಾ ತಯಾರಿಕೆಯೂ ಮುಗಿದು, ಮದುವೆಯ ದಿನವನ್ನೇ ಎದುರು ನೋಡುತ್ತಿದ್ದರು.

ಜಾನಕೀಬಾಯಿ ತಮ್ಮ ಯೋಗ್ಯತೆಗೆ ತಕ್ಕಂತೆ, ತಯಾರಿಯನ್ನು ಡೌಲಿ ನಿಂದಲೇ ಮಾಡಿದ್ದರು. ಮನೆಯ ಮುಂದೆ ದೊಡ್ಡ ಪೆಂಡಾಲು ಹಾಕಿದ್ದರು. ಬೀದಿಯ ವರೆಗೂ ತಳಿರು, ತೋರಣ, ದೀಪಮಾಲೆ ಕಾಣುತ್ತಿದ್ದವು. ಮೇಳ ದವರನ್ನು ಎರಡು ಕಡೆಯವರಿಗಾಗಿಯೂ, ಶ್ರೀಕಂಠಯ್ಯನವರೇ ಗೊತ್ತು ಮಾಡಿದ್ದರು. ಸೊಸೆಗೆ ಮೂರು-ನಾಲ್ಕು ಭಾರೀ ಜರಿಯ ಸೀರೆ, ಕತ್ತಿಗೆ ಎರ ಡೆಳೆ ಸರ, ಕೈಗೆ ಎರಡು ಜೊತೆ ಬಳೆ, ಮಾಂಗಲ್ಯ, ಅದನ್ನು ಕಟ್ಟುವುದಕ್ಕೆ ಸಹಾ ಚಿನ್ನದ ಒಂದೆಳೆ ಸರ ಮಾಡಿಸಿದರು.

ನಾಗಪ್ಪ, ಮನೆಯವರ ಸಹಿತ, ಗೋವಿಂದರಾಯರ ಮನೆಯಲ್ಲಿಯೇ ಬಿಡಾರ ಮಾಡಿದರು. ಮದುವೆ, ಯಾವ ವಿರಸವೂ ಇಲ್ಲದೆ ಸುಗಮವಾಗಿ ನಡೆಯಿತು. ಮಗಳನ್ನು ಧಾರೆಯೆರೆದು ಕೊಡುವಾಗ, ಗೊವಿಂದರಾಯರು ಸೀತೂವನ್ನು ನೆನೆಸಿ ದುಃಖಪಟ್ಟರು. ಕೂಸೊಪ್ಪಿಸಿ ಕೊಡುವಾಗ, ಇಷ್ಟು ದಿನವೂ ತಮ್ಮವಳೇ ಆಗಿದ್ದ ಸರೂ, ಈಗ ಬೇರೊಬ್ಬನ ಮಡದಿಯಾಗಿ, ತಮ್ಮೆಲ್ಲ ರನ್ನೂ ಬಿಟ್ಟು ತೆರಳುತ್ತಾಳೆಂಬುದನ್ನು ಯೋಚಿಸಿ, ಗೋವಿಂದರಾಯರ ಹೃದಯ ಭಾರವಾಯಿತು; ಕಣ್ಣುಗಳಿಂದ ಕಂಬನಿ ಉದುರಿದವು.

ಸರೂ ಬೆಳೆದ ಹುಡುಗಿ. ಅವಳಿಗೆ ಮದುವೆ ಎಂದರೇನು ಎಂಬುದೂ ತಿಳಿದಿದೆ. ಮುಂದೆ ತನ್ನ ಬಾಳು ಸುಖದ ಸ್ವರ್ಗವೇ ಆಗಬಹುದು, ಇಲ್ಲವೇ ತನ್ನ ಚಿಕ್ಕಮ್ಮನಂತೆ ದುರಂತ ಬಾಳ್ವೆಯೇ ಆಗಬಹುದು. ಯಾವುದೇ ಆಗಲೀ ತಮ್ಮ ತಮ್ಮ ಹಣೆಯಬರಹಕ್ಕೆ ತಂದೆತಾಯಿಯವರನ್ನು ಎಂದೆಂದಿಗೂ ದೂರಬಾರದು, 'ಇಂಥಾ ಮನೆಗೆ ನನ್ನನ್ನು ಕೊಟ್ಟರು' ಎಂದು. ಇದು ಸರೂವಿನ

ಮನೋನಿಶ್ಚಯ. ಮದುವೆ ಎನ್ನುವುದು ನಮ್ಮ ಕೈಲಿ ಏನೂ ಇಲ್ಲಾ. ಎಲ್ಲಾ ಆ ದೇವರ ಇಚ್ಛೆಯಂತೆಯೇ ನಡೆಯುತ್ತದೆ. ಅದನ್ನು ಮಾಡುವುದೂ ನಮ್ಮ ಕೈಲಿಲ್ಲಾ, ತಪ್ಪಿಸುವುದೂ ನಮಗೆ ಸಾಧ್ಯವಿಲ್ಲಾ. ಪ್ರತಿಯೊಂದು ಆಗು-ಹೋಗುಗಳೂ ವಿಧಿಯ ನಿಯಮದಂತೆ ನಡೆಯುತ್ತದೆ, ಎಂಬುದು ಸರೂವಿನ ತರ್ಕ.

ತಾನು ಈಗ ಹಿಂದಿನಂತೆ ಹುಡುಗಿಯಲ್ಲಾ. ಒಬ್ಬನ ಮಡದಿ. ತನ್ನ ಇಡಿಯ ಜೀವನವನ್ನು ಅವನೊಡನೆ ಕಷ್ಟವಾಗಲೀ, ಸುಖವಾಗಲೀ ತಾನು ಬಾಳಲೇಬೇಕು. ತನ್ನ ತಾಯಿ ಹೇಳಿದ ಮಾತುಗಳು ನೆನಪಿಗೆ ಬಂದುವು: "ನಿನ್ನ ಪೂರ್ತಿ ಜೀವನವೆಲ್ಲಾ ಆ ಒಂದು ವಸ್ತುವಿನಲ್ಲಿಯೇ ಇದೆ. ಅವನೇ ನಿನ್ನ ಪಾಲಿನ ದೇವರು. ನಿನ್ನ ಭಾಗದ ಪ್ರಪಂಚ, ನಿನ್ನ ಭಾಗ್ಯದೇವತೆ. ಅವನಿಗಾಗಿ ನೀನು ನಿನ್ನ ಜೀವವನ್ನಾದರೂ ತೆತ್ತು, ಅವನು ಸುಖವಾಗಿರುವಂತೆ ಮಾಡು." ತಾಯಿಯ ಆ ದೈನ್ಯದ ಮೂರ್ತಿ ಕಣ್ಮುಂದೆ ಬಂದಂತಾಯಿತು. ಕರುಣಾಪೂರಿತವಾದ ದೃಷ್ಟಿಯಿಂದ ತನ್ನನ್ನು ನೋಡಿ, ಹರಸಿದಂತೆ ಭಾಸವಾಯಿತು. ತನ್ನ ಇರುವಿಕೆಯನ್ನೇ ಮರೆತು, ಸರೂ 'ಅಮ್ಮಾ, ಅಮ್ಮಾ!' ಎಂದು ಕಾತರಿಸಿದಳು. ಮಗಳ ಕಾತರದ ಧ್ವನಿ ಕೇಳಿ ಗೋವಿಂದರಾಯರೂ ತಮ್ಮ ಸೀತೂಗಾಗಿ ದುಃಖಿಸಿದರು. ರಂಗಮ್ಮನವರ ಕಣ್ಣುಗಳಲ್ಲಿ ಅತ್ತೂ ಅತ್ತೂ ನೀರು ಬತ್ತಿಹೋಗಿತ್ತು. ದುಃಖ ಅದನ್ನು ಹೀರಿಕೊಂಡಿತ್ತು.

ಬೀಗರು ಬಡವರು, ನಡತೆ ಸರಿಯಾಗಿ ಮಾಡುವುದಿಲ್ಲಾ ಎಂದು ಬೇಸರಿಸಿದ್ದ ಜಾನಕೀಬಾಯಿಯವರು, ಬೀಗರ ನಡತೆ ನುಡತೆ, ಉಪಚಾರ, ಎಲ್ಲಾ ನೋಡಿ ಸಾಕಷ್ಟು ಸುಪ್ರೀತರಾದರು. ಗೋವಿಂದರಾಯರು ತಮ್ಮ ಯೋಗ್ಯತೆಯನ್ನು ಮೀರಿ, ದೊಡ್ಡ ಮನುಷ್ಯರಾದ ಬೀಗಂದಿರಿಗೆ ತಕ್ಕ ಹಾಗೆ ಸೀರೆ, ಪಂಚೆಗಳನ್ನೂ ತಂದಿದ್ದರು.

ಧಾರೆಯ ದಿನ ಸಾಯಂಕಾಲ, ರಿಸೆಪ್ಷನ್‌ಗೆ ತಮ್ಮ ಸ್ವಜನವೇ ಆದ ವೀಣೆ ಕೇಶವಮೂರ್ತಿಯರ ಸಂಗೀತಕ್ಕೆ ಶ್ರೀಕಂಠಯ್ಯನವರೇ ಗೊತ್ತು ಮಾಡಿದ್ದರು. ಜಾನಕೀಬಾಯಿಯವರ ಕ್ಲಬ್‌ನ ಪರಿವಾರವೇ ಅಲ್ಲಿ ಹಾಜರಿತ್ತು. ಅನೇಕ ಜನ ಗಂಡಸರೂ ಬಂದಿದ್ದರು. ಮಾಧವನ ಸ್ನೇಹಿತರನೇಕರು ಬಂದು ಕೈಕುಲುಕಿ 'ಕನ್‌ಗ್ರಾಚುಲೇಶನ್' ಹೇಳಿ ಹೋದರು. ಸಂಗೀತ ಮುಗಿದ ನಂತರ ಐದು ನೂರು ರೂಪಾಯಿಗಳ ನೋಟನ್ನಿಟ್ಟು ತಾಂಬೂಲ

ಕೊಡಹೋದರು ಶ್ರೀಕಂಠಯ್ಯ. "ಮನೆಯವರಿಗೇ ಸಂಭಾವನೆಯನ್ನೂ ಕೊಡ ಬೇಕೆ? ನಾನೇನು ಹೊರಗಿನವನೇ? ಅದು ಬೇಡ" ಎಂದರು ಕೇಶವಮೂರ್ತಿ. ಆದರೆ ಶ್ರೀಕಂಠಯ್ಯನವರ ಮಾತಿನ ಮುಂದೆ ಇವರ ಮಾತು ಏನೂ ನಡೆ ಯಲೇ ಇಲ್ಲ. ವಿಧಿ ಇಲ್ಲದೆ ಒಪ್ಪಿಕೊಳ್ಳಬೇಕಾಯಿತು.

ರಂಗಮ್ಮ ತಮ್ಮ ಇಷ್ಟದಂತೆ ಸರೂವಿಗೆ ವಜ್ರದ ಓಲೆಯನ್ನೇ ಓದಿಸಿ ದರು. ಕಮಲಾ ಯಾರು ಎಷ್ಟು ಹೇಳಿದರೂ ಕೇಳದೆ ತನ್ನ ಕತ್ತಿನಲ್ಲಿದ್ದ ಎರ ಡೆಳೆ ಸರವನ್ನೇ ಓದಿಸಿದಳು. ಸರುವಿಗೂ ಸುಮಾರಾಗಿಯೇ ಉಡುಗೊರೆ ಬಂದಿತ್ತು.

ಎಂಟು ದಿನಗಳ ಮದುವೆಯನ್ನೇ ಮಾಡಬೇಕೆಂಬ ಆಸೆ ಗೋವಿಂದ ರಾಯರಿಗೆ ಇದ್ದರೂ, ವಿಧಿ ಇಲ್ಲದೆಯೇ ನಾಲ್ಕೇ ದಿನಗಳ ಮದುವೆ ಮಾಡ ಬೇಕಾಯಿತು. ಧಾರೆಯ ಮರುದಿನ ನಾಗೋಲೀ, ಮನೆ ತುಂಬಿಸಿಕೊಳ್ಳುವ ಶಾಸ್ತ್ರ ಎಲ್ಲಾ ನಡೆಯಿತು. ಮನೆಯನ್ನು ತುಂಬಿಸಿಕೊಳ್ಳುವುದಕ್ಕೆ ಸೊಸೆ ಯನ್ನು ಕರೆತಂದಾಗ, ಜಾನಕೀಬಾಯಿ ಸೊಸೆಗೆ ಹಣೆಗಿಟ್ಟು ಬೆರಳಿಗೆ ಉಂಗುರ ತೊಡಿಸಿ ಕಳಿಸಿದರು. ಎರಡೂ ಕಡೆಯವರು ಅನುಸರಿಸಿಕೊಂಡು ಹೋಗಿದ್ದರಿಂದ ಮದುವೆ ಹೂ-ಸರ ಎತ್ತಿದಷ್ಟು ಸರಾಗವಾಗಿ ನಡೆಯಿತು.

ಮಿಕ್ಕಿದ್ದ ಸಾಮಾನು ಸರಂಜಾಮುಗಳನ್ನೆಲ್ಲಾ ಮನೆಗೆ ಸಾಗಿಸಿದ್ದಾಯ್ತು. ಬಂದ ನೆಂಟರಿಗೆಲ್ಲಾ ಉಡುಗೊರೆ ಕೊಟ್ಟು ಕಳಿಸಿದ್ದಾಯ್ತು. ಇನ್ನು ಉಳಿದ ವರೆಂದರೆ ಗೋಪಾಲ ಕಮಲಾ, ಮತ್ತು ರೈತ ಮಾದ.

ಗೋಪಾಲ ಮದುವೆಯ ಓಡಾಟದಲ್ಲಿ ಭಾಗ ವಹಿಸದಿದ್ದರೂ, ಯಾವ ಗೋಜಿಗೂ ಹೋಗದೆ ತನ್ನ ಪಾಡಿಗೆ ತಾನು ಇದ್ದ. ಅವನಿಗೆ ಯಾವ ಆಸೆ, ಆಕಾಂಕ್ಷೆ, ವ್ಯಾಮೋಹವೂ ಇರಲಿಲ್ಲ. ಅವನಿಗೆ ಹೃದಯವೇ ಇರಲಿಲ್ಲ. ಅವನ ಜೀವನಪಾತ್ರ ಬರಿದಾಗಿತ್ತು. ಅವನಿಗೆ ಈ ಪ್ರಪಂಚದಲ್ಲಿ ಇದ್ದ ಒಂದೇ ಹಂಬಲವೆಂದರೆ ಅದು ಇಸ್ಪೇಟು. ಅದು ಇಲ್ಲದೆ ಅವನು ಬದುಕಲಾರದವ- ನಾಗಿದ್ದ.

ಕಮಲಳಿಗೆ ಒಂದು ಜೊತೆ ಧರ್ಮಾವರದ ಸೀರೆಯನ್ನು ಕೊಟ್ಟು, ಸರೂ ಕೈಲಿ ನಮಸ್ಕರಿಸಿದರು ರಂಗಮ್ಮ. "ನಿನ್ನ ಬಾಳು ಒಂದು ಸುಖದ ಸಾಗರ ವಾಗಲೀ ಮಗೂ. ಮುತ್ತೈದೆ ಸಾವಿತ್ರಿಯಾಗಿ ನೂರ್ಕಾಲ ಬಾಳು ಕಂದಾ." ಎಂದಳು ಕಮಲಾ ಉಕ್ಕಿ ಬರುತ್ತಿದ್ದ ಕಣ್ಣೀರು ತಡೆದು.

ರಂಗಮ್ಮ ಗೋಪಾಲನೊಡನೆ ತಾವು ಮಾಡಿರುವ ಏರ್ಪಾಡೆಲ್ಲವನ್ನೂ ಹೇಳಿ ಅದಕ್ಕಾಗಿ ಕಮಲಳನ್ನು ಕಷ್ಟಪಡಿಸಬಾರದೆಂದೂ ತಿಳಿಸಿದರು. ಗೋಪಾಲ ಯಾವ ವಿಚಾರಕ್ಕೂ ಬುದ್ಧಿಶೂನ್ಯ, ಹೃದಯಶೂನ್ಯನಾಗಿದ್ದ. ಅದಕ್ಕೆ ಉತ್ತರ ವಾಗಿ ಅವನಿಂದ ಯಾವ ಉತ್ತರವೂ ಬರಲಿಲ್ಲ.

ಮಾರನೆಯ ದಿನ ಗೋಪಾಲ ಊರಿಗೆ ಹೊರಟು ನಿಂತ. 'ತಿಂಗಳ ನಾಗೋಲೀ ಕಳೆದುಕೊಂಡು ಹೋಗು' ಎಂದು ಎಷ್ಟು ಬಗೆಯಲ್ಲಿ ಹೇಳಿದರೂ ಕೇಳದೆ, ಆ ದಿನವೇ ಹೊರಟು ನಿಂತ. ಮನೆಯಲ್ಲಿ ಪಾಯಿಸದ ಅಡುಗೆಯನ್ನು ಮಾಡಿ ಬಡಿಸಿದರು ರಂಗಮ್ಮ. ಕಮಲಳ ಕಣ್ಣೀರು ಬೆಳಗಿನಿಂದಲೂ ಒಂದೇ ಸಮನೆ ಹರಿಯುತ್ತಿತ್ತು. ಸರೂ ಚಿಕ್ಕಮ್ಮನ ದುಃಸ್ಥಿತಿಗಾಗಿ ಮರುಗಿದಳು. ರಂಗಮ್ಮನವರ ಕಾಲು ಹಿಡಿದು ನಮಸ್ಕರಿಸಿ "ಅತ್ತಿಗೇ, ನಿಮ್ಮ ಋಣವನ್ನು ನಾನು ಹೇಗೆ ತೀರಿಸಲೋ ತಿಳಿಯದಾಗಿದೆ!" ಎಂದು ಬಿಕ್ಕಿ ಬಿಕ್ಕಿ ಅತ್ತಳು ಕಮಲಾ.

ಸರೂ ತಂದೆಯೊಡನೆ ಸ್ಟೇಷನ್‌ವರೆಗೂ ಹೋಗಿ, ಚಿಕ್ಕಮ್ಮ, ಚಿಕ್ಕಪ್ಪ-ರನ್ನು ಬೀಳ್ಕೊಟ್ಟು ಬಂದಳು. ಗೋವಿಂದರಾಯರು ಮನೆಗೆ ಬರುವ ವೇಳೆಗೆ ಮಾದ ತಾನೂ ಊರಿಗೆ ಹೋಗುತ್ತೇನೆ ಎಂದು ಹೊರಟು ನಿಂತಿದ್ದ. "ನಿನ್ನ ಲೆಖ್ಖ ಎಷ್ಟಾಯಿತೋ ಮಾದ? ಈಗಲೇ ಎಲ್ಲಾ ಫೈಸಲ್ ಮಾಡೋಣ. ಸುಮ್ಮನೇ ಬಾಕೀ ನಿಲ್ಲುಸುವುದು ಬೇಡಾ." ಎಂದರು ಗೋವಿಂದರಾಯರು.

"ನಮ್ಮ ಧಣಿಗಳ ಮನೆಯದನ್ನ,ನಮ್ಮ ಮನೆಗೇ ತಂದರೆ ಅದಕ್ಕೆ ಬೇರೇ ಲೆಖ್ಖ ಎಂತಹದು ಬುದ್ಧೀ? ನಿಮ್ಮ ಉಪ್ಪು ಉಂಡು ಬೆಳೆದವರು ನಾವು. ದೊಡ್ಡಅಯ್ಯನೋರು, ನನಗೆ ಏನೂ ಗತಿ ಇಲ್ಲಾ ಅಂತ ಹೇಳಿಕೊಂಡಾಗ, ಒಂದೆರಡು ಎಕರೆ ಗದ್ದೆಯನ್ನು ನನಗೇ ಬಿಟ್ಟುಕೊಟ್ಟು, ನಿನ್ನ ಜೀವಾ ಇರೋ ತನಕಾ, ನೀನು ಊಟಮಾಡಿಕೊಂಡಿರು, ಆಮೇಲೆ ನೋಡೋಣವಂತೆ ಎಂದಿದ್ದರು. ಈಗಲೂ ಅವರ ಕೃಪೆಯಿಂದಲೇ ನಾನು ಬಾಳುತ್ತಿದ್ದೇನೆ. ನಮ್ಮನೆ ದೇವರು ಅವರು. ಅಂಥಾದ್ದರಲ್ಲಿ ಒಂದು ಸ್ವಲ್ಪ ಬೆಳೆದಿದ್ದು ತಂದು ಕೊಟ್ಟರೆ, ಅದಕ್ಕೆ ಬೇರೆ ಕೊಡಬೇಕಾ ಬುದ್ದೀ?" ಎಂದುಬಿಟ್ಟ. ಅವನ ಕೃತಜ್ಞತೆಯನ್ನು ನೋಡಿ ಗೋವಿಂದರಾಯರಿಗೆ ಸಂತೋಷವಾಯಿತು. ಅವನಿಗೆ ಬೇರೆ ರೀತಿಯಲ್ಲೇ ಹಣ ಸಲ್ಲಿಸುವಾ ಎಂದುಕೊಂಡು, ಹೊಸದಾದ ಒಂದು ಜೊತೆ ಪಂಚೆ, ಒಂದು ರೆಡಿಮೇಡ್ ಹೊಲಿದಿಟ್ಟಿದ್ದ ಚೆಕ್‌ಕೋಟನು

ಅವನಿಗೆ ಉಡುಗೊರೆಯಾಗಿ ಕೊಟ್ಟರು. ಮಾನ, ಮರ್ಯಾದೆಯಿಂದ, ಜೇರಿ ಏನನ್ನೂ ಹೇಳದೆ ತೆಗೆದುಕೊಂಡು, ಎಲ್ಲರಿಗೂ ಅಡ್ಡಬಿದ್ದು ನಮಸ್ಕಾರಮಾಡಿ, "ಅಯ್ಯಾವರು ಈ ಗತಿಗೆ ಬರಜೇಕಾಯಿತಲ್ಲಾ!" ಎಂದು ಕಣ್ಣೀರು ತಂದು ಕೊಂಡು ಹೊರಟು ಹೋದ.

ಮನೆಯ ತುಂಬಾ ಗಿಜಿಗಿಜಿ ಅಂತ ಜನರಿದ್ದ ಮನೆ ಈಗ ಬಿಕೋ ಅನ್ನು ತ್ತಿತ್ತು. ಗೋವಿಂದರಾಯರು ತಲೆಯ ಮೇಲಿದ್ದ ಬೆಟ್ಟವನ್ನು ಇಳಿಸಿದವರಂತೆ ಉಲ್ಲಾಸಗೊಂಡರು. ಅವರ ಗಮನ ಯಾವಾಗಲೂ, ಇನ್ನ ಹೆಚ್ಚು ಹೆಚ್ಚಾಗಿ ಪುರಾಣ, ಪುಣ್ಯಕಥೆಗಳ ಕಡೆ ಹರಿಯಿತು. ರಂಗಮ್ಮ ತಮ್ಮ ಮಿತಿಮೀರಿ ದುಡಿ ತದ ಫಲವಾಗಿ ಹಾಸುಗೆ ಹಿಡಿದು ಮಲಗಿದರು. ಮನೆಯಲ್ಲಿ ಉಲ್ಲಾಸವಾಗಿರುವ ವಳೆಂದರೆ ಸರೂ ಒಬ್ಬಳೇ.

ಪರೀಕ್ಷೆಗಳ ಫಲಿತಾಂಶ ಹೊರಬಿತ್ತು. ಮಾಧವ, ಸರಸು ಇಬ್ಬರೂ ತಮ್ಮ ತಮ್ಮ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದರು. ಮಾಧು ಮುಂದೆ ಓದಲು ಇಷ್ಟಪಡಲಿಲ್ಲ. "ನಾನು ಇಲ್ಲಿಯೇ ಇದ್ದು ಕಾರ್ಖಾನೆಯನ್ನು ಉತ್ತಮಗೊಳಿ ಸುವೆ. ಓದಿ, ಯಾವುದಾದರೂ ಕೆಲಸಕ್ಕೆ ಸೇರಿ ಮಾಡುವುದಾದರೂ ಏನು, ನಮ್ಮದೇ ನಮಗೆ ಇರುವಾಗ?" ಎಂದು ತಂದೆಗೇ ಸಹಾಯಕನಾಗಿ ನಿಂತನು.

ಜಾನಕೀಬಾಯಿ ಬೇಕಾದಷ್ಟು ಮಗನಿಗೆ ಹೇಳಿ ನೋಡಿದರು. "ಮುಂದಕ್ಕೆ ಓದಿ ಯಾವುದಾದರೂ ಕೆಲಸಕ್ಕೆ ಸೇರು ಮಗೂ. ಈ ಗೋಳು ನಿನಗೂ ಬೇಡಾ. ನಿಮ್ಮ ತಂದೆ ಒಬ್ಬರೇ ಈಗ ಪಡುವ ಪಾಡು ಸಾಕು. ಮುಂದೆ ನಿನಗೂ ಅದೇ ಗತಿ ಬರುವುದು ಬೇಡ. ಸಂಬಳ ನೂರಲ್ಲ ಒಂದು ಐವತ್ತೇ ರೂಪಾಯಿ ಬರಲಿ, ನೆಮ್ಮದಿಯಾಗಿ ಯಾವ ಜವಾಬ್ದಾರಿಯೂ ಇಲ್ಲದೆ ಇರ ಬಹುದು. ಈ ಕಾರ್ಖಾನೆ, ಆಳುಗಳು, ಸಂಬಳ ಸಾರಿಗೆ ಎಂದು ಒದ್ದಾಡುವ ಕಷ್ಟ, ನಾನು ಈ ಮೂವತ್ತು ವರ್ಷದಿಂದ ನೋಡುತ್ತಾ ಬಂದಿರುವೆ. ಈ ಕಷ್ಟ ಇಲ್ಲಿಗೇ ಸಾಕು." ಎಂದು ಬಹಳವಾಗಿ ಹೇಳಿದರು. ಆದರೂ ಮಾಧುವಿನ ಗಮನವೆಲ್ಲಾ ತಂದೆಯ ಕಡೆಗೇ ಇದ್ದಿತಾದ್ದರಿಂದ, ತಾಯಿಯ ಮಾತಿಗೆ ಅಷ್ಟು

ಲಕ್ಷ್ಯ ಕೊಡಲಿಲ್ಲ.

ರಾತ್ರಿ ಹತ್ತು ಗಂಟೆಯಾಗಿತ್ತು. ಮಾಧು ಇನ್ನೂ ಮನೆಗೆ ಬಂದಿರಲಿಲ್ಲ. ಕಿರಿಯವರಾದ, ಮೋಹನ, ಮುರಲಿ, ಮುಕುಂದ ಇವರು ಆಗ ತಾನೇ ಮಲಗಿದ್ದರು. ಅಶೋಕ ಯಾವುದೋ ಪುಸ್ತಕ ಓದುತ್ತಾ ರೂಮಿನಲ್ಲಿದ್ದ. ಗಾಳಿ ತಂಪಾಗಿ ಬೀಸುತ್ತಿತ್ತು. ವೆರಂಡಾದಲ್ಲಿದ್ದ ಕುರ್ಚಿಯ ಮೇಲೆ ಶ್ರೀಕಂಠಯ್ಯ ಕೂತಿದ್ದರು. ಮನೆಗೆಲಸ ಮುಗಿದಿದ್ದರಿಂದ ಜಾನಕೀಬಾಯಿ ಹೊರಗೆ ಬಂದು ಅಲ್ಲಿಯೇ ಕೂತರು.

"ಹೇಗಿದ್ದರೂ ಮಾಧು ಮುಂದಕ್ಕೆ ಓದುವುದಿಲ್ಲವಂತೆ. ನಮ್ಮ ಸರಸುವಿಗೂ ಪಾಸಾಗಿದೆ. ಪ್ರಸ್ತದ ಶಾಸ್ತ್ರ ಒಂದನ್ನು ಮಾಡಿ, ಮನೆಗೆ ಕರೆಯಿಸಿಕೊಳ್ಳಬಹುದಲ್ಲವೇ ?" ಶ್ರೀಕಂಠಯ್ಯ ಮಾತಿಗಾರಂಭಿಸಿದರು.

"ನನ್ನ ಮಾತು ಕೇಳುವಿರಾದರೆ ತಾನೇ, ನಾನು ಹೇಳುವುದು ? ಮೆಚ್ಚಿ ನಿಮ್ಮ ಸೊಸೆಯನ್ನು ಹುಡುಕಿದ್ದೀರಿ, ನಿಮ್ಮ ಇಷ್ಟ ಬಂದಾಗ ಕರೆತರಬಹುದು, ಇಲ್ಲವಾದರೆ ಬಿಡಬಹುದು. ಇಂಥಾದ್ದು ಮಾಡು ಎಂದರೆ ಮಾಡುತ್ತೇನೆ, ನನ್ನದೇನು?" ಯಾವ ಉತ್ಸುಕತೆಯನ್ನೂ ತೋರದೆ ನುಡಿದರು ಜಾನಕೀಬಾಯಿ.

"ಆದದ್ದು ಆಗಿಹೋಯಿತು, ಇನ್ನು ಮೇಲೆ ಆ ಹುಡುಗಿ ನಮ್ಮ ಸೊಸೆ. ನಮ್ಮ ಮನೆಗೆ ಬರುವ ಭಾಗ್ಯಲಕ್ಷ್ಮಿ. ಅಂಥವಳನ್ನು ನೀನು ಹೀಗೆ ಅನಾದರಿಸುವುದು ಸರಿಯಲ್ಲ ಜಾನಕಿ."

"ಮನೆಗೆ ಸೊಸೆ ಬರುವುದಾದರೆ ನಾನೇನು ಬೇಡವೆನ್ನುವೆನೆ? ನನಗೂ ಸಹಾಯವಾದಂತಾಗುತ್ತೆ."

"ನಾಳೆಯೇ ಗೋವಿಂದರಾಯರಿಗೆ ತಿಳಿಸಿ ಕೇಳುತ್ತೇನೆ."

ಮಾಧವ ಗೇಟು ತೆರೆದು ಒಳಗೆ ಬಂದ. "ಎಷ್ಟು ಹೊತ್ತು ಮಾಧೂ ಮನೆಗೆ ಬರುವುದು ? ಹೊರಗೆ ಹೋದರೆ ಮನೆಯ ಗಮನವೇ ಇರುವುದಿಲ್ಲಾ ಅಂತ ಕಾಣುತ್ತೆ." ಎಂದು ಅಸಮಾಧಾನ ವ್ಯಕ್ತಪಡಿಸಿದರು ಶ್ರೀಕಂಠಯ್ಯ.

"ಈಗ ಯಾಕೆ ಗಮನ ಬರಬೇಕು ಹೇಳಿ? ನಾಳೆ ಹೆಂಡತಿಯೊಬ್ಬಳು ಬಂದರೆ, ಎಲ್ಲವೂ ಸರಿಹೋಗುತ್ತೆ." ನಗುತ್ತಾ ನುಡಿದರು ಜಾನಕೀಬಾಯಿ.

"ಹಸಿವೆಯಾಗುತ್ತಿದೆ, ಅನ್ನ ಬಡಿಸಮ್ಮಾ" ಎಂದು ಮಾಧವ ಒಳಕ್ಕೆ ಹೋದ. ಅವನ ಹಿಂದೆಯೇ ಹೋದರು ಜಾನಕೀಬಾಯಿ.

ಶ್ರೀಕಂಠಯ್ಯ, ವಿಷಯವನ್ನು ಪ್ರಸ್ತಾಪಿಸಿದಾಗ, ಗೋವಿಂದರಾಯರು ಯಾವ ಆಕ್ಷೇಪಣೆಯನ್ನೂ ಎತ್ತದೆ ಒಪ್ಪಿಕೊಂಡರು. ಹಾಸಿಗೆ, ಹೊದಿಗೆ ಎಲ್ಲಾ ಸಿದ್ಧತೆಗಳನ್ನೂ ಗೋವಿಂದರಾಯರು ತಡಮಾಡದೆ ತಯಾರಿಸಿದರು. ಗೋಪಾಲನಿಗೆ ಕಾಗದ ಬರೆದಿದ್ದರೂ, ಅವನಾಗಲೀ, ಕಮಲಳಾಗಲೀ ಯಾರೂ ಬರಲಿಲ್ಲ.

ಆರತಿ, ಅಕ್ಷತೆ ಮೊದಲಾದ ಕಾರ್ಯಕಲಾಪಗಳೆಲ್ಲಾ ಮುಗಿದನಂತರ ಹೆಂಗಸರೆಲ್ಲಾ ಹೊರಟುಹೋದರು. ಸರೂ ಒಬ್ಬಳೇ ಉಳಿದಳು. ಅವ್ಯಕ್ತವಾದ ದಿಗಲಿನಿಂದ ಅವಳ ಶರೀರ ಕಂಪಿಸುತ್ತಿತ್ತು. ಬಳಿಯಲ್ಲಿಯೇ ಮಾಧವ ಕೂತಿದ್ದ. ಸರೂ ತನ್ನ ಭಾಗ್ಯದೇವತೆಯನ್ನು ಕಣ್ತುಂಬಾ ನೋಡಿದಳು. ಮಾಧವ ನೋಡಲು ಸುಂದರನಾಗಿಯೇ ಇದ್ದ. ಎತ್ತರವಾಗಿ ಬೆಳೆದ ದೇಹಕ್ಕೆ ಒಪ್ಪುವಂತೆ, ಅಗಲವಾದ ಕಣ್ಣುಗಳು, ಸ್ವಲ್ಪ ಉದ್ದವನ್ನತಿಕ್ರಮಿಸಿ ಬೆಳೆದಿದ್ದ ಮೂಗು, ಅಗಲವಾದ ಹಣೆ,ಇವುಗಳಿಂದ ಮಾಧವ ಆಕರ್ಷಕವ್ಯಕ್ತಿಯಾಗಿದ್ದ.

ಮದುವೆಯಾದ ಈ ಆರು ತಿಂಗಳಲ್ಲಿ ಮಾಧವನನ್ನು ನೋಡಿದ್ದು ಇಂದೇ. ಸರೂ, ಮಾಧವನನ್ನು ಒಂದೇ ಬಾರಿಗೆ ಮೆಚ್ಚಿಕೊಂಡಳು.

ಮಾಧವ ಕೇಳಿದ "ನಿನ್ನ 'ರಿಸಲ್ಟು' ಬಂದಿತೇನು ?"

"ಹೂಂ. ಪಾಸಾಯಿತು, ಫಸ್ಟ್‌ಕ್ಲಾಸಿನಲ್ಲಿ."

"ಓಹೋ, ಹಾಗೇನೂ ! ನನಗೆ ಹೇಳಲೇ ಇಲ್ಲವಲ್ಲಾ ?"

"ಯಾವಾಗ ಹೇಳಬೇಕಿತ್ತು? ಈಗ ತಾನೇ?" ಸರೂ ನಕ್ಕಳು. ಆ ಮಾತು, ಈ ಮಾತು ಎಂದು ಅರ್ಧಗಂಟೆಯಾಯಿತು. ಮಾಧವ ಉದ್ವೇಗಗೊಂಡ. "ಬರೀ ಮಾತಿನಲ್ಲಿಯೇ ಮುಗಿಸುತ್ತೀಯೇನು ?" ಎಂದು ಬೇಸರಗೊಂಡ.

"ಏನು ಮಾಡಬೇಕಾಗಿತ್ತೀಗ ?" ಯಾವ ಭಾವನೆಯೂ ಇಲ್ಲದೆ ಕೇಳಿದಳು ಸರೂ.

"ಪಾಪ, ಏನೂ ಗೊತ್ತಿಲ್ಲದ, ಹಸುಳೆ !" ಎನ್ನುತ್ತಾ ಸರೂವನ್ನೆಳೆದುಕೊಂಡ. ಯಾವುದೊಂದು ಪ್ರತಿಬಂಧವೂ ಇಲ್ಲದೆ ಸರೂ ಅವನವಳಾದಳು.

ಎರಡು ದಿನಗಳ ಶಾಸ್ತ್ರಸಂಬಂಧವೂ ಮುಗಿದನಂತರ, ಗೋವಿಂದರಾಯರು ಸರೂವನ್ನು ಕರೆದೊಯ್ಯಲು ಅನುಮತಿ ಕೇಳಿದರು.

"ಇನ್ನೊಂದು ಎಂಟು ದಿನ ಬಿಟ್ಟುಕೊಂಡು, ಕರೆದುಕೊಂಡು ಬನ್ನಿ. ಮುಂದಿನ ಗುರುವಾರವೇ ದಿನ ಚೆನ್ನಾಗಿದೆಯಂತೆ." ಎಂದರು ಶ್ರೀಕಂಠಯ್ಯ.

ಎಂಟು ದಿನಗಳೂ, ತಿಂಡಿ ತೀರ್ಥ ಮೊದಲಾದವುಗಳ ತಯಾರಿಯ-ಲ್ಲಿಯೇ ಕಳೆಯಿತು. ರಂಗಮ್ಮ ತಾವೇ ಮುತುವರ್ಜಿ ವಹಿಸಿ ಚಕ್ಕಲಿ, ತೇಂಗೊಳಲು, ಮುಚ್ಚೋರೆ, ರವೆಉಂಡೆ, ಮೈಸೂರ್‌ಪಾಕ್, ಎಂದು ಬಗೆ ಬಗೆಯ, ತಿಂಡಿ ತಿನಸುಗಳನ್ನೂ ಮಾಡಿದಳು. ಹುರಿಗಾಳು, ಅವಲಕ್ಕಿ ಎಂದು ಅದೆಲ್ಲವನ್ನೂ ಮಾಡಿಯಾಯಿತು.

ಸರೂವನ್ನ ಅತ್ತೆಯ ಮನೆಗೆ ಕಳಿಸಿ, ಹೊತ್ತು ಹೇಗೆ ಕಳೆಯುವುದು ಎಂಬುದೇ ಯೋಚನೆಯಾಯಿತು ರಂಗಮ್ಮನವರಿಗೆ. ಈಗ ಆರು ತಿಂಗಳೂ ಮನೆಯಲ್ಲಿಯೇ ಇರುತ್ತಿದ್ದಳು ಸರೂ. ಮೊದಲಾಗಿದ್ದರೆ ಸ್ಕೂಲ್‌ಗೆ ಎಂದು ಅಷ್ಟು ಕಾಲವಾದರೂ ಹೊರಗೆ ಹೋಗುತ್ತಿದ್ದಳು. ಈಗ ಅದೂ ತಪ್ಪಿದೆ.

ಗೋವಿಂದರಾಯರ ಮನಸ್ಸೂ ಹೀಗೆಯೇ ತೊಳಲಾಡುತ್ತಿತ್ತು.

ಸರೂ ತಾಯಿಯ ಮನೆ ಬಿಟ್ಟು ಹೊರಡಬೇಕಲ್ಲಾ ಎಂದು ಬಹಳ ವ್ಯಥೆಗೊಂಡಳು. ಆದರೆ ಅವೆಲ್ಲಕ್ಕಿಂತ ಅವಳ ಮನ ಕೊರೆಯುತ್ತಿದ್ದುದು, ಆ ದಿನದ ಮಾಧವನ ನಡತೆಗಾಗಿ. ಆ ದಿನ ಅವನು ಹಾಗೇಕೆ ಆಡಿದ ? ಬಾಯಿ ತುಂಬಾ ಮಾತಾಡಬೇಕು. ತನ್ನ ಆಸೆಯನ್ನೆಲ್ಲಾ ಹೇಳಬೇಕೂ ಎಂದಿದ್ದ ತನಗೆ, ಒಂದು ಮಾತು ಕೂಡಾ ಸರಿಯಾಗಿ ಆಡಲು ಆಸ್ಪದ ವಾಗಲಿಲ್ಲವಲ್ಲಾ ? ತಾನು ಹೆಂಡತಿಯಾದ ಮಾತ್ರಕ್ಕೆ, ತನ್ನ ಮಾತನ್ನೇನೂ ಕೇಳಲೇಬಾರದೆ ? ಮಾಧವ ಎಷ್ಟು ಬೇಗ ಉದ್ವಿಗ್ನವಾದ? ಅಷ್ಟರ ಮಟ್ಟಿಗೂ ಮನ ಬಿಗಿ ಹಿಡಿಯಲಾಗುವುದಿಲ್ಲವೆ ? ಹೀಗಾದರೆ ಮುಂದೆ ಹೇಗೆ ? ಎಂಬ ಯೋಚನೆಯಲ್ಲಿಯೇ ಆ ಎಂಟು ದಿನಗಳೂ, ಎಂಟು ಗಂಟೆಗಳಂತೆ ಕಳೆದವು.

ರಂಗಮ್ಮ ಕೂತಾಗ, ನಿಂತಾಗ, ಅತ್ತೆಯ ಮನೆಯಲ್ಲಿ ಹೀಗೆ ಇರಬೇಕು, ಹಾಗೆ ಮಾಡಬೇಕು, ಎಂದು ಉಪದೇಶವನ್ನಾರಂಭಿಸಿದ್ದರು. ಹಿಂದಿನ ಕಾಲ ದಲ್ಲಿ ಅತ್ತೆಯ ಮನೆಯವರು ಕೊಡುತ್ತಿದ್ದ ಕಷ್ಟ, ಸೊಸೆಯರ ಪಾಡು, ಗಟ್ಟಿ-ಗಳಾದ ಸೊಸೆ ತಿರುಗಿ ಬಿದ್ದು ಅತ್ತೆಯನ್ನೇ ಗೋಳಾಡಿಸಿದ್ದು ಎಲ್ಲಾ ಹೇಳಿದರು. ಸರೂ ಬೇಸರಗೊಂಡು “ಹಿಂದಿನ ಕಾಲದ ಪುರಾಣವೆಲ್ಲಾ ಈಗ ಬೇಡ ಅತ್ತೇ. ನಾನು ಅವರ ಮನೆಯಲ್ಲಿ ಹೇಗಿರಬೇಕು ಎಂದು ಹೇಳು ಸಾಕು.” ಎಂದು ಮೂಗು ಮುರಿಯುತ್ತಿದ್ದಳು.

“ನೋಡು ಸರೂ, ನೀನು ತುಂಬಿದ ಮನೆಗೆ ಸೇರಿದ್ದೀಯಾ. ಅದ ರಲ್ಲೂ ನೀನು ಹಿರಿಯ ಸೊಸೆ. ಪ್ರತಿಯೊಬ್ಬರ ಮನಸ್ಸೂ ತಿಳಿದು ಕೆಲಸಮಾಡ

ಬೇಕು. ನಿಮ್ಮ ಅತ್ತೆ ಸ್ವಲ್ಪ ಗಟ್ಟಿಗಿತ್ತಿ ಎಂದು ಕಾಣುತ್ತೆ. ಆದರೆ ಮಾವ ಬಹಳ ಸರಳ ಸ್ವಭಾವದವರು. ಎಂತಹದೇ ಸಮಯ ಬರಲಿ, ನೀನು ಹಿರಿಯ ರಿಗೆ ಮಾತ್ರ ಎದುರುತ್ತರ ಕೊಡಬೇಡ. ಅವರು ಹೇಳಿದ್ದು, ನಿನಗೆ ಎಷ್ಟೇ ಕಷ್ಟ ವಾಗಲೀ, ಸುಖವಾಗಲೀ, ಸಹಿಸಿಕೊಂಡು ಮಾಡು; ಇಲ್ಲವೆನಬೇಡ. ಹೆಂಗಸಿಗೆ ಇರಬೇಕಾದ ಮುಖ್ಯ ಗುಣವೆಂದರೆ ಸಹನೆ. ಅದೇ ಸಂಸಾರದ ಅಡಿಗಲ್ಲು. ಆ ಒಂದು ಸಹನೆಯಿಂದ ನೀನು ಎಂಥಾ ಅಸಾಧ್ಯವಾದ ಕೆಲಸವನ್ನಾದರೂ ಮಾಡಬಹುದು. ಯಾವ ಸಮಯದಲ್ಲೇ ಆಗಲೀ ತಾಳ್ಮೆಗೆಡಬೇಡ. ನಿನ್ನ ಗಂಡ, ಅವನು ಹೇಳಿದಂತೆ ಕೇಳಿಕೊಂಡಿರು. ಯಾವ ವಿಧದಲ್ಲಿಯೂ ಅವನ ಮನ ನೋಯುವಂತೆ ಮಾಡಬೇಡ. ಯಾವುದಾದರೂ ಹೋದ ಹೊಸತರ ಲ್ಲಿಯೇ ಸ್ವಲ್ಪ ಕಷ್ಟವೆಂದು ತೋರುತ್ತೆ. ಅದರಿಂದ ಮನಸ್ಸು ಬಿಗಿಹಿಡಿದು, ಅವನು ಹೇಳಿದಂತೆ ನಡೆದು ಒಳ್ಳೆಯವಳು ಎನಿಸಿಕೊಂಡರೆ, ಮುಂದೆ ನೀನು ಹೇಗಿದ್ದರೂ ಪರವಾಗಿಲ್ಲ. ಒಳ್ಳೆಯ ಕೆಟ್ಟ ಹೆಸರು ಬರುವುದು ಮೊದಲಿಗೇನೇ. ನೋಡು ಮಗೂ, ಹುಟ್ಟಿದ ಮನೆ, ಸೇರಿದ ಮನೆ ಎಲ್ಲದರ ಕೀರ್ತಿಯನ್ನೂ ಕಾಪಾಡುವುದು ನಿನ್ನ ಭಾರ." ಇಷ್ಟು ಹೇಳಿ ರಂಗಮ್ಮ ಸುಮ್ಮನಾದರು.

ನಾಳೆ, ನಾಡಿದ್ದು ಎನ್ನುತ್ತಾ ಆ ದಿನ ಬಂದೇ ಬಿಟ್ಟಿತು. ಸರೂ ಬೆಳಗಿ ನಿಂದಲೂ ಒಂದೇಸಮನೆ ಅಳುತ್ತಿದ್ದಳು. ಅಕ್ಕಪಕ್ಕದವರ ಮನೆಗೆ ಹೋಗಿ, ಹೋಗಿಬರುತ್ತೇನೆಂದು ತಿಳಿಸಿ ಬಂದಳು. ಅವರು ಅತ್ತೆಯ ಮನೆಗೆ ಹೋಗುವ ಹುಡುಗಿ ಎಂದು ತೆಂಗಿನಕಾಯಿ ಎಲೆ ಅಡಿಕೆ ಕೊಟ್ಟರು. ಸರೋಜಾ, ಶೀಲಾ ಈ ಸುದ್ದಿ ಕೇಳಿ, ಓಡಿಯೇ ಬಂದರು. ಸರೂ, ಅವರನ್ನು ನೋಡಿದ ಕೂಡಲೇ ಬಿಕ್ಕಿ ಬಿಕ್ಕಿ ಅತ್ತಳು. ಸರೋಜಳ ಹಾಸ್ಯವೆಲ್ಲಾ, ಸರೂವಿನ ಆ ಮುಖ ನೋಡಿದೊಡನೆಯೇ ಮಾಯವಾಯಿತು. ಸರೋಜಾ ಸರೂವನ್ನು ಕಟ್ಟಿ ಕೊಂಡು ಗೊಳೋ ಎಂದು ಅತ್ತಳು.

"ಇನ್ನು ನಿಮ್ಮನ್ನೆಲ್ಲಾ ನೋಡೋದು ಯಾವಾಗ ಸರೋಜಾ? ಅಂತೂ ನಮ್ಮ ಬಾಲ್ಯವೆಲ್ಲಾ ಕಳೆಯಿತು. ಮುಂದೆ ಯಾರು ಯಾರು ಏನಾಗುತ್ತೀರೋ ಏನೋ? ನೋಡು ಶೀಲಾ, ಅತ್ತೆ, ಅಣ್ಣಾ ಇವರನ್ನೆಲ್ಲಾ ಬಿಟ್ಟು ಹೇಗೆ ಅಂತಾ ಬಹಳ ದಿಗಿಲಾಗುತ್ತೆ ಕಣೇ." ಸರೂ ಉಸಿರಿದಳು.

"ಯಾವಾಗಲಾದರೂ, ನಾನೂ ಶೀಲಾ ಬರುತ್ತೇವೆ ಸರಸೂ, ಏನೂ ಯೋಚನೆ ಪಡಬೇಡಾ. ನೋಡು ಆಮೇಲೆ ನಿನ್ನ ರೋಮಾನ್ಸ (Romance)

ನಲ್ಲಿ ನಮ್ಮ ಜ್ಞಾಪಕ ಬರುತ್ತದೆಯೋ ಇಲ್ಲವೋ? ಅಲ್ಲವೇನೇ ಶೀಲಾ ?"

ಆ ಸಮಯದಲ್ಲೂ ಸರೂ ನಕ್ಕಳು. "ಥೂ ಹೋಗೇ, ನಿನಗೆ ಯಾವಾಗಲೂ ಅದೇ ಯೋಚನೆ. ಸದ್ಯ ನಿನಗೆ, ಬೇಗ ಮದುವೆಯಾಗಿದ್ದರೇ ಚೆನ್ನಾಗಿತ್ತು, ನನಗಾಗುವ ಬದಲು."

ಸರೂ, ಸರೋಜಾ, ಶೀಲಾ ಮೂವರು ಕೂಡಿಯೇ ಊಟ ಮಾಡಿದರು. ಹಿಂದಿನ ದಿನಗಳ ನೆನಪಿನಲ್ಲಿಯೇ ಕಾಲ ಕಳೆಯಿತು. ಸರೋಜಾ, ಶೀಲಾ ಸರೂವನ್ನು ಮನಸ್ಸಿಲ್ಲದ ಮನಸ್ಸಿನಿಂದ ಬೀಳ್ಕೊಂಡು, ಹೊರಟು ಹೋದರು.

ಸೋಗಲಕ್ಕಿ ಹಾಕುವುದಕ್ಕೆ ಒಂದು ಬೆಂಗಾಲ್ ಸಿಲ್ಕ್ ಸೀರೆ ತಂದಿದ್ದರು ಗೋವಿಂದರಾಯರು. ಪಕ್ಕದ ಮನೆಯ ಮೀನಾಕ್ಷಮ್ಮ ಬಂದು, ಸರೂವಿನ ಹಣೆಗಿಟ್ಟು ಸೋಗಲಕ್ಕಿ ಹಾಕಿದರು. ಸೀತೂ ಮಾಡಬೇಕಾಗಿದ್ದ ಕೆಲಸವನ್ನು ಮನೆಯಲ್ಲಿ ಯಾರೂ ಮುತ್ತೈದೆ ಇರದಿದ್ದುದರಿಂದ, ಇತರರ ಮನೆಯವರು ಬಂದು ಮಾಡುವಂತಾಯ್ತಲ್ಲಾ ಎಂದು ರಂಗಮ್ಮ ವ್ಯಥೆಪಟ್ಟರು.

ಹೂವು, ಹಣ್ಣು, ತಿಂಡಿಗಳು, ಸರೂವಿನ ಟ್ರಂಕ್, ಎಲ್ಲವನ್ನೂ ತೆಗೆದುಕೊಂಡು ಹೋಗಿ, ಸರೂವನ್ನು ಅತ್ತೆಯ ಮನೆಗೆ ತಲುಪಿಸಿದ್ದಾಯ್ತು. ಜಾನಕೀಬಾಯಿ ಸೊಸೆಯನ್ನು ಬರಮಾಡಿಕೊಂಡರು. ಬಂದ ತಕ್ಷಣ ಕಾಫಿಯ ಉಪಚಾರವೂ ಆಯಿತು.

ಗೋವಿಂದರಾಯರು ಹೊರಡುವೆನೆಂದರೂ ಬಿಡದೆ, ರಾತ್ರಿ ಔತಣವನ್ನು ಮಾಡಿದರು ಜಾನಕೀಬಾಯಿ.

" ಇಲ್ಲಿಯೇ ಈ ದಿನ ಇದ್ದು ನಾಳೆ ಹೊರಡಬಹುದಲ್ಲಾ ?" ಎಂದರು ಶ್ರೀಕಂಠಯ್ಯ ತಾಂಬೂಲವನ್ನು ಮೆಲ್ಲುತ್ತಾ.

" ಇರಬಹುದಾಗಿತ್ತು, ಅದಕ್ಕೇನೂ ಇಲ್ಲಾ. ಆದರೆ ನಮ್ಮ ಅಕ್ಕ ನನಗಾಗಿ ಕಾದು ಕೂತಿರುತ್ತಾಳೆ. ಅವಳಿಗೆ ಸರೂವನ್ನ ಬಿಟ್ಟಿರುವದೇ ಒಂದು ಮಹದ್ವಿಷಯವಾಗಿದೆ. ಅಂಥಾದ್ದರಲ್ಲಿ ನಾನೂ ಜೊತೆಗೆ ಇಲ್ಲದೇ ಹೋದರೆ ಹೇಗೆ?"

ಗೋವಿಂದರಾಯರು ಮನೆಗೆ ಹೊರಟು ನಿಂತರು. "ಸರೂ, ನಿಮ್ಮ ತಂದೆಗೆ ನಮಸ್ಕಾರ ಮಾಡಮ್ಮಾ." ಎಂದರು ಜಾನಕೀಬಾಯಿ. ಸರೂ ತಂದೆಯ ಬಳಿಗೆ ಬಂದು ನಮಸ್ಕರಿಸಿದಳು. "ನಿಮ್ಮ ಅತ್ತೆ ಮಾವಂದಿರಿಗೂ ಮಾಡು." ಎಂದರು ಗೋವಿಂದರಾಯರು. ಸರೂ ಅವರಿಬ್ಬರಿಗೂ ನಮಸ್ಕರಿಸಿ ಅಲ್ಲಿಯೇ

ನಿಂತಿದ್ದಳು.

"ಇನ್ನು ಮೇಲೆ ಇವಳು ನಿಮ್ಮ ಮನೆಯವಳಮ್ಮಾ. ತಾಯಿ ಇಲ್ಲದ ಮಗೂ ಅಂತ, ನನ್ನ ಅಕ್ಕ ಬಹಳ ಮುದ್ದಿನಲ್ಲಿಯೇ ಬೆಳೆಸಿಬಿಟ್ಟಿದ್ದಾಳೆ. ಅದರಿಂದ ನಮ್ಮ ಸರೂಗೆ ಇನ್ನೂ ಅಡುಗೆಯೇ ಬರುವುದಿಲ್ಲ. ನೀವು ತಿಳಿದವರು, ನಾನೇನೂ ಹೆಚ್ಚಿಗೆ ಹೇಳಲಾರೆ. ಏನೂ ತಿಳಿಯದ ಹುಡುಗಿ ನಮ್ಮ ಸರೂ. ಏನಾದರೂ ತಪ್ಪು ಮಾಡಿದರೆ ಹೊಟ್ಟೇಲಿ ಹಾಕಿಕೊಂಡು, ಸುಧಾರಿಸಿಕೊಳ್ಳೀ ಅಮ್ಮಾ." ಎಂದು ಜಾನಕೀಬಾಯಿಯವರಿಗೆ ದೈನ್ಯದಿಂದ ಹೇಳಿದರು ಗೋವಿಂದರಾಯರು.

"ನೀವೇನೂ ಯೋಚಿಸಬೇಡಿ. ಕೆಲಸ ಬರದಿದ್ದರೆ ಕಲಿಸಿದರಾಯಿತು. ನಮಗಿನ್ನೇನಿಲ್ಲಾ, ಹೇಳಿದ ಹಾಗೆ ಕೇಳಿಕೊಂಡಿದ್ದರಾಯಿತು. ಅವಳಿಗಾಗಿ ನಾವೇನು ಮಾಡಬೇಕು ?"

ಸರೂ ಅಲ್ಲಿಯೇ ಸುಮ್ಮನೆ ನಿಂತಿದ್ದಳು. ಗೋವಿಂದರಾಯರು ಅವಳ ಬಳಿಗೆ ಹೋಗಿ, "ಹೇಳಿದ ಹಾಗೆ ಕೇಳಿಕೊಂಡಿರು ಮಗೂ. ಏನೂ ಬೇಜಾರು ಮಾಡಿಕೊಳ್ಳಬೇಡ. ನಾನೂ ಆಗಾಗ್ಗೆ ಬರುತ್ತಿರುತ್ತೀನಿ. ಹೋಗಿ ಬರಲಾ?" ಎಂದು ಅವಳ ತಲೆ ನೇವರಿಸಿದರು. ಸರೂವಿನ ಕಣ್ಣೀರು ಗಲ್ಲದ ವರೆಗೆ ಬಂದಿದ್ದುವು. "ಇದೇಕೆ ಮಗೂ, ಅಳುತ್ತಿರುವೆ ?" ಎಂದು ಕಣ್ಣೀರನ್ನು ತಾವೇ ಒರಸಿದರು. ಸರೂವಿನ ಆ ದೀನಭಾವದ ಮುಖವನ್ನು ನೋಡಿ, ಅವರ ಕಣ್ಣೂ ಹನಿಗೂಡಿದವು.

ತಂದೆ-ಮಗಳ ಅಗಲಿಕೆಯ ದುಃಖವನ್ನು ನೋಡಿ ಶ್ರೀಕಂಠಯ್ಯನವರ ಮನ ಮರುಗಿತು. ಮೂಕರಂತೆ ಯಾವ ಮಾತನ್ನೂ ಆಡದೆ ಆ ದೃಶ್ಯವನ್ನು ನೋಡುತ್ತಾ ನಿಂತಿದ್ದರು. ಜಾನಕೀಬಾಯಿ ತಮ್ಮ ಮಗಳು ಅತ್ತೆಯ ಮನೆಗೆ ಹೋದಾಗಿನ ಸನ್ನಿವೇಶವನ್ನು ಜ್ಞಾಪಿಸಿಕೊಂಡು, ತಾವೂ ದುಃಖಿಸಿದರು. ಎಷ್ಟೇ ದಿನವಾಗಲಿ, ಎಷ್ಟೇ ವಯಸ್ಸಾಗಲೀ ಒಂದಲ್ಲಾ ಒಂದು ದಿನ ಅತ್ತೆಯ ಮನೆಯಲ್ಲಿ ಬಿಟ್ಟು ಹೋಗಬೇಕಷ್ಟೇ ? ಕಡೆಗೊಮ್ಮೆ ಗಟ್ಟಿ ಮನಸ್ಸು ಮಾಡಿ 'ಬರುತ್ತೇನೆ ಮಗೂ' ಎಂದು ಹೇಳಿ, ಎಲ್ಲರಿಗೂ ಹೇಳಿಬಿಟ್ಟು ಸರಸರನೆ ನಡೆದೇ ಬಿಟ್ಟರು. ಸರೂ ಏನು ಮಾಡಲೂ ತೋರದೆ, ನಡುಮನೆಯಲ್ಲಿಯೇ ಒಂದು ಕಡೆ ನಿಂತಳು. ಆನಂದ ಒಂದೆರಡು ಬಾರಿ ಅಲ್ಲಿಗೆ ನುಸುಳಿ 'ಅತ್ತಿಗೇ.... ಅತ್ತಿಗೇ' ಎಂದು ಕೂಗಿ ಓಡಿ ಬರುತ್ತಿದ್ದ. ಸರೂವಿಗೂ ಜಾನಕೀಬಾಯಿಯವರೇ

ಬಡಿಸಿದರು. ಎಲ್ಲರ ಊಟವೂ ಆಗಿ ಮಲಗುವ ವೇಳೆಗೆ ಹತ್ತೂವರೆಯಾಗಿತ್ತು. "ರಾಜೂ, ನಿಮ್ಮ ಅತ್ತಿಗೇಗೆ ರೂಮು ತೋರಿಸೋ, ಮಲಗಿಕೊಳ್ಳಲಿ. ಹಾಗೆಯೇ ಬಾಗಿಲುಗಳೆಲ್ಲಾ ನೋಡಿ ಸರಿಯಾಗಿ ಚಿಲಕ ಹಾಕು." ಎಂದರು ಜಾನಕೀಬಾಯಿ. ಸರೂ ಇನ್ನೂ ಅಲ್ಲಿಯೇ ನಿಂತಿದ್ದಳು. 'ಮಲಗಿಕೋ ಹೋಗು.' ಎಂದು ಸೊಸೆಗೆ ಹೇಳಿ ದೀಪವಾರಿಸಿ ಹೋದರು ಜಾನಕೀಬಾಯಿ.

ಸರೂ, ಮೆಲ್ಲಮೆಲ್ಲನೆ, ಹೆಜ್ಜೆಯ ಶಬ್ದ ಕೇಳದಂತೆ, ನಡೆದು ರೂಮಿಗೆ ಹೋದಾಗ ಮಾಧವ ಮಂಚದ ಮೇಲೆ ಸುಮ್ಮನೇ ಮಲಗಿದ್ದ. ಸರೂ ಬಾಗಿಲನ್ನು ಮುಂದೆ ಮಾಡಿ ಹತ್ತಿರ ಬಂದಳು. ಅತ್ತೂ ಅತ್ತೂ ಕಣ್ಣುಗಳೆಲ್ಲಾ ಕೆಂಪಾಗಿದ್ದುವು.

"ಈಗಲಾದರೂ ಆಯಿತೇನು ಬರುವುದಕ್ಕೆ?" ಮಾಧವ ಆಕ್ಷೇಪಣೆಯ ರೀತಿಯಲ್ಲಿ ಕೇಳಿದ.

"ಅಣ್ಣಾ ಬಂದು ಬಿಟ್ಟು, ಬಿಟ್ಟು ಹೊರಟು ಹೋದರು." ಸರೂ ಬಿಕ್ಕಳಿಸಿದಳು.

"ಇಷ್ಟಕ್ಕೆಲ್ಲಾ ಅಳುತ್ತಾರೆಯೇ ಸರೂ? ಥೂ, ಹುಚ್ಚು ಹುಡುಗಿ!" ಎಂದು ನಕ್ಕ. ಇದರಿಂದ ಸರೂವಿನ ಅಳುವೇನೂ ಕಡಮೆಯಾಗಲಿಲ್ಲ.

" ಹೀಗೆ ರಾತ್ರಿಯೆಲ್ಲಾ ಅಳುತ್ತಾ ಕೂಡುತ್ತೀಯೇನೂ ? ನನಗೆ ನಿದ್ದೆ ಬರುತ್ತಿದೆ ಸರೂ, ನೀನು ಬರುವಿಯೋ ಇಲ್ಲವೊ ?" ಮಾಧವ ಗದರಿಸಿ ಕೇಳಿದ.

ಸರೂ ಕತ್ತೆತ್ತಿ ನೋಡಿದಳು. ಮಾಧವ ಅದೇ ದಿನದ ಮೂರ್ತಿಯಾಗಿ ನಿಂತಿದ್ದಾನೆ. ಆಗಿನ ಮುಖಭಾವವನ್ನು ನೋಡಲಾಗಲಿಲ್ಲ. ಕೂಡಲೇ ಕಣ್ಣೊರಸಿಕೊಂಡು, ಅವನ ಸಮೀಪಕ್ಕೆ ಜರುಗಿ " ನೋಡಿ, ಇದೋ ಬಂದಿದ್ದೇನೆ." ಎಂದು ನಗು ಬಾರದಿದ್ದರೂ ನಗೆಯನ್ನು ತಂದುಕೊಂಡು ಸ್ವಲ್ಪ ಹತ್ತಿರ ಸರಿದಳು.

" ಹಾಂ, ಈಗಲೀಗ ನೀನು ಜಾಣ ಹುಡುಗಿಯಾದೆ, ತಿಳಿಯಿತೆ?" ಎನ್ನುತ್ತಾ ಮಾಧವ ಅವಳ ಬಳಿಸಾರಿದ. ಮಾಧವ ನಿದ್ರೆ ಮಾಡಿದಾಗ ರಾತ್ರಿ ಬಹಳವಾಗಿತ್ತು. ಸರೂವಿನ ಹೃದಯ ತಳಮಳಗೊಂಡಿತು. ಅತ್ತೆ, ತಂದೆಯವರನ್ನು ಒಂದು ದಿನವೂ ಬಿಟ್ಟು, ಎಲ್ಲಿಗೂ ಹೋದವಳಲ್ಲ. ಈ ದಿನ ಈ ಪತಿಗಾಗಿ ತನ್ನ ಮನೆಯನ್ನೇ ಬಿಟ್ಟು ಬಂದಿದ್ದಾಳೆ. ಇಲ್ಲಿ ಪ್ರತಿಯೊಂದೂ

ಹೊಸದು. ಹೊಸಜನ, ಹೊಸಮನೆ, ಪ್ರತಿಯೊಂದೂ ಬೇರೆ. ತನ್ನ ದುಃಖ ವನ್ನೆಲ್ಲಾ ಪತಿಯಲ್ಲಿ ಹೇಳಬೇಕು. ಅವನಿಂದ ಸಮಾಧಾನದ ಕರುಣಾಪೂರಿತ ಮಾತುಗಳನ್ನು ಕೇಳಬೇಕೆಂದು ಬಯಸಿದ್ದ ಸರೂವಿಗೆ, ಮಾಧವ 'ನಿನ್ನ ದುಃಖವೆಷ್ಟರ ಮಟ್ಟಿಗೆ ಇದೆ, ನಿನ್ನ ಯಾವುದೇ ಮಾತನ್ನೂ ನನಗೆ ಹೇಳು, ನಾನು ಸರಿಪಡಿಸುವೆ; ನಾನಿರುವಾಗ ನಿನಗೇತರ ಭಯ?' ಎಂದು ಹೇಳಿ ಸಮಾಧಾನಪಡಿಸುವುದು ಬಿಟ್ಟು, ತನ್ನನ್ನು ಕೇವಲ ಒಂದು ಭೋಗವಸ್ತುವಿ ನಂತೆ ತಿಳಿದು ವರ್ತಿಸಿದನಲ್ಲಾ, ಎಂದು ಸರೂ ಒದ್ದಾಡಿದಳು. ಹೆಂಡತಿ ಅಂದರೆ, ಅವಳೂ ಒಬ್ಬ ಮಾನವಪ್ರಾಣಿ, ಅವಳಿಗೂ ಆಸೆ, ಆಕಾಂಕ್ಷೆ, ಕೋಪ, ತಾಪ, ಸುಖ ಸಂತೋಷ ಇವೆ ಎಂಬುದನ್ನೂ ತಿಳಿಯದೆ ಕೇವಲ ತನ್ನನ್ನು ಒಂದು ಮಾದಕ ಸಾಮಗ್ರಿಯಂತೆ ಉಪಯೋಗಿಸಿದನಲ್ಲಾ ಎಂಬು ದನ್ನು ನೆನೆದು ಸರೂ ಇನ್ನೂ ದುಃಖಿಸಿದಳು.

"ಅಮ್ಮಾ....ಅಮ್ಮಾ....ಇದೇನೇನಮ್ಮಾ ನೀನು ಹೇಳಿದ ಪತಿ.? ನನ್ನ ಭಾಗ್ಯದೇವತೆ, ನನ್ನ ಜೀವದ ಜೀವ, ನನ್ನ ತಪಸ್ಸು, ನನ್ನ ಮೋಕ್ಷ, ಎಲ್ಲಾ ಇದೇನೇ ? ಅಯ್ಯೋ....ಅಮ್ಮಾ....!" ಎಂದು ನರಳಿದಳು ಸರೂ. ಅತ್ತೂ ಅತ್ತೂ ದಿಂಬೆಲ್ಲಾ ಒದ್ದೆಯಾಗಿತ್ತು.

ಸರೂ ಈಗ ಅತ್ತೆ ಮನೆಯ ವಾತಾವರಣಕ್ಕೆ ಹೊಂದಿಕೊಂಡಿದ್ದಾಳೆ. ಯಾರು ಯಾರನ್ನು ಯಾವ ರೀತಿ ಕೂಗಬೇಕು, ಯಾವ ರೀತಿ ಗೌರವಿಸಬೇಕು, ಎಲ್ಲಾ ತಿಳಿದಿದ್ದಾಳೆ. ದೇಶಾವಿಶಾಲವಾದ ದೊಡ್ಡಮನೆ. ಮಧ್ಯೆ ದೊಡ್ಡ ದಾದ ಹಾಲು. ಅದರ ಎರಡೂ ಕಡೆಗಳಲ್ಲಿಯೂ ಸಾಲಾಗಿ ರೂಮುಗಳು, ಮೆಟ್ಟಿಲಿನ ಪಕ್ಕದಲ್ಲಿರುವುದೇ ಆಫೀಸ್‌ರೂಮು. ಅಲ್ಲಿ ಬಂದವರಿಗೆ ಕೂಡಲು ತಕ್ಕಂತೆ ಸೋಫಾ, ಕುರ್ಚಿ, ಮೇಜುಗಳೂ, ಇಡಲ್ಪಟ್ಟಿವೆ; ನೆಲಕ್ಕೆ ರತ್ನಗಂಬಳಿಯೂ ಹಾಸಲ್ಪಟ್ಟಿದೆ. ಗೋಡೆ ಎಲ್ಲಾ ನೀಲಿಯ ಬಣ್ಣ ವಾಗಿದ್ದು, ರೂಮಿಗೆ ಒಂದು ಬಗೆಯ ಶೋಭೆಯುಂಟಾಗಿತ್ತು. ಒಂದು ರೂಮು ಶ್ರೀಕಂಠಯ್ಯನವರದ್ದು; ಅದರ ಪಕ್ಕದಲ್ಲಿಗೇ ಅಶೋಕನ ರೂಮು.

ಜಾನಕೀಬಾಯಿಯವರಿಗೇ ಪ್ರತ್ಯೇಕವಾದ ಒಂದು ರೂಮು. ಕಡೆಯದು ಮಾಧವನದು. ದೇವರಮನೆ, ಅಡುಗೆಮನೆ, ಊಟದ ಮನೆ ಎಲ್ಲಾ ಪ್ರತ್ಯೇಕವಾದ ರೂಮುಗಳು. ಹಿಂದುಗಡೆ ಬಚ್ಚಲುಮನೆ ಮನೆಯ ಸುತ್ತಲೂ ಎತ್ತರವಾದ ಗಿಡಗಳ ತಂಪು ನೆರಳು.

ಮನೆಯ ಮುಸುರೆಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು, ಮನೆ ಗುಡಿಸುವುದು ಎಲ್ಲಾ ಕೆಲಸಕ್ಕೂ ಮಾದಿ ಬರುತ್ತಿದ್ದಳು. ಅಡುಗೆಗೆ ಸ್ನಾನಕ್ಕೆ ಎಲ್ಲಾ ಎಲೆಕ್ಟ್ರಿಕ್ ಸ್ಟೋವ್ ಮತ್ತು ಬಾಯ್‌ಲರ್‌ಗಳಿದ್ದುವು. ಹಾಗೆ ನೋಡಿದರೆ ಬೇಕಾದಷ್ಟು ಆಧುನಿಕ ಸೌಕರ್ಯಗಳ ಯಾವ ಕೊರತೆಯೂ ಆ ಮನೆಯಲ್ಲಿರಲಿಲ್ಲ ಎನಬೇಕು. ಆದರೆ....ಆದರೆ ಸರೂವಿಗೆ ಅದೇ ಒಂದು ಹೊರೆಯಾಗಿತ್ತು.

ಜಾನಕೀಬಾಯಿ, ನಲವತ್ತೈದು ವರ್ಷ ವಯಸ್ಸಾಗಿದ್ದರೂ ಇನ್ನೂ ಯಾವ ಮಡಿ, ನೇಮ, ವ್ರತ ಅಂತ ಇನ್ನೂ ಮಡಿ ಹಿಡಿದಿರಲಿಲ್ಲ. ಯಾರಾದರೂ ಕೇಳಿದರೆ ಸರಿ "ಮನೆಗೆ ಸೊಸೆ ಬರಲಿ, ಅವಳಿಗೆ ಅಡುಗೆಮನೆ ಛಾರ್ಜು ಕೊಟ್ಟು, ನಾನು ಮಡಿ, ಪೂಜೆ, ಪುಣ್ಯಕಥೆ ಅಂತ ಇರುತ್ತೀನಿ" ಅಂತ ಹೇಳಿ ಕಾಲ ತಳ್ಳಿದ್ದರು.

ಮನೆಯಲ್ಲಿ, ಎಲ್ಲರಿಗಿಂತ ಮುಂಚೆ ಏಳುವವರೆಂದರೆ ಶ್ರೀಕಂಠಯ್ಯ. ಬೆಳಗ್ಗೆ ಐದು ಗಂಟೆಗೇ ಎದ್ದು, ವಾಕಿಂಗ್ ಹೊರಡುತ್ತಾರೆ. ಸುತ್ತಾಡಿಕೊಂಡು ಬರುವ ವೇಳೆಗೆ ಆರು ಗಂಟೆಯಾಗಿರುತ್ತೆ. ನಂತರ ಸ್ನಾನಮಾಡಿ, ಸಂಧ್ಯಾವಂದನೆ ಮುಗಿಸುವ ವೇಳೆಗೆ ರಾಜೂ ಹೂಗಳನ್ನು ಕಿತ್ತು ತಂದಿಟ್ಟಿರುತ್ತಾನೆ. ದೇವರ ಪೂಜೆಯನ್ನು ತಾವೇ ಮಾಡಿದ ನಂತರ, ಎಲ್ಲರನ್ನೂ ಎಬ್ಬಿಸುತ್ತಾರೆ. ಕಿರಿಯವ ಆನಂದ ತಾಯಿಯ ಮಗ್ಗುಲಲ್ಲೇ ಮಲಗಿರುತ್ತಾನೆ. ಅವನು ಎಬ್ಬಿಸಿದರೂ ಏಳದೆ, ಪುನಃ ಮುಸುಕೆಳೆದು ಮಲಗುತ್ತಾನೆ. ಆದರೂ ಅವನನ್ನೂ ಎಬ್ಬಿಸಿ, ತಮ್ಮ ಕಾಫಿ ಮುಗಿಸಿಕೊಂಡು ಏಳೂವರೆಗೆ ಮನೆ-ಯಿಂದ ಹೊರಡುತ್ತಾರೆ ಶ್ರೀಕಂಠಯ್ಯ. ಹನ್ನೆರಡಕ್ಕೆ ಊಟ. ಆದರೆ ಸ್ಕೂಲ್ ಮತ್ತು ಕಾಲೇಜಿಗೆ ಹೋಗುವ ಹುಡುಗರೆಲ್ಲಾ ಊಟ ಮಾಡಿಕೊಂಡು ಹತ್ತು ಗಂಟೆಯ ವೇಳೆಗೇ ಹೋಗಿರುತ್ತಾರೆ. ಮತ್ತೆ ಒಂದು ಗಂಟೆಯಿಂದ ಸಂಜೆ ಐದರ ವರೆಗೆ ಕೆಲಸ. ಸಾಯಂಕಾಲ ಕಾಫಿ ತಿಂಡಿ ಆದನಂತರ ಎಲ್ಲಿಯಾದರೂ ಹೊರಗೆ ಹೋಗಿ ಮನೆಗೆ ಒಂಬತ್ತರ ವೇಳೆಗೆ ಬರುತ್ತಾರೆ. ಹತ್ತರ ವೇಳೆಗೆ

ಊಟಮಾಡಿ ಮಲಗಿದರೆಂದರೆ ಅಂದಿನ ಕಾರ್ಯಚಕ್ರದ ಒಂದು ಸುತ್ತು ಮುಗಿದಂತಾಯಿತು.

ಸರೂ ಬಂದ ಕೆಲವೇ ದಿನಗಳಲ್ಲಿ ಅಡುಗೆಯನ್ನೆಲ್ಲಾ ಕಲಿತಳು. ಜಾನಕೀಬಾಯಿ ಬೇಸರವಿಲ್ಲದೆ ಎಲ್ಲವನ್ನೂ ಹೇಳಿಕೊಟ್ಟರು. ' ನಮ್ಮ ಮನೆಯಲ್ಲಿ ಹೀಗೆಯೇ ಇರಬೇಕು. ಹೀಗೇಯೇ ಮಾಡಬೇಕು ' ಎಂದು ಒಂದು ದೊಡ್ಡ ಉಪದೇಶವನ್ನು ಮಾಡಿದರು. ಸರೂ ಯಾವುದೊಂದು ಮಾತೂ ಆಡದೆ ಕೇಳಿದಳು.

ಹಿರಿಯ ಮೈದುನ ಅಶೋಕನನ್ನು ಉಳಿದು ಎಲ್ಲರೂ ಸರೂವಿನ ಜೊತೆಗೆ ಮಾತಾಡುತ್ತಿದ್ದರು. ಮೋಹನ ಸ್ವಲ್ಪ ಕಡಿಮೆ ಮಾತಿನವ. ಮುರಲೀ ಮುಕುಂದರಿಗೆ, ಅತ್ತಿಗೆ ಮನೆಗೆ ಬಂದುದ್ದು ತಮ್ಮ ಹೊಗಳಿಕೆಯನ್ನೆಲ್ಲಾ ಹೇಳಿಕೊಳ್ಳಲು ಅನುಕೂಲವಾಯ್ತು. ಸರೂ ಅವರ ಮಾತನ್ನು ಬೇಸರ ಪಡದೇ ಕೇಳುವುದೇ ಅವರಿಗೊಂದು ಸಂತೋಷ.

ಹೊರಗಡೆ ತಿರುಗಾಡುವುದೆಂದರೆ ಜಾನಕೀಬಾಯಿಯವರಿಗೆ ಮೊದಲಿಂದಲೂ ಆಸೆ. ಆದರೆ ಅವರ ಆಸೆಗೆ ಅಡ್ಡಿಯಾದವರು ಶ್ರೀಕಂಠಯ್ಯ. 'ಹೆಂಗಸು ಯಾವಾಗಲೂ ಹೊಸಲೊಳಗೇ ಇರಬೇಕು?' ಎನ್ನುವ ಸ್ವಭಾವ ಅವರದ್ದು. ಇನ್ನೊಂದು ಅಡಚಣೆಯೇನೆಂದರೆ ಮಕ್ಕಳದ್ದು. ಹೊತ್ತುಗೊತ್ತಿಗೆ ಸರಿಯಾಗಿ ಎಲ್ಲರೂ ಮನೆಗೆ ಬರುತ್ತಿರಲಿಲ್ಲ. ಒಬ್ಬೊಬ್ಬರದ್ದು ಒಂದೊಂದು ವೇಳೆ. ಅವರು ಬಂದಾಗ ಅವರಿಗೆ ತಿಂಡಿಯೋ ಕಾಫಿಯೋ ಕೊಡಬೇಕು. ಹೀಗಾಗಿ ಅವರ ಆಸೆ ತೃಪ್ತವಾಗಿರಲಿಲ್ಲ. ಆದರೂ ಜಾನಕೀಬಾಯಿ ಹೋಗುವುದೇನೂ ಕಡಿಮೆ ಮಾಡಿರಲಿಲ್ಲ. ಕೆಲಸ ಎಲ್ಲಾ ಮುಗಿಸಿ, ತಿಂಡಿ ಕಾಫಿ ಮಾಡಿ ಮುಚ್ಚಿಟ್ಟು, ರಾಜುವಿಗೆ ಅದನ್ನು ಕೊಡಲು ಹೇಳಿ, ಅವನನ್ನು ಮನೆಗೆ ಕಾವಲುಮಾಡಿ, ತಮ್ಮ ಕ್ಲಬ್, ಇಲ್ಲವೇ ಸ್ನೇಹಿತರ ಮನೆ, ಇಲ್ಲಾ ಯಾವುದಾದರೂ ಭಾಷಣ, ಸಂಗೀತ, ಎಂದು ಹೋಗುತ್ತಿದ್ದರು. ಮನೆಯಲ್ಲಿರುವುದೆಂದರೆ ಅವರಿಗೆ ಅದು ಸೆರೆಮನೆಯೇ ಆಗುತ್ತಿತ್ತು.

ಶ್ರೀಕಂಠಯ್ಯ ಹೇಳುವಷ್ಟೂ ಹೇಳಿದರು. ಆದರೆ ಅದು ಯಾವ ಪರಿಣಾಮವನ್ನೂ ಉಂಟುಮಾಡದ್ದರಿಂದ, ಇನ್ನು ಹೇಳಿಯೇನೂ ಸುಖವಿಲ್ಲವೆಂದು, ಅವರ ಪಾಡಿಗೆ ಅವರು ಇದ್ದುಬಿಟ್ಟಿದ್ದರು.

ಅಶೋಕ ಬಿ. ಇ. ಯಲ್ಲಿ ಓದುತ್ತಿದ್ದ. ಸ್ವಭಾವದಿಂದ ಅವನು ಬಹಳ

ಹಟಮಾರಿಯಾಗಿದ್ದ. ನಿತ್ಯ ಕಾಲೇಜಿನಿಂದ ಮನೆಗೆ ಬರುವಾಗ ಯಾರ ನ್ನಾದರೂ ಜೊತೆಗೆ ಕರೆತರುತ್ತಿದ್ದ. ಬಂದವರಿಗೂ ಅವನ ಜೊತೆಯಲ್ಲಿ ಕಾಫಿ ತಿಂಡಿಯ ಫಲಾಹಾರವಾಗಬೇಕು. ಎಂದಾದರೂ ಒಂದು ದಿನ "ಅವರಿಗೆಲ್ಲಾ ಎಷ್ಟು ಅಂತ ಕೊಟ್ಟು ಪೂರಯಿಸಲಾಗುತ್ತೆ? ನೀನೊಬ್ಬನೇ ಒಳಗೆ ಬಂದು ತಿಂದು ಹೋಗು" ಎಂದು ಜಾನಕೀಬಾಯಿ ಹೇಳಿದುದೂ ಉಂಟು. ಅದಕ್ಕೆ ಅಶೋಕ "ಕೊಡುವ ಹಾಗಿದ್ದರೆ ಅವರಿಗೂ ಕೊಡು, ಇಲ್ಲವಾದರೆ ಬೇಡವೇ ಬೇಡಾ." ಎಂದು ಕೋಪಗೊಂಡು ಮನೆಯಿಂದ ಹೊರಬೀಳುತ್ತಿದ್ದ. ಅವನು ತನ್ನದೇ ಆದ ದಾರಿಯಲ್ಲಿ ನಡೆಯುತ್ತಿದ್ದ. ಅವನ ಹಟವನ್ನು ಬಿಡಿಸಬೇಕೆಂದು ಮಾಡಿದ ಪ್ರಯತ್ನವೆಲ್ಲಾ ನೀರಿನಲ್ಲಿ ಮಾಡಿದ ಹೋಮದಂತಾಯ್ತು.

ಮೋಹನ ಈ ಸಲ ಸೀನೀಯರ್ ಬಿ. ಎ. ಕ್ಕೆ ಬಂದಿದ್ದ. ಮುರಲಿ ಮುಕುಂದರದ್ದು ಇನ್ನೂ ಹೈಸ್ಕೂಲು. ರಾಜೂ ಇಂಟರ್‌ಮಿಡಿಯೇಟ್ ಓದುತ್ತಿದ್ದ.

ಒಬ್ಬೊಬ್ಬರದ್ದು ಒಂದೊಂದು ತರಹ ಸ್ವಭಾವ, ಒಂದೊಂದು ಹೊತ್ತು ವೇಳೆ. 'ಮನುಷ್ಯನಾಗಿ ಹುಟ್ಟಿದ ಮೇಲೆ ಅವನ ಗುರಿಯನ್ನು ಅವನು ಸಾಧಿಸಬೇಕು. ಧ್ಯೇಯವಿಲ್ಲದ ಮನುಷ್ಯ ಬದುಕಿದರೂ ಒಂದೇ, ಸತ್ತರೂ ಒಂದೇ.' ಎಂಬ ಧ್ಯೇಯವಾದಿಗಳಾದ ಶ್ರೀಕಂಠಯ್ಯ, ಪ್ರತಿಯೊಂದೂ ತಮ್ಮ ಅಭೀಷ್ಟದಂತೆಯೇ ನಡೆಯಬೇಕೆಂಬ ಛಲವುಳ್ಳ ಜಾನಕೀಬಾಯಿ, ತಂದೆ ತಾಯಿಯರನ್ನು ದೇವರು ಎನ್ನುವಷ್ಟು ಮಟ್ಟಿಗೆ ತಿಳಿದಿರುವ ಮಾಧವ, ಇವರೆಲ್ಲರನ್ನೂ ಅನುಸರಿಸಿಕೊಂಡು ಹೋಗಬೇಕಾಗಿತ್ತು ಸರೂ.

ಜಾನಕೀಬಾಯಿ, ಸೊಸೆ ಬಂದ ಮೇಲೆ ಅಡುಗೆಯ ಛಾರ್ಜು ಅವಳಿಗೆ ವಹಿಸಿ, ನಿರಾಳವಾಗಿದ್ದರು. ಅಡುಗೆಮನೆಯ ಎಲ್ಲಾ ಸ್ವಾತಂತ್ರ್ಯವನ್ನೂ ಕೊಟ್ಟರು. 'ಇಂಥಾ ಸಾಮಾನೂ ಇಷ್ಟು ದಿನ ಆಗಬೇಕು, ಇಷ್ಟೇ ಮಾಡ ಬೇಕು' ಎಂದು ತಾಕೀತು ಮಾಡಿದ್ದರು.

'ಅತ್ತೆ ಪರವಾಗಿಲ್ಲ, ಕಟ್ಟುನಿಟ್ಟು ಸ್ವಭಾವದವರಾದರೂ, ನನಗೆ ಯಾವ ತರಹದ ಅಂಕೆಯನ್ನೂ ಮಾಡಿಲ್ಲ' ಎಂದು ಸರೂ ಸಂತೋಷಗೊಂಡಳು. ಆದರೆ ಅವಳ ಆ ಸಂತೋಷ ಬಹುಕಾಲ ಉಳಿಯಲಿಲ್ಲ.

ಅಂದು ಭಾನುವಾರ. ಕಾರ್ಖಾನೆ ಮತ್ತು ಅಂಗಡಿಗಳಿಗೆ ರಜಾ. ಊಟವಾದ ನಂತರ ಶ್ರೀಕಂಠಯ್ಯ ರೂಮಿನಲ್ಲಿ ಮಲಗಿದ್ದರು. ಹುಡುಗರೆಲ್ಲಾ ಹೊರಗಡೆ ಹೋಗಿದ್ದರು.

ಸರೂ, ಅಡುಗೆಯನ್ನೆಲ್ಲಾ ಮುಚ್ಚಿಟ್ಟು, ಅಡುಗೆಮನೆ ತೊಳೆದು, ಒರಸಿ, ಬಾಗಿಲು ಹಾಕಿಕೊಂಡು ಕೆಲಸವನ್ನೆಲ್ಲಾ ಮುಗಿಸಿ ಹೊರಬಂದಳು. 'ಯಾವುದಾದರೂ ಕಥೆ ಓದುವಾ' ಎಂದುಕೊಂಡು ಬೀರುವಿನಲ್ಲಿದ್ದ ಲೈಬ್ರರಿ ಪುಸ್ತಕವನ್ನು ತೆಗೆದುಕೊಂಡು ರೂಮಿಗೆ ನಡೆದಳು. ಅವಳ ನಿರೀಕ್ಷಣೆಗೆ ಪ್ರತಿಯಾಗಿ ಅಲ್ಲಿಯೇ ಮಾಧವ ಇದ್ದ.

"ಮುಗಿಯಿತೇನು ಕೆಲಸ?" ಮಾಧವ ಕೇಳಿದ.

"ಹೂಂ, ಒಂದು ಬಾರಿಗೆ ಮುಗಿದಂತಾಯ್ತು." ಸರೂ ಅವನನ್ನೇ ನೋಡುತ್ತಾ ನಕ್ಕಳು.

ಮಾಧವ ಎದ್ದು ಬಾಗಿಲು ಹಾಕಿದ. ಸರೂ ಗಾಬರಿಯಾದಳು. "ಬಾಗಿಲೇಕೆ ಹಾಕಿದಿರಿ? ಅಮ್ಮ ನೋಡಿದರೆ ಏನನ್ನುತ್ತಾರೆ? ಇನ್ನೂ ನನಗೆ ಒಳಗೆ ಕೆಲಸವಿದೆ." ಸರೂ ಹೊರಡಲನುವಾದಳು. ಮಾಧವ ಬಾಗಿಲಲ್ಲೇ ನಿಂತಿದ್ದ. "ನಿನ್ನ ಕೆಲಸವೆಲ್ಲಾ ನನಗೆ ಗೊತ್ತಿದೆ ಸರೂ, ಇಲ್ಲದ ಕುಂಟು ನೆಪ ಹೇಳಬೇಡ. ಅಮ್ಮನಿಗೂ ಗೊತ್ತು ನೀನಿನ್ನೂ ಹೊಸದಾಗಿ ಬಂದಿರುವ ಸೊಸೆ ಎಂದು. ಅವಳೇನೂ ಅನ್ನುವುದಿಲ್ಲ."

"ನನ್ನನ್ನು ನೋಡಿದರೆ ನಿಮಗೆ ಬೇರೆ ಯಾವ ಭಾವನೆಯೂ ಬರುವುದಿಲ್ಲವೇ? ಅದೊಂದಕ್ಕಾಗಿಯೇ ಏನು ನಾನಿರುವುದು?" ಎಂದು ಕಣ್ಣಲ್ಲಿ ನೀರು ತಂದು ಕೇಳಿದಳು ಸರೂ.

"ಯಾತಕ್ಕೆ, ಏನು, ಒಂದೂ ನನಗೆ ಗೊತ್ತಿಲ್ಲ ಸರೂ. ನನಗೆ ಯಾವಾಗಲೂ ನೀನು ಬಳಿ ಇದ್ದರೆ ಸಾಕು."

ಸರೂವಿನ ಯಾವ ಪ್ರತಿಭಟನೆಯೂ ಪರಿಣಾಮಕಾರಿಯಾಗಲಿಲ್ಲ.

ಸರೂ ಭಯದಿಂದಲೇ ರೂಮಿನ ಹೊರಬಂದಳು. ಯಾರು ಏನನ್ನುವರೋ ಎಂಬ ಭೀತಿಯಿಂದ ಅವಳ ಮನಸ್ಸು ವ್ಯಗ್ರವಾಗಿತ್ತು. ಕಾಫಿ ಡಿಕಾಕ್ಷನ್‌ನ್ನು ಯಾರೋ ಮಾಡಿಟ್ಟಿದ್ದರು. ರಾಜೂ ಅಲ್ಲಿಯೇ ಇದ್ದ. "ರಾಜೂ, ಅಮ್ಮಾ ಎಲ್ಲಿ ಕಾಣೋದಿಲ್ಲಾ? ಏತಕ್ಕಾದರೂ ನನ್ನನ್ನು ಕರೆದರೆ? ಕಾಫಿ ಮಾಡಿದ್ದು ಯಾರು?"

"ಅಶೋಕಣ್ಣಾ, ಟೀ ಬೇಕೂಂತ ಕೇಳಿದರು. ಅಮ್ಮ ನನಗೆ 'ಅತ್ತಿಗೆಗೆ

ಹೇಳಿ ಮಾಡಿಸಿ ತಂದು ಕೊಡೋ" ಅಂದರು. 'ಅತ್ತಿಗೆ ಇಲ್ಲಿ ಇಲ್ಲಾಮ್ಮಾ; ಮಲಗಿರಬಹುದು' ಎಂದೆ. ಅಷ್ಟಕ್ಕೇ ಅಮ್ಮ ಕೋಪ ಮಾಡಿಕೊಂಡು ತಾವೇ ಟೀ ಮಾಡಿ ಕೊಟ್ರು, ಕಾಫಿಯನ್ನೂ ಅವರೇ ಮಾಡಿದರು ಅದೇನೋ ಕಥೆ ಪುಸ್ತಕ ಎಲ್ಲಿ ಎಂದು ಎಲ್ಲರ ಮೇಲೂ ಕೂಗಾಡಿದರು." ರಾಜು ನಡೆದಿದ್ದೆಲ್ಲ ವನ್ನೂ ವರದಿ ಒಪ್ಪಿಸಿದ.

ಸರೂ ಕುಗ್ಗಿಹೋದಳು. ಅಮ್ಮ ಏನನ್ನುವರೋ ಎಂಬ ಭಯ ದಿಂದಲೇ ಕೆಲಸವೆಲ್ಲಾ ಮಾಡಿದಳು. ರವೆ ಉಪ್ಪಿಟ್ಟು ಮಾಡಿ, ಎಲ್ಲರಿಗೂ ಕೊಟ್ಟಳು. ಸಂಜೆಯ ವೇಳೆಗೆ ಎಲ್ಲರೂ ಹೊರಗೆ ಹೋದರು. ಮಾಧವ ತನ್ನ ಗೆಳೆಯರೊಡನೆ ಸಿನೀಮಾಕ್ಕೆ ತೆರಳಿದ. ಜಾನಕೀಬಾಯಿ ಮನೆಗೆ ಬಂದಿರಲಿಲ್ಲ. ಮನೆಯಲ್ಲಿದ್ದವರೆಂದರೆ ಸರೂ ಮತ್ತು ರಾಜೂ. ಈ ಸಂದರ್ಭ ಸಾಧಿಸಿಕೊಂಡು ರಾಜು ತನ್ನ ಕತೆಯನ್ನೆಲ್ಲ ಹೇಳಿದ:

" ನಾನು ಶ್ರೀಕಂಠಯ್ಯನವರ ದೂರದ ಸಂಬಂಧಿಕರ ಮಗ. ತಂದೆ ತಾಯಿ ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋದರು. ಯಾರ ಆಶ್ರಯವೂ ಇಲ್ಲದೇ, ನಿರ್ಗತಿಕನಾದ ನನ್ನನ್ನು ಕಡೆಗೆ ಶ್ರೀಕಂಠಯ್ಯನವರೇ ತಮ್ಮ ಮನೆಯಲ್ಲಿ ತಂದಿಟ್ಟುಕೊಂಡರು. 'ಹುಡುಗ ಗಟ್ಟಿಮುಟ್ಟಾಗಿದ್ದಾನೆ. ಸಮಯ ಬಂದರೆ ಕೆಲಸ ಮಾಡಿಸಲೂಬಹುದು' ಎಂದುಕೊಂಡೇ ಅಮ್ಮಾ ಅವರೂ ಒಪ್ಪಿರಬೇಕು, ನನ್ನನ್ನು ಮನೆಯಲ್ಲಿ ಸೇರಿಸಿಕೊಳ್ಳಲು. ಇವರ ಮನೆಗೆ ಬಂದಾಗ ನನಗೆ, ಎಂಟು ವರ್ಷ ವಯಸ್ಸು; ಈಗ ಹದಿನೆಂಟು ವರ್ಷ. ಇಷ್ಟು ಕಾಲ ಈ ಮನೆಯಲ್ಲಿ ಆಳಾಗಿ, ಮಾಣಿಯಾಗಿ, ಅಡುಗೆಯವನಾಗಿ, ಎಲ್ಲಾ ಆಗಿ ದುಡಿದಿದ್ದೇನೆ ತಾಯಿ, ಒಂದು ಹೊಟ್ಟೆಗಾಗಿ. ದಿನಕ್ಕೆ ಹತ್ತು ಬಾರಿ ಅಂಗ ಡಿಗೆ ತಿರುಗಿ ಸಾಮಾನು ತರಬೇಕು, ಕಾಫಿ ಲೋಟಾ, ಪಾತ್ರೆ ತೊಳೆಯಬೇಕು, ತರಕಾರಿ ಹೆಚ್ಚಿ ಕೊಡಬೇಕು, ಕಡೆಗೆ ಜಾನಕೀಬಾಯಿ ಹೊರಗಾದಾಗ ಅಡುಗೆ ಯನ್ನೂ ಮಾಡಬೇಕು. ಹೀಗೆ ನಾನು ಎಲ್ಲರ ಅಧಿಕಾರಕ್ಕೂ ಒಳಪಟ್ಟವನಾಗಿ ದ್ದೇನೆ. ಮಾಧವನಿಂದ ಹಿಡಿದು ಕಡೆಯವ ಆನಂದನ ವರೆಗೂ,ಎಲ್ಲರ ದರ್ಬಾರೂ ನನ್ನ ಮೇಲೆಯೇ. ಮನೆಯ ಯಾವುದೊಂದು ಸಾಮಾನು ಹೋಗಲೀ, ಬರಲೀ, ಅದಕ್ಕೆ ಹೊಣೆಗಾರ ನಾನೇ. 'ರಾಜೂ, ನನ್ನ ಸೀರಿ ಬಣ್ಣಾದ, ಸಾಕ್ಸ್ ಎಲ್ಲಿ, ನೋಡಿ ತಂದು ಕೊಡು.' ಅಂತ ಅಶೋಕ ಕೇಳುತ್ತಾನೆ; 'ಲೋ ರಾಜೂ, ಸ್ವಲ್ಪ ತರಕಾರಿ ಹೆಚ್ಚಿ ಕೊಡು.' ಅಂತ ಜಾನಕೀಬಾಯಿ ಅಡುಗೆಮನೆಯಿಂದ

ಕೂಗುತ್ತಾರೆ. ಅದು ಮುಗಿಯುವ ವೇಳೆಗೆ 'ರಾಜೂ, ಇದನ್ನ ಪೋಸ್ಟ್ ಮಾಡಿ ಬಾ' ಅಂತ ಮಾಧವ ಕೂಗುತ್ತಿರುತ್ತಾನೆ. ಹೀಗೆಯೇ ಇವರೆಲ್ಲರ ಕೆಲಸ ಮಾಡುವುದರಲ್ಲಿಯೇ ವೇಳೆ ಕಳೆಯುತ್ತದೆ. ಅಲ್ಲಿಂದ ಹತ್ತೂವರೆಗೆ ಊಟ ಮಾಡಿಕೊಂಡು ಕಾಲೇಜಿಗೆ ಓಡುತ್ತೇನೆ. ಸಂಜೆ ಬಂದರೆ ಯಥಾಪ್ರಕಾರ ಕೆಲಸಗಳ ಪಟ್ಟಿಯೇ ತಯಾರಿರುತ್ತದೆ. ಹೀಗಾಗಿ ಓದಬೇಕೆಂದರೆ ಬಿಡುವು ತಾನೇ ಎಲ್ಲಿ? ಆದರೂ ಇಲ್ಲಿಯ ವರೆಗೆ ನಾನು ಫೇಲಾಗದೆ ಬಂದದ್ದೇ ಹೆಚ್ಚು ತಾಯೀ. ನೀವು ಈ ಮನೆಗೆ ಬಂದ ಮೇಲೆ ಮಾತ್ರ ಸ್ವಲ್ಪ ಧಾರಾಳವಾಗಿ ಉಸಿರಾಡಲು ಅವಕಾಶವಾಯಿತು. ನಾನು ಏನು ಹೇಳಿದರೂ ಮಾಡುತ್ತೇನೆ ಅತ್ತಿಗೆ, ಕೆಲಸಕ್ಕಾಗಿ ನಾನು ಎಂದೂ ಬೇಸರಗೊಳ್ಳುವುದಿಲ್ಲ. ಆದರೆ ಅಮ್ಮಾ ಅವರ ಗುಣಕ್ಕಾಗಿ ವ್ಯಥೆಯಾಗುತ್ತೆ. ಎಲ್ಲರಿಗೂ ನನ್ನ ಕೈಯಿಂದಲೇ ತಿಂಡಿ ಕೊಡಿಸುತ್ತಾರೆ. ನಾನೇ ನೋಡುತ್ತೇನೆ, ಆದರೆ ನನ್ನ ಪಾಲಿಗೆ ಬರುವುದು ಕೇವಲ ಕಡೆಯ ಸೀಕಲು. ಪ್ರತಿಯೊಂದರಲ್ಲೂ ಅಷ್ಟೇ. ಒಂದು ಕಾಫಿ, ಒಂದು ತಿಂಡಿ, ಎಲ್ಲವರಲ್ಲೂ ಅಷ್ಟೇ. ಅವರು ಮಾಡುವ ಈ ಭೇದವನ್ನು ನೋಡಿಯೇ ನನಗೂ ರೋಸಿಹೋಗಿದೆ." ಎಂದು ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ರಾಜು, ಅತ್ತಿಗೆಯ ಎದುರಿಗೆ ತೋಡಿಕೊಳ್ಳುತ್ತಿದ್ದ ವೇಳೆಗೆ ಜಾನಕೀಬಾಯಿ, ಕೈಲಿ ತೆಂಗಿನಕಾಯನ್ನು ಹಿಡಿದು ಬಂದರು. ಇನ್ನೂ ವೆರಾಂಡದಲ್ಲಿ ಬರುತ್ತಿದ್ದಾಗಲೆ ಸರೂ ಅವರನ್ನು ಗುರುತಿಸಿ, ಕೂಡಲೆ ಎದ್ದು ಅಡುಗೆಮನೆಗೆ ತೆರಳಿ, ಕಾಫಿಯನ್ನು ಬಿಸಿ ಮಾಡಿ ತಂದಳು. ಜಾನಕೀಬಾಯಿ ಅಲ್ಲಿಯೇ ಸೋಫಾದ ಮೇಲೆ ಕೂತರು ಕಾಫಿಯನ್ನು ಕೈಗಿತ್ತು ಹೊರಡಲು ಸರೂ ಒಂದು ಹೆಜ್ಜೆ ಮುಂದೆ ಇಟ್ಟಳು. 'ಸರೂ........' ಎಂದು ಜಾನಕೀಬಾಯಿ ಕೂಗಿದರು. ಧ್ವನಿ ಬಿರುಸಾಗಿತ್ತು. ಸರೂ ಕೂಡಲೆ ತಿಳಿದಳು, ಈಗ ತನ್ನ ವಿಚಾರಣೆ ನಡೆಯ ತಕ್ಕದ್ದು ಎಂದು. ಯಜ್ಞಪಶುವಿನಂತೆ, ಭಯದಿಂದ ಕಂಪಿಸುತ್ತಾ ಅಲ್ಲಿಯೇ ನಿಂತಳು.

"ಮಧ್ಯಾಹ್ನ ಎಲ್ಲಿಗೆ ಹೋಗಿದ್ದೆ, ಕಾಣಲೇ ಇಲ್ಲವಲ್ಲಾ?"

"ಎಲ್ಲಿಯೂ ಇಲ್ಲ, ಇಲ್ಲೇ ರೂಮಿನಲ್ಲಿದ್ದೆ." ತಡವರಿಸುತ್ತಾ ನುಡಿದಳು ಸರೂ.

"ನೋಡು ಸರೂ, ನಾನು ಹೇಳುವೆ, ಈ ನಿನ್ನ ನಡತೆ ಸರಿಯಲ್ಲ. ಇಲ್ಲಿ ನೀವಿಬ್ಬರೇ ಅಲ್ಲ ಇರುವುದು. ಇದು ತುಂಬಿದ ಮನೆ ತಿಳಿಯಿತೆ? ಅತ್ತೆ, ಮಾವ

ಎಲ್ಲರನ್ನೂ ಗೌರವದಿಂದ ಕಾಣಬೇಕು. ಅವರ ಸಮಯಕ್ಕೆ ಸರಿಯಾಗಿ ಅವರಿಗೆ ಬೇಕಾದ್ದು ಒದಗಿಸಬೇಕು. ಅದು ಬಿಟ್ಟು ಯಾವಾಗ ಅಂದರೆ ಆವಾಗ, 'ನಾನು ಗಂಡನ ಜೊತೆ ಚಕ್ಕಂದ ಮಾಡಿಕೊಂಡು ತಿರುಗುತ್ತೇನೆ' ಅಂದರೆ, ಅದು ಈ ಮನೆಯಲ್ಲಿ ಸಾಧ್ಯವಿಲ್ಲ. ಗಂಟೆ ಮೂರು ಆಗಿದೆ. ನಾನು ದಿನಾ ನೀನು ಮಾಡುವಂತೆ, ಮಾಡುವೆ ಎಂದು ಸುಮ್ಮನಿದ್ದೆ. ಅವರು ಎದ್ದು ಕಾಫಿ ಕೇಳುತ್ತಾರೆ. ಅಲ್ಲಿ ಹೋಗಿ ನೋಡಿದರೆ ಏನಿದೆ ಮಣ್ಣು? ಕೋಮಲಮ್ಮ ಮನೆಗೆ ಬಂದಿದ್ದರು ಪುಸ್ತಕ ಕೇಳಲು. ಎಲ್ಲಿ ಹುಡುಕಿದರೂ ಇಲ್ಲವೇ ಇಲ್ಲಾ. 'ನಿಮ್ಮ ಸೊಸೆನ್ನೇ ಕೇಳಿ, ಅವಳೇನಾದರೂ ತೆಗೆದಿರಬಹುದು' ಅಂದರು. ನಿನ್ನನ್ನು ಹೇಗೆ ಕೇಳೋದು? ರೂಮಿನಲ್ಲಿ ಜುಂ ಅಂತ ಮಲಗಿದ್ದೆ ರಾಣಿಯ ಹಾಗೆ. 'ಇಲ್ಲಮ್ಮಾ ಅವಳು ರೂಮಿನಲ್ಲಿದ್ದಾಳೆ. ಬಂದ ಮೇಲೆ ಕೇಳುತ್ತೇನೆ.' ಅಂದೆ. ಅವರೆದುರಿಗೆಲ್ಲಾ ನನಗೇ ತಲೆ ತಗ್ಗಿಸುವ ಹಾಗಾಯಿತು. 'ಇದೇನಮ್ಮಾ ಸೊಸೇನ್ನಾ ಹೀಗೆ ಬಿಟ್ಟಿದ್ದೀರಿ!' ಅಂತ ಅವರೇ ಆಶ್ಚರ್ಯಪಟ್ಟರು. ನಾನೂ ಹೋಗಲೀ ಅಂತ ಯಾವ ಮಾತಿಗೂ ಬರದೇ ಹೋದರೆ ನಿನ್ನ ಮನ ಬಂದಂತೆ ಕುಣಿಯಲು ಶುರು ಮಾಡಿದ್ದೀಯಲ್ಲಾ? ಇದೆಲ್ಲಾ ನನಗೆ ಸರಿ ಬೀಳುವುದಿಲ್ಲ ಸರೂ! ನಾನು ಪದೇ ಪದೇ ಹೇಳಲು ಬರುವುದಿಲ್ಲ."

ಸರೂ ತಲೆ ತಗ್ಗಿಸಿ ಕೇಳುತ್ತಲೇ ಇದ್ದಳು. ಏನಾದರೂ ಹೇಳಿದರೆ ಇನ್ನೂ ಅವರ ಕೋಪ ಹೆಚ್ಚುತ್ತದೆ ಎಂದುಕೊಂಡು, ಯಾವ ಮಾತನ್ನೂ ಆಡದೆ, ಒಳಗೆ ಹೋದಳು. ತುಂಬಿ ಬಂದ ಕಣ್ಣೀರು, ಕಣ್ಣಾಲಿಗಳ ದಂಡೆಗೆ ಬಂದು ಅಪ್ಪಳಿಸಿದರೂ ಹೊರಚೆಲ್ಲದೆ ಅಲ್ಲಿಯೇ ಇನ್ನೂ ನಿಂತಿತ್ತು.

ಮಧ್ಯಾನ್ಹ ರೂಮಿಗೆ ಹೋದರೆ ತಾನೇ ಅವೆಲ್ಲಾ ಕಷ್ಟ. ಹೋಗದೇ ಇದ್ದರೆ ಯಾವ ತಂಟೆಯೂ ಇರುವುದಿಲ್ಲ. ಇತ್ತ ಗಂಡನಿಗೂ ಹೇಳಲಾರದೆ, ಅತ್ತೆಗೂ ತಿಳಿಸಲಾರದೆ, ಚಡಪಡಿಸಿದಳು ಸರೂ. ತುಂಬಿದ ಸಂಸಾರದಲ್ಲಿ ಕೆಲಸಕ್ಕೆ ಕಡಮೆ ಏನೂ ಇರಲಿಲ್ಲ. ಮನೆಯ ಧೂಳು ಒರಸುತ್ತಲೋ, ಸಾಮಾನಿನ ಡಬ್ಬಿಗಳನ್ನು ಒರೆಸುತ್ತಲೋ, ತೊಳೆಯುತ್ತಲೋ, ಯಾವುದಾದರೂ ಕೆಲಸ ಹುಡುಕಿಕೊಂಡು ಒಳಗೇ ಇರುತ್ತಿದ್ದಳು ಸರೂ. ಮಾಧವ ಕೇಳಿದರೆ ಏನೋ ನೆಪ ಹೇಳಿ ಮಾತು ಹಾರಿಸುತ್ತಿದ್ದಳು. ಈಚೆಗೆ ಮಾಧವ ಸುಧಾರಿಸಿದ್ದ. ಸರೂವಿನ ಬಗ್ಗೆ ಅವನಲ್ಲಿ ಅನುರಾಗ ಕಡಿಮೆಯಾಗಿ ಪ್ರೀತಿ ಮೂಡಿತ್ತು.

ಸರೂ ಅತ್ತೆಯ ಮನೆಗೆ ಹೋದ ನಂತರ, ರಂಗಮ್ಮನವರಿಗೆ ಕಾಲ ಕಳೆಯುವುದೇ ಕಷ್ಟವಾಗಿ ತೋರಿತು. ಕೂತಾಗ, ನಿಂತಾಗ, ಮಲಗಿದಾಗ ಅವರಿಗೆ ಸರೂನ ಧ್ಯಾನವೇ ಆಗಿತ್ತು. ಯಾವ ಅಡುಗೆಯನ್ನೇ ಮಾಡಲಿ "ಸರೂಗೆ ಇದು ಎಷ್ಟು ಇಷ್ಟ! ಪಾಪ ಅಲ್ಲಿ ಏನು ತಿನ್ನುತ್ತಾಳೋ, ಮಾಡುತ್ತಾಳೋ?" ಎನ್ನುತ್ತಿದ್ದರು. ಗೋವಿಂದರಾಯರಿಗೆ ಕೆಲಸ ಇಷ್ಟೇ ಇತ್ತು. ಅವರು ಬೆಳಿಗ್ಗೆ ಹತ್ತರ ವೇಳೆಗೆ ಹೋದವರೆ ಮನೆಗೆ ಬರುತ್ತಿದ್ದುದು ಸಂಜೆ ಆರು ಗಂಟೆ. ರಂಗಮ್ಮನವರಿಗೆ ಮಾತ್ರ ಹೊತ್ತೇ ಹೋಗುತ್ತಿರಲಿಲ್ಲ. ಇಷ್ಟು ದಿನವೂ ಸರೂ ಇರುತ್ತಿದ್ದಳು. ಅವಳ ಜೊತೆ ಮಾತುಕತೆಯಿಂದ ಕಾಲ ಕಳೆಯುತ್ತಿತ್ತು. ತೀರ ಬೇಸರವಾದರೆ ಸರೂ ಕತೆಯ ಪುಸ್ತಕಗಳನ್ನು ಓದಿ ಹೇಳುತ್ತಿದ್ದಳು. 'ಅತ್ತೇ, ಅತ್ತೇ' ಎಂದು ಅರೆಗಳಿಗೆಯೂ ಬಿಡದೆ ಜೊತೆಯಲ್ಲಿಯೇ ಇದ್ದ ಸರೂ ಈಗ ಇಲ್ಲವಾದ್ದರಿಂದ ಅವರಿಗೆ ಬಹಳ ದುಃಖವಾಗುತ್ತಿತ್ತು. ಹಾಸಿಗೆಯ ಮೇಲೆ ಮಲಗಿದಾಗಲಂತೂ ಅವಳ ನೆನಪು ಬಂದು ಅತ್ತೇಬಿಡುತ್ತಿದ್ದರು ರಂಗಮ್ಮ. ತಮಗೇ ಅಂಟಿಕೊಂಡು, ಒಂದೇ ಹೊದಿಕೆಯಲ್ಲಿ ಮಲಗುತ್ತಿದ್ದ ಸರೂವನ್ನು ಜ್ಞಾಪಿಸಿಕೊಂಡು ಈಗ ಒಬ್ಬರೇ ಮಲಗಬೇಕಲ್ಲಾ ಎಂದು ಚಿಂತಿಸುವರು.

ಗೋವಿಂದರಾಯರಿಗೂ ಬಹಳ ಬೇಸರವಾಗಿತ್ತು. ತಮ್ಮವಳೇ ಆದ ಸರೂವನ್ನು ಅತ್ತೆಯ ಮನೆಗೆ ಕಳಿಸಿ ಬಂದ ಮೇಲೆ ಮೂರು ನಾಲ್ಕು ದಿನ ಅವರ ಚಿತ್ತವೇ ಸರಿಯಾಗಿರಲಿಲ್ಲ. ಯಾವುದಕ್ಕೂ, ಅವರ ಬಾಯಲ್ಲಿ ಸರೂವಿನ ಹೆಸರೇ ಸಿದ್ಧವಾಗಿರುತ್ತಿತ್ತು. ಲೆಕ್ಕ ಬರೆಯುತ್ತಾ ಕುಳಿತವರು 'ಸರೂ ಈ ದಿನ ತಾರೀಖು ಎಷ್ಟು ಮಗೂ?' ಎಂದು ಮರೆತು ಕೇಳುವರು. ಕೂಡಲೇ ಅವಳು ಅತ್ತೆಯ ಮನೆಯಲ್ಲಿರುವುದನ್ನು ಜ್ಞಾಪಿಸಿಕೊಂಡು 'ನನ್ನ ಬುದ್ಧಿಗೆ ಏನು ಬಂತು ಕೇಡು.' ಎಂದುಕೊಂಡು ಸುಮ್ಮನಾಗುತ್ತಿದ್ದರು.

ರಂಗಮ್ಮ ಹೂಬತ್ತಿ ಮಾಡುತ್ತಾ ಕೂತಿದ್ದರು. ಗೋವಿಂದರಾಯರು ಅದೇ ತಾನೇ ಅಂಗಡಿಯಿಂದ ಬಂದವರು ಹಾಗೆಯೇ ಅಡ್ಡಾಗಿದ್ದರು.

"ಸರೂನ್ನ ಕಳಿಸಿ ಆಗಲೇ ಎರಡು ತಿಂಗಳಾಯಿತಲ್ಲವೆ ? ಕರೆದುಕೊಂಡು ಬಾ, ಒಂದು ಸ್ವಲ್ಪ ದಿನವಿಟ್ಟುಕೊಂಡು ಕಳಿಸೋಣ. ಪಾಪ, ಇಲ್ಲದಿದ್ದರೆ ಮಗೂ ಜರೆದುಕೊಳ್ಳುತ್ತಾಳೆ." ಎಂದು ರಂಗಮ್ಮ ಹೇಳಿದರು.

" ಯಾವಾಗಲಾದರೂ ಯಾಕೆ, ಈಗಲೇ ಹೋಗಿ ಕೇಳಿ ಬರುತ್ತೇನೆ. " ಎಂದು ಗೋವಿಂದರಾಯರು ಕೋಟು, ಪೇಟಾ ಧರಿಸಿ ಹೊರಟೇಬಿಟ್ಟರು.

" ಮಕ್ಕಳೂ ಅನ್ನುವುದು ಹೆಚ್ಚು. ಹೇಗಿದ್ದವನೂ ಮಗಳನ್ನು ಕರೆದು ತರಲು ಎಷ್ಟು ಆತುರವಾಗಿದ್ದಾನೆ!" ಎಂದುಕೊಂಡು ರಂಗಮ್ಮ ಬುಟ್ಟಿಯನ್ನು ಎತ್ತಿ ಒಳಗೆ ನಡೆದರು.

ಗೋವಿಂದರಾಯರು ಮಗಳ ಮನೆಯನ್ನು ತಲುಪಿದಾಗ ಎಂಟರ ಸಮಯವಾಗಿತ್ತು. ಪರಸ್ಪರ ಕುಶಲ ವಾರ್ತೆಗಳಾದ ಮೇಲೆ, ಗೋವಿಂದ ರಾಯರು ತಾವು ಬಂದ ಉದ್ದೇಶವನ್ನು ತಿಳಿಸಿದರು. ಶ್ರೀಕಂಠಯ್ಯ ಒಂದೇ ಮಾತಿನಲ್ಲಿ "ನೋಡಿ ಸ್ವಾಮಿ, ಈ ಸೊಸೆಯರನ್ನು ಕಳಿಸುವುದು ಕರೆದು ಕೊಂಡು ಬರುವುದು, ಈ ಯಾವ ವಿಷಯಕ್ಕೂ ನಾನು ಹೋಗುವುದೇ ಇಲ್ಲ. ಏನಿದ್ದರೂ ಅತ್ತೆಯುಂಟು, ಸೊಸೆಯುಂಟು." ಎಂದು ಮುಗಿಸಿದರು.

ಜಾನಕೀಬಾಯಿಯವರನ್ನು ಕೇಳಿದಾಗ " ಅಗತ್ಯವಾಗಿ ಕರೆದುಕೊಂಡು ಹೋಗಿ. ನಮ್ಮ ಸುಂದರೂವನ್ನು ನಾವು ಕರೆದುಕೊಂಡು ಬರುವಂತೆಯೇ ಅಲ್ಲವೆ ?" ಎಂದು ಉದಾರ ಮನಸ್ಸಿನಿಂದ ಅನುಮತಿ ಕೊಟ್ಟರು.

" ಹಾಗಾದರೆ ಈಗಲೇ ಹೊರಡೋಣವೆ ?"

" ನೀವು ಅಷ್ಟರ ಮಟ್ಟಿಗೆ ಕರೆದುಕೊಂಡು ಹೋಗಲೇಬೇಕೆಂದಿದ್ದರೆ, ಕರೆದುಕೊಂಡು ಹೋಗಿ, ನನ್ನದೇನಿಲ್ಲಾ. ಆದರೆ, ಈಗಲೇ ಏನವಸರ ? ಊಟ ಮಾಡಿದ ಮೇಲೆ ಹೊರಟರಾಯಿತು." ಎಂದರು ಜಾನಕೀಬಾಯಿ.

" ಇಲ್ಲಾ, ಅಕ್ಕ ಮನೆಯಲ್ಲಿ ಅಡುಗೆ ಮಾಡಿ ಕಾದಿರುತ್ತಾಳೆ. ನಾನು ಈಗಲೇ ಹೊರಡಬೇಕು. "

" ಹೋಗಲೀ ಹಾಗಾದರೆ ಕಾಫಿಯನ್ನಾದರೂ ಕುಡಿದು ಹೋಗಿ." ಎಂದು ಕಾಫಿಯನ್ನು ತರಿಸಿ ಕೊಟ್ಟರು.

ಸರೂ ಬೇಗ ಬೇಗ ತನ್ನ ನಿತ್ಯ ಉಡುವ ತೊಡುವ ಬಟ್ಟೆಗಳನ್ನು ಬ್ಯಾಗಿಗೆ ಹಾಕಿ, ಹೊರಟು ನಿಂತಳು. ಮನೆಗೆ ಹೊಗುವ ಆತುರವಿದ್ದರೂ ಮಾಧವನಿಗೆ ಹೇಳದೇ ಹೊರಡಬೇಕಾಯಿತಲ್ಲಾ ಎಂದು ಯೋಚಿಸಿದಳು. ' ಎಲ್ಲರಿಗೂ ನಮಸ್ಕಾರ ಮಾಡಿ ಬಾಮ್ಮಾ' ಎಂದರು ಗೋವಿಂದರಾಯರು. ಸರೂ ಕೂಡಲೇ ಅತ್ತೆ, ಮಾವ ಇವರಿಗೆ ನಮಸ್ಕರಿಸಿ, ' ಹೋಗಿ ಬರುತ್ತೇನೆ' ಎಂದು ಹೇಳಿ ತಂದೆಯೊಡನೆ ಹೊರಟೇಬಿಟ್ಟಳು.

ಮನೆ ಸೇರಿದೊಡನೆಯೇ ಸರೂ ಅತ್ತೆಯ ಬಳಿಗೋಡಿದಳು. ರಂಗಮ್ಮ ಮಗಳನಪ್ಪಿ ಕಣ್ಣೀರು ಸುರಿಸಿದರು. "ಎಷ್ಟು ಸೊರಗಿ ಹೋಗಿಬಿಟ್ಟಿದ್ದೀಯಲ್ಲೇ

ಮಗೂ, ಒಂದೆರಡು ತಿಂಗಳಲ್ಲಿ !'' ಎಂದು ಅವರು ಕನಿಕರಿಸಿದರು. ಸರೂ ಆ ದಿನ ಊಟ ಮಾಡಿದಷ್ಟು ಎಂದಿಗೂ ಮಾಡಿರಲಿಲ್ಲ. ಅತ್ತೆಯ ಮಗ್ಗ ಲಲ್ಲೇ ಮಲಗಿಕೊಂಡು ಎಲ್ಲಾ ವಿಚಾರವನ್ನೂ ಹೇಳಿದಳು. ಆದರೆ ಮಾಧವನ ವಿಚಾರ ಹೆಚ್ಚಿಗೆ ಏನೂ ಹೇಳಲಿಲ್ಲ. ದಿನಕ್ಕೆ ಒಂದು ಬಗೆಯ ತಿಂಡಿಯಂತೆ ಮಾಡಿಕೊಟ್ಟರು; ವಾರಕ್ಕೆ ಎರಡು ಸಲ ಎಣ್ಣೆ ನೀರು ಹಾಕಿದರು; ಧಾರಾಳ ವಾಗಿ ಹಾಲು ಮೊಸರು ಬಡಿಸಿದರು; ರಂಗಮ್ಮನವರ ಆರೈಕೆಯಲ್ಲಿ ಸರೂ ಮೊದಲಿಗಿಂತ ಮೈ ಕೈ ತುಂಬಿಕೊಂಡು ಚೆನ್ನಾದಳು.

ಸರೂ ಬಂದ ಸಮಾಚಾರ ಕೇಳಿದ ಕೂಡಲೇ, ಸರೋಜಾ ಓಡಿ ಬಂದಳು. ಅಷ್ಟು ದಿನದ ಮಾತನ್ನೂ ಆ ದಿನವೇ ಹೇಳಬೇಕೆಂಬ ಆತುರ ಸರೋಜಳಿಗೆ. 'ಶೀಲಾ ಕಾಲೇಜಿಗೆ ಸೇರಿದಳು, ತನಗೆ ಸೇರಲಾಗಲಿಲ್ಲ. ಹಾಗೆ ಹೀಗೆ....' ಎಂದು ಎಲ್ಲವನ್ನೂ ಹೇಳಿದಳು. ಸರೂ ತನ್ನ ಹೊಸ ಜೀವನದ ವಿಷಯವನ್ನೆಲ್ಲಾ ಹೇಳಿದಳು. "ನಾನು ಇಲ್ಲಿ ಇರುವ ವರೆಗಾದರೂ ಬರುತ್ತಿರೂ ಸರೋಜಾ. ಆಮೇಲೆ ಗೊತ್ತೇ ಇದೆ, ನಾನೆಲ್ಲೋ ನೀನೆಲ್ಲೊ?" ಬಹಳ ಹೊತ್ತಿನವರೆಗೂ ಇದ್ದು ಸರೋಜಾ ಹೊರಟು ಹೋದಳು.

ಸರೂ ತಾಯಿಯ ಮನೆಗೆ ಬಂದು ನಾಲ್ಕು ದಿನಗಳಾಗಿತ್ತು. ರೂಮಿನಲ್ಲಿ ಕೂತು ಯಾವುದೋ ಪುಸ್ತಕವನ್ನೋದುತ್ತಿದ್ದವಳಿಗೆ ಬೀದಿಯ ಬಾಗಿಲು ತಟ್ಟಿದ ಶಬ್ದ ಕೇಳಿಬಂತು. ಇಷ್ಟು ಹೊತ್ತಿನಲ್ಲಿ ಯಾರು ಬರುತ್ತಾರೆ ಎಂದು ಕೊಂಡು ಬಾಗಿಲು ತೆರೆದರೆ ಎದುರಿಗೇ ನಿಂತಿದ್ದ ಮಾಧವ.

"ಬನ್ನಿ ಒಳಗೆ" ಎಂದು ಸರೂ ಮುಗುಳ್ನಗೆಯಿಂದ ಸ್ವಾಗತಿಸಿದಳು.

"ಏನು ನನಗೆ ಸುದ್ದಿಯನ್ನೂ ಕೊಡದೆ, ಓಡಿ ಬಂದುಬಿಟ್ಟೆಯಲ್ಲಾ?" ಮಾಧವ ಮಂಚದ ಮೇಲೆ ಕೂತುಕೊಳ್ಳುತ್ತಾ ಹೇಳಿದ.

"ನನಗೂ ಗೊತ್ತಿರಲಿಲ್ಲ ಹೊರಡುವುದು. ಅಣ್ಣಾ ಬಂದವರೇ ಹೊರ ಡೋಣಾ ಅಂತ ಕರೆದುಕೊಂಡು ಬಂದು ಬಿಟ್ಟರು. ಒಂದೇ ನಿಮಿಷ, ಬರುತ್ತೇನೆ, ಇರಿ." ಎಂದು ಸರೂ ಒಳಕ್ಕೋಡಿದಳು. ಅತ್ತೆಗೆ, ತನ್ನ ಪತಿ ಬಂದಿರುವುದನ್ನು ತಿಳಿಸಿ ಮತ್ತೆ ರೂಮಿಗೆ ಬಂದಳು. ಬರುವಾಗ ಸರೂ ಬಾಗಿಲನ್ನು ಹಾಗೆಯೇ ಮುಂದಕ್ಕೆ ಬಿಟ್ಟಳು.

"ಇದೇನು ನನಗೇ ಉಪದೇಶ ಕೊಡುತ್ತಿದ್ದ ನೀನು ಈಗ ನೀನೇ ನನ್ನಂತೆ ಆಚರಿಸುವೆ?"

"ಇದು ಅತ್ತೆಯ ಮನೆಯಲ್ಲ, ತಾಯಿಯ ಮನೆ ತಿಳಿಯಿತೆ?"

"ಪಾಪ, ನೀನು ಬಹಳಾ ಅತ್ತೆಗೆ ಹೆದರುವವಳು. ಅದಿರಲಿ ಈಗ ಎಲ್ಲಿಗೆ ಹೋಗೋಣಾ?"

"ನಿಮ್ಮ ಇಷ್ಟ ಬಂದ ಕಡೆಗೆ."

"ನೋಡು ಸರೂ, ನಾನು ಹೇಳುತ್ತೇನೆ. ನಿನಗೆ ಯಾವ ಯಾವ ಆಸೆ ಆಕಾಂಕ್ಷೆಗಳಿವೆ ಅವೆಲ್ಲಾ ನನಗೂ ಗೊತ್ತು. ನಿನಗೆ ದಿನಾ ವಾಕಿಂಗ್ ಕರೆ ದೊಯ್ಯಬೇಕು, ಸಿನೀಮಾಕ್ಕೆ ಹೋಗಬೇಕು, ಕ್ಲಬ್, ಮೀಟಿಂಗ್, ಸಭೆ, ಸತ್ಕಾರಕೂಟ ಅಂತ ತಿರುಗಬೇಕೂ ಅಂತ ಆಸೆ ಇದೆ. ನಿನ್ನ ಮನಸ್ಸು ಸಂತೋಷ ವಾಗಿರಬೇಕೂ ಅಂತ ನನಗೂ ಆಸೆ ಇದೆ. ಆದರೆ ಅದೆಲ್ಲಾ ಸಾಧ್ಯವಿಲ್ಲದುದ ಕ್ಕಾಗಿ ನಾನು ಸುಮ್ಮನಿದ್ದೇನೆ. ಒಂದು ಸಂಸಾರ ಅಂತಾ ನಾವಿರೋವಾಗ, ನಾವಿಬ್ಬರೇ ಸಿನೀಮಾಕ್ಕೆ ಹೋಗುತ್ತೀವಿ ಅಂದರೆ ಚೆನ್ನಾಗಿರುತ್ತದೆಯೇ? ಹೋದರೆ ಮನೆಯವರೆಲ್ಲಾ ಹೋಗಬೇಕು; ಅದಕ್ಕೆ ಹತ್ತುಹದಿನೈದುರೂಪಾಯಿ ಇಟ್ಟುಕೊಳ್ಳಬೇಕು. ಅಷ್ಟು ಹಣವೇನೂ ಸುಲಭದಲ್ಲಿ ಬರುವುದಿಲ್ಲ. ಅಂದ ಮೇಲೆ ನಾವು ಅದರ ಆಸೆಯನ್ನೇ ಬಿಡಬೇಕು. ನೀನು ಇಲ್ಲಿ ಇದ್ದೀಯಾ, ಇಲ್ಲೀ ಅಂದರೆ ನಾವಿಬ್ಬರೇ. ಎಲ್ಲಿಗೆ ಬೇಕಾದರೂ ಹೋಗಬಹುದು. ಇನ್ನು ಮೇಲೆ ನಾನು ದಿನಾ ಸಾಯಂಕಾಲ ವರ್ಕ್‌ಷಾಪ್ ಕೆಲಸ ಮುಗಿಸಿಕೊಂಡು ಆರು ಗಂಟೆಗೆ ಬರುತ್ತೇನೆ. ನಂತರ ಎಲ್ಲಿಯಾದರೂ ತಿರುಗಾಡಿಕೊಂಡು ಬರೋಣ ವಂತೆ. ಈಗ ಏಳು ಮತ್ತೆ, ಡ್ರೆಸ್ ಮಾಡಿಕೋ. ಯಾವುದಾದರೂ ಪಿಕ್ಚರ್‌ಗೆ ಹೋಗೋಣಾ."

"ಹಾಗಾದರೆ ನೀವು ಮನೆಗೆ ಹೋಗಲು ಹೊತ್ತಾಗುತ್ತದಲ್ಲಾ?"

"ಯಾಕೆ, ನಿಮ್ಮ ಮನೆಯಲ್ಲಿ ನನಗೆ ಅನ್ನ ಹಾಕುವುದಿಲ್ಲವೇನೂ?"

ಸರೂ ತನ್ನ ಪೆಚ್ಚು ಮಾತಿಗಾಗಿ ನಾಚಿಕೆಗೊಂಡಳು.

"ನೀನೇನೂ ಭಯಪಡಬೇಕಾಗಿಲ್ಲ ಸರೂ, ಅಮ್ಮನಿಗೂ ನಾನು ಹೇಳಿ ಬಂದಿದ್ದೇನೆ."

ರಂಗಮ್ಮ ಮನೆಗೆ ಅಳಿಯ ಅಪರೂಪವಾಗಿ ಬಂದಿರುವುದಕ್ಕಾಗಿ ಬಹಳ ಸಂತೋಷಗೊಂಡರು. ಬೇರೆ ಯಾವುದಾದರೂ ತಿಂಡಿ ಮಾಡಲು ಹೆಚ್ಚು ಸಮಯವಿಲ್ಲವಾದ್ದರಿಂದ ಬರೀ ಸಜ್ಜಿಗೆ ಮತ್ತು ಕಾಫಿ ಮಾಡಿದರು. ಸರೂ ತಿಂಡಿಯನ್ನು ರೂಮಿಗೆ ತೆಗೆದುಕೊಂಡು ಹೋಗಿ ತಾನೂ ಜೊತೆಯಲ್ಲಿಯೆ

ಕುಳಿತು ಸಹಭಾಗಿಯಾದಳು.

ಅಂದು ಹೆಚ್ಚು ಆಸ್ಥೆಯಿಂದ ತಲೆ ಬಾಚಿಕೊಂಡಳು. ಮುಖ ತೊಳೆದು, ತೆಳುವಾಗಿ ಪೌಡರ್ ಹಚ್ಚಿ ಸಣ್ಣದಾಗಿ ಹಣೆಯ ನಡುವೆ ಕುಂಕುಮ ಇಟ್ಟಳು, ತಿಳಿ ನೀಲಿ ಬಣ್ಣದ ಜಾರ್ಜೆಟ್ ಸೀರೆಯುಟ್ಟು ಅದಕ್ಕೆ ಒಪ್ಪುವ ಕುಪ್ಪುಸವನ್ನು ತೊಟ್ಟು, ಸರೂ ಸಿದ್ಧಳಾದಳು.

ಮಾಧವ ಅವಳನ್ನೇ ಎವೆಯಿಕ್ಕದೆ ನೋಡುತ್ತಿದ್ದ. ನಸುನಗುತ್ತಾ ಕೇಳಿದಳು ಸರೂ "ಅದೇನು ಹಾಗೆ ನೋಡುವಿರಿ, ಹೊಸಬರನ್ನು ನೋಡುವ ಹಾಗೆ?"

"ಪರವಾಗಿಲ್ಲ, ನೀನೂ ಸಿಂಗರಿಸಿಕೊಂಡರೆ ಚೆನ್ನಾಗಿ ಕಾಣುವೆ!" ಎಂದು ಮಾಧವ ಮೆಚ್ಚಿಕೊಂಡ.

"ಅತ್ತೇ, ಅವರು ಈ ದಿನ ಇಲ್ಲಿಯೇ ಇರುತ್ತಾರಂತೆ. ನಾವು ಸಿನೀಮಾಕ್ಕೆ ಹೋಗಿ ಬರುತ್ತೇವೆ." ಎಂದು ಅತ್ತೆಗೆ ಹೇಳಿ ಹೊರಟಳು ಸರೂ. ರಂಗಮ್ಮ ಬಾಗಿಲ ವರೆಗೆ ಬಂದು ಅವರು ನಡೆದು ಹೋಗುವುದನ್ನು ನೋಡುತ್ತಾ ನಿಂತಿದ್ದರು. "ಸರೂವಿಗೆ ತಕ್ಕ ಗಂಡ ಮಾಧವ! ಮಗು ಎಲ್ಲಿಯಾದರೂ ಸುಖವಾಗಿರಲಿ!" ಎಂದುಕೊಂಡು ಒಳಗೆ ಹೋದರು.

ಸರೂ ತನ್ನ ಗಂಡನ ಒಳ್ಳೆಯತನವನ್ನು ನೋಡಿ ಹಿಗ್ಗಿಹೋದಳು. 'ಅವರಿಗೆ ನನ್ನಲ್ಲಿ ಪ್ರೀತಿ ಇದೆ, ನನ್ನ ಆಸೆಗಳನ್ನೆಲ್ಲಾ ತೀರಿಸಲು ಇಷ್ಟವೂ ಇದೆ, ಆದರೆ ಅಲ್ಲಿ ಸಾಧ್ಯವಿಲ್ಲದ್ದಕ್ಕಾಗಿ ಸುಮ್ಮನಿದ್ದಾರೆ' ಎಂದುಕೊಂಡಳು.

ರಾತ್ರಿ ಊಟ ಮಾಡುವಾಗ ಗೋವಿಂದರಾಯರು ಅಳಿಯನೊಡನೆ ಅನೇಕ ವಿಷಯವಾಗಿ ಮಾತಾಡಿದರು. ಮಾಧವ, ತಮ್ಮ ಕಾರ್ಖಾನೆಯ ಕೆಲಸ, ತೊಂದರೆ-ತೊಡಕುಗಳು ಎಲ್ಲವನ್ನೂ ಹೇಳಿದ. ವ್ಯಾಪಾರದಲ್ಲಿ ಅವನಿಗಿರುವ ಚಾಣಾಕ್ಷತೆಯನ್ನು ನೋಡಿ, ಆನಂದಿಸಿದರು. ಅಂದು ರಾತ್ರಿ ಅಲ್ಲಿಯೇ ಕಳೆದು ಮರುದಿನ ಬೆಳಿಗ್ಗೆ ತಮ್ಮ ಮನೆಗೆ ಮಾಧವ ಹೊರಟುಹೋದ

ಶ್ರೀಕಂಠಯ್ಯ ವರ್ಕ್‌ಶಾಪಿನ ಆಫೀಸ್ ರೂಮಿನಲ್ಲಿ ಕಾಗದ-ಪತ್ರಗಳನ್ನು

ಹರವಿಕೊಂಡು ಕೂತಿದ್ದರು. ಆ ದಿನದ ಪೋಸ್ಟಿನಲ್ಲಿ ಒಂದು ಕಾಗದ ಬಂದು ಅವರನ್ನು ಯೋಚನಾಪರರನ್ನಾಗಿ ಮಾಡಿತ್ತು. ಮಾಧವ ಪ್ಯಾಂಟು ಧರಿಸಿ ಹೊರಗೆ ಹೊರಡಲು ಸಿದ್ಧನಾಗಿ, ರೂಮಿಗೆ ಬಂದ.

"ಈ ಕಾಗದವನ್ನು ನೋಡಿದೆಯಾ ಮಾಧು?"

"ಯಾವುದು ? "

" ಅದೇ ಆ ಲೇಬರ್ ಕಮೀಷನ್‌ನಿಂದ ಬಂದಿದೆ. ನಮ್ಮ ಕೆಲಸಗಾರರೆಲ್ಲಾ ತಮ್ಮದೇ ಆದ ಒಂದು ಅಸೋಶಿಯೇಷನ್ ಮಾಡಿಕೊಂಡಿದ್ದಾರಂತೆ. ಅದಕ್ಕೆ ಆ ತಂಗವೇಲು ಪ್ರೆಸಿಡೆಂಟ್; ಲೋಕನಾಥ ಸೆಕ್ರೆಟರಿ. ಇದನ್ನು ನಾವು ಅನುಮೋದಿಸಬೇಕಂತೆ."

ಮಾಧವ ಕಾಗದವನ್ನು ಆಮೂಲಾಗ್ರವಾಗಿ ಓದಿದ. ಆದರೆ ಯಾವ ಮಾತನ್ನೂ ಆಡಲಿಲ್ಲ.

"ಏನಾದರಾಗಲಿ, ಈ ಸಂಜೆ ಒಂದು ಮೀಟಿಂಗ್ 'ಕಾ:ಲ್ ಫಾ:ರ್' ಮಾಡು. ನಾನೂ ಅವರಿಗೆ ಹೇಳಿ ನೋಡುತ್ತೇನೆ." ಎಂದು ಶ್ರೀಕಂಠಯ್ಯ ಹೇಳಿದರು.

ಐದು ಗಂಟೆಗೆ ಬೆಲ್ ಆಯಿತು. ಕೆಲಸ ಮುಗಿಸಿ ಆಳುಗಳೆಲ್ಲಾ ಹೊರಬಂದರು. 'ಈಗ ಮೀಟಿಂಗ್ ಇದೆ, ಯಜಮಾನರು ಮಾತಾಡುತ್ತಾರಂತೆ. ಯಾರೂ ಮನೆಗೆ ಹೋಗಬಾರದು.' ಎಂದು ಗುಮಾಸ್ತ ಎಲ್ಲರಿಗೂ ತಿಳಿಸಿದ.

ಅಲ್ಲಿಯ ಆವರಣದಲ್ಲಿಯೇ ಎಲ್ಲರೂ ಬಂದು ಕುಳಿತರು. ಶ್ರೀಕಂಠಯ್ಯ, ಮಾಧವ, ಇವರಿಗೆ ಎರಡು ಕುರ್ಚಿಗಳು ಹಾಕಲ್ಪಟ್ಟಿದ್ದವು. ನಿಶ್ಶಬ್ದವಾದ ವಾತಾವರಣ ಹಬ್ಬಿತ್ತು. ಶ್ರೀಕಂಠಯ್ಯ ಬಂದು ನಿಂತು, ಮಾತನಾಡತೊಡಗಿದನು: "ನೀವು ನಮ್ಮ ಕಾರ್ಖಾನೆಯ ಕೆಲಸಗಾರರು ಸೇರಿ ಒಂದು ಸಂಘವನ್ನು ಏರ್ಪಡಿಸಿಕೊಂಡಿರುವುದಾಗಿ ತಿಳಿಯಬರುತ್ತದೆ. ಅದಕ್ಕೆ ನನ್ನ ಅಭಿವಂದನೆಗಳು. ನೀವು ಹೀಗೆ ಒಗ್ಗಟ್ಟಾಗಿ ಇರುವುದು ನನಗೂ ಬಹಳ ಸಂತೋಷದ ವಿಷಯ. ಆದರೆ ನಮ್ಮ ಕೆಲಸಗಾರರಲ್ಲದವರು, ನಿಮ್ಮ ಪ್ರೆಸಿಡೆಂಟರು, ಸೆಕ್ರೆಟರಿಗಳಾಗುವುದು ನನಗೆ ಸರ್ವಥಾ ಇಷ್ಟವಿಲ್ಲ. ನಿಮ್ಮಲ್ಲಿಯೇ ತಿಳಿದವರನೇಕರಿದ್ದೀರಿ, ನೀವುಗಳೇ ಆಗಿ. ನಾನು ಬೇಡವೆನ್ನುವುದಿಲ್ಲ. ಆದರೆ ಆ ಕಮ್ಯೂನಿಸ್ಟ್ ಪಾರ್ಟಿಯವರು ಬೇಡ. ಅವರು ಬಂದರೆ ಇಲ್ಲದ ತೊಂದರೆ ತೊಡಕುಗಳಾಗುತ್ತವೆ. ಈ ಇಪ್ಪತ್ತು ವರ್ಷದಿಂದ ನೀವೂ, ನಾವೂ ಒಂದೇ ಬಗೆ

ಯಲ್ಲಿಯೇ ಅನುಸರಿಸಿಕೊಂಡು ಹೋಗುತ್ತಿದ್ದೇವೆ. ನಮ್ಮ ಈ ಮಧುರ ಬಾಂಧವ್ಯದ ನಡುವೆ ಅವರು ಪ್ರವೇಶಿಸುವುದು ಬೇಡ. ನಿಮ್ಮಲ್ಲಿಯೇ ಯಾರಾದರೂ ಪ್ರೆಸಿಡೆಂಟ್ ಆಗಿ, ನನಗೆ ಸಂತೋಷ." ಎಂದು ಅನೇಕ ಬಗೆಯಲ್ಲಿ ತಿಳಿಸಿ ಹೇಳಿದರು. ಎಲ್ಲರಿಗೂ ಸರಿಯಾಗಿ ತಿಳಿಯುವಂತೆ, ತಮಿಳು, ಕನ್ನಡ, ತೆಲಗು ಎಲ್ಲಾ ಭಾಷೆಯಲ್ಲಿಯೂ ವಿವರಿಸಿ ಹೇಳಿದರು. ಯಾರೂ ಮಾತ ನಾಡಲಿಲ್ಲ. ಕಡೆಗೆ ಸ್ವಾಮಿನಾಥ ಎದ್ದು ನಿಂತು ಹೇಳಿದ: "ತಂಗವೇಲು ನಮಗೆ ಹಿರಿಯರು. ಅವರು ನಮಗೆ ಗುರುಗಳಂತಿದ್ದಾರೆ. ಅವರು ನಮ್ಮ ಕಷ್ಟ ಸುಖ ಗಳನ್ನು ಅರಿತವರು. ನಮ್ಮ ಕಷ್ಟಪರಿಹಾರಕ್ಕೆ ನಿವಾರಣೋಪಾಯವನ್ನೂ ಅವರೇ ತಿಳಿಸುತ್ತಾರೆ. ಅವರು ಎಂದರೆ ನಮಗೆ ದೇವರಂತಿದ್ದಾರೆ. ನಮ್ಮ ನಮ್ಮ ಜನವೆಲ್ಲಾ ಅವರಿಗೆ ತಲೆಬಾಗುತ್ತಾರೆ. ಅವರೇ ಪ್ರೆಸಿಡೆಂಟರು, ಅವರನ್ನು ಬಿಟ್ಟು ಬೇರೆ ಯಾರೂ ಆಗುವುದು ಸಾಧ್ಯವೇ ಇಲ್ಲ." ಇಷ್ಟು ಹೇಳಿ ಅವನು ಕೂತುಕೊಂಡ.

ಮಾಧವ ತನಗೆ ತಿಳಿದ ರೀತಿಯಲ್ಲಿ, ತಂದೆಯ ಅಭಿಪ್ರಾಯವನ್ನೇ ಅನುಮೋದಿಸಿದ. ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ವಿಧಿ ಇಲ್ಲ. ದೆಯೇ ಶ್ರೀಕಂಠಯ್ಯ ಅವರ ಅಭಿಪ್ರಾಯವನ್ನೇ ಅನುಮೋದಿಸಬೇಕಾಗಿ ಬಂತು. ತಮ್ಮ ಮೊದಲನೆಯ ವಿಜಯದಿಂದ ಹಿಗ್ಗುತ್ತಾ, ಕೆಲಸಗಾರರೆಲ್ಲರೂ ಹೊರಟುಹೋದರು.

ಆ ತಂಗವೇಲುವಿನ ಕೈಕೆಳಗೆ ಇವರು ಮುಂದೆ ಇನ್ನೂ ಏನೇನು ತೊಂದರೆ ಕೊಡುವರೋ ಎಂಬ ಯೋಚನೆಯಲ್ಲಿಯೇ ಮನೆಗೆ ತೆರಳಿದರು ಶ್ರೀಕಂಠಯ್ಯ. ಅವರ ಮನಸ್ಸು ವ್ಯಥೆಗೊಂಡಿತ್ತು. ಹೊರಗೆ ಎಲ್ಲಿಯೂ ಹೋಗದೆ ನೇರವಾಗಿ ರೂಮಿಗೆ ಹೋಗಿ, ಸುಮ್ಮನೇ ಮಲಗಿದರು. ಅವರನ್ನು ಮಾತಾಡಿಸುವ ಧೈರ್ಯ ಮಾಧವನಿಗೂ ಇರಲಿಲ್ಲ.

ಸರೂವಿಗಾಗಿ ಮಾಧವ ಅಡುಗೆಮನೆ ನೋಡಿದ, ರೂಮು ನೋಡಿದ. ಎಲ್ಲಿಯೂ ಇರಲಿಲ್ಲ. ಹಾಗೆಯೇ ನೋಡುತ್ತ ಬಂದಾಗ ಹಿತ್ತಲ ಕಡೆಯ ಮೆಟ್ಟಿಲು ಮೇಲೆ ಸರೂ ಕುಳಿತಿದ್ದುದು ಕಾಣಬಂತು. ಮಾಧವ ಶಬ್ದಮಾಡದೆ ಅವಳ ಹಿಂದೆಯೇ ಹೋಗಿ ನಿಂತ. ಸರೂ ಅಳುತ್ತಿದ್ದಳು. ಕಣ್ಣೀರು ಧಾರೆ ಯಾಗಿ ಹರಿಯುತ್ತಿತ್ತು.

"ಏಕೆ ಅಳುವೆ, ಸರೂ?" ಎನ್ನುತ್ತಾ ಅವಳ ಬಳಿ ಕೂತುಕೊಂಡ.

ಸರೂ ಕತ್ತೆತ್ತಿ ನೋಡಿದಳು ಮಾತ್ರ; ಉತ್ತರ ಕೊಡಲಿಲ್ಲ.

"ಹೇಳುವುದಿಲ್ಲವೇ ಸರೂ? ನನಗೂ ಹೇಳಬಾರದೇನೂ? ನಾನೇನು ಹೊರಗಿನವನೇನು?" ಮಾಧವ ಪ್ರೀತಿಯಿಂದ ಕೇಳಿದ. ಸಮೀಪಕ್ಕೆ ಸರಿದು ಅವಳ ಕಣ್ಣೀರನ್ನೂ ಒರಸಿ, ಅವಳ ತಲೆಯನ್ನು ನೇವರಿಸುತ್ತಾ ಕೇಳಿದ "ಅಮ್ಮ ಏನಾದರೂ ಅಂದಳೇ ?"

ಸರೂ ಬಿಕ್ಕುತ್ತಾ ಹೇಳಿದಳು : "ಮಧ್ಯಾಹ್ನ, ಅನಿಲ ಬಂದಿದ್ದ, ನನ್ನ ಸ್ನೇಹಿತೆ ಸರೋಜಳ ತಮ್ಮ. ಸರೋಜಳಿಗೆ ವರ ಗೊತ್ತಾಗಿದೆಯಂತೆ, ನಾಳೆ ಲಗ್ನ ಪತ್ರಿಕೆ. ನನ್ನನ್ನು ಸಾಧ್ಯವಾದರೆ ಬರಬೇಕೆಂದು ಹೇಳಿ ಕಳಿಸಿದ್ದಳು.ಅವನು ಸ್ವಲ್ಪ ಹೊತ್ತು ಮಾತಾಡುತ್ತಾ ನಿಂತಿದ್ದ. ಹಾಲಿನಲ್ಲಿಯೇ ಮುಕುಂದ, ಆನಂದ ಇಬ್ಬರೂ ತಿಂಡಿ ತಿನ್ನುತ್ತಿದ್ದರು. ಅವನೂ ಎದುರಿಗೆ ನಿಂತಿದ್ದ. ಅದ ರಿಂದ ಅವನಿಗೂ ಎರಡು ದೋಸೆ, ಕಾಫಿ ಕೊಟ್ಟು ಕಳಿಸಿದೆ. ನಾನೇನೂ ಯಾರಿಗೂ ಕಾಣದ ಹಾಗೆ ಕೊಡಲಿಲ್ಲ. ಆನಂದ ಅಲ್ಲಿಯೇ ಕೂತಿದ್ದ. ಅದಕ್ಕೆ ಅದಕ್ಕೆ...." ಸರೂ ಹೇಳಲಾರದೆ ತೊದಲಿದಳು.

"ಪೂರ್ತಿಯಾಗಿ ಹೇಳು ಸರೂ, ನಡೆದಿದ್ದನ್ನು."

"ಅಮ್ಮ ಅಷ್ಟಕ್ಕೇ ಕೋಪಗೊಂಡರು; 'ನಿನಗೆ ಹೇಳುವವರು ಕೇಳು ವವರು ಯಾರೂ ಇಲ್ಲ ಎಂದು ಕಾಣುತ್ತೆ. ಮನೆಗೆ ಬಂದವರಿಗೆಲ್ಲಾ, ತಿಂಡಿ ಕೊಡು, ಕಾಫಿ ಕೊಡು, ಮಡಿದು ತಂದು ಹಾಕೋವರು ಗಟ್ಟಿಯಾಗಿದ್ದಾ ರೆಂದು ಕಾಣುತ್ತೆ. ಆ ಹುಡುಗನೊಡನೆ ಎಷ್ಟು ಹೊತ್ತು ಮಾತಾಡುತ್ತಾ, ನಲಿಯುತ್ತಾ ನಿಂತಿರೋದು? ಎಲ್ಲೀ ಅಂದರಲ್ಲಿ ಮಾತಾಡುತ್ತಾ ನಿಂತಿರೋದು ನನಗೆ ಸರಿಬೀಳುವುದಿಲ್ಲ. ಆಮೇಲೆ ನಾನು ಅಂದೆ ಅಂತ ಆಕ್ಷೇಪಣೆ ಮಾಡ ಬೇಡಾ. ಇನ್ನು ಮೇಲೆ ಮನೆಯಿಂದ ಏನು ಕೊಡಬೇಕಾದರೂ, ನನ್ನ ಕೇಳಿ ಕೊಡಬೇಕು ತಿಳಿಯಿತೆ? ನನ್ನ ಮಕ್ಕಳೇ ನನ್ನನ್ನುಕೇಳದೆ ಏನೂ ಮಾಡುವುದಿಲ್ಲ. ಅಂಥಾದರಲ್ಲಿ ನೆನ್ನೆ ಮೊನ್ನೆ ಬಂದ ನೀನು ಇಷ್ಟು ಯಜಮಾನಿಕೆ ವಹಿಸುವುದು ಸರಿಯಲ್ಲ!' ಅಂತ ಇನ್ನೂ ಏನೇನೋ ಅಂದರು. ಆ ದಿನ ಸಂಜೆ ಬೇಜಾರಾಗಿ ಬೀದಿಯ ವೆರಂಡಾದಲ್ಲಿ ನಿಂತಿದ್ದಕ್ಕೆ ಅಂದರು. ಹೀಗೆ ಮಾಡಿದ್ದೆಲ್ಲಾ ತಪ್ಪಾದರೆ ಬಾಳುವುದು ಹೇಗೆ?" ಸರೂ ಮುಖವನ್ನು ಮುಚ್ಚಿ ಅತ್ತಳು.

"ಸಂಸಾರ ಅಂದ ಮೇಲೆ, ಒಂದು ಮಾತು ಬರುತ್ತೆ ಹೋಗುತ್ತೆ. ಅದನ್ನೇ ಅಷ್ಟು ಮನಸ್ಸಿಗೆ ಹತ್ತಿಸಿಕೊಂಡರೆ ಹೇಗೆ? ಒಂದು ವೇಳೆ ನಿನ್ನ ತಪ್ಪು ಎನಿ

ಲ್ಲದೇ ಹೋದರೂ ಅನ್ನಿಸಿಕೊಳ್ಳಬೇಕಾಗುತ್ತದೆ ನಿಜ. ಆದರೆ ದೊಡ್ಡವರು ಒಂದೆರಡು ಮಾತು ಅಂದರೆ ಅನ್ನಲಿ. ನಿನ್ನನ್ನೇ ನೀನು ತಿದ್ದಿಕೊ. ಅವು ಸಂತೋಷಗೊಳ್ಳುವ ಹಾಗೆ ಕೆಲಸ ಮಾಡು. ಎಲ್ಲರನ್ನೂ ನಿನ್ನಂತೆ ಮಾಡಿಕೋ. ಈ ಮನೆ ನನ್ನದು, ಇಲ್ಲಿರುವವರೆಲ್ಲಾ ನಮ್ಮವರು ಅನ್ನುವ ಒಂದು ಭಾವನೆ ಯಿಂದ ಕೆಲಸ ಮಾಡು. ಆಗ ನಿನಗೆ ಏನೂ ಕಷ್ಟ ಅಂತ ತೋರುವುದಿಲ್ಲ. ನನ್ನನ್ನು ಹೇಗೆ ಪ್ರೀತಿಸುವಿಯೋ ಹಾಗೆ ಎಲ್ಲರನ್ನೂ ಪ್ರೀತಿಸು. ಮೊನ್ನೆಯ ದಿನ, ನನ್ನ ಪ್ಯಾಂಟು ಒಗೆಯದೇ ಇದ್ದುದಕ್ಕಾಗಿ ನಾನೆಷ್ಟು ರೇಗಾಡಿದೆ? ನಿನ್ನನ್ನು ಎಷ್ಟು ಬೈದೆ? ನಾನು ನಿನ್ನವನಾಗಿದ್ದರಿಂದ, ನಾನು ಎಷ್ಟು ಅಂದರೂ ನಿನ್ನ ಮನಸ್ಸಿಗೆ ಅದು ಬೈಗುಳವಾಗಿ ತೋರಲಿಲ್ಲ. ಬದಲಾಗಿ ನೀನು ನಿನ್ನ ಕಾರ್ಯ ವನ್ನು ಸಕಾಲದಲ್ಲಿ ಮಾಡಲಿಲ್ಲವಲ್ಲಾ ಎಂದು ಎಷ್ಟು ವ್ಯಥೆಪಟ್ಟೆ ? ಹಾಗೆಯೇ ಅಮ್ಮನೂ ನಿನ್ನವಳು ಎಂಬ ಭಾವನೆ ನಿನ್ನಲ್ಲಿ ಮೂಡಿದ್ದರೆ, ಈಗ ಅಮ್ಮ ಅಂದಿದ್ದೂ ಏನೂ ದೊಡ್ಡ ವಿಷಯವಾಗಿ ಕಾಣುತ್ತಲಿರಲಿಲ್ಲ ಅಲ್ಲವೇ? ನೀನೇ ಯೋಚಿಸಿ ನೋಡು. ಹೇಳು ಸರೂ, ನಾನು ಹೇಳುವುದು ಸರಿಯಲ್ಲವೆ?" ಮಾಧವ ಸರೂವಿನ ಮುಖವನ್ನು ಮೇಲಕ್ಕೆ ಎತ್ತಿ ಕೇಳಿದ.

ಪತಿಯ ವಿಶಾಲವಾದ ಹೃದಯವನ್ನು ನೋಡಿ ಅವಳಿಗೆ ಅಪರಿಮಿತವಾದ ಆನಂದ ಉಂಟಾಯಿತು. ಮಾಧವ ಪುನಃ ಹೇಳಿದ: "ನೋಡು ಸರೂ, ದಿನ ವೆಲ್ಲಾ ಕೆಲಸದಲ್ಲಿ ತೊಳಲಿ, ಬಳಲಿ ಮನೆಗೆ ಬರುವ ಗಂಡಸು, ಹೆಂಡತಿಯಿಂದ ನಿರೀಕ್ಷಿಸುವುದು ಏನು ಗೊತ್ತೇ? ಪತ್ನಿಯ ಪ್ರೀತಿಯ, ಮಂದಹಾಸಯುಕ್ತ ವಾದ ಸ್ವಾಗತ ಅಷ್ಟೇ. ಹೆಚ್ಚಿಗೆ ಏನೂ ಇಲ್ಲ. ನಾನು ಯಾವುದೋ ಒಂದು ಉತ್ಸಾಹದಿಂದ ಬಂದರೆ, ಇಲ್ಲಿ ನೀನು ಸಪ್ಪೆಯಾಗಿ ಕುಳಿತಿರುತ್ತೀಯೆ. ನಿನ್ನ ಮುಖ ನೋಡಿದ ತಕ್ಷಣ ನನ್ನ ಸಂತೋಷವೆಲ್ಲಾ ಕರಗಿ ನೀರಾಗುತ್ತೆ. ಎಷ್ಟೋ ಜನ, ಎಂತೆಂತಹ ಕಷ್ಟಗಳನ್ನು ಅತ್ತೆಯ ಮನೆಯಲ್ಲಿ ಪಡುತ್ತಾರೆ. ನಿನಗಿಂತ ಕಡಿಮೆಯಾಗಿರುವವರನ್ನು ನೋಡಿ, ನೀನು ನಿನ್ನ ಸ್ಥಿತಿಗೆ ಸಮಾಧಾನಪಟ್ಟುಕೊ; ನಿನ್ನ ಮೇಲಿನವರನ್ನು ನೋಡಿ ಅವರು ಇರುವ ಹಾಗೆ ನನಗೆ ಇರಲಾಗುವು ದಿಲ್ಲವಲ್ಲಾ ಎಂದು ಕೊರಗಬೇಡ. ಇನ್ನು ಮೇಲೆ ನಾನು ಹೇಳಿದಂತೇ ಇರು ವೆಯಾ?" ಸರೂ ತನ್ನ ಕಣ್ಣುಗಳಿಂದಲೇ ಒಪ್ಪಿಗೆ ಸೂಚಿಸಿದಳು.

ಆ ದಿನದಿಂದ ಸರೂ ಸಂಪೂರ್ಣವಾಗಿ ಬದಲಾಯಿಸಿದಳು. ತನ್ನ ಮನೋ ಭಾವನೆಯನ್ನು ಸ್ವಲ್ಪವೂ ತೋರಗೊಡುತ್ತಲಿರಲಿಲ್ಲ. ಮಾಧವನೊಡನೆ

ಯಾವಾಗಲೂ ನಗುಮುಖದಿಂದಲೇ ಮಾತಾಡುತ್ತಿದ್ದಳು. ಎಷ್ಟೇ ಬೇಸರ ವಾಗಲಿ ಮನೆಯ ಮುಂಬಾಗಿಲನ್ನು ದಾಟುತ್ತಲಿರಲಿಲ್ಲ. ತೀರಾ ಬೇಸರವೆನಿಸಿ ದರೆ ಮಾತ್ರ ಹಿಂದುಗಡೆಯ ಕಲ್ಲು-ಬೆಂಚಿನ ಮೇಲೆ ಕೂತುಕೊಳ್ಳುತ್ತಲಿದ್ದಳು. ಸರೂವಿಗೆ ಕಥೆ ಪುಸ್ತಕವೆಂದರೆ ಬಹಳ ಆಸೆ. ಆದರೆ ಆ ದಿನ ಒಂದು ಸಣ್ಣ ಮಾತನ್ನು ಕೇಳಿದ್ದರಿಂದ, ಪುಸ್ತಕ ಓದುವ ಆಸೆಯನ್ನೂ ಬಿಡಲೇಬೇಕಾಯ್ತು. ಮಧ್ಯಾಹ್ನ ರೂಮಿಗೆ ಹೋಗಿ ಮಲಗುವ ಹಾಗಿಲ್ಲ. ಅದರಿಂದ ನಡುಮನೆ ಯಲ್ಲಿಯೇ, ಯಾವುದಾದರೂ ಕೆಲಸ ಹುಡುಕಿಕೊಂಡು ಕೂಡುತ್ತಿದ್ದಳು. ಬೀದಿಯ ಭಿಕ್ಷುಕರಿಗೆ ಭಿಕ್ಷೆ ನೀಡಬೇಕಾದರೂ, ಅತ್ತೆಯ ಅನುಮತಿಯನ್ನು ಪಡೆಯದೆ ಹಾಕುತ್ತಿರಲಿಲ್ಲ. ಮನೆಯ ಸಾಮಾನು ತೀರಿದರೆ ಹೇಳುವುದು, ತರಿಸಿದ ಸಾಮಾನು ತೆಗೆದಿಡುವುದು ಅವಳ ಕೆಲಸ.

ಬೆಳಗ್ಗೆ ಆರು ಗಂಟೆಗೆ ಎದ್ದರೆ ರಾತ್ರಿ ಹನ್ನೊಂದರ ವರೆಗೆ ಬಿಡುವಿಲ್ಲ ದೆಯೇ, ಗಾಣದ ಎತ್ತಿನಂತೆ ದುಡಿಯುತ್ತಿದ್ದಳು. ಯಾರು ಏನೆಂದರೂ ಅನ್ನಿಸಿ ಕೊಂಡು, ಮಾತು ಬಾರದ ಮೂಕಿಯಂತೆ, ದುಡಿಯುವುದು ಅವಳ ಕೆಲಸ. ಮನೆಯ ಯಜಮಾನಿಯೇ ಆ ರೀತಿ ಅವಳನ್ನು ಕಾಣುತ್ತಿದ್ದರೆ, ಇನ್ನು ಮಿಕ್ಕ ವರ ಪಾಡೇನು ? ಹಿಂದೆ ನಾಯಿಮರಿಯಂತೆ ತೆಪ್ಪಗೆ ಬಿದ್ದಿರುತ್ತಿದ್ದ ರಾಜೂ ಸಹ, ಅತ್ತಿಗೆ ಬಂದ ಮೇಲೆ ಯಾವ ಕೆಲಸವನ್ನೂ ಮಾಡುತ್ತಲಿರಲಿಲ್ಲ. ತನ ಗಾಗಿ ಕನಿಕರಪಡುವವಳೂ, ಪ್ರೀತಿಯಿಂದ ಮಾತನಾಡಿಸುವವಳೂ ಅತ್ತಿಗೆ ಯಲ್ಲದೆ ಆ ಮನೆಯಲ್ಲಿ ಯಾರೂ ಇಲ್ಲವೆಂಬುದು ಅವನಿಗೂ ಗೊತ್ತು. ಆದರೆ ಅವನು ಅವಳ ಕರುಣೆಯನ್ನು ದುರುಪಯೋಗ ಪಡಿಸಿದ್ದ. ತಾನಾಗಿ ಅವಳಿಗೆ ಸಹಾಯ ಮಾಡುವದರ ಬದಲು, ಅವಳಾಗಿಯೇ ಹೇಳಿದ ಯಾವ ಕೆಲಸ ವನ್ನೂ, ಯಾವುದಾದರೂ ನೆಪ ಹೇಳಿ ತಪ್ಪಿಸಿಕೊಳ್ಳುತ್ತಿದ್ದ. ಎಷ್ಟು ಹೇಳಿದರೂ ಕೃತಜ್ಞತೆಯ ಭಾವನೆಯೇ ಇಲ್ಲದ ಪಶುವಾಗಿದ್ದಾನಲ್ಲಾ ಎಂದು ಸರೂ ವ್ಯಥಿತ ಳಾಗುತ್ತಿದ್ದಳು.

ಸರೂ ಅತ್ತೆಯ ಮನೆಗೆ ಹೋಗಿ ವರ್ಷದ ಮೇಲಾಯಿತು. ರಂಗವ್ವ

ದಿನೇ ದಿನೇ ಕ್ಷಯಿಸುತ್ತಾ ಬಂದರು. ಗೋವಿಂದರಾಯರೂ ಒಂದೇ ಸಮನೆ ಇಪ್ಪತ್ತು ವರ್ಷಗಳ ದುಡಿತದಿಂದ ಹಣ್ಣಾಗಿ ಹೋದರು. ಮನೆಗೆ ಬಂದರೆ ಮುಂಚಿನಂತೆ ಸ್ವಾಗತಿಸಲು ಸರೂ ಈಗ ಇಲ್ಲ. ಅಕ್ಕನ ಮುಂದೆ ತಮ್ಮ; ತಮ್ಮನ ಮುಂದೆ ಅಕ್ಕ, ಇಬ್ಬರೂ ಹಿಂದಿನ ತಮ್ಮ ಸುಖ-ಸಂತೋಷದ ದಿನಗಳನ್ನು ನೆನೆಯುವರು; ಗೋಪಾಲನ ದುಃಸ್ಥಿತಿಗಾಗಿ ಮರುಗುವರು. ಅವರಿಗೆ ಇದ್ದ ಒಂದು ಆಸೆಯೆಂದರೆ ಅದು ಸರೂ. ಅವಳ ಮನಸ್ಸು ಹೇಗೇ ಇರಲಿ, ನೋಡುವವರಿಗೆ ಒಳ್ಳೆಯ ಅತ್ತೆಯ ಮನೆಯನ್ನು ಪಡೆದಿದ್ದಳು. ಅವಳ ವಿಚಾರವಾಗಿ ಸ್ವಲ್ಪವೂ ಕ್ಲೇಶವಿರಲಿಲ್ಲ.

ಒಂದು ದಿನ, ರಂಗಮ್ಮ ಹೇಳಿದರು: "ನೋಡು ಗೋವಿಂದೂ, ನಮಗೂ ವಯಸ್ಸಾಗುತ್ತಾ ಬಂತು. ಇನ್ನು ಯಾವ ಗಳಿಗೆಯಲ್ಲಿ ಕರೆ ಬರುತ್ತದೆಯೋ ಗೊತ್ತಿಲ್ಲ. ಹೇಗೂ ಮಗು ನೆಮ್ಮದಿಯಾಗಿ ಅತ್ತೆಯ ಮನೆಯಲ್ಲಿದ್ದಾಳೆ. ನಾವು ಇಲ್ಲಿ ಇದ್ದು ಮಾಡುವುದೇನು? ಇನ್ನು ಯಾರಿಗೆ ಸಂಪಾದಿಸಬೇಕು? ಗೋಪಾಲನ ವಿಷಯವೂ ಒಂದು ನೆಲೆಗೆ ಬಂದಿದೆ. ಕಮಲಳೇನೂ ಪೇಚಾಡಬೇಕಿಲ್ಲ. ಕಾಶೀಯಾತ್ರೆಯನ್ನು ಮಾಡೋಣಾ ಎಂದುಕೊಂಡಿದ್ದೇನೆ. ಏನು ಹೇಳುತ್ತೀಯೆ?"

"ನನಗೂ ಈ ಪಟ್ಟಣ ಜೀವನ ಬೇಜಾರು ಬಂದುಬಿಟ್ಟಿದೆ ಅಕ್ಕಾ. ನಡೀ ಇಬ್ಬರೂ ಹೋಗೋಣಾ. ಅದೃಷ್ಟವಿದ್ದರೆ ಮತ್ತೆ ಹಿಂತಿರುಗಿ ಬರೋಣಾ. ಇಲ್ಲದಿದ್ದರೆ ನಮ್ಮ ಆಯುಸ್ಸನ್ನು ಆ ವಿಶ್ವನಾಥನ ಸೇವೆಯಲ್ಲಿಯೇ ಕಳೆಯೋಣ. ಹೇಗಿದ್ದರೂ ನನ್ನ ಹತ್ತಿರ ಒಂದು ಇನ್ನೂರು ರೂಪಾಯಿ ಇದೆ. ರೈಲು ಖರ್ಚಿಗೆ ಸಾಕು. ಅಲ್ಲಿ ಹೋದ ಮೇಲೆ ನೋಡಿಕೊಳ್ಳೋಣ." ಎಂದರು. ರಾತ್ರಿಯೆಲ್ಲಾ ಪ್ರಯಾಣದ ವಿಷಯವಾಗಿಯೇ ಮಾತನಾಡಿ ಕಳೆದರು.

ಮಾರನೇ ದಿನ ಗೋವಿಂದರಾಯರು ಅಂಗಡಿಗೆ ಹೋದಾಗ ಯಜಮಾನ ಸುಬ್ಬರಾಯಶೆಟ್ಟರೊಂದಿಗೆ ತಾವು ಇನ್ನುಮೇಲೆ ಕೆಲಸಕ್ಕೆ ಬರಲಾಗುವುದಿಲ್ಲವೆಂದೂ, ತಾವು ಕಾಶಿಗೆ ಹೋಗಬೇಕೆಂದಿರುವರೆಂದೂ ತಿಳಿಸಿದರು. ಶೆಟ್ಟರಿಗೆ ಗೋವಿಂದರಾಯರಲ್ಲಿ ಬಹಳ ಅಭಿಮಾನ. ಅವರು ಕೆಲಸಕ್ಕೆ ಸೇರಿದಂದಿನಿಂದ ತಮ್ಮ ವರಮಾನ ಹೆಚ್ಚಾಗಿತ್ತೆಂಬ ಒಂದು ಭಾವನೆ, ಅವರ ವಿಷಯವಾಗಿ ಇನ್ನೂ ಗೌರವ ಹೆಚ್ಚಿಸಿತು. ಗೋವಿಂದರಾಯರು ತಮ್ಮ ಕೆಲಸವಲ್ಲಿ ಸ್ವಲ್ಪವೂ ಉದಾಸೀನ ಮಾಡದೆ, ಹಗಲಿರುಳೂ ತಮ್ಮ ಧಣಿಯ ಹಿತಕ್ಕಾಗಿ,

ದೇಹವನ್ನೇ ಸವೆಸಿದ್ದರು. ಅಂತಹ ಕರ್ತವ್ಯದಕ್ಷರಾದ ಅವರು ತಮ್ಮ ಕೈಬಿಟ್ಟು ಹೋಗುವವರಲ್ಲಾ ಎಂದು ಬಹಳ ವ್ಯಥೆಪಟ್ಟರು ಸುಬ್ಬರಾಯಶೆಟ್ಟರು.

ಇನ್ನೂ ಆಗ ತಿಂಗಳ ಮೊದಲು; ತಿಂಗಳ ಸಂಬಳವನ್ನು ಆಗಲೇ ಕೊಟ್ಟಾಗಿತ್ತು. ಅವರು ತಮ್ಮಲ್ಲಿಯೇ ಇರಬೇಕೆಂದೂ, ತಿಂಗಳ ವರಮಾನವನ್ನು ಇನೂ ಹೆಚ್ಚಿಸುವುದಾಗಿಯೂ ತಿಳಿಸಿದರು. ಆದರೆ ಗೋವಿಂದರಾಯರಿಗೆ ಹಣವೇನೂ ಬೇಕಿರಲಿಲ್ಲ. ಅದರಿಂದ ಅವರು ಯಾವುದಕ್ಕೂ ಒಪ್ಪಲಾರದವರಾಗಿದ್ದರು.

ಸಂಜೆ ಆರು ಗಂಟೆಗೆ ಶೆಟ್ಟರು, ಅವರನ್ನು ತಮ್ಮ ಕಾರಿನಲ್ಲಿಯೇ ಮನೆಗೆ ಕರೆದೊಯ್ದರು. ಅಲ್ಲಿ ಹಾಲು ಹಣ್ಣುಗಳ ಆತಿಥ್ಯವೂ ಆಯಿತು. ಬೆಳ್ಳಿ ತಟ್ಟೆಯ ತುಂಬಾ ಹೂವು ಹಣ್ಣು, ತುಂಬಿ, ಎಲೆ-ಅಡಿಕೆಯೊಡನೆ ನೂರು ರೂಪಾಯಿನ ಎರಡು ನೋಟುಗಳನ್ನು ಇಟ್ಟು ಅವರ ಕೈಗಿತ್ತರು. ಗೋವಿಂದರಾಯರು ಸ್ತಂಭೀಭೂತರಾದರು.

"ಇದೆಲ್ಲಾ ಏನು ಯಜಮಾನರೆ? ಈಗ ಯಾಕೆ? ಸರೂವಿನ ಮದುವೆಯಲ್ಲಿ ಬೇಕಾದಷ್ಟು ಮಾಡಿದ್ದೀರಿ, ಪುನಃ ಈಗ ಯಾಕೆ?" ಎಂದರು ಗೋವಿಂದರಾಯರು.

"ನೀವು ಮಾಡಿರುವ ಕೆಲಸಕ್ಕೆ ನಾನು ಏನು ತಾನೇ ಕೊಡುವುದು ಸಾಧ್ಯ? ಏನೋ ಒಳ್ಳೆಯ ಕೆಲಸಕ್ಕೆ ಹೊರಟಿದ್ದೀರಿ, ಬೇಗನೆ ಹಿಂತಿರುಗಿ ಬನ್ನಿ. ಕಾಶೀ ವಿಶ್ವನಾಥನ ಪ್ರಸಾದ ನಮಗೂ ದೊರೆಯಲಿ. ಇದನ್ನು ಖಂಡಿತವಾಗಿ ಸ್ವೀಕರಿಸಲೇಬೇಕು; ಇಲ್ಲವಾದರೆ ನನ್ನ ಮನಸ್ಸಿಗೆ ಬಹಳ ಬೇಜಾರಾಗುತ್ತದೆ."

ಗೋವಿಂದರಾಯರು ನಿರ್ವಾಹವಿಲ್ಲದೆ ಅದನ್ನು ತೆಗೆದುಕೊಳ್ಳಬೇಕಾಯಿತು. ಶೆಟ್ಟರು ಕಾರಿನಲ್ಲಿಯೇ ಅವರ ಮನೆ ತಲುಪಿಸಿ ಬಂದರು. ರಂಗಮ್ಮ ಶೆಟ್ಟರ ಉದಾರತೆಗೆ ತಲೆದೂಗಿದರು. ಗೋವಿಂದರಾಯರು, ರಂಗಮ್ಮನವರೊಡನೆ, ಬೀಗರ ಮನೆಯನ್ನು ಸೇರಿದಾಗ ಕತ್ತಲೆಯೇ ಆಗಿತ್ತು. ಮನೆಯಲ್ಲಿ ಸರೂ ಒಬ್ಬಳೇ ಇದ್ದಳು. ರಾತ್ರಿಗೆ ಮಾವನವರ ಸ್ನೇಹಿತರು ಊಟಕ್ಕೆ ಬರುವವರಾಗಿದ್ದರಿಂದ, ಸರೂ ಆಗಲೇ ಅಡುಗೆಯ ತಯಾರಿಕೆಯಲ್ಲಿದ್ದಳು. ರಂಗಮ್ಮ ಒಳಬಂದಾಗ ಸರೂ ತರಕಾರಿ ಹೆಚ್ಚುತ್ತಿದ್ದಳು. ಯಾವ ಸುದ್ದಿ ಸಮಾಚಾರವನ್ನೂ ಕೊಡದೆ ಏಕಾಏಕಿಯಾಗಿ ಅತ್ತೆ ಬಂದುದನ್ನು ನೋಡಿ ವಿಸ್ಮಿತಳಾದಳು ಸರೂ. ರಂಗಮ್ಮ ತಾವು ಕಾಶಿಗೆ ಹೊರಡಬೇಕೆಂದಿರುವ ವಿಷಯವನ್ನು ತಿಳಿಸಿದ ಕೂಡಲೇ, ಸರೂ ವ್ಯಥಿತಳಾದಳು. 'ನನ್ನನ್ನು ಒಬ್ಬಳನ್ನೇ ಇಲ್ಲಿ ಬಿಟ್ಟು ನೀವಿ

ಬ್ಬರೂ ಹೋಗುತ್ತೀರಾ ಅತ್ತೇ? ನಿಮ್ಮನ್ನು ನೋಡದೆ ನಾನು ಹೇಗೆ ಇರಲಿ!' ಸರೂ ಹೆಚ್ಚುತ್ತಿದ್ದ ತರಕಾರಿಯನ್ನೂ ಅಲ್ಲಿಯೇ ಎಸೆದು, ಅತ್ತೆಯ ತೊಡೆಯಲ್ಲಿ ಮುಖವಿರಿಸಿ ಅತ್ತಳು. ರಂಗಮ್ಮನವರ ಕಣ್ಣೀರೂ ಅವಳೊಂದಿಗೇ ಕೂಡಿತ್ತು.

"ಸೀತೂ ನನಗೆ ವಹಿಸಿದ್ದ ಕೆಲಸವೆಲ್ಲಾ ಮುಗಿಯಿತು. ನಿನ್ನ ಒಳ್ಳೆಯ ಗಂಡನ ಕೈಗೆ ಕೊಟ್ಟಿದ್ದಾಗಿದೆ. ಕಷ್ಟವೋ ಸುಖವೋ ಅನುಭವಿಸಲೇ ಬೇಕು. ನಮ್ಮಿಬ್ಬರಿಗೂ ಜೀವನದಲ್ಲಿ ಇರುವುದಾದರೂ ಏನು ? ಮನುಷ್ಯ ಎಷ್ಟು ದಿನ ಬದುಕಿದರೂ,ಇನ್ನೂ ಬದುಕಿರಬೇಕೆಂಬ ಆಸೆ ಪ್ರಬಲವಾಗುತ್ತದೆಯೇ ಹೊರತು, ನಾನು ಬಾಳಿದ್ದು ಸಾಕು, ನನಗೆ ಸಾವು ಬರಲಿ ಎಂದು ಯಾರೂ ಬಯಸುವು ದಿಲ್ಲ. ದೇವರ ದಯವಿದ್ದರೆ ನಿನಗೆ ಒಂದು ಮಗುವಾದರೆ, ನೋಡೋಣಾ ಎಂಬ ಆಸೆ ಇದೆ. ಆದರೆ ಈ ಆಸೆಗೆ ಕೊನೆ ಎಲ್ಲಿ? ಆಯುಸ್ಸಿದ್ದರೆ ಹಿಂತಿರುಗಿ ಬರುತ್ತೇನೆ. ಧೈರ್ಯವಾಗಿರೂ ಮಗೂ. ದುಃಖಿಸಬೇಡಾ." ಎಂದು ರಂಗಮ್ಮ ಕಣ್ಣೀರು ಒರಸಿಕೊಳ್ಳುತ್ತಾ ಹೇಳಿದರು.

" ನೋಡು ಮಗೂ, ನಾನು ನಿನಗೆ ತಂದೆಯಾಗಿ ಯಾವ ಆಸ್ತಿಯನ್ನೂ ಇಟ್ಟಿಲ್ಲ. ಆದರೆ ನಾನು ನಿನಗೆ ಬಿಟ್ಟು ಹೋಗುತ್ತಿರುವುದು ನನ್ನ ನಿಷ್ಕಾಮ ವಾದ ಕರ್ತವ್ಯದ ಫಲ. ನಾನು ಈ ಜನ್ಮದಲ್ಲಿ ಯಾರಿಗಾದರೂ ಒಂದು ಎಳ್ಳಷ್ಟು ಉಪಕಾರ ಮಾಡಿದ್ದರೆ, ಆದರ ಫಲವೇ ನಿನ್ನನ್ನು ಕಾಪಾಡಲಿ. ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ." ಎಂದರು ಗೋವಿಂದರಾಯರು.

"ಬೇಗ ಬಂದುಬಿಡು ಅತ್ತೆ, ನೀನು ಹೇಳೋ ರೀತಿ ನೋಡಿದರೆ, ನೀವಿ ಬ್ಬರೂ ಹಿಂತಿರುಗಿ ಬರುವ ಹಾಗೇ ಕಾಣುವುದಿಲ್ಲ. ನನಗಾಗಿಯಾದರೂ ಬೇಗ ಬಾ ಅಣ್ಣಾ!" ಸರೂ ಹಂಬಲಿಸಿದಳು.

ಮನೆಯ ಸಾಮಾನನ್ನೆಲ್ಲಾ ನಾಗಪ್ಪನವರ ಬಳಿಯೇ ಬಿಟ್ಟು ಹೋಗುವು ದಾಗಿಯೂ ತಿಳಿಸಿದರು. ಸುಬ್ಬರಾಯಶೆಟ್ಟರು ಕೊಟ್ಟ ತಟ್ಟೆಯನ್ನು ಸರೂಳ ಕೈಗೆ ಕೊಟ್ಟರು. ದುಡ್ಡನ್ನು ಮಾತ್ರ ಸಮಯ ಬಂದರೆ ಇರಲಿ ಎಂದುಕೊಂಡು ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡರು.

ಶ್ರೀಕಂಠಯ್ಯ ಪತ್ನಿಯೊಡನೆ ಮನೆಗೆ ಬಂದಾಗ ಎಂಟು ಗಂಟೆಯಾಗಿತ್ತು. ಗೋವಿಂದರಾಯರು ಹೊರಡುವ ವಿಷಯವನ್ನು ಹೇಳಿದಾಗ ಸಂತಸಗೊಂಡವ ರೆಂದರೆ ಶ್ರೀಕಂಠಯ್ಯ. " ನೀವಾದರೂ ಹೋಗಿ ಬನ್ನಿ, ಪುಣ್ಯಾವಂತರು. ನಮಗಂತೂ ಹಣೆಯಲ್ಲಿ ಬರೆದಿಲ್ಲವೆಂದು ಕಾಣುತ್ತೆ. ಈ ಹಾಳದ್ದು ಕಾರ್ಖಾನೆ

ಬೇರೆ ಕೊರಳಿಗೆ ಕಟ್ಟಿದೆ. ಈ ವಾತಾವರಣದಲ್ಲಿ ದೇವರ ವಿಷಯ ಚಿಂತಿಸುವು ದಕ್ಕೂ ಸಮಯವೇ ಇಲ್ಲ." ಎಂದರು.

ನಾಳೆ ರಾತ್ರಿಯ ಪೂನಾ ಗಾಡಿಯಲ್ಲಿಯೇ ಹೊರಡುವುದೆಂದಾಯಿತು.

"ನಾಳೆ ಇಲ್ಲಿಯೇ ಊಟಕ್ಕೆ ಬಂದುಬಿಡಿ. ಒಂದು ದಿನವೂ ಇಲ್ಲಿ ಊಟವೇ ಮಾಡಿಲ್ಲ." ಎಂದರು ಜಾನಕೀಬಾಯಿ.

ಸಾಮಾನುಗಳನ್ನು ನಾಗಪ್ಪನವರ ವಶಕ್ಕೆ ಒಪ್ಪಿಸಿದ್ದಾಯ್ತು. ನಾಗಪ್ಪ ಗೋವಿಂದರಾಯರನ್ನು ಅಗಲಬೇಕಲ್ಲಾ ಎಂದು ದುಃಖದಿಂದ ಕಣ್ಣೀರು ಸುರಿಸಿ ಅವರನ್ನಪ್ಪಿಕೊಂಡರು.

"ನಿಮ್ಮ ಉಪಕಾರವನ್ನು ನಾನು ಎಂದೆಂದಿಗೂ ಮರೆಯಲಾರೆ ನಾಗಪ್ಪ ನವರೇ ನೀವು ಹಿಂದಿನ ಜನ್ಮದಲ್ಲಿ ನನ್ನ ತಂದೆಯಾಗಿದ್ದರೋ ಏನೋ ? ನಿಮ್ಮ ಋಣವನ್ನು ನಾನೆಂದಿಗೂ ತೀರಿಸಲಾರೆ." ಎನ್ನುವಾಗ ಗೋವಿಂದ ರಾಯರ ಕಂಠ ಭಾರವಾಗಿತ್ತು.

ಜಾನಕೀಬಾಯಿ ತಮ್ಮ ಅಂತಸ್ತಿಗೆ ತಕ್ಕಂತೆ, ಚರೋಟಿ, ಶ್ಯಾವಿಗೆ ಪಾಯಸ, ಬಿಸಿನಿಂಬೆ ಚಿತ್ರಾನ್ನ, ಮಜ್ಜಿಗೆ ಹುಳಿ, ಅಂಬೋಡೆ ಎಲ್ಲಾ ಮಾಡಿ ಔತನ ಮಾಡಿದರು. ಸರೂ ಬೆಳಗ್ಗಿಂದಲೂ ಅಳುತ್ತಿದ್ದಳು. ಯಾವುದೋ ಒಂದು ಅವ್ಯಕ್ತ ಭೀತಿ ಅವಳನ್ನು ಕಾಡುತ್ತಿತ್ತು. ತಂದೆ, ಅತ್ತೆಯವರನ್ನು ನೋಡು ವುದು ಇದೇ ಕಡೆಯ ಬಾರಿ ಏನೋ ಎಂಬ ದಿಗಿಲಿನಿಂದ ಅವಳು ನಡುಗಿದಳು.

ಸರೂ, ಅತ್ತೆ ಮತ್ತು ತಂದೆಗೆ ವಂದಿಸಿದಳು. ಮಾಧವನು ಸಹ ನಮಸ್ಕರಿಸಿದ.

ಗೋವಿಂದರಾಯರೇ ಸ್ವತಃ ಕೇಳಿದ್ದರಿಂದ, ಸರೂವಿಗೆ ಸ್ಟೇಷನ್‌ಗೆ ಹೋಗಲು ಅನುಮತಿ ದೊರೆಯಿತು. ಅವಳ ಜೊತೆಗೆ ಮಾಧವನೂ ಹೊರಟ.

ಸ್ಟೇಷನ್ನನ್ನು ಸಕಾಲದಲ್ಲಿ ತಲುಪಿದ್ದಾಯ್ತು. ಮಾಧವನೇ ಹೋಗಿ ಟಿಕೆಟು ತಂದ. ಗಾಡಿ ಹೊರಡಲು ಇನ್ನೂ ಬಹಳ ವೇಳೆ ಇದ್ದಿತು.

"ನಮ್ಮ ಮಗೂ ಸರೂನ್ನ ನಿನ್ನ ಕೈಗೊಪ್ಪಿಸಿಬಿಟ್ಟಿದ್ದೇವೆ. ಅವಳನ್ನು ಚೆನ್ನಾಗಿ ಕಾಪಾಡು ಮಗೂ !" ಎಂದರು ರಂಗಮ್ಮ.

ಮಾಧವ ನಿರುತ್ತರನಾದ. ಸರೂ ತೆರೆದ ಕಣ್ಣುಗಳಿಂದ ಅವರನ್ನೇ ನೋಡುತ್ತಿದ್ದಳು. ಬೆಲ್ ಆಯಿತು. ಸರೂ ಗಾಡಿಯಿಂದಿಳಿದಳು. "ಹೋಗಿ ಬರುವೇ ಮಗೂ, ಯೋಚನೆ ಪಡಬೇಡಾ. ತಲುಪಿದ್ದಕ್ಕೆ ಕಾಗದ ಬರೆಯು

ತ್ತೀನೆ. ಬರುತ್ತೀನೆ. ನೀನೂ ಕಾಗದ ಬರೆಯುತ್ತಿರಪ್ಪಾ." ಎಂದು ಅಳಿಯನಿಗೆ ಹೇಳುವ ವೇಳೆಗೆ, ಗಾರ್ಡನ ಸೀಟಿಯ ಜೊತೆಗೆ, ರೈಲು ಕೂಗಿದ ಶಬ್ದವೂ ಬೆರೆತು ರೈಲು ಚಲಿಸಿತು. ರಂಗಮ್ಮ-ಗೋವಿಂದರಾಯರು ಕಿಟಕಿಯಲ್ಲಿ ತಲೆ ಇಟ್ಟು ನೋಡುತ್ತಲೇ ಇದ್ದರು. ಸರೂ-ಮಾಧವರು, ಅವರು ಕಣ್ಮರೆಯಾಗುವ ತನಕ ನೋಡುತ್ತಾ ನಿಂತಿದ್ದರು.

"ನಡೀ, ಸರೂ ಹೋಗೋಣಾ." ಮಾಧವನೆಂದ.

ಸರೂ ನಿರುತ್ತರಳಾಗಿದ್ದಳು. ಅವಳ ಮನೋಗತಿಯನ್ನರಿತ ಮಾಧವ ಅವಳನ್ನು ಹೆಚ್ಚಿಗೆ ಮಾತಾಡಿಸಲು ಯತ್ನಿಸಲಿಲ್ಲ. ಸರೂ ಆ ದಿನ ಊಟ ಮಾಡದೆಯೇ ಮಲಗಿದಳು.ತಂದೆಯನ್ನು ಎಂದೆಂದಿಗೂ ಅಗಲಿದೆನೆನೋ ಎಂಬ ಭಯ ಅವಳನ್ನು ತನ್ನ ಮುಷ್ಟಿಯಲ್ಲಿ ಹಿಡಿದು ಹಿಚಕುತ್ತಿರುವಂತೆನಿಸಿತು.

'ಪೂರ್ಣಿಮಾ ಹೌಸ್' ಶ್ರೀಕಂಠಯ್ಯನವರ ಕಾರ್ಖಾನೆಯ ಹೆಸರು. ಕೇವಲ ಹತ್ತುಸಾವಿರ ರೂಪಾಯಿಗಳ ಬಂಡವಾಳದಿಂದ ಶುರು ಆದ ಕಾರ್ಖಾನೆ ಈಗ ಐವತ್ತು ಸಾವಿರ ರೂಪಾಯಿ ಬೆಲೆ ಬಾಳುತ್ತಿತ್ತು. ಹಿಂದೆ ಹತ್ತು ಜನ ಕೆಲಸದವರಿದ್ದ ಜಾಗದಲ್ಲಿ ಈಗ ಅರವತ್ತು ಜನರಿದ್ದರು. ಎಲ್ಲಾ ತರದ ಹಿತ್ತಾಳೆ ಪಾತ್ರೆಗಳೂ, ಸಿಲ್ವರ್, ನಿಕ್ಕಲ್ ಪ್ಲೇಟಿಂಗ್‌ಗಳೂ ತಯಾರಾಗಿ ಮಾಡಲ್ಪಡುತ್ತಿತ್ತು. ಅದರಂತೆ ತಿಂಗಳ ವರಮಾನವೂ ಹೆಚ್ಚುತ್ತಾ ಹೋಯಿತು. ಆದರೆ ಜಾನಕೀಬಾಯಿಯವರ ದರ್ಬಾರಿನಲ್ಲಿ ಬಂದ ಲಾಭವೆಲ್ಲಾ ಸಂಸಾರಕ್ಕೇ ಸಾಲುತ್ತಿರಲಿಲ್ಲ. ಹಿಂದೆ ಮಾಡಿದ ಸಾಲ ಹಾಗೆಯೇ ಕರಗದೆ ಬೆಟ್ಟದಂತೆ ಕೂತಿತ್ತು. ವರ್ಷ ವರ್ಷವೂ ಬರೀ ಬಡ್ಡಿಯನ್ನು ತೀರಿಸುವುದರಲ್ಲಿಯೇ ಶ್ರೀಕಂಠಯ್ಯ ತೃಪ್ತರಾಗಬೇಕಾಯಿತು.

ಬೆಳಗ್ಗೆ ಎಂಟು ಗಂಟೆಗೆ ಸರಿಯಾಗಿ ಬೆಲ್ ಆಯಿತು. ಆಳುಗಳೆಲ್ಲಾ ಒಳಗೆ ಬಂದರು. ಶ್ರೀಕಂಠಯ್ಯ ಅಲ್ಲಿಯೇ ನಿಂತು ಕಾರ್ಯ ಯಾವುದು ಬೇಗ ಮುಗಿಸಬೇಕು ಎಂಬುದರ ಬಗ್ಗೆ ಆಳುಗಳಿಗೆ ತಿಳುವಳಿಕೆ ಹೇಳುತ್ತಿದ್ದರು. ಸ್ವಾಮಿನಾಥ ಬಂದು ಒಂದು ಚೀಟಿಯನ್ನು ಅವರ ಕೈಗೆ ಕೊಟ್ಟು ಹೊರಟು

ಹೋದ. ಸುಂದರ ಪಿಳ್ಳೆ ರಜಾ ಕೇಳಿಕೊಂಡಿದ್ದ. ಅವನು ಕೆಲಸಕ್ಕೆ ಬಾರದೆ ಐದು ದಿನಗಳಾಗಿದ್ದುವು. ಶ್ರೀಕಂಠಯ್ಯ ಸ್ವಾಮಿನಾಥನನ್ನು ಕರೆಸಿ "ನೋಡು ಸುಂದರ ಪಿಳ್ಳೆಗೆ 'ಕ್ಯಾಜುಯಲ್ ಲೀವ್' ಕೊಡುತ್ತೇನೆ. ಅವನ ರಜಾ ಮುಗಿಯಿತೆಂದು ತಿಳಿಸು. ಇದನ್ನು 'ಪ್ರಿವಿಲೇಜ್ ಲೀವ್'ನಲ್ಲಿ ಕೊಡುವುದಿಲ್ಲ. ಅವನಿಗೆ ತಿಳಿಸಿಬಿಡು." ಎಂದು ಗುಮಾಸ್ತನನ್ನು ಕರೆಯಿಸಿ ಅವನಿಗೆ ರಜಾ ಬರೆಯುವಂತೆ ತಿಳಿಸಿದರು.

ಸ್ವಾಮಿನಾಥ ಯಜಮಾನರು ಹೇಳಿದ ಮಾತುಗಳನ್ನು ಎಲ್ಲರಿಗೂ ತಿಳಿಸಿದ. 'ಅವರು ಹೇಗೆ ರಜಾ ಕೊಡುವುದಿಲ್ಲ ನೋಡುವಾ.' ಎಂದೆಲ್ಲಾ ರೇಗಾಡಿ ಕೂಗಾಡಿದ. ಅಂದಿನ ದಿನ ತಾವು ಒಂದು ಮೀಟಿಂಗ್ ಮಾಡುವುದಾಗಿಯೂ ಪ್ರತಿಯೊಬ್ಬರೂ ಹಾಜರಿರಬೇಕೆಂದೂ ಎಲ್ಲರಿಗೂ ತಿಳಿಸಿದ. ಸಂಜೆ, ಕೆಲಸ ಮುಗಿದ ನಂತರ ಕಾರ್ಖಾನೆಯ ಸಮೀಪದಲ್ಲಿದ್ದ ಬಯಲಿನಲ್ಲಿ, ಸ್ವಾಮಿನಾಥನ ನೇತೃತ್ವದಲ್ಲಿ ಸಭೆ ಸೇರಿತು. ರಷ್ಯದ ಕಮ್ಯುನಿಸ್ಟ್ ಪತಾಕೆಯೊಂದು ಹಾರಿಸಲ್ಪಟ್ಟಿತು. ಸ್ವಾಮಿನಾಥ ಹೇಳತೊಡಗಿದ: "ಈಗ ನಾವು ಎಲ್ಲರೂ ಸಹೋದರರು; ನಾವು ಒಗ್ಗಟ್ಟಾಗಿ ಕೆಲಸ ಮಾಡಬೇಕು; ನಾವು ಬೆವರು ಸುರಿಸಿ ದುಡಿಮೆ ಮಾಡಿ ಗಳಿಸಿದ್ದನ್ನು ಅವರು, ಯಜಮಾನರು, ಬಂಡವಳಗಾರರು ತಾವು ಯಾವುದೊಂದು ಕೆಲಸ ಮಾಡದೆ, ಕೂತು ತಿನ್ನುತ್ತಾರೆ. ಇದೆಲ್ಲಾ ಅನ್ಯಾಯ. ಎಲ್ಲರೂ ಒಂದಾಗಬೇಕು. ಬಡವ, ಬಲ್ಲಿದನೆಂಬ ಭೇದಭಾವನೆ ಹೋಗಬೇಕು. ಈ ಬಂಡವಾಳಶಾಹಿಗಳ ನಾಶವಾಗಬೇಕು. ಕೆಲಸಗಾರರ ರಾಜ್ಯ ಬರಬೇಕು. ಈಗ ನೋಡಿ, ನಮ್ಮ ಸಹೋದರ ಸುಂದರ ಪಿಳ್ಳೆ ಈ ದಿನವೂ ಬರಲಿಲ್ಲ. ಅವನು ಬರದೆ ಇಂದಿಗೆ ಐದು ದಿನಗಳಾದುವು. 'ಅವನಿಗೆ 'ಕ್ಯಾಜುಯಲ್ ಲೀವ್' ಕೊಡುತ್ತೇನೆ. ಇನ್ನೂ ಐದು ದಿನ ಮನೆಯಲ್ಲಿಯೇ ಇರಲಿ' ಅಂದುಬಿಟ್ಟರು. ಮೊನ್ನೆ ದಿನ ನಟರಾಜ ತಲೆನೋವು ಎಂದು ರಜಾ ಕೇಳಿದರೆ ಕೊಡಲಿಲ್ಲ. ಹೀಗೆ ಎಷ್ಟು ದಿನಾ ಅಂತ ನಾವು ಸಹಿಸಿಕೊಂಡಿರುವುದು ? ನಾವೆಲ್ಲರೂ ಒಗ್ಗಟ್ಟಿನಿಂದ ಸಂಪು ಹೂಡೋಣಾ. ಅದೊಂದೇ ನಮಗಿರುವ ದಾರಿ. ಅದರಿಂದ ನಾವು ಯಾವುದನ್ನಾದರೂ ಪಡೆಯಬಹುದು. ಹೇಳಿರಿ, ಈ ಅನ್ಯಾಯವನ್ನು, ಈ ಅತ್ಯಾಚಾರವನ್ನು ತಡೆಯಲು ನಮಗಿರುವ ದಾರಿ, ಸಂಪು. ಹೇಳಿರಿ ಒಗ್ಗಟ್ಟಿನಿಂದ ಕೂಡುವಿರಾ? ಎಷ್ಟೇ ದಿನವಾಗಲೀ, ಎಂತಹದೇ ಕಷ್ಟವಾಗಲೀ ನಾವು ಹಿಂತೆಗೆಯಬಾರದು. ಏನು ಹೇಳುತ್ತೀರಿ? ಬೇಗ ಹೇಳಿ."

ಸ್ವಾಮಿನಾಥ ಗರ್ಜಿಸಿದ. ಕೂಡಲೇ ಎಲ್ಲಾ ಕೈಗಳೂ ಮೇಲಕ್ಕೆತ್ತಲ್ಪಟ್ಟುವು. ಸಂಪು ಹೂಡುವುದೆಂದು ನಿರ್ಣಯವಾಯಿತು. ಅಲ್ಲಿಂದ ಈ ಕೆಂಪು ಧ್ವಜವನ್ನು ಹಿಡಿದು ಸ್ವಾಮಿನಾಥ ಮುಂದಾಗಿ ಹೊರಟ. ಅವನ ಹಿಂದೆ ಸಾಲಾಗಿ ಕೆಲಸಗಾರರೆಲ್ಲರೂ ಹೊರಟರು. 'ಬಂಡವಳಗಾರರಿಗೇ ಧಿಕ್ಕಾರ! ಇನ್‌ಕಿಲಾ ಜಿಂದಾಬಾದ್! ಕಮ್ಯೂನಿಜಂ-ಜಿಂದಾಬಾದ್!' ಎಂಬ ಘೋಷಣೆಗಳೊಡನೆ ಮೆರವಣಿಗೆ ಸಾಗಿತು. ದಾರಿಯುದ್ದಕ್ಕೂ ಜನ ನೋಡುತ್ತಲಿದ್ದಿತು.

ಶ್ರೀಕಂಠಯ್ಯ ಮನೆಯ ಮುಂಭಾಗದಲ್ಲಿ ಮಾಧುವಿನೊಡನೆ ಮಾತನಾಡುತ್ತಾ ಕೂತಿದ್ದರು. ಮೆರವಣಿಗೆ ಅವರ ಮನೆಯ ಮುಂದೆಯೂ ಹೋಯಿತು. ಹೆಚ್ಚು ಗಲಾಟೆಯಾಗದಂತೆ ಸ್ವಾಮಿನಾಥ ತಡೆದಿದ್ದ. ಮಾಧವ ಹೊರಗೆ ಬಂದು ನೋಡಿ ಹೇಳಿದ "ನಮ್ಮ ಕೆಲಸದವರೇ! ಏನಾದರೂ 'ಸ್ಟ್ರೈಕ್' ಮಾಡುತ್ತಾರೆಂದು ತೋರುತ್ತೆ!"

"ಏನು ಸ್ಟ್ರೈಕ್ ಮಾಡುತ್ತಾರೆಯೇ? ಯಾತಕ್ಕಾಗಿ? ಮಾಡಲಿ,ಮಾಡಲಿ. ಅವರೂ ಬುದ್ಧಿಗಲಿಯಲಿ." ಎಂದರು ಶ್ರೀಕಂಠಯ್ಯ.

ಮಾರನೆಯ ದಿನ ಬೆಲ್ ಬಾರಿಸಿದಾಗ ಯಾರೊಬ್ಬರೂ ಒಳಗೆ ಕಾಲಿಡಲಿಲ್ಲ. ಎಲ್ಲರೂ ಮೌನವಾಗಿ ಹೊರಗಡೆಯೇ ನಿಂತಿದ್ದರು. ಶ್ರೀಕಂಠಯ್ಯ ಹೇಳಿದರು: "ನಿಮ್ಮ ಅಭಿಲಾಷೆ ಏನು ಎಂಬುದನ್ನು ತಿಳಿಸಿರಿ. ನೀವು ಯಾತಕ್ಕೆ ಈ ರೀತಿ ಮಾಡುವಿರಿ? ನನ್ನ ಕೈಲಾದ್ದು ನಾನು ಮಾಡುತ್ತೇನೆ."

ಸ್ವಾಮಿನಾಥ ಮುಂದೆ ಬಂದು ಒಂದು ಕಾಗದ ಕೈಗೆ ಕೊಟ್ಟ. ಅದರಲ್ಲಿ ಕೆಲಸಗಾರರ ಹತ್ತು ಬೇಡಿಕೆಗಳು ಮಂಡಿಸಲ್ಪಟ್ಟಿದ್ದುವು. ಸಂಬಳ ಹೆಚ್ಚು ಮಾಡಬೇಕು, ಕಾಹಿಲೆ ಕಸಾಲೆಯಾದರೆ ಅದಕ್ಕೇ ಬೇರೆ ರಜಾ, ವರ್ಷಕ್ಕೆ ಒಂದು ತಿಂಗಳ ಸಂಬಳ ಬೋನಸ್ ಕೊಡಬೇಕು, ಮನೆ ಕಟ್ಟಲು ಶೇಕಡಾ ೩೦। ಕೊಡಬೇಕು, ಇನ್‌ಷೂರೆನ್ಸ್ ಮಾಡಿಸಬೇಕು, ಪ್ರತಿಯೊಂದು ಹಬ್ಬಗಳಿಗೂ ರಜಾ ಇತ್ಯಾದಿ....ಇತ್ಯಾದಿ....ಅನೇಕ ಲೆಖ್ಖವಿಲ್ಲದ ಬೇಡಿಕೆಗಳು ಕೇಳಲ್ಪಟ್ಟಿದ್ದುವು. ಇಲ್ಲದಿದ್ದರೆ ಸಂಪು ಹೂಡುವುದಾಗಿ ತಿಳಿಸಲಾಗಿತ್ತು.

"ನೋಡಿ, ನಿಮ್ಮ ಸಂಪು-ಗಿಂಪಿಗೆ ನಾನು ಹೆದರುವವನಲ್ಲ. ನಾನೂ ಒಂದು ಧ್ಯೇಯಕ್ಕಾಗಿ ಹೆಣಗಾಡುತ್ತಿದ್ದೇನೆ. ನಾನು ಇತರರಿಗೆ ಸಹಾಯಮಾಡಬೇಕು. ಯಾವ ರೀತಿಯಲ್ಲಿ? ಈ ರೀತಿ. ನಾನೂ ಸಾಲ ಮಾಡಿಯೇ ಈ ಕಾರ್ಖಾನೆ ತೆಗೆದೆ. ಅದಕ್ಕೆ ಆಳುಗಳನ್ನು ನೇಮಿಸಿದೆ. ನ್ಯಾಯವಾದ ರೀತಿಯಲ್ಲಿ

ಸಂಬಳ ಕೊಡುತ್ತೇನೆ. ನಿಮ್ಮಿಂದ ಕೆಲಸ ಮಾಡಿಸುತ್ತೇನೆ. ನಿಮ್ಮ ಹೊಣೆಗಾರಿಕೆ ಎಲ್ಲಾ ನನ್ನ ಮೇಲಿದೆ. ನಾನು ಬಿಟ್ಟಿಯಾಗಿ ನಿಮ್ಮನ್ನು ಕಾಪಾಡದಿದ್ದರೂ ಇನ್ನೊಂದು ರೀತಿಯಿಂದ ನಿಮ್ಮ ಜೀವನ ಸಾಗುವುದಕ್ಕೆ ನಾನು ಕಾರಣನಾಗಿದ್ದೇನೆ. ನಿಮಗೆ ಯಾವ ಯೋಚನೆ ಜವಾಬ್ದಾರಿಯೂ ಇಲ್ಲದೆ, ತಿಂಗಳೂ ತಿಂಗಳು, ಲಾಭವಾಗಲೀ ನಷ್ಟವಾಗಲೀ ಸಂಬಳ ಸಲ್ಲಿಸುತ್ತಾ ಬಂದಿದ್ದೇನೆ. ನನಗೇನೂ ಸುಖದಿಂದ ಹಣ ಬರುತ್ತಿಲ್ಲ. ನನಗೂ ಅನೇಕ ತಾಪತ್ರಯಗಳಿವೆ. ಈ 'ಸೇಲ್ಸ್ ಟ್ಯಾಕ್ಸ್', 'ಇನ್‌ಕಂಟ್ಯಾಕ್ಸ್'–ಅಂತಬದ್ದಾಡಿ ನಾನು ನಿಮ್ಮನ್ನೆಲ್ಲಾ ಇಟ್ಟುಕೊಂಡು, ಈ ಕಾರ್ಖಾನೆ ನಡೆಸಿ, ನಿಮ್ಮನ್ನು ಸಾಕಬೇಕೆಂಬ ಪ್ರಮೇಯವಾದರೂ ಏನು? ಯಾವುದಕ್ಕಾಗಿ ನಾನು ಈ ರೀತಿ ಮಾಡುತ್ತಿರುವೆ? ನನ್ನಿಂದ ಆದಷ್ಟು ಜನರಿಗೆ ಉಪಕಾರವಾಗಲೀ ಎಂದು. ಅದನ್ನು ನೀವು ಗಣನೆಗೆ ತರದೆ, ಬೇರೆಯವರಂತೆ ವರ್ತಿಸಿ, ನನಗೆ ಕಿರುಕುಳ ಕೊಡಲಾರಂಭಿಸಿದರೆ, ನಾನು ಈ ಕೂಡಲೇ ಕಾರ್ಖಾನೆ ಮುಚ್ಚುತ್ತೇನೆ. ಇದನ್ನು ಎಷ್ಟೋ ಅಂದರೆ ಅಷ್ಟು ಬೆಲೆಗೆ ಮಾರುತ್ತೇನೆ, ಸಾಲ ತೀರಿಸುತ್ತೇನೆ. ನಾನೂ ಎಲ್ಲಿಯಾದರೂ ಚಾಕರಿಗೆ ಸೇರುತ್ತೇನೆ. ನನಗೆ ಮತ್ತು ನನ್ನ ಇಬ್ಬರು ಮಕ್ಕಳಿಗೆ ಬರುವ ಸಂಬಳ ಸಂಸಾರಕ್ಕೆ ಸಾಕು. ಹಾಯಾಗಿ ಇದ್ದುಬಿಡುತ್ತೇನೆ. ಈ ತಾಪತ್ರಯವೇ ಬೇಡಾ. ಈಗ ಯಾರು ಕೆಲಸಕ್ಕೆ ಬರುತ್ತಾರೆಯೋ ಅವರನ್ನು ಮಾತ್ರ ಇಟ್ಟುಕೊಳ್ಳುತ್ತೇನೆ. ಬಾರದೆ ಹೊರಗೆ ನಿಂತವರು, ಅವರು ಹಾಗೆಯೇ ಹೋಗಲಿ. ಅವರು ಇನ್ನು ಪುನಃ ಕೆಲಸಕ್ಕೆ ಬಾರದೆಯೂ ಇರಬೇಕು. ಅವರಿಗಾಗಿ ನಾನು ಯಾವ ಸಂಬಳವನ್ನೂ ಕೊಡುವುದಿಲ್ಲ. ನನ್ನ ಅವರ ಸಂಬಂಧ ಇನ್ನು ಕೊರೆದು ಹೋದಂತೆಯೇ ಸರಿ. ಕಾಲುಗಂಟೆಯ ಅವಕಾಶ ಕೊಡುತ್ತೇನೆ. ಅಷ್ಟರಲ್ಲಿ ಯಾರು ಬರುತ್ತೀರೋ ಬನ್ನಿ, ಇಲ್ಲವಾದರೆ ನಾನು ಈ ದಿನವೇ ಕಾರ್ಖಾನೆಯನ್ನು ಮುಚ್ಚಲು ಸಿದ್ಧ." ಶ್ರೀಕಂಠಯ್ಯ ಇಷ್ಟು ಹೇಳಿ, ಬಿರುಗಾಳಿಯಂತೆ ಒಳಕ್ಕೆ ಹೊರಟುಹೋದರು. ಸ್ವಲ್ಪ ಹೊತ್ತಿನ ತನಕ ಗುಜು ಗುಜು ಆಯಿತು. ನಂತರ ಒಬ್ಬೊಬ್ಬರಾಗಿ ತಲೆ ಬಗ್ಗಿಸಿ ಕಾರ್ಖಾನೆಗೆ ತೆರಳಿದರು. ಶ್ರೀಕಂಠಯ್ಯನವರ ಮಾತು ವ್ಯರ್ಥವೇನೂ ಆಗಲಿಲ್ಲ. ಅಂದಿನ ವಿಜಯ ಅವರದ್ದೇ ಆಗಿತ್ತು.

ಮಾಧವ ತಂದೆಯೊಡನೆ ಕಾರ್ಖಾನೆಯ ಕೆಲಸಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದ. ಶ್ರೀಕಂಠಯ್ಯ, ಹಿಂದಿನಂತೆ ತಿರುಗಾಡಲು ಅಶಕ್ತರಾಗಿದ್ದರಿಂದ ಹೊರಗಡೆಯ ಪ್ರತಿಯೊಂದು ಕೆಲಸವೂ ಮಾಧವನ ಪಾಲಿಗೇ ಬಿದ್ದಿತ್ತು. ಹೊರಗಡೆಯಿಂದ 'ಆರ್ಡರ್' ತರಬೇಕು, ಬ್ಯಾಂಕಿಗೆ ಹೋಗಿ ಹಣ ತರಬೇಕು, ಸಂಬಳಕ್ಕೆ ದುಡ್ಡು ಹೊಂದಿಸಬೇಕು, ಸಾಮಾನು ತಯಾರಾಗಿರದಿದ್ದರೆ ಗಿರಾಕಿಗಳಿಗೆ ಸಮಾಧಾನ ಹೇಳಬೇಕು, ಕಾರ್ಖಾನೆಗೆ ಕಲ್ಲಿದ್ದಲು ಹಿತ್ತಾಳೆ ತಾಮ್ರ ಮೊದಲಾದ ಕಚ್ಚಾ ಸಾಮಾನುಗಳನ್ನು ತರಬೇಕು,ಇಷ್ಟೆಲ್ಲಾ ಕಾರ್ಯದ ಜೊತೆಗೆ ಕಾರ್ಖಾನೆಯನ್ನು ಅಭಿವೃದ್ಧಿಗೊಳಿಸಬೇಕು. ಅದೊಂದು ಅತ್ಯಂತ ಹೆಸರುವಾಸಿಯಾದ ಕಾರ್ಖಾನೆಯಾಗಬೇಕು, ಪೂರ್ಣಿಮಾ ಎಂಬ ಹೆಸರು ವಿದೇಶದಲ್ಲೆಲ್ಲಾ ಮೆರೆಯಬೇಕು ಎನ್ನುವ ಹಂಬಲವೂ ಸೇರಿ ಮಾಧವ ಕೆಲಸ ಮಾಡಿ ಮಾಡಿ ದಣಿಯುತ್ತಿದ್ದ.

ಶ್ರೀಕಂಠಯ್ಯ ಆದೇ ತಾನೇ ವರ್ಕ್‌ಷಾಪಿನಿಂದ ನಡೆದೇ ಬಂದಿದ್ದರು. ಮುಖದಲ್ಲಿ ಬೆವರು ಧಾರಾಳವಾಗಿ ಸುರಿಯುತ್ತಿತ್ತು. ಮನೆಗೆ ಬಂದೊಡನೆಯೇ ಜಾನಕೀಬಾಯಿ ಶುರು ಮಾಡಿದರು: "ನೋಡಿದಿರಾ ಸುಂದರೂ ಕಾಗದಾನ್ನ. ಅವಳಿಗೆ ತಿಂಗಳಾಗಿದೆಯಂತೆ. ಒಂದೇ ಸಮನೆ ವಾಂತಿಯಾಗುತ್ತಿದೆಯಂತೆ; ಅದರಿಂದ ಅವಳನ್ನು ಕರೆಸುವ ಏರ್ಪಾಡು ಮಾಡಿರಿ."

"ಕೈಯಲ್ಲಿ ಕಾಸಿದ್ದರೆ ತಾನೇ ಕರೆಸುವ ವಿಚಾರ? ಆಗಲೀ, ಈಗಲೇ ಏನವಸರ? ಆಮೇಲೆ ಕರೆತಂದರಾಯಿತು." ಬೆವರೊರೆಸುತ್ತಾ ಹೇಳಿದರು ಶ್ರೀಕಂಠಯ್ಯ.

"ಸರಿ, ನಿಮ್ಮದು ಯಾವಾಗಲೂ ಅದೇ ಸಾಗು. ದುಡ್ಡಿಲ್ಲಾ, ದುಡ್ಡಿಲ್ಲಾ. ಇರುವಾಗಲೂ ಅದೇ, ಇಲ್ಲದಿರುವಾಗಲಂತೂ ಸರಿಯೇ ಸರಿ. ಇನ್ನೆಂದು ನೀವು ನಿಮ್ಮ ಹತ್ತಿರ ದುಡ್ಡು ಇದೆ, ತೆಗೆದುಕೋ ಎಂದು, ನನ್ನ ಜೀವಮಾನದಲ್ಲಿ ಒಂದು ಸಲವೂ ಅಂದವರಲ್ಲ. ಈ ವ್ಯಾಪಾರ-ಗೀಪಾರ, ನಮ್ಮಂಥಾ ಬ್ರಾಹ್ಮಣರಿಗೆ ಸರಿಯಲ್ಲ, ಯಾವುದಾದರೂ ಕೆಲಸಕ್ಕೆ ಸೇರಿರಿ ಅಂದರೆ ನನ್ನ ಮಾತು, ಕಡೆಗೆ ನಮ್ಮ ತಂದೆಯ ಮಾತನ್ನೂ ಕೇಳಲಿಲ್ಲ ನೀವು. ಇದು ನೀವಾಗಿ ನೀವು ಮಾಡಿಕೊಂಡಿದ್ದು. ಯಾರೇನೂ ಅಲ್ಲವಲ್ಲ? ನಿಮ್ಮ ಗೋಣಗಾಟ ಇದ್ದೇ ಇರುತ್ತದೆ. ಅದು ತಪ್ಪುವದೆಂದು ? ಹೋಗಲಿ ನನಗೇ ಹಣ ಕೊಡಿರಿ, ನಾನೇ ಹೋಗಿ ಕರೆತರುವೆ. ನಾನೇನೂ ತಿಳಿಯದ ಹಳ್ಳಿಯ ಮುಕ್ಕ ಅಲ್ಲ." ಎಂದರು

ಜಾನಕೀಬಾಯಿ ಅವರ ಮಾತಿನಲ್ಲಿ ತಮ್ಮ ಬಿತಿ, ಕಾರ್ಖಾನೆಯ ಯಜಮಾನನಾಗಿರುವನಲ್ಲಾ ಎಂಬ ತಿರಸ್ಕಾರವು ಮೂಡಿದ್ದಿತು. ಅವರು ಪತಿಯ ಆದರ್ಶ-ಧ್ಯೇಯ, ಅವರ ಮನೋಭಾವನೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿಕೊಂಡಿದ್ದರೆ, ಈ ರೀತಿ ಮಾತನಾಡುತ್ತಿರಲಿಲ್ಲ ಶ್ರೀಕಂಠಯ್ಯನವರ ವ್ಯಕ್ತಿತ್ವ ಅವರ ಬುದ್ಧಿಗೆ ಮೀರಿದುದಾಗಿತ್ತು.

"ನಾನು ಹೇಳುವುದನ್ನು ಕೇಳು ಜಾನಕಿ. ನನಗೆ ಬಾಲ್ಯದಿಂದಲೂ ಆತ್ಮಾಭಿಮಾನ ಹೆಚ್ಚು. ಯಾರ ಕೈಲಿಯೂ ಒಂದು ಮಾತು ಸಹ ಅನ್ನಿಸಿಕೊಳ್ಳಲಾರೆ. ಅದರಿಂದಾಗಿಯೇ ನಾನು ನನ್ನ ಅಣ್ಣಂದಿರ ಜೊತೆಯಲ್ಲಿರಲಾರದೆ ಇಲ್ಲಿಗೆ ಬಂದಿದ್ದು. ಸುದೈವದಿಂದ ನಿಮ್ಮ ತಂದೆಯವರ ಪರಿಚಯವಾಯ್ತು, ಅವರ ದಯದಿಂದ ನನ್ನದೂ ಒಂದು ಸಂಸಾರ ಅಂತ ನೆಲೆಗೆ ನಿಲ್ಲುವ ಹಾಗೆ ಮಾಡಿದರು. ಅವರ ಉಪಕಾರಕ್ಕಾಗಿ ನಾನು ಎಂದಿಗೂ ಋಣಿ. ನಾನು ಒಬ್ಬರ ಕೈಕೆಳಗೆ, ಅವರ ಹಂಗಿನಲ್ಲಿ ಒಂದು ಕ್ಷಣವೂ ಬಾಳಲಾರೆ. ನನಗೆ ಈಗಲೂ ಅನ್ನಿಸುತ್ತದೆ ಈ ಮನೆಯಲ್ಲಿರುವುದು ನಿನ್ನ ಹಂಗು ಎಂದು. ಅದಕ್ಕಾಗಿ ಬೇರೆ ಮನೆಯನ್ನೇ ಕಟ್ಟುವ ಯೋಚನೆ ಮಾಡಿದ್ದೆ. ಅದು ಈ ವರೆಗೆ ಸಾಧ್ಯವಾಗಿಲ್ಲ. ಮನುಷ್ಯನಾಗಿ ಹುಟ್ಟಿದ ಮೇಲೆ ಒಂದಲ್ಲ ಒಂದು ಬಗೆಯಲ್ಲಿ ಇತರರಿಗೆ ಸಹಾಯ ಮಾಡಬೇಕು, ಎಂಬುದು ನನ್ನ ಮತ. ಇದೇ ಉದ್ದೇಶಗಳಿಂದಲೇ ನಾನು ಕಾರ್ಖಾನೆಯನ್ನು ತೆರೆದಿದ್ದು. ಅದರಿಂದ ನಾನು ಇತರರಿಗೆ ಅಡಿಯಾಳಾಗಿ ಬಾಳಬೇಕಾಗಿಲ್ಲ. ನಾನು ಇಷ್ಟು ಜನರಿಗೆ ಒಂದು ಬಗೆಯ ಜೀವನೋಪಾಯವನ್ನು ಕಲ್ಪಿಸಿದಂತಾಗುತ್ತೆ. ನಾನು ನ್ಯಾಯಮಾರ್ಗದಲ್ಲಿಯೇ ಇರಲು ಸಾಧ್ಯವಿದ್ದಷ್ಟು ಪ್ರಯತ್ನಪಟ್ಟಿರುವೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಅನೇಕರು ಅನೇಕ ರೀತಿಯಲ್ಲಿ ಗಳಿಸಿದರು. ಮನಸ್ಸು ಮಾಡಿದ್ದರೆ ನಾನೂ ಅಪರಿಮಿತವಾದ ಆಸ್ತಿಯನ್ನು ಸಂಪಾದಿಸಬಹುದಾಗಿತ್ತು. ನನ್ನ ಕಾರ್ಖಾನೆಯಿಂದಲೇ ಕೊಂಡುಕೊಂಡು ಅವು ನನ್ನ ಕಣ್ಣೆದುರಿಗೇನೇ ಎರಡಷ್ಟು ಬೆಲೆಗೆ ಮಿಲ್ಟ್ರಿ ಕ್ಯಾಂಪಿಗೆ ಸಾಗಿಸಲ್ಪಡುತ್ತಿದ್ದುದನ್ನು ನಾನೇ ನೋಡಿದ್ದೇನೆ. ಆದರೆ ಆ ಧನದಾಸೆಯು ನನ್ನನ್ನು ಎಂದಿಗೂ ಕಾಡಲಿಲ್ಲ. ನೀನು ಸ್ವಲ್ಪ ವಿವೇಕಿಯಾಗಿದ್ದರೆ ನಾನು ಈಗ ಈ ಸ್ಥಿತಿಗೆ ಬರುತ್ತಿರಲಿಲ್ಲ ಜಾನಕಿ!"

"ನಾನೇನು ಮಾಡಿರುವೆ ನಿಮಗೆ? ನಾನು ಮಾಡಿರುವ ತಪ್ಪಾದರೂ ಏನು?"

"ನೀನು ಶ್ರೀಮಂತಳಾಗಿ ಹುಟ್ಟಿ, ತಂದೆಯ ಮುದ್ದಿನಲ್ಲಿಯೇ, ಬಡತನದ ಸೋಂಕು ಅರಿಯದೆ ಬೆಳೆದದ್ದೇ ತಪ್ಪು. ನಿನಗೆ ರೂಪಾಯಿ ಎಂಬುದರ ಬೆಲೆ ಎಷ್ಟು ಎನ್ನುವುದೇ ಗೊತ್ತಿಲ್ಲಾ. ಆ ಒಂದು ರೂಪಾಯಿ ಸಂಪಾದಿಸಲು ನಾನು ಎಷ್ಟು ಕಷ್ಟ ಪಡುವೆ ಎಂಬುದರ ಲೇಶ ಮಾತ್ರ ಕಲ್ಪನೆಯಾದರೂ ನಿನಗೆ ಬಂದಿದ್ದರೆ ನೀನು ಈ ರೀತಿ ಮಾತನಾಡುತ್ತಿರಲಿಲ್ಲ. ನನಗೂ ತಿಂಗಳ ವರಮಾನ ಆರುನೂರು ರೂಪಾಯಿಗಳಿಗೆ ಕಡಿಮೆ ಇಲ್ಲ. ಆದರೆ ಒಂದು ಚಿಕ್ಕ ಕಾಸೂ ಉಳಿತಾಯವಾಗುತ್ತಿಲ್ಲ. ಸಾಲವು ಇನ್ನೂ ಹಾಗೆಯೇ ಕೂತಿದೆ. ಎಷ್ಟು ದುಡ್ಡು ಬಂದರೂ ಇನ್ನೂ ಸಾಲದು ಎನ್ನುವಿಯಲ್ಲಾ. ಇದಕ್ಕೇನೆನ್ನಬೇಕು? ಹಣದ ವಸೂಲಿಗಾಗಿ ಆ ಮಾರ್ವಾಡಿ ಬರುತ್ತಾನಲಾ ಅವನನ್ನು ಸುಧಾರಿಸಿ, 'ಆಮೇಲೆ ಕೊಡುತ್ತೇವೆ. ಈಗ ಆಗುವುದಿಲ್ಲ' ಎಂದು ಹೇಳಿಕಳಿಸಬೇಕಾದರೆ ಎಷ್ಟು ಕಷ್ಟವಾಗುತ್ತದೆ ಎಂಬುದರ ಅರಿವು ನಿನಗಿರು ವುದೇ? ನಾನೂ ಹೇಳಿದ್ದೇನೆ ಅನೇಕ ಸಲ, ನಿನ್ನ ಆ ಸ್ನೇಹಿತೆಯರನ್ನು ಸ್ವಲ್ಪ ಕಡಿಮೆಮಾಡು, ಆ ನಿನ್ನ ಟೀಪಾರ್ಟಿ ಪಿಕ್‌ನಿಕ್‌ಪಾರ್ಟಿ ಎಲ್ಲಾ ನಿಲ್ಲಿಸು, ಮನೆಯ ಖರ್ಚು ಕಡಿಮೆಮಾಡು, ಇದ್ದುದರಲ್ಲಿ ಸಾವರಿಸಿಕೊಂಡು ಹೋಗು ಎಂದು. ನಿನ್ನ ಗಮನಕ್ಕೆ ಬಂದಿಲ್ಲ ನಾನು ಹೇಳುವುದು."

ಜಾನಕೀಬಾಯಿಯವರದ್ದೂ ಬಹಳ ಹಟದ ಸ್ವಭಾವ. ಪತಿಗಿಂತ ಹತ್ತ ರಷ್ಟು ಆತ್ಮಾಭಿಮಾನ. ಕೈ ಹಿಡಿದ ಗಂಡ ನಾಲ್ಕುಮಾತು ಅಂದರೇ ಸಹಿಸುತ್ತಿರ ಲಿಲ್ಲ. ಪತಿಯ ಮಾತು ಕೇಳಿ ಜಾನಕೀಬಾಯಿಯವರ ತಾಳ್ಮೆ ತಪ್ಪಿತು. "ನಿಮಗೆಷ್ಟು ಸ್ವಾಭಿಮಾನವಿದೆಯೋ ಅಷ್ಟೇ ನನಗೂ ಇದೆ. ನನ್ನ ಸ್ವಂತ ಖರ್ಚಿಗೆ ನಾನು ಯಾರ ಹಂಗಿನ ದುಡ್ಡನ್ನೂ ಖರ್ಚು ಮಾಡುತ್ತಾ ಇಲ್ಲ. ನಮ್ಮ ತಂದೆ ನನಗೆ ಕೊಟ್ಟಿರುವ ನನ್ನ ಹಕ್ಕಿನ ದುಡ್ಡನ್ನೇ ಉಪಯೋಗಿಸುತ್ತಿ ದ್ದೇನೆ. ಈಗ ನೀವು ಬೇರೆ ಮನೆಯಲ್ಲಿದ್ದರೆ ಬಾಡಿಗೆ ಕೊಡಬೇಕಾಗಿತ್ತೋ ಇಲ್ಲವೋ? ಅದೇ ದುಡ್ಡನ್ನೇ ನನಗೆ ಕೊಡಿರಿ. ನಾನು ಬೇಕಾದ್ದು ಮಾಡು ತ್ತೇನೆ." ಎಂದು ಅಬ್ಬರಿಸಿದರು ಜಾನಕೀಬಾಯಿ. ತಮ್ಮ ಮನೆಗೆ ಬರುತ್ತಿದ್ದ ವಾರದ ಹುಡುಗನನ್ನೇ ಮದುವೆಯಾಗಿದ್ದರಿಂದ ಅವರಿಗೆ ಪತಿ ಎಂದರೆ ಅಷ್ಟೊಂದು ಗೌರವ ಮತ್ತು ಆದರಗಳಿರಲಿಲ್ಲ. ಬದಲಾಗಿ ಬಡವನೆಂಬ, ತಿರಸ್ಕಾರ, ಉದಾಸೀನತೆ ಮೂಡಿದ್ದುವು.

ಶ್ರೀಕಂಠಯ್ಯ ಆ ಮಾತು ಕೇಳಿ ವ್ಯಥಿತರಾದರು. ತಲೆ ತಿರುಗಿದಂತಾಗಿ

ಅಲ್ಲಿಯೇ ಕುಸಿದವು. ಯಾವ ಒಂದು ಧ್ಯೇಯಕ್ಕಾಗಿ ತಮ್ಮ ಇಡಿಯ ಆಯುಸ್ಸ ನ್ನೆಲ್ಲಾ ಕಳೆದರೋ, ಅದು ಈಗ ಇನ್ನೊಂದು ಬಗೆಯಿಂದ ಅವರ ಜನ್ಮವನ್ನು ವ್ಯರ್ಥವಾಗಿಸಿದೆ. ಯಾರ ಹಂಗೂ ಇಲ್ಲವೆ ಇರಬೇಕೆಂದು ಬಯಸಿದ ಶ್ರೀಕಂಠಯ್ಯ, ತಾವಾಗಿಯೇ, ತಮ್ಮ ಹೆಂಡತಿಯ ಹಂಗಿನಲ್ಲಿರಬೇಕಾಯಿತು. ಬೇರೆ ಮನೆಗೆ ಹೋಗೋಣಾ ಎಂದರೆ ಇಷ್ಟು ದೊಡ್ಡದಾದ ಮನೆ ನೂರು-ನೂರಐವತ್ತು ರೂಪಾಯಿಗಳ ಬಾಡಿಗೆ ಕೊಟ್ಟ ಹೊರತು ದೊರೆಯುವ ಹಾಗಿಲ್ಲ. ಕಾರ್ಖಾನೆಯ ಬಿಲ್ಡಿಂಗಿಗೇ ಬಾಡಿಗೆ ಕೊಡುವುದು ಸಾಕಾಗುತ್ತದೆ. ಇನ್ನು ಮನೆಗೆ ಬೇರೆ ಎಲ್ಲಿಂದ ತರುವುದು? ಈಗ ಬರುತ್ತಿರುವ ವರಮಾನ ಮನೆಯ ಖರ್ಚಿಗೇ ಸಾಲು ವುದಿಲ್ಲ. ಹೀಗೆ ನಿರುಪಾಯರಾದ ಶ್ರೀಕಂಠಯ್ಯ, ತಮ್ಮ ಆದರ್ಶವೇ ಕಳಚಿ ಬಿದ್ದ ಮೇಲೆ ಇನ್ನು ಬದುಕಿದರೇನು, ಹೋದರೇನು ಎಂಬ ಮನೋಭಾವ ದಿಂದ ಇರತೊಡಗಿದರು. ಒಂದು ಬಗೆಯಲ್ಲಿ ಅವರ ಜೀವನ ಮುಗಿದಂತಾಗಿತ್ತು.

ಮಾಧವ ಕಾರ್ಖಾನೆಯಲ್ಲಿಯೇ ನೆಲಸಿದ ಮೇಲೆ, ಅನೇಕ ಬದಲಾವಣೆ ಮಾಡಿದ. ಬೇಕಾದಷ್ಟು ಆರ್ಡರ್‌ಗಳೂ ಇವೆ, ಬೇಕಾದಷ್ಟು ವ್ಯಾಪಾರವೂ ಇದೆ. ಆದರೂ ಬರುವ ಲಾಭ ಸರಿಯಾಗಿ ಬರುತ್ತಿಲ್ಲ. ಅನಾವಶ್ಯಕವಾಗಿ ಇರುವ ಆಳುಗಳನ್ನೆಲ್ಲಾ ತೆಗೆಯೋಣ, ಸುಮ್ಮನೆ ವರ್ಷ ವರ್ಷಕ್ಕೂ ಜನ ಹೆಚ್ಚುತ್ತಾ ಇದ್ದಾರೆ ಎಂದು ತಿಳಿಸಿದಾಗ ಶ್ರೀಕಂಠಯ್ಯ ಅನುಮೋದಿಸಲಿಲ್ಲ. ತಂದೆಯೊಡನೆ ಚರ್ಚೆ ನಡೆಸಿ, ಸಮಯೋಚಿತವಾದ ಕಾರಣಗಳಿಂದ, ಹೊಸ ದಾಗಿ ಸೇರಿರುವ ಇಪ್ಪತ್ತು ಜನರನ್ನೂ, ಕಾನೂನಿನ ಪ್ರಕಾರ ಅವರಿಗೆ ಸಂಬಳ ಎಷ್ಟು ಕೊಡಬೇಕೋ ಅಷ್ಟು ಕೊಟ್ಟು, ಅವರನ್ನುಕೆಲಸದಿಂದ ತೆಗೆದು ಹಾಕಿದ. ಈ ಟೈಪಿಸ್ಟು, ಕ್ಲಾರ್ಕ್ ಇವರೆಲ್ಲಾ ಯಾಕೆ? ಇಲ್ಲದಿರುವಾಗ ಡಂಭಾಚಾರ ಯಾಕೆ? ಹೇಗಿದ್ದರೂ ನನಗೂ ಟೈಪು ಮಾಡಲು ಬರುತ್ತೆ. ಅವರಿಬ್ಬರ ಕೆಲಸವನ್ನೂ ನಾನೇ ನೋಡಿಕೊಳ್ಳುತ್ತೇನೆ. ಎಂದು ಅವರನ್ನೂ ಬಿಡಿಸಿ ದ್ದಾಯ್ತು. ಅಂಗಡಿಯನ್ನು ಮೋಹನನೇ ನೋಡಿಕೊಳ್ಳಲಿ, ಹೇಗಿದ್ದರೂ ಅವನಿಗೆ ರಜೆ ಬಂದಿದೆ. ನಂತರ ನೋಡಿಕೊಳ್ಳೋಣಾ ಎಂದುಕೊಂಡು ಅಂಗಡಿ ಯನ್ನು ನೋಡಿಕೊಳ್ಳುತ್ತಿದ್ದ ಸ್ಟೋರ್-ಕೀಪರ್‌ನ್ನೂ ತೆಗೆದಾಯ್ತು. ಕೆಟ್ಟು ಹೋದ, ಸರಿಪಡಿಸಲಾಗದ ಯಂತ್ರಗಳನ್ನು ಗುಜರಿಯಲ್ಲಿ ಮಾರಿ ಬಂದ ದುಡ್ಡನ್ನು ಸಾಲ ತೀರಿಸುವುದಕ್ಕಾಗಿಯೇ ಬಳಸಿದ. "ಅಮ್ಮಾ, ನೀನು ಹಿಂದಿನಂತೆಯೇ ಇರುವೆ ಅಂದರೆ ಸಾಧ್ಯವಿಲ್ಲ. ಸ್ವಲ್ಪ ಕಡಮೆ ಮಾಡು.

ಹುಡುಗರ ಸ್ಕೂಲ್-ಫೀಸು ಎಲ್ಲಾ ನಾನು ನೋಡಿಕೊಳ್ಳುತ್ತೇನೆ. ಇಗೋ ನಿನ್ನ ಸಂಸಾರಕ್ಕೆ ಮುನ್ನೂರು ರೂಪಾಯಿ ತೆಗೆದುಕೋ. ಪುನಃ ತಿಂಗಳ ವರೆಗೆ ಕೇಳಕೂಡದು ತಿಳಿಯಿತೆ?" ಎಂದು ಮಾಧವ ತಾಯಿಗೆ ಹೇಳಿದಾಗ ಜಾನಕೀಬಾಯಿ ಯಾವುದೊಂದು ಮಾತು ಕೂಡಾ ಆಡದೆ ಒಪ್ಪಿಕೊಂಡರು.

ಶ್ರೀಕಂಠಯ್ಯನವರದು ಒಂದು ಬಗೆಯ ಸ್ವಭಾವ. ಅವರ ಜೀವಿತ ದಲ್ಲೇ ಒಂದು ಬಾರಿಯಾದರೂ ತಿಂಗಳಿಗೆ ಸಾಕಾಗುವಷ್ಟು ಹಣವನ್ನು ಒಂದು ಸಲ ಪತ್ನಿಯ ಕೈಲಿ ಕೊಟ್ಟಿದ್ದೇ ಇಲ್ಲ. ಒಂದೇ ಬಾರಿಗೆ ಹಣವನ್ನು ಕೊಟ್ಟರೆ, ಅಷ್ಟೂ ಖರ್ಚು ಮಾಡಿ ಪುನಃ ತೊಂದರೆ ಪಡಿಸುತ್ತಾರೆ ಎಂಬುದು ಅವರ ಮನೋಗತ. ಅದಕ್ಕೇ ಅವರು ವಾರಕ್ಕೊಂದು ಬಾರಿಯೋ ಎರಡು ಬಾರಿಯೋ, ಜಾನಕೀಬಾಯಿ ಕೇಳಿದ್ದರ ಎರಡರಲ್ಲಿ ಒಂದಂಶದಷ್ಟು ಹಣವನ್ನು ಗೊಣಗಿ ಕೊಂಡು ಮನೆಯ ಸಾಮಾನು ಯಾವುದು ಬೇಕು ಎಂದು ಕೇಳಿ, ಅವರಿಂದ ಒಂದು ದೊಡ್ಡ ಪಟ್ಟಿಯನ್ನೇ ಪಡೆದ ಮೇಲೆ, ದುಡ್ಡು ಕೊಡುತ್ತಿದ್ದರು. "ತಿಂಗಳಿ ಗಾಗುವಷ್ಟು ಸಾಮಾನು ಒಂದು ಸಲ ತಂದರೇ ವಾಸಿ, ಬೆಲೆಯೂ ಅಗ್ಗ ವಾಗುತ್ತೆ, ಪೇಟೆಯಿಂದಲೇ ತಂದರೆ ಒಳ್ಳೆಯ ಸಾಮಾನು ಸಿಗುತ್ತೆ, ಒಬ್ಬಲ ವಾಗಿ ಮಾಡಿ, ಕೇರಿ ತುಂಬಿಟ್ಟುಕೊಳ್ಳಬಹುದು," ಎಂದು ಜಾನಕೀಬಾಯಿ ಎಷ್ಟೇ ವಿಧದಲ್ಲಿ ಹೇಳಿದ್ದರೂ ಅದು ಶ್ರೀಕಂಠಯ್ಯನವರಿಗೆ ಪಥ್ಯವಾಗಿರಲಿಲ್ಲ. ಇದರಿಂದ ರೋಷಗೊಂಡ ಜಾನಕೀಬಾಯಿ ತಮ್ಮ ಕೈಯನ್ನು ಇನ್ನೂ ಧಾರಾಳ ವಾಗಿಯೇ ಬಿಟ್ಟಿದ್ದರು. ಅದರಿಂದ ಈಗ ಮಗನ ಆಡಳಿತದಲ್ಲಿ, ತಮಗೆ ಅನು ಕೂಲವಾಯಿತಲ್ಲಾ ಎಂಬ ಸಂತೋಷದಲ್ಲಿ ಅವರು ಅಷ್ಟು ಹಣಕ್ಕೇ ಒಪ್ಪಿ ಕೊಂಡರು.

ಹೀಗೆ ಮಾಧವನ ಆಡಳಿತದಲ್ಲಿ ಕಾರ್ಖಾನೆಯಿಂದಲೂ ಮತ್ತು ಮನೆಯ ಖರ್ಚು ಕಡಮೆ ಮಾಡಿದ್ದರಿಂದಲೂ ತಿಂಗಳಿಗೆ ಬೇಕಾದಷ್ಟು ದುಡ್ಡು ಉಳಿ ತಾಯವಾಗುತ್ತಿತ್ತು. ಹಣ ಉಳಿಯುತ್ತದೆ ಎಂಬ ಧೈರ್ಯದಿಂದ ಮಾಧವ ಒಂದು ಚಿಕ್ಕ ಕಾಸು ಕೂಡಾ ಪೋಲು ಮಾಡುತ್ತಿರಲಿಲ್ಲ. ಒಂದು ಸಿನೇಮಾ, ಹೋಟೆಲ್ ಯಾವುದಕ್ಕೂ ಸುಳಿಯುತ್ತಲಿರಲಿಲ್ಲ. ಅವನ ಯೋಚನೆ ಎಲ್ಲಾ ಯಾವಾಗಲೂ ಒಂದೇ ವಸ್ತುವಿನಲ್ಲಿ ನಾಟಿ ಹೋಗಿತ್ತು. ಅದು ಕಾರ್ಖಾನೆ, ಅದರ ಹಿಂಬದಿ ಗಿದ್ದ ಸಾಲ.

ಮಾಧವನ ಅವಿಶ್ರಾಂತ ದುಡಿತದ ಫಲವಾಗಿ ಸಾಲದಲ್ಲಿ ಬಹು ಭಾಗ

ತೀರುತ್ತಾ ಬಂದಿದ್ದಿತು. ಇನ್ನು ಹೀಗೆಯೇ ನಾಲ್ಕೈದು ವರ್ಷಗಳು ಕಳೆದರೆ ಸಾಲವೆಲ್ಲಾ ತೀರಿ ಹೋಗಿ ತಾವು ಸ್ವತಂತ್ರರಾಗಿರಬಹುದೆಂದು ಮಾಧವ ಸಮಾಧಾನಗೊಂಡಿದ್ದ.

ಸರೂವಿನ ಜೀವನ ಯಂತ್ರದಂತೆ ಒಂದೇ ಬಗೆಯಲ್ಲಿ ಸಾಗಿತ್ತು. ಬೆಳಗ್ಗೆ ಆರು ಗಂಟೆಗೆ ಅಡುಗೆ ಮನೆ ಹೊಕ್ಕರೆ, ರಾತ್ರಿ ಹನ್ನೊಂದರ ವರೆಗೂ ಅಲ್ಲಿಯೇ ಇರಬೇಕಾಗುತ್ತಿತ್ತು. ಅದಾದ ನಂತರ ಅವಳಿಗೆ ಬಿಡುವು.

ಪ್ರತಿ ದಿನ ಎರಡು ಮೂರು ಬಗೆಯ ತರಕಾರಿ ಅಡುಗೆ ಮಾಡಬೇಕು: ಊಟದ ಜೊತೆಗೆ ಚಪಾತಿಗಳನ್ನೂ ಮಾಡಬೇಕಾಗಿತ್ತು. ಅದರ ಜೊತೆಗೆ ಯಾವುದಾದರೂ ಪಲ್ಯವಂತೂ ಇದ್ದೇ ತೀರಬೇಕು. ಮಿಡಲ್ ಸ್ಕೂಲಿಗೆ ಹೋಗುವ ಆನಂದ ಹತ್ತುಗಂಟೆಗೆ ಊಟಕ್ಕೆ ಬರುವವ. ಕಾಲೇಜಿಗೆ ಹೋಗುವ ಅಶೋಕ, ರಾಜು, ಮೋಹನ ಇವರದ್ದೇ ಒಂದು ತಂಡ; ಹೈಸ್ಕೂಲಿಗೆ ಹೋಗುವ ಮುರಲಿ, ಮುಕುಂದರದ್ದು ಒಂದು. ಹನ್ನೆರಡು ಗಂಟೆಗೆ ಮಾವನವರು; ಅವರಿಗೆ ಬಡಿಸಬೇಕು. ನಂತರ ತಾನೂ-ಜಾನಕೀಬಾಯಿ ಊಟಕ್ಕೆ ಕೂಡಬೇಕು. ಮಾಧವ ಎಲ್ಲಿಯಾದರೂ ಹೊರಗೆ ಹೋಗಿದ್ದರೆ, ಮನೆಗೆ ಬರುವುದು ಎರಡು ಗಂಟೆಯ ವರೆಗೂ ಆಗುತ್ತಿತ್ತು. ಅವನು ಬರುವ ವರೆಗೆ ಕಾದಿದ್ದು, ಅತ್ತೆ ಪತಿ ಇಬ್ಬರಿಗೂ ಬಡಿಸಿದ ನಂತರ ಸರೂ ಊಟ ಮಾಡಿ ಕೈತೊಳೆಯಬೇಕಾದರೆ ಗಂಟೆ ಎರಡೂವರೆಯಾಗುತ್ತಿತ್ತು. ಮೂರು ಗಂಟೆಯಿಂದ ಕಾಫಿಯ ಸಮಾರಾಧನೆ. ಮನೆಗೆ ಯಾರೇ ಬರಲೀ, ಅವರಿಗೆ ಕಾಫಿಯ ಉಪಚಾರವಂತೂ ಸಿದ್ಧ. ಯಾವ ಸ್ನೇಹಿತರೇ ಬರಲೀ ತಕ್ಷಣ ರಾಜುವಿನ ಮೂಲಕ ಹುಕುಂ ಹೋಗುತ್ತಿತ್ತು, 'ಅತ್ತಿಗೇ ನಾಲ್ಕು ಲೋಟಾ ಕಾಫೀ.' ಎಂದು.

ಜಾನಕೀಬಾಯಿ ಆಧುನಿಕ ರೀತಿ-ನೀತಿಗಳಿಗೆ ಮಾರು ಹೋಗಿದ್ದರು. ಬರೀ ಲೋಟಾದಲ್ಲಿ ಕಾಫಿ ತಂದು ಕೊಟ್ಟರೆ ಅವರ ಹೆಮ್ಮೆಗೆ ಕುಂದು ಉಂಟಾಗುತ್ತಿತ್ತು. ಹೋಟಲಿನಲ್ಲಿ ಕೊಡುವ ರೀತಿಯಲ್ಲಿ, ದೊಡ್ಡದಾದ ಟ್ರೇಯಲ್ಲಿ,

ಗಾಜಿನ ಕಪ್ಪು, ಬಸಿ, ಚಮಚೆ ಇವುಗಳ ಸಮೇತವಾಗಿಯೇ ತಂದು ಕೊಡ ಬೇಕು. ಅವರು ಕುಡಿದ ನಂತರ, ರಾಜೂ ಆ ಟ್ರೇಯನ್ನು ತಂದು ಒಳಗಿಡು ವನು. ತಕ್ಷಣ ತೊಳೆದು, ಅವಕ್ಕಾಗಿಯೇ ಇರುವ ಸ್ಟ್ಯಾಂಡ್‌ನಲ್ಲಿಡಬೇಕು. ಹಾಗೆಯೇ ತೊಳೆಯದೆ ಇರುವ ಕಪ್ಪು, ಜಾನಕೀಬಾಯಿಯವರ ಕಣ್ಣಿಗೆ ಬಿದ್ದರಂತೂ ಸರಿ 'ಕುಡಿದ ತಕ್ಷಣ ತೊಳೆದಿಡಬೇಕು ಅನ್ನುವ ಪದ್ಧತಿಯೇ ಇಲ್ಲ. ಎಷ್ಟು ಹೇಳಿದರೂ ನಿನಗೆ ವ್ಯಾಸಂಗವೇ ಇಲ್ಲಾ ಸರೂ ?" ಎಂದು ಕೂಗಾಡಿದುದೂ ಉಂಟು. ಈಗ ಸುಂದರಾ ಬೇರೆ ಮನೆಗೆ ಬಂದಿದ್ದಾಳೆ. ನಾಲ್ಕು ತಿಂಗಳು ಬೇರೆ ಆಗಿದೆ. ಜಾನಕೀಬಾಯಿಯವರ ಸಂತೋಷಕ್ಕೆ ಎಣೆಯೇ ಇಲ್ಲ. ಮಗಳಿಗೆ ಬಯಕೆ ಬೇರೆ. ಈ ದಿನ ಸಜ್ಜಿಗೆ, ನಾಳೆ ಬಾಳೇಕಾಯಿ ಉಪ್ಪೇರಿ, ನಾಡಿದ್ದು ಹುರಿಗಾಳು ಎಂದು ದಿನಕ್ಕೊಂದು ಬಗೆಯ ತಿಂಡಿ ಮಾಡುವ ಕೆಲಸ ಸರೂನ ಪಾಲಿಗೇ ಬಿದ್ದಿತು. ಇದರ ನಡುವೆ ಬಂದು ಹೋಗುವವರಿಗೆ ಕಾಫಿಯ ಉಪಚಾರ ಬೇರೆ. ಈ ಓಡಾಟಗಳಲ್ಲಿ ಸರೂ ಸೋತು ಹೋದಳು.

ಕೆಲಸ ತೀರಿಸಿ ಸಂಜೆ ಸ್ವಲ್ಪ ಸುಧಾರಿಸಿಕೊಳ್ಳೋಣಾ ಎಂದರೆ ಅದಕ್ಕೂ ಬಿಡುವಿರಲಿಲ್ಲ ಸರೂವಿಗೆ. ಜಾನಕೀಬಾಯಿ, ತಾವು ಹೋಗುವ ಕ್ಲಬ್, ಸ್ನೇಹಿತರ ಮನೆ, ಇಲ್ಲವೇ ಯಾರ ಮನೆಗಾದರೂ ಅರಿಶಿಣ-ಕುಂಕುಮಕ್ಕೆ, ಸರೂವನ್ನು ಕರೆದುಕೊಂಡೇ ಹೋಗುತ್ತಿದ್ದರು. ಎಲ್ಲಿಗೆ ಹೋದರೂ ಅಲ್ಲಿಗೆ ಸರೂ ಬಂದೇ ತೀರಬೇಕು. ಅವಳನ್ನು ಬಿಟ್ಟು ಸಾಧ್ಯವೇ ಇರಲಿಲ್ಲ. ಅವರ ಸ್ನೇಹಿತೆಯರೆಲ್ಲಾ "ನಮ್ಮ ಜಾನಕೀಬಾಯಿ ಸರಿ, ಸೊಸೆಯನ್ನಿಟ್ಟುಕೊಳ್ಳುವು ದರಲ್ಲಿ, ಮಗಳಂತೆಯೇ ಕಂಡುಕೊಂಡಿದ್ದಾರೆ." ಎಂದು ಬಾಯಿ ತುಂಬಾ ಹೊಗಳಬೇಕು. "ಸೊಸೆಯಾದರೆ ಏನಂತೆ, ಅವರು ಎಲ್ಲಿಗೂ ಬಂದು ಹೋಗಿ ಮಾಡಬಾರದೆ? ಅತ್ತೆಯ ಮನೆ ಎಂದರೆ ಸೆರೆಮನೆಯಾಗಬೇಕೆ?" ಎಂದು ಸೊಸೆ ಗಾಗಿ ಮರುಕ ಪಡುವವರಂತೆ ಮಾತಾಡುತ್ತಾರೆ. ಜಾನಕೀಬಾಯಿಯವರಿಗೆ ಹೊಗಳಿಸಿಕೊಳ್ಳಲು ಬಹಳ ಆಸೆ. ತಮ್ಮ ಹೊಗಳಿಕೆ, ಶ್ರೀಮಂತತನ ತೋರಿಸಿ ಕೊಳ್ಳುವುದಕ್ಕಾಗಿ ಮನೆಗೆ ಬಂದ ಸ್ನೇಹಿತೆಯರಿಗೆಲ್ಲಾ ಕಾಫಿ-ತಿಂಡಿಯ ಉಪ ಚಾರವೂ ನಡೆದು, ತೆಂಗಿನಕಾಯಿ ವೀಳ್ಯವನ್ನೇ ಕೊಡುತ್ತಿದ್ದರು. ಅವರ ಮನೆಗೆ ಬಂದವರು ಯಾರೂ ಬರಿ ಕೈಲಿ ಹಿಂದಿರುಗಿದುದೇ ಇಲ್ಲ. ಅವರ ಬಳಗ ಇಡೀ ಮಲ್ಲೇಶ್ವರದಲ್ಲಿಯೇ ಅಲ್ಲದೆ, ಬಸವನ ಗುಡಿ, ವಿಶ್ವೇಶ್ವರಪುರದ

ವರೆಗೂ ವ್ಯಾಪಿಸಿದ್ದಿತು. ಎಲ್ಲಿ ಹೋದರೂ ಅಲ್ಲಿ, ತಮ್ಮ ಹೊಗಳಿಕೆಯೇ ಹೊರತು ಬೇರಾವ ಮಾತೂ ಇರಲಿಲ್ಲ. ತಮ್ಮ ಪತಿಗೆ ಬರುತ್ತಿದ್ದುದು ಆರುನೂರು ರೂಪಾಯಿಗಳ ವರಮಾನವಾದರೂ, ಒಂದು ಸಾವಿರಕ್ಕೆ ಮೇಲ್ಪಟ್ಟೇ ಅವರು ಹೇಳುತ್ತಿದ್ದುದು. ತಾನು ಮನೆಗೆ ದಿನಕ್ಕೆ ಆರು ಸೇರು ಹಾಲು ಕೊಳ್ಳುತ್ತೇನೆ, ದಿನಕ್ಕೆ ಒಂದು ಪೌಂಡು ಕಾಫಿಪುಡಿ ಬೇಕು ಎಂದೆಲ್ಲಾ ಹೇಳುತ್ತಿದ್ದರು. ಸರೂ ಅವರ ಹೊಗಳಿಕೆಯನ್ನು ಕೇಳಿ ಕೇಳಿ ಬೇಸತ್ತಿದ್ದಳು. ಬಂಡವಾಳವಿಲ್ಲದ ಬಡಾಯನ್ನು ಏಕೆ ಹೇಳಿಕೊಳ್ಳಬೇಕು ಎಂಬುದೇ ಅವಳಿಗೆ ಅರ್ಥವಾಗುತ್ತಲಿರಲಿಲ್ಲ. ಕೆಲಸವನ್ನೆಲ್ಲಾ ಮುಗಿಸಿ, ಅತ್ತೆಯ ಜೊತೆಯಲ್ಲಿ ಹೋಗಬೇಕು, ಅಲ್ಲಿ ಸುಮ್ಮನೇ ಇವರ ಹೊಗಳಿಕೆ, ಆತ್ಮಸ್ತುತಿ ಇವುಗಳನ್ನುಕೇಳುತ್ತಾ ಕುಳಿತಿರಬೇಕು. ಮನೆಗೆ ಬಂದ ತಕ್ಷಣ, ಅಡಿಗೆ, ಊಟ ಎಂದು ಓಡಾಡಬೇಕು. 'ಹೊರಗೆ ಹೋಗುವುದೂ ಸಾಕು, ಈ ರೀತಿ ಅವಸರವಾಗಿ ಮಾಡುವುದೂ ಸಾಕು.' ಎಂದು ಸರೂ ಬೇಜಾರು ಪಡುತ್ತಿದ್ದಳು. ಆದರೂ ಅತ್ತೆಯ ಎದುರಿಗೆ ಹೇಳಲು ಧೈರ್ಯ ಸಾಲದೆ ಎರಡು ಸಂಕಟಗಳ ಮಧ್ಯೆ ಬಳಲಿದಳು ಸರೂ.

ಆ ದಿನ ತೀರ ಬೇಸರವೆನಿಸಿ ಮಾಧವನ ಕೈಲಿ ಹೇಳಿದಾಗ, ಮಾಧವ ಅವಳನ್ನು ರಾತ್ರಿ ಎಲ್ಲರ ಊಟವೂ ಮುಗಿದು, ಸರೂವಿನ ಕೆಲಸವೆಲ್ಲಾ ತೀರಿದ ಬಳಿಕ, ಬಳಿಯಲ್ಲಿಯ ಮೈದಾನಕ್ಕೆ ಕರೆದೊಯ್ದಿದ್ದ. ಸರೂ ಅವನೊಡನೆ, ಅವನಿಗೆ ಬೇಸರ ತರಿಸುವ ಸುದ್ದಿಗಳನ್ನು ಯಾವುದೂ ಹೇಳಲಿಲ್ಲ. ಅವಳಿಗೆ ಆ ಮನೆಯ ವಾತಾವರಣ, ಉಸಿರು ಕಟ್ಟುವಂತೆ ಆಗುತ್ತಿತ್ತು. ಎದ್ದರೆ ಅಂಕೆ, ಕೂತರೆ ತಪ್ಪು, ನಿಂತರೆ 'ಮ್ಯಾನರ್ಸ್ ಅಲ್ಲಾ,' ಎನ್ನುವ ಆ ಮನೆ, ಅವಳಿಗೆ ಸೆರೆಮನೆಯಂತಾಗಿತ್ತು. ಪ್ರತಿಯೊಬ್ಬರಿಗೂ, ಅವರವರ ಹೊತ್ತುಹೊತ್ತಿಗೆ ಮಾಡಿ ಹಾಕುವ ಅಡುಗೆಯವಳು, ಮಾಧವನಿಗೆ ರಾತ್ರಿಯ ಕಾಲದಲ್ಲಿ ಹೆಂಡತಿ. ನೋಡುವವರಿಗೆ ಅತ್ತೆ ಒಳ್ಳೆಯವರು, ಶ್ರೀಮಂತ ಮನೆತನ, ಬೇಕಾದಷ್ಟು ಒಡವೆ ಸೀರೆಗಳು, ಅವಳು ಒಳ್ಳೆಯ ಸುಖಸಾಗರದಲ್ಲಿಯೇ ಇರುವಂತೆ ಕಾಣುತ್ತಿತ್ತು. ಆದರೆ ಸರೂವಿನ ಪಾಲಿಗೆ ಅದಾವುದೂ ಬೇಕಿರಲಿಲ್ಲ. ಇಲ್ಲಿಂದ ಎಲ್ಲಿಗಾದರೂ ದೂರ....ದೂರ....ಬಹಳ ದೂರ ಹೋಗಿ ಬಿಡಬೇಕು. ಮಾಧವನಿಗೆ ಎಷ್ಟೇ ಕಡಿಮೆ ಸಂಬಳ ಬರಲಿ, ಅದರಲ್ಲಿಯೇ, ಅಂಬಲಿಯೋ ಗಂಜಿಯೋ ಊಟ ಮಾಡಿಕೊಂಡು, ಯಾರ ಅಂಕೆಯೂ ಇಲ್ಲದೆ ಸರಳವಾದ, ಸುಂದರವಾದ ತಮ್ಮ ಪುಟ್ಟ ಸಂಸಾರ ನಡೆಸಬೇಕು ಎಂಬ ಆಸೆ ಪ್ರಬಲವಾಗಿತ್ತು. ಯಾವ ಬಗೆ

ಯಿಂದಲಾಗಲೀ ಇಲ್ಲಿಂದ ಬಿಡುಗಡೆ ದೊರೆತರೆ ಸಾಕು ಎಂದು ಸರೂ ಪ್ರತಿ ನಿತ್ಯ ದೇವರಲ್ಲಿ ಬೇಡುತ್ತಿದ್ದಳು.

ಬೀದಿಯಲ್ಲಿಯ ಜನಸಂಚಾರವೆಲ್ಲಾ ನಿಂತಿತ್ತು. ಹುಣ್ಣಿಮೆಯ ದಿನ ವಾದರೂ, ಮೋಡ ಮುಸುಕಿದ ಆಕಾಶದಿಂದ, ಚಂದ್ರನ ಬೆಳಕು ಪೂರ್ತಿಯಾಗಿ ಬರುತ್ತಿರಲಿಲ್ಲ. ಸರೂ ಹೇಳಿದಳು: "ಮೊನ್ನೆ ದಿನ, ಆ ಕೆಲಸದ 'ಇಂಟರ್‌ವ್ಯೂ' ಗಾಗಿ ಮದ್ರಾಸಿಗೆ ಹೋಗಿದ್ದಿರಲ್ಲಾ ಏನಾಯ್ತು? ಈ ಕೆಲಸದ ನಡುವೆ ಕೇಳಲು ಆಗಲೇ ಇಲ್ಲ."

"ಆಗುವುದೇನು, ಇಲ್ಲಿಯ ಕಡೆ ಯಾವ ಕೆಲಸವೂ ಇಲ್ಲವಂತೆ. ಹುಬ್ಬ ಳ್ಳಿಗೋ, ಬಳ್ಳಾರಿಗೋ ಹೋಗಬೇಕಂತೆ. ನಾನು ಇದೇ ಊರನ್ನೇ ಕೊಡಿ ಎಂದು ಕೇಳಿದೆ. ಆದರೆ ಇಲ್ಲಿ ಯಾವ ಕೆಲಸವೂ ಖಾಲಿ ಇಲ್ಲಾ ಅಂದರು. ಸರಿ ನಾನು ಬಂದುಬಿಟ್ಟೆ."

"ಬೇರೆ ಊರಾಗಿದ್ದರೆ ಏನಾಗಿತ್ತು. ಕೆಲಸ ಅಂದಮೇಲೆ ಎಲ್ಲಿ ಆದರೇನು?"

"ನಿನ್ನ ಮನೋಗತ ನನಗೆ ಗೊತ್ತು ಸರೂ. ಇಲ್ಲಿಂದ ಬೇರೆ ಊರಿಗೆ ಹೋಗಬೇಕೆಂದು ನೀನು ಬಯಸುವೆ. ಆದರೆ ಅದು ಎಂದಿಗೂ ಸಾಧ್ಯವಿಲ್ಲ ಸರೂ. ನೋಡು, ತಂದೆಯವರಿಗೂ ವಯಸ್ಸಾಗುತ್ತಾ ಬಂತು. ಹಿಂದಿನಂತೆ ಕೆಲಸ ಮಾಡಲು ಸಾಧ್ಯವಿದೆಯೇ ನೀನೇ ಹೇಳು? ಅದರಿಂದ ಅವರು ನನ್ನನ್ನೇ ನಂಬಿಕೊಂಡಿದ್ದಾರೆ. ಈ ಸಂಸಾರದ ಹೊಣೆಗಾರಿಕೆ ಎಲ್ಲಾ ಈಗ ನನ್ನ ಮೇಲೆ ಬಿದ್ದಿದೆ. ಈಗ ಅಲ್ಪ ಸ್ವಲ್ಪ ಸಾಲವೂ ತೀರುತ್ತಾ ಬಂದಿದೆ. ವ್ಯಾಪಾರವೂ ಕುದುರಿದೆ. ಇಂತಹ ಸಮಯದಲ್ಲಿ ನಾನು ಬೇರೆ ಹೋಗುತ್ತೇನೆ ಅಂದರೆ, ಅವರು ಎಷ್ಟು ನೊಂದುಕೊಳ್ಳುತಿರೆ? ಈ ಕಾರ್ಖಾನೆ ನೋಡಿಕೊಳ್ಳುವವರು ಯಾರು? ಅಶೋಕನಿಗೆ ಕೆಲಸವಾಗಿದೆ. ಮೋಹನ ಇನ್ನು ಮುಂದೆ ಓದುವು ದಿಲ್ಲವೆನ್ನುತ್ತಾನೆ. ಅವನಿಗೂ ಕೆಲಸ ಸಿಗಬಹುದು. ಇನ್ನು ಮುರುಲಿ, ಮುಕುಂದ, ಆನಂದ ಇವರ ವಿದ್ಯಾಭ್ಯಾಸವಾಗಬೇಡವೆ? ನಾನೂ ಬೇರೆ ಹೋಗಿದ್ದರೆ, ಮದುವೆಯಾದ ಹೊಸತದರಲ್ಲಿ ಹೋಗಬೇಕಾಗಿತ್ತು. ಆದರೆ ನಾನು ತಂದೆಗೆ ಮಾತು ಕೊಟ್ಟಿದ್ದೇನೆ. 'ಕಡೆಯ ತನಕ ಈ ಕಾರ್ಖಾನೆಯ ಪೂರ್ತಿ ಜವಾ ಬ್ದಾರಿಯನ್ನು ನಾನು ತೆಗೆದುಕೊಳ್ಳುವೆ' ಎಂದು. ಅದರಿಂದ ಅಣ್ಣಾ ಈಗ ಯಾವ ಯೋಚನೆಯೂ ಇಲ್ಲದೆ ಇದ್ದಾರೆ. ನನ್ನನ್ನು ನಂಬಿ, ಹೀಗೆ ಕೊಟ್ಟ ಮಾತನ್ನೂ ಮುರಿದು, ಅವರನ್ನು ನಡುನೀರಿನಲ್ಲಿ ಕೈ ಬಿಡಲು ಸಾಧ್ಯವೇ ನೀನೇ ಹೇಳು

ಸರೂ? ಇದು ಸರಿಯೆ? ಅಣ್ಣ, ತನ್ನ ಧ್ಯೇಯಸಾಧನೆಗಾಗಿ ಎಷ್ಟು ಕಷ್ಟಪಟ್ಟಿ ದ್ದಾರೆ ನಿನಗೆ ಗೊತ್ತೇ? ಈಗಿನ ಕಮ್ಯೂನಿಜಂ ಕಾಲದಲ್ಲಿ ಬಂಡುವಾಳಗಾರ ನಾಗಿ ಕಾರ್ಖಾನೆಯನ್ನು ನಡೆಸುವುದೆಂದರೆ ಸಾಮಾನ್ಯವಾದ ಕೆಲಸವೆ? ಎದ್ದರೆ ಟ್ಯಾಕ್ಸ್, ನಿಂತರೆ ಟ್ಯಾಕ್ಸ್, ಕಂಟ್ರೋಲು ಅಂತ ಆ ಸರಕಾರದವರ ಕಾಟ. ಈ ಕಡೆ ಈ ಕೆಲಸಗಾರರ ಸಂಪು, ಮಾತೆತ್ತಿದರೆ ಇನ್‌ಕ್ರಿಮೆಂಟು, ಬೋನಸ್ಸು ಅಂತ ಅವರ ಗೋಳು ಒಂದು ಕಡೆ. ಇಷ್ಟೆಲ್ಲಾ ದುಡಿದು ಕಷ್ಟಪಟ್ಟರೂ ಅವರು ತಮಗಾಗಿ ಏನು ಮಾಡಿಕೊಳ್ಳುತ್ತಾರೆ? ನಮ್ಮ ಸುಖಕ್ಕಾಗಿ ಅವರು ಎಷ್ಟು ತ್ಯಾಗ ಮಾಡಿದ್ದಾರೆ? ಷರಟು ಹರಿದುಹೋಗಿರಲೀ ಅದನ್ನೇ ಹಾಕಿಕೊಳ್ಳು ತ್ತಾರೆಯೇ ಹೊರತು ಬೇರೆ ಹೊಸದು ಕೊಳ್ಳುವ ಯೋಚನೆ ಮಾಡುತ್ತಾರೆಯೆ? ನಾವಾಗಿಯೇ ನೋಡಿ ಹೊಲಿಸಿದರೆ ಸರಿ, ಇಲ್ಲವಾದರೆ ಹಾಗೆಯೇ ಕಾಲ ತಳ್ಳು ತ್ತಾರೆ. ಬಿಸಿಲಿನಲ್ಲಿಯೇ ನಡೆದು ಕಾರ್ಖಾನೆಗೆ ಹೋಗುವುದನ್ನು ನೋಡಿದರೆ ನನ್ನ ಕರುಳು ಕಿತ್ತು ಬರುತ್ತದೆ ಸರೂ! ಮನೆಯಲ್ಲಿ ಎರಡು ಮೂರು ಸೈಕಲ್ ಗಳಿವೆ. ಅದರಲ್ಲಿ ಯಾಕೆ ಹೋಗಬಾರದು ಎಂದು ನೀನು ಕೇಳಬಹುದು. 'ಹುಡುಗರು ಕಷ್ಟಪಡುವುದು ಬೇಡ, ಅವರು ತಿರುಗಲಿ' ಎಂದು ತಾವು ಉಪ ಯೋಗಿಸುವುದೇ ಇಲ್ಲ. ಆ ತ್ಯಾಗಶೀಲಮೂರ್ತಿಯಾದ ನನ್ನ ತಂದೆಯನ್ನು ಬಿಟ್ಟು ನಾನು ಎಲ್ಲಿಗೂ ಬರಲಾರೆ ಸರೂ." ಮಾಧವ ತನ್ನ ಮನ ಬಿಚ್ಚಿ ನುಡಿ ದಿದ್ದ. ತನ್ನ ಖಂಡಿತವಾದ ಉತ್ತರದಿಂದ, ಸರೂವಿನ ಮನಸ್ಸು ಏನಾಗುವುದು ಎಂಬುದರ ಕಲ್ಪನೆಯೇ ಬರಲಿಲ್ಲ ಮಾಧವ ಸರೂವನ್ನು ಪ್ರೀತಿಸುತ್ತಿದ್ದ, ಕೈ ಹಿಡಿದ ಹೆಂಡತಿ ಎಂದು; ಮದುವೆಯಾಗಿದ್ದ, ತಂದೆಯ ಮಾತಿಗೆ ಕಟ್ಟುಬಿದ್ದು. ಹೆಂಡತಿಯನ್ನು ಕಾಪಾಡಬೇಕು, ಪ್ರೀತಿಸಬೇಕು ಎಂಬ ಒಂದು ರೂಢಭಾವನೆ ಯಿಂದ ಅವಳನ್ನು ಕಾಣುತ್ತಿದ್ದ. ಬೇರೆ ಯಾವ ಬಗೆಯ ಉತ್ಕಟವಾದ ಪ್ರೀತಿಯೂ ಅವನಲ್ಲಿ ಮೂಡಿರಲಿಲ್ಲ. ಇದನ್ನರಿತಾಗಿನಿಂದ ಸರೂವಿನ ಸಂಸಾರ- ಸುಖರತರಮ್ಯಕಲ್ಪನೆಯು ಕನಸಿನಂತೆ ಬಯಲಾಗಿತ್ತು. ಇಂದಲ್ಲ ನಾಳೆ ಗಾದರೂ, ಸ್ವತಂತ್ರವಾಗಿ ಬಾಳಬಹುದು, ತನ್ನದೂ ಅನ್ನುವ ಮನೆ ಕಾಣ ಬಹುದು ಎಂಬ ಒಂದೇ ಒಂದು ಆಸೆ ಅವಳ ಅಂತರಾಳದಲ್ಲಿ ಈ ಮೊದಲು ಮೂಡಿತ್ತು. ಈಗ ಮಾಧವನ ಮಾತಿನಿಂದ ಅದೂ ಕರಗಿಹೋಯಿತು. ಕಡೆಯ ವರೆಗೂ, ತಾನು ಸಾಯುವ ವರೆಗೂ ಇದೇ ಮನೆಯಲ್ಲಿಯೇ ಕೊಳೆಯ ಬೇಕಲ್ಲಾ ಎಂದು ಸರೂ ವಿಲಪಿಸಿದಳು. ಅವಳ ಬದುಕು ಮಾಧವನನ್ನಾಶ್ರಯಿ

ಸಿತ್ತು. ಅವನಿಗಾಗಿಯೇ ಅವಳು ಬದುಕಿದ್ದಳು. ತನ್ನ ಮನೋಜೀವನ ವನ್ನೆಲ್ಲಾ ಅಂಕೆಯಲ್ಲಿಟ್ಟುಕೊಂಡು ಹೇಳಿದಳು: "ನಾನು ನಿಮ್ಮವಳು. ನನ್ನ ಹೊಣೆ ನಿಮ್ಮದೇ ಆಗಿದೆ. ನೀವು ನನ್ನ ಪಾಲಿನ ಭಾಗ್ಯದೇವತೆ ನನ್ನ ಜೀವಿತದ ಆಗು-ಹೋಗುಗಳೆಲ್ಲಾ ನಿಮ್ಮನ್ನೇ ಆಶ್ರಯಿಸಿವೆ. ನಮ್ಮ ತಾಯಿ ಹೇಳುತ್ತಿದ್ದರು: ಪತಿಯ ಸುಖಕ್ಕಾಗಿ ಆತ್ಮಾರ್ಪಣೆಯನ್ನು ಮಾಡಿಕೊಳ್ಳುವ ಸುಖಕ್ಕಿಂತ ಹೆಚ್ಚಿನದು ಬೇರಾವುದೂ ಇಲ್ಲ' ಎಂದು. ಆ ನನ್ನ ಗತಿಸಿದ ತಾಯಿಯ ಮಾತುಗಳು ಈಗಲೂ ನನ್ನ ಕಿವಿಯಲ್ಲಿ ಮೊರೆಯುತ್ತಿವೆ. ನಾನು ಎಂದು ನಿಮ್ಮವಳಾದೆನೋ, ಅಂದೇ ನಾನು ನನ್ನನ್ನು ನಿಮ್ಮಲ್ಲಿ ಸಮರ್ಪಿಸಿಕೊಂಡಿದ್ದೇನೆ. ಅಂದಿನಿಂದ, ನಿಮ್ಮಿಂದ ಬೇರೆಯಾದ ಮನೋಭಾವವೇ ನನಗೆ ಬಂದಿಲ್ಲ. ನಿಮ್ಮ ಇಷ್ಟವೇ ನನ್ನದು, ನಿಮ್ಮ ಸುಖವೇ ನನ್ನ ಸುಖ, ನಿಮ್ಮ ಕಷ್ಟವೇ ನನ್ನ ಕಷ್ಟ, ನಿಮ್ಮನ್ನು ಬಿಟ್ಟು ಬೇರಾವುದೂ ನನಗೆ ಇಲ್ಲ. ಈ ದೊಡ್ಡದಾದ ಸಂಸಾರ, ಅದರ ಹೊಣೆಗಾರಿಕೆ, ನೀವು ಈ ಚಿಕ್ಕವಯಸ್ಸಿನಲ್ಲಿಯೇ ವಹಿಸಿ ಕೊಳ್ಳುವುದು ಬೇಡಾ ಅಂತ ಹೇಳಿದೆ ಅಷ್ಟೇ. ನಿಮ್ಮ ಅಭೀಷ್ಟವೇ ನಡೆಯಲಿ. ನನಗಾವ ತೊಂದರೆಯೂ ಇಲ್ಲ. ಒಟ್ಟಿನಲ್ಲಿ ನೀವು ಸುಖವಾಗಿ, ನೆಮ್ಮದಿಯಾಗಿ ಬಾಳಿದರೆ, ಅದಕ್ಕಿಂತ ಬೇರೆಯ ಸುಖ ನನಗಿಲ್ಲ. ನಿಮ್ಮ ನೆರಳು ನಾನು. ನೀವು ಎಲ್ಲಿದ್ದರೆ, ಅದೇ ನನಗೆ ಸ್ವರ್ಗ, ನೀವಿಲ್ಲದ ಜಾಗ, ನನಗೆ ನರಕ-ಸಮಾನ. ನನಗೆ ಬೇರೆ ಯಾವ ಸುಖದುಃಖ ಕಷ್ಟ-ಸುಖ, ಆಸೆ-ನಿರಾಸೆಗಳಾವುದೂ ಇಲ್ಲ. ನನ್ನ ಆತ್ಮವನ್ನೇ ನಿಮ್ಮಲ್ಲಿ ಅರ್ಪಿಸಿದ ಮೇಲೆ, ನನ್ನದು ಎಂಬ ಶಬ್ದವಾದರೂ ಎಲ್ಲಿ ಬರುತ್ತದೆ?" ಎಂದು ಸರೂ ಬಹಳೊತ್ತು ಮೈಮರೆತು ಮಾತನಾಡಿದಳು. ಮಾಧವ ಸುಮ್ಮನೇ ಕೇಳುತ್ತಿದ್ದ. ಹೊತ್ತು ಎಷ್ಟಾದೀತೆಂಬುದರ ಕಲ್ಪನೆಯೇ ಅವರಿಗಾಗಲಿಲ್ಲ. ಆ ನಿಸರ್ಗದ ಸೌಂದರ್ಯದಲ್ಲಿ ಅವರು ತಲ್ಲೀನರಾಗಿದ್ದರು. ಸರೂ ಮಾಧವರು ಮನೆಗೆ ಬಂದಾಗ ಗಂಟೆ ಹನ್ನೆರಡರ ಮೇಲಾಗಿತ್ತು. ಜಾನಕೀಬಾಯಿಯವರೇ ಬಾಗಿಲು ತೆರೆದರು. ಮಾಧವ ನೇರವಾಗಿ ತನ್ನ ರೂಮಿಗೆ ಹೊರಟುಹೋದ. ಸರೂವಿಗೆ ಬೈಗಳ ಮಳೆ ಕಾದಿತ್ತು. ಅಂದಿನಿಂದ ಸರೂ ಮಾಧವನೊಡನೆ ವಾಕಿಂಗ್ ಎಂಬ ಶಬ್ದವನ್ನೇ ಎತ್ತಲಿಲ್ಲ.

ವಾರಕ್ಕೊಮ್ಮೆ ಗೋವಿಂದರಾಯರಿಂದ ತಪ್ಪದೇ ಕಾಗದ ಬರುತ್ತಿತ್ತು. "ಪ್ರತಿದಿನವೂ ಗಂಗಾಸ್ನಾನ, ವಿಶ್ವೇಶ್ವರನ ಅರ್ಚನೆ, ದೇವರ ಪ್ರಸಾದವೇ

ಊಟ, ಮಲಗಲು ದೇವಾಲಯದ ಸುತ್ತಲೂ ಇರುವ ಪೌಳಿಯಲ್ಲಿಯ ಮಂಟಪವೇ ಮನೆ. ದೇವಾಲಯದ ಅರ್ಚಕರು ನಮಗೆ ಗುರುತಾಗಿದ್ದಾರೆ. ಅವರ ಹಿರಿಯರೂ ಮೈಸೂರಿನ ಕಡೆಯವರಂತೆ. ಅದರಿಂದ ನಮ್ಮನ್ನು ಕಂಡರೆ ಅವರಿಗೆ ಬಹಳ ಆದರ. ನಾವು ಅಡುಗೆ ಮಾಡಿಕೊಳ್ಳಲು ಹವಣಿಸುವುದನ್ನು ನೋಡಿ ಅವರು ನಮ್ಮನ್ನು ತಡೆದರು. ಅವರ ಉದಾರ ಮನಸ್ಸಿನಿಂದ ನನಗೆ ಮತ್ತು ಅಕ್ಕನಿಗೆ ಮಧ್ಯಾಹ್ನ ದೇವರ ಪ್ರಸಾದ, ಅಂದರೆ ಎಲ್ಲಾ ಭಕ್ಷ್ಯಭೋಜ್ಯಗಳ ಪಂಚಾನ್ನ ಕೊಡುತ್ತಾರೆ. ಅದು ನಮಗೆ ಸಾಕು. ರಾತ್ರಿಯ ವೇಳೆ ಯಾವುದಾದರೂ ಹಣ್ಣೋ ಕಾಯೋ ತಿಂದು ಮಲಗುವುದು. ಈಗ ಕಾಫಿ ತಿಂಡಿ ಯಾವ ಹವ್ಯಾಸವೂ ಇಲ್ಲ. ನಾನೂ ಅನೇಕ ಬಗೆಯಲ್ಲಿ ಆ ಅರ್ಚಕರಿಗೆ ಸಹಾಯ ಮಾಡುವೆ. ಅಕ್ಕ ದೇವರಿಗೆ ಮಂಗಳಾರತಿ ಬತ್ತಿ, ಹೂಬತ್ತಿ ಮೊದಲಾದುವನ್ನು ಮಾಡುವುದು ಎಂದು ಕಾಲಕಳೆಯುತ್ತಾಳೆ. ನಮ್ಮ ಕಾಲವೆಲ್ಲಾ ಯಾವಾಗಲೂ ದೇವರ ಎದುರಿನಲ್ಲಿಯೇ ಕಳೆಯುತ್ತೆ. ದೇವಾಲಯಕ್ಕೆ ಬರುವ ಭಕ್ತಾದಿಗಳನ್ನು ನೋಡುತ್ತಾ ಕೂತರೆ ಸಮಯ ಸರಿದುದೇ ತಿಳಿಯುವುದಿಲ್ಲ. ಅಕ್ಕ ನಿನಗಾಗಿ ಹಂಬಲಿಸುತ್ತಾಳೆ. ಸದ್ಯಕ್ಕೆ ನಾವು ಅತ್ತ ಕಡೆ ಬರುವ ಯೋಚನೆ ಇಲ್ಲ. ಅದಕ್ಕಾಗಿ ನೀನು ಸುಮ್ಮನೆ ಚಿಂತಿಸಬೇಡ. ಆಗಾಗ್ಗೆ ಕಾಗದ ಬರೆಯುತ್ತಿರು." ಹೀಗೆ ಕಾಗದಗಳು ಪ್ರತಿವಾರಕ್ಕೊಮ್ಮೆ ಬರುತ್ತಿದ್ದುವು. ಸರೂ ತಂದೆಗೆ ಕಾಗದ ಬರೆಯುತ್ತಿದ್ದಳು. ಅದೊಂದಕ್ಕೆ ಯಾವ ಅಂಕೆಯೂ ಇರಲಿಲ್ಲ.

ಸುಂದರಳಿಗೆ ಬಳೆ ತೊಡಿಸಿದ ಆರತಿಯನ್ನು ತಮ್ಮ ಸಂಪ್ರದಾಯದಂತೆ ಜಬರ್ದಾಗಿಯೇ ನಡೆಸಿದರು ಜಾನಕೀಬಾಯಿ. ಮಗಳಿಗೆ ಮುತ್ತಿನ ಬಳೆಯನ್ನು ಮಾಡಿಸಿಯಾಯಿತು. ಸರೂವಿನ ಕೆಲಸದ ಜೊತೆಗೆ ಈ ಓಡಾಟವೂ ಸೇರಿತು. ಒಂದು ದಿನ ಸುಂದರಾ, ಆಸ್ಪತ್ರೆಯಲ್ಲಿಯೇ ಹೆಣ್ಣುಮಗು ಪ್ರಸವಿಸಿದಳು. ಮಗು ಕೆಂಪಗೆ, ಸಣ್ಣದಾಗಿದ್ದು ತಂದೆಯನ್ನೇ ಹೋಲುತ್ತಿತ್ತು. ಜಾನಕೀ-ಬಾಯಿ, ಮೊಮ್ಮಗಳನ್ನು ಹೊಗಳಿದ್ದೂ ಹೊಗಳಿದ್ದೇ. ಗೆಳತಿಯರೆಲ್ಲಾ ಬಂದು ತೊಟ್ಟಿಲಿಡುವ ದಿನ 'ಕೂಸು ಚೆನ್ನಾಗಿದೆ' ಎಂದು ಬಹಳ ಹೊಗಳಿಯೂ ಹೋದರು.

ಸರೂ ಈಚೆಗೆ ಬಹಳ ತೆಳ್ಳಗಾಗಿದ್ದಳು. ಸ್ವಲ್ಪ ಕೆಲಸ ಮಾಡಲಿ, ತಲೆ ತಿರುಗಿ ಬೀಳುವಂತಾಗುತ್ತಿತ್ತು. ಜೊತೆಗೆ ವಾಂತಿಯೂ ಸುರುವಾಗಿತ್ತು.

ಜಾನಕೀಬಾಯಿ ನರ್ಸನ್ನೇ ಮನೆಗೆ ಕರೆಸಿ ತೋರಿಸಿದರು. ಆಕೆ ತಮಗೆ ಇನ್ನೊಬ್ಬ ಮೊಮ್ಮಗ ಬರುತ್ತಾನೆಂದು ಹೇಳಿ ಹೋದಳು. ಮಾಧವ ಎಲ್ಲರಂತೆ ಸಂತೋಷಿಸಿದ ಅಷ್ಟೆ. ಏನೇ ಆದರೂ ಸರೂವಿಗೆ ತನ್ನ ಕೆಲಸ ತನಗೆ ಇದ್ದೇ ಇತ್ತು. ಅವಳಿಗೆ ಯಾವ ಬಯಕೆಯೂ ಇಲ್ಲ, ಸಂಕಟವೂ ಇಲ್ಲ. ಅವಳೊಬ್ಬ ಯಂತ್ರಜೀವಿ ಎನ್ನುವ ಮಟ್ಟಿಗೆ, ಸರೂ ದುಡಿಯುತ್ತಿದ್ದಳು. ಸರೂ ತನ್ನ ವಿಚಾರವಾಗಿ ಏನೂ ಬರೆಯುತ್ತಿರಲಿಲ್ಲ ಕಾಗದದಲ್ಲಿ. ಹಡೆದ ತಂದೆಗೆ, ಹೆಣ್ಣು ಮಗಳು ಹೇಗೆ ತಾನೇ ಲಜ್ಜೆ ಬಿಟ್ಟು ಈ ಸಮಾಚಾರವನ್ನು ಬರೆಯಲಾಗುತ್ತೆ ? ಮಾಧವ ಮೊದಲೇ ಸಂಕೋಚದವ; ಅದರಲ್ಲೂ ಅವನಿಗೆ ಬಿಡುವೇ ಇರಲಿಲ್ಲ. ತಂದೆಗೆ ಸುದ್ದಿಯನ್ನು ತಿಳಿಸುವ ಬಗೆ ಹೇಗೆ ಎಂದು ಅವಳ ಮನಸ್ಸು ಡೋಲಾಯಮಾನ ಸ್ಥಿತಿಯಲ್ಲಿರುವಾಗಲೇ, ಒಂದು ಕೆಟ್ಟ ಸಂಗತಿ ಬಂದಿತು.

ಗೋವಿಂದರಾಯರು ಕಾಗದ ಬರೆದಿದ್ದರು:

"ರಂಗಮ್ಮ ನಿನ್ನೆಯ ದಿನ ಸ್ನಾನ ಮಾಡಲು ನದಿಗೆ ಹೋದಾಗ, ಅಕಸ್ಮಾತ್ ಕಾಲು ಜಾರಿ ಬಿದ್ದುಬಿಟ್ಟರು. ಬಿದ್ದವರು ನೇರವಾಗಿ ಒಳಗೇ ಹೋದರು. ಅವರನ್ನು ರಕ್ಷಿಸಲು ಮಾಡಿದ ಪ್ರಯತ್ನವೆಲ್ಲಾ ವಿಫಲವಾಯ್ತು. ರಂಗಮ್ಮ ನೀರು ಕುಡಿದುಬಿಟ್ಟಿದ್ದರು. ಏನು ಮಾತೂ ಆಡಲಿಲ್ಲ. ಬರೀ 'ಸ....ರೂ....' ಎಂಬ ಮಾತಿನೊಡನೆ ಅವರ ಅಂತ್ಯವಾಯ್ತು. ಅಕ್ಕನ ಅಂತ್ಯಸಂಸ್ಕಾರವನ್ನೂ ನಾನೇ ಮಾಡಿದೆ. ಇನ್ನೊಬ್ಬರಿಗಾಗಿ ತನ್ನ ದೇಹವನ್ನೆ ತೇಯ್ದು ನನ್ನ ಅಕ್ಕ ನನ್ನನ್ನು ಅನಾಥನನ್ನಾಗಿ ಮಾಡಿ, ತಾನು ಬಂದ ಜಾಗಕ್ಕೆ ಹೊರಟು ಹೋದಳು ! ಇನ್ನು ನಾನು ಯಾರಿಗಾಗಿ ಅಲ್ಲಿ ಬರಬೇಕು ? ನೀನು ನೆಮ್ಮದಿಯಾಗಿರುವೆ. ಅದು ನನಗೆ ಬಹಳ ಸಂತೋಷದಾಯಕವಾದ ವಾರ್ತೆ. ಹೇಗಿದ್ದರೂ ನಮ್ಮ ವಿಶ್ವನಾಥನಿದ್ದಾನೆ, ಅವನೇನೂ ನನ್ನ ಕೈ ಬಿಡುವುದಿಲ್ಲ. ಆದರಿಂದ ನಾನು ಬರುವ ಯೋಚನೆ ಮಾಡಿಲ್ಲ. ಏನೇ ಆಗಲೀ ನೀನು ಧೈರ್ಯ ಮಾತ್ರ ಬಿಡಬೇಡ. ನಿನ್ನ ಪತಿಯನ್ನು ಅನುಸರಿಸಿಕೊಂಡಿರು. ನಿನ್ನ ಈ ತಂದೆ ಗಾಗಿ ಏನೂ ದುಃಖಿಸಬೇಡ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ.

—ಇಂತೀ ಆಶೀರ್ವಾದಗಳು.

ನಿನ್ನ ಗೋವಿಂದರಾಯ"

ಸರೂ ಕಾಗದ ಓದಿದವಳೇ ಅಲ್ಲಿಯೇ ಕುಸಿದು ಬಿದ್ದಳು. ಅವಳ ಪ್ರಜ್ಞೆ ತಪ್ಪಿತ್ತು. ಜಾನಕೀಬಾಯಿ ಓಡಿ ಬಂದು ಹಣೆಗೆ ನೀರು ಚಿಮುಕಿಸಿ ಗಾಳಿ

ಹಾಕಿದ ಮೇಲೆ ಸರೂ ಕಣ್ತೆರೆದಳು. 'ಅತ್ತೇ....ಅತ್ತೇ' ಎಂದು ಗಟ್ಟಿಯಾಗಿ ಅಳಲಾರಂಭಿಸಿದಳು. ಅವಳು ಅಳುವುದನ್ನು ಕೇಳಿ ಎಲ್ಲರೂ ಗಾಬರಿಯಾಗಿ ಓಡಿಬಂದರು. ಮಾಧವ ಅವಳ ಬಳಿಯಲ್ಲಿದ್ದ ಕಾಗದವನ್ನು ಓದಿದ. ವಿಷಯ ತಿಳಿದು ಎಲ್ಲರೂ ದುಃಖಿಸಿದರು. "ವಯಸ್ಸಾದವರು, ಸತ್ತು ಗೆದ್ದರು ಬಿಡು. ಹಸೀ ಮೈನಲ್ಲಿ ಅತ್ತು ಕರೆದು ಮಾಡಿದರೆ ಏನಾದರೂ ಆದೀತು. ಎಲ್ಲರೂ ಒಂದಲ್ಲ ಒಂದು ದಿನ ಹೋಗಲೇಬೇಕು." ಎಂದು ಜಾನಕೀಬಾಯಿ ಸಮಾಧಾನಪಡಿಸಿದರು. ತನ್ನನ್ನು ಸಾಕಿ ಸಲುಹಿದ ಅತ್ತೆ, ಯಾರ ಹತ್ತಿರ ತನ್ನ ಮನದ ಅಂತರಂಗವನ್ನೂ, ಕಷ್ಟ ಸುಖಗಳನ್ನೂ ಹೇಳಿಕೊಳ್ಳುತ್ತಿದ್ದಳೋ ಆ ತನ್ನ ಅತ್ತೆ, ತನ್ನಿಂದ ಅಗಲಿ ಹೋದುದನ್ನು ನೆನೆದು ಸರೂ ಗೋಳಾಡಿದಳು. ದಿನಕ್ಕೊಂದು ಬಾರಿ ಅತ್ತೆಯನ್ನು ನೆನೆದು ನೆನೆದು ದುಃಖಿಸುವುದು ಸರೂವಿನ ದಿನಚರಿಯಲ್ಲೊಂದಾಯಿತು.

ಶ್ರೀಕಂಠಯ್ಯ ಯಾವುದನ್ನು ಆಗಬಾರದೆಂದು ತಡೆದಿದ್ದರೋ, ಅದು ಆಗಿಯೇ ಆಯಿತು. ಕೆಲಸಗಾರರ ಕಾಟ ದಿನೇ ದಿನೇ ಹೆಚ್ಚುತ್ತಾ ಹೋಯಿತು. ಮಾತೆತ್ತಿದರೆ ಸಂಪು, ಎದ್ದರೆ ಬೊನಸ್ಸು, ಕೂತರೆ ಇನ್‌ಕ್ರಿಮೆಂಟ್ ಎಂದು ಕೆಲಸಗಾರರೊಡನೆ ಹೋರಾಡಿ ಸುಸ್ತಾದರು. ಶ್ರೀಕಂಠಯ್ಯ ತಮ್ಮ ಪದಾರ್ಥ ಚೆನ್ನಾಗಿರಬೇಕು, ತೆಗೆದುಕೊಂಡವರು ಒಂದಿಷ್ಟೂ ಆಕ್ಷೇಪಣೆಯನ್ನು ಮಾಡು ದಂತಿರಬೇಕು. ತಮ್ಮ ಕಾರ್ಖಾನೆ ಇತರರಿಗೆ ಆದರ್ಶವಾಗಿರಬೇಕು, ಕೆಲಸ ಗಾರರ-ಯಜಮಾನರ ಸಂಬಂಧ ತಂದೆ-ಮಕ್ಕಳಂತೆ ಮಧುರವಾಗಿರಬೇಕು ಎಂದು ಅವರು ಅದಕ್ಕಾಗಿ ಅವಿಶ್ರಾಂತ ಶ್ರಮಿಸುತ್ತಿದ್ದರು. ಆದರೆ ಈಚೆಗೆ ಆ ಪ್ರೆಸಿಡೆಂಟ್ ತಂಗವೇಲುವಿನ ಪ್ರಭಾವದಿಂದ, ಅನೇಕ ತೊಡಕುಗಳೂ ಕಿರುಕುಳ ಗಳೂ ಶ್ರೀಕಂಠಯ್ಯನವರಿಗೆ ಉಂಟಾದುವು. ವಿನಾಕಾರಣ ಆಳುಗಳು ತೊಂದರೆ ಕೊಡುತ್ತಿದ್ದರು. ಕೆಲಸ ಹಿಂದಿನಂತೆ ಸರಾಗವಾಗಿ ಸಾಗುತ್ತಿರಲಿಲ್ಲ. ಒಂದು ದಿನದಲ್ಲಿ ಆಗುವುದು ನಾಲ್ಕು ದಿನವಾದರೂ ಆಗುತ್ತಿರಲಿಲ್ಲ.

ಯಾರದೋ ಗಿರಾಕಿಯ ತಟ್ಟೆಯನ್ನು ಸಿಲ್ವರ್‌ಪ್ಲೇಟ್ ಮಾಡಿ ಕೊಡ

ಬೇಕಾಗಿತ್ತು. ಆತನಿಗೆ ಬುಧುವಾರ ಖಂಡಿತ ಕೊಡುತ್ತೇವೆಂದು ಹೇಳಿದ್ದರು ಶ್ರೀಕಂಠಯ್ಯ. ಆತ ಸಮಯಕ್ಕೆ ಸರಿಯಾಗಿ ಬಂದು ಕೇಳಿದ. ನೋಡಿದರೆ ಇನ್ನೂ ಆಗ ತಾನೇ ತಟ್ಟೆಯನ್ನು ಪ್ಲೇಟಿಂಗ್‌ಗೆ ಕಟ್ಟಿದ್ದೇನೆಂದು ಉತ್ತರ ಕೊಟ್ಟ ಕುಪ್ಪುಸ್ವಾಮಿ.

"ನಾನು ಮೊನ್ನೆಯೇ ಹೇಳಿರಲಿಲ್ಲವೇ, ಇದು ಅರ್ಜೆಂಟಾಗಿ ಆಗಬೇಕೂ ಅಂತ! ಇಷ್ಟು ದಿನ ಏನು ಮಾಡುತ್ತಿದ್ದೆ? ಕತ್ತೆಕಾಯುತ್ತಿದ್ದೆಯಾ? ಈಗ ಅವರು ಬಂದಿದ್ದಾರೆ, ಅವರಿಗೆ ಏನು ಉತ್ತರ ಹೇಳಿಕಳಿಸಲಿ? ಬಂದವರ ಎದುರಿಗೆ ಹೀಗೆ ತಲೆತಗ್ಗುವಂತೆ ಮಾಡುವಿರಲ್ಲಾ!" ಎಂದು ಕೂಗಾಡಿ, ಶ್ರೀಕಂಠಯ್ಯ ಬಂದಿದ್ದ ಗಿರಾಕಿಗೆ ಯಾವುದೋ ಕಾರಣ ಹೇಳಿ ಕಳಿಸಿದರು, ಇನ್ನೂ ಸಿದ್ಧವಾಗಿಲ್ಲಾ ಎಂದು.

ಆತ ಹೋದುದೇ ತಡ ಕುಪ್ಪುಸ್ವಾಮಿ ಕೆರಳಿ ಕೆಂಡವಾದ. "ನೀವೂ ಸ್ವಲ್ಪ ಮಾತನಾಡೋವಾಗ ಎಚ್ಚರಿಕೆಯಿಂದ ಮಾತಾಡಿ ಸ್ವಾಮಿ. ನೀವೇನೂ ಇಲ್ಲಿ ಕತ್ತೆಗಳನ್ನು ತಂದಿಟ್ಟಿಲ್ಲ, ನಾನು ಕಾಯೋಕೆ. ಕೆಲಸದವನಾದಾಷ್ಟಕ್ಕೆ, ಅವನನ್ನು ಬಾಯಿಗೆ ಬಂದಂತೆ ಬಯ್ಯುವುದು ಸರಿಯಲ್ಲ ಸ್ವಾಮಿ." ಎಂದು ಪ್ರತಿವಾದಿಸಿದ.

ಶ್ರೀಕಂಠಯ್ಯ ತಮ್ಮ ಜನ್ಮದಲ್ಲೇ ಹೀಗೆ ಎದರು ಜವಾಬನ್ನು ಹೊಂದಿರ ಲಿಲ್ಲ. ಅವರ ತಾಳ್ಮೆ ಎಲ್ಲೆ ಮೀರಿತು. ತಾವೇನು ಮಾಡುತ್ತಿರುವೆನೆಂಬ ಅರಿವಿಲ್ಲದೆ ಕುಪ್ಪುಸ್ವಾಮಿಯ ಕೆನ್ನೆಗೆ ಎರಡು ಬಿಗಿದರು. ಅವನೂ ರೇಗಿದ್ದ. ಕೇಳಬೇಕೆ? ಅವನೂ ಹಿಂದಕ್ಕೆ ತಿರುಗಿಸಿದ. ಹತ್ತಿರದಲ್ಲಿದ್ದವರೆಲ್ಲಾ ಓಡಿ ಬಂದು ಕುಪ್ಪುಸ್ವಾಮಿಯನ್ನು ಈಚೆಗೆ ಕರತಂದರು. ಏಟು ಮೂಗಿನ ಮೇಲೆ ಬಿದ್ದು, ರಕ್ತಸ್ರಾವವಾಗಿತ್ತು. ಅಲ್ಲಿಯೇ ನೆರಳಲ್ಲಿ ಮಲಗಿಸಿ ಶೈತ್ಯೋಪಚಾರ ಮಾಡಿದರು. ನಂತರ ರಕ್ತಸ್ರಾವವೂ ನಿಂತಿತು

ಶ್ರೀಕಂಠಯ್ಯ ಅಪಮಾನದಿಂದ ಕುಗ್ಗಿಹೋದರು. ತನ್ನ ಕೈಕೆಳಗಿದ್ದವ ತನಗೇ ಎದುರು ವಾದಿಸಿ, ತನನ್ನು ಹೊಡೆದನಲ್ಲಾ ಎಂಬ ಅಪಮಾನದಿಂದ ಅವರ ಹೃದಯ ಬೇಯುತ್ತಿತ್ತು.

ಅದೇ ದಿನ ಕೆಲಸಗಾರರ ಸಭೆ ತಂಗವೇಲುವಿನ ನೇತೃತ್ವದಲ್ಲಿ ಸೇರಿತು. ಹಲವು ಬಗೆಯಲ್ಲಿ ಚರ್ಚೆ ನಡೆಯಿತು. ಯಜಮಾನರು ಹೊಡೆದದ್ದು ತಪ್ಪು, ಅದಕ್ಕಾಗಿ ಅವರು ಕುಪ್ಪುಸ್ವಾಮಿಗೆ ಮಾನನಷ್ಟಪರಿಹಾರದ್ರವ್ಯ ಕೊಡ

ಬೇಕೆಂದೂ ಇನ್ನು ಮುಂದೆ ಆ ರೀತಿ ವರ್ತಿಸುವುದಿಲ್ಲವೆಂದು ಯಜಮಾನರು ಹೇಳಿಕೆ ಕೊಡಬೇಕೆಂದೂ, ಕರಾರು ಜಾರಿಯಾಯಿತು. ಇಲ್ಲದೆ ಇದ್ದರೆ ತಾವು ಸಂಪು ಹೂಡುವುದಾಗಿಯೂ ನಿರ್ಣಯವಾಯ್ತು.

ಶ್ರೀಕಂಠಯ್ಯ ಯಾವ ಕರಾರಿಗೂ ಒಪ್ಪಲಿಲ್ಲ. ಕೆಲಸಗಾರರ ಸಂಪು ಅಂದೇ ಶುರು ಆಯಿತು.

ಶ್ರೀಕಂಠಯ್ಯ ಕಾರ್ಖಾನೆಯನ್ನು ಮುಚ್ಚುವ ಯೋಚನೆಯನ್ನೇ ಮಾಡಿದ್ದರು. ಪೇಪರಿನಲ್ಲೆಲ್ಲಾ **'ಪೂರ್ಣಿಮಾ ಹೌಸ್ ಮಾಲೀಕರ ದೌರ್ಜನ್ಯ! ಕುಪ್ಪುಸ್ವಾಮಿ ಎಂಬಾತನನ್ನು ರಕ್ತ ಕಾರುವ ವರೆಗೂ ಸದೆಬಡಿದರು! ಆತ ಬಹಳ ಶೋಚನೀಯ ಸ್ಥಿತಿಯಲ್ಲಿದ್ದಾನೆ ! ಇತ್ಯಾದಿ**........ಎಂದು ದಪ್ಪ ಅಕ್ಷರಗಳಲ್ಲಿ, ಕಣ್ಣು ಕುಕ್ಕುವಂತೆ ಪ್ರಕಟವಾಗಿದ್ದುವು. ಅವರ ಕಾರ್ಖಾನೆಯ ಅಭಿಮಾನವೆಲ್ಲಾ, ಒಂದೇ ಬಾರಿಗೆ ಉರಿದು ಬೂದಿಯಾಯಿತು. ತಮಗೆ ಅಷ್ಟು ಅವಮಾನವಾದ ಮೇಲೆ ಇನ್ನು ಪುನಃ ಅಲ್ಲಿಗೆ ಕಾಲಿಡುವುದಿಲ್ಲವೆಂದು ನಿರ್ಧರಿಸಿದರು.

ಇದರಿಂದ ಪಾರಾಗುವ ಬಗೆ ಕಾಣದೆ, ತಮ್ಮ ಸ್ನೇಹಿತ ವಿಷ್ಣು ಪಾಠಣಕರ್‌ರವರಲ್ಲಿಗೆ ತೆರಳಿದರು. ಆತ ಲಕ್ಷಗಟ್ಟಲೆ ಆಸ್ತಿಯುಳ್ಳವ. ಅವನ ಹಣವೆಲ್ಲಾ ಬರೇ ಲೇವಾದೇವಿಯಲ್ಲೇ ಇದ್ದಿತು. ಹಿಂದೆ ಪಾಠಣಕರ್ ಶ್ರೀಕಂಠಯ್ಯನವರನ್ನೇ ಕೇಳಿದ್ದ: 'ಪೂರ್ಣಿಮಾ ಹೌಸ್, ನನಗೆ ಕೊಡು. ನಾನು ಯಾವ ಉದ್ಯೋಗವೂ ಇಲ್ಲದೆ ಕೂತಿರುವೆ. ನೀನು ಕೇಳಿದಷ್ಟು ದುಡ್ಡು ಕೊಡಲು ಸಿದ್ಧ' ಎಂದು. ಆದರೆ ಆಗ ಇನ್ನೂ ಅದನ್ನು ಬೆಳೆಸಬೇಕೆಂಬ ಉತ್ಸಾಹದಿಂದ ಶ್ರೀಕಂಠಯ್ಯ ಒಪ್ಪಿಕೊಳ್ಳಲಿಲ್ಲ.

ಶ್ರೀಕಂಠಯ್ಯ ಸ್ನೇಹಿತನ ಕೈಲಿ ತಮ್ಮ ಕಷ್ಟವನ್ನೆಲ್ಲಾ ಹೇಳಿಕೊಂಡರು. ತಮ್ಮ ಧ್ಯೇಯವು ಬರಿದಾದುದಕ್ಕೆ ದುಃಖಿಸಿದರು. "ನೋಡಿರಿ ಈಗ ಬಂದಿರುವ ವಿಷಮಸಮಸ್ಯೆಯಲ್ಲಿ, ಅದನ್ನು ಪರಿಹರಿಸುವ ಕೆಲಸ ನಿಮ್ಮೊಬ್ಬರಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ. ಹೇಗಾದರಾಗಲೀ ನನ್ನನ್ನು ಈ ವಿಷಮವ್ಯೂಹದಿಂದ ಪಾರು ಮಾಡಿರಿ." ಎಂದು ದೈನ್ಯತೆಯೇ ಮೂರ್ತಿಮತ್ತಾಗಿ ಬಂದಂತೆ ನುಡಿದರು ಶ್ರೀಕಂಠಯ್ಯ. ಅವರಿಗೆ ಓಡಾಟ ಬಲವಾಗಿತ್ತು. ಲೇಬರ್ ಕಮೀಷನ್, ಇನ್‌ಕಂಟ್ಯಾಕ್ಸ್, ಅದಾರಾ ಕಚೇರಿ ಎಂದು ಉಸಿರಾಡಲೂ ಪುರಸೊತ್ತಿಲ್ಲದೆ ಸುತ್ತಿದ್ದರು.

ಕಡೆಗೆ ವಿಷ್ಣು ಪಾಠಣಕರ್ ಕಾರ್ಖಾನೆಯನ್ನು ಪೂರ್ತಿ ತಾನೇ ತೆಗೆದು ಕೊಳ್ಳುವುದಾಗಿ ತಿಳಿಸಿದ್ದ. ಕಾರ್ಖಾನೆ ಈಗಿರುವ ಕೆಲಸಗಾರರ ಮೂಲಕವೇ ನಡೆಯಬೇಕೆಂದೂ ಅದರ ಮಾಲೀಕರು ಮಾತ್ರ ವಿಷ್ಣು ಪಾಠಣಕರೆಂದೂ. ಕೆಲಸ ಎಂದಿನಂತೆ ಸಾಗಬೇಕೆಂದೂ ನಿರ್ಣಯಿಸಿದರು. ಆದರೆ ಪುಟ್ಟಸ್ವಾಮಿಗೆ ಮಾನ ನಷ್ಟ ಪರಿಹಾರವನ್ನು ಶ್ರೀಕಂಠಯ್ಯನವರು ಕೊಡಲೇಬೇಕಾಗಿ ಬಂತು. 'ಪೂರ್ಣಿಮಾ ಹೌಸ್' ಆ ಹೆಸರಿಗಾಗಿ ಹತ್ತುಸಾವಿರ ರೂಪಾಯಿ,ಕಾರ್ಖಾನೆಗಾಗಿ ಮೂವತ್ತು ಸಾವಿರ ರೂಪಾಯಿ ಎಂದು ನಿಗದಿ ಮಾಡಿ ಆ ಬೆಲೆಗೆ ಅದನ್ನು ಮಾರಿಯಾಯಿತು. ಕ್ರಯಪತ್ರಕ್ಕೆ ಸಹಿಮಾಡುವಾಗ ಅವರ ಕಣ್ಣಿಂದ ಎರಡು ಹನಿ ಕಾಗದದ ಮೇಲೆ ಬಿದ್ದುವು.

"ನೀವು ಬೇಜಾರು ಮಾಡಿಕೊಂಡು ಬಿಟ್ಟಿರಿ. ನನಗೂ ಬೇರೆ ಉದ್ಯೋಗ ವಿಲ್ಲ, ಇದರ ಲೈನು ಹೇಗಿದೆ ಎಂದು ನೋಡೋಣ. ಲಾಭವಾದರಾಗಲೀ ಹೋದರೆ ಹೋಗಲೀ, ಈ ಹೊಸ ದಾರಿ ಹೇಗಿದೆ ಎಂದು ನೋಡೋಣಾ." ಎಂದು ವಿಷ್ಣುಪಾಠಣಕರ್ ಹೇಳಿದ್ದರು.

ಹಳೆಯ ಸಾಲಗಳೆಲ್ಲಾ ತೀರಿಸಿದ ಮೇಲೆ ಉಳಿದದ್ದು ೩೪ ಸಾವಿರ ರೂಪಾಯಿ ಶ್ರೀಕಂಠಯ್ಯ ಯಾರಿಗೂ ಸುದ್ದಿ ಕೂಡಾ ತಿಳಿಸದೆ, ಚಾಮರಾಜ ಪೇಟೆಯಲ್ಲಿ ಒಂದು ಮನೆ ಖರೀದಿಗೆ ಗೊತ್ತುಮಾಡಿದರು. ತಮಗೆ ಮನೆ ಮನ ಸ್ಸಿಗೆ ಬಂದ ಮೇಲೆ ಅದಕ್ಕೆ ೨೫ ಸಾವಿರ ಬೆಲೆ ಕೊಟ್ಟು ಅದನ್ನು ಕೊಂಡರು. ಮಿಕ್ಕಿದ್ದು ಮಕ್ಕಳ ವಿದ್ಯಾಭ್ಯಾಸ ಮತ್ತು ಮದುವೆಗಳಿಗೆ, ತೆಗೆದಿಟ್ಟರು.

ಒಂದು ದಿನ ಮನೆಗೆ ಬಂದವರೇ ಹೇಳಿದರು ಶ್ರೀಕಂಠಯ್ಯ: "ದೇವರು ದೊಡ್ಡವನು, ಅವನನ್ನು ನಂಬಿದವರನ್ನು ಅವನು ಎಂದಿಗೂ ಕೈಬಿಡಲಾರ."

"ಯಾವ ಮಾತಿಗೆ ಹೇಳುತ್ತಿದ್ದೀರಿ ನೀವು ?" ಯಾವ ವಿಷಯವೂ ಗೊತ್ತಿಲ್ಲದೆ ಕೇಳಿದರು ಜಾನಕೀಬಾಯಿ.

"ನಾನು ಯಾರ ಹಂಗೂ ಇಲ್ಲದೆ, ಸ್ವತಂತ್ರವಾಗಿ, ಸ್ವಚ್ಛಂದವಾಗಿ ಇರ ಬೇಕೆಂದು ಬಯಸುತ್ತಿದ್ದ ನನ್ನ ಬಯಕೆ ಇಂದಿಗೆ ಈಡೇರಿತು. ಕಾರ್ಖಾನೆಯ ಕಾಟವೂ ತಪ್ಪಿತು. ನಿನ್ನ ಈ ಮನೆಯ ಹಂಗೂ ತಪ್ಪಿತು. ನಾನು ನನ್ನದೇ ಆದ ಸ್ವಂತ ಮನೆ ಮಾಡಿದ್ದೇನೆ. ಅಲ್ಲಿಗೆ ಯಾವಾಗ ಹೋಗೋಣಾ ಹೇಳು?" ದನಿಯಲ್ಲಿ ಗಂಡಿನ ಗಾಂಭೀರ್ಯವಿತ್ತು.

"ಮನೆ ಕೊಂಡುಕೊಂಡಿರಾ ? ಎಲ್ಲಿ ? ಮನೆ ಹೇಗಿದೆ ? ದೊಡ್ಡದಾಗಿ-

ದೆಯೇ?" ಜಾನಕೀಬಾಯಿ ಪ್ರಶ್ನೆಗಳನ್ನೇ ಸುರಿಸಿ "ನಾನು ಯಾವುದೋ ಮಾತಿಗೆ ಅಂದದ್ದನ್ನು ನಿಜವೆಂದೇ ತಿಳಿದುಬಿಟ್ಟಿರಾ? ನಾನೇನು ನಿಮಗೆ ಹೊರಗಿನವಳೇ? ನಿಮ್ಮ ಅನ್ನವನ್ನೇ ತಿಂದು ಬೆಳೆದವಳು ನಾನು. ನನ್ನ ಹಂಗು ನಿಮಗೆಲ್ಲಿದೆ? ನಿಮಗೇ ಬೇಡವಾದ ಈ ಮನೆ ನನಗಾದರೂ ಯಾಕೆ? ಇದನ್ನ ಮಾರಿಬಿಡಿ. ಬಂದದ್ದನ್ನು ಮಕ್ಕಳಿಗೆ ಹಂಚಿದರಾಯಿತು" ಎಂದು ಜಾನಕೀ ಬಾಯಿ ಮೆತ್ತಗಾಗಿ ಶಾವಿಗೆ ಎಳೆಯಂತೆ ಮಾತನ್ನು ಜಗ್ಗಿದರು. ಈಚೆಗೆ ಅವರು ತಮ್ಮವರನ್ನು ಗಂಡ ಎಂದು ಒಪ್ಪಿ ಆ ಅಧಿಕಾರಕ್ಕೆ ತಮ್ಮನ್ನೂ ಒಪ್ಪಿಸಿಕೊಂಡಿದ್ದರು. ಹಿಂದಿನ ಅಹಂಕಾರ, ಹೆಮ್ಮೆ ಸೋತಿದ್ದವು; ದರ್ಪವೂ ಅಡಗಿತ್ತು.

ಅಶೋಕ ಬೆಳಗಾವಿಯಲ್ಲಿ ರೇಷನ್ ಆಫೀಸರ್ ಆಗಿ ಕೆಲಸಕ್ಕೆ ಸೇರಿದ. ಮೋಹನನಿಗೆ ಬೊಂಬಾಯಿ ಬ್ರಾಂಚ್‌ನಲ್ಲಿ 'ಆಯ್. ಸಿ. ಆಯ್.'ನಲ್ಲಿ ಕೆಲಸ ದೊರೆಯಿತು. ರಾಜು ತನ್ನ ಇಂಟರ್ ಮುಗಿಸಿ ಮುಂದಕ್ಕೆ ಓದದೆ, ಒಬ್ಬ ಗುಮಾಸ್ತನಾದ. ಇನ್ನು ಉಳಿದವರೆಂದರೆ ಮುರಲಿ, ಮುಕುಂದ, ಆನಂದ. ಮುರಲಿ ಮುಕುಂದರಿಬ್ಬರೂ ಕಾಲೇಜಿಗೆ ಬಂದಿದ್ದರು. ಆನಂದ ಇನ್ನೂ ಐದನೇ ಫಾರಂ ಓದುತ್ತಿದ್ದ ಹೈಸ್ಕೂಲಿನಲ್ಲಿ.

ಮಾಧವ ತನ್ನ ಮಾತನ್ನು ಕೊನೆಯ ವರೆಗೂ ಪಾಲಸಿದ್ದ. ಕಾರ್ಖಾನೆಯ ಹವ್ಯಾಸ ತಪ್ಪಿ ಹೋದ ಮೇಲೆ, ಯಾವುದಾದರೂ ಕೆಲಸಕ್ಕೆ ಸೇರಲೇ ಬೇಕಷ್ಟೇ? ಅದೇ ವರ್ಷ ಹೊಸಮನೆಯ ಗೃಹಪ್ರವೇಶವೂ, ಅಶೋಕನ ಮದುವೆಯೂ ನಡೆಯಿತು. ಅಶೋಕ ಒಂದು ತಿಂಗಳ ರಜೆ ಪಡೆದು ಬಂದಿದ್ದ. ಮದುವೆಯಾದ ಮಾರನೆಯ ದಿನವೇ ಹೆಂಡತಿಯನ್ನು ಸಿನಿಮಾಕ್ಕೆ ಕರೆದೊಯ್ದಿದ್ದ. ಮಗನ ಸ್ವಭಾವವನ್ನು ತಿಳಿದ ಜಾನಕೀಬಾಯಿ ಯಾವದೊಂದು ಮಾತೂ ಆಡದೆ ಮೌನವಾಗಿದ್ದರು. ಇದೆಲ್ಲವನ್ನು ನೋಡಿದರೂ ಸರೂ ಯಾವ ಮಾತೂ ಆಡದೆ ಮೌನವಾಗಿಯೇ ಉಳಿದಳು. ಅಶೋಕ ರಜೆ ತೀರಿದೊಡನೆ ಹೆಂಡತಿಯೊಡನೆ ಬೆಳಗಾವಿಗೆ ಹೊರಟು ಹೋದ.

ಸುಂದರಾ ಗಂಡನ ಮನೆಗೆ ಮಗುವಿನೊಡನೆ ಹೊರಟುಹೋಗಿದ್ದಳು. ಮಾಧವ ಕೆಲಸಗಳಿಗೆ ಅಪ್ಲಿಕೇಷನ್ ಹಾಕಿದ್ದ. ಯಾವುದೊಂದರ ಉತ್ತರವೂ ಬಂದಿರಲಿಲ್ಲ.

ಇದೇ ಸಮಯದಲ್ಲಿ ಸರೂ, ಗಂಡುಮಗುವನ್ನು ಪ್ರಸವಿಸಿದಳು. ಮಕ್ಕಳಿಲ್ಲದ ಮನೆ ಈಗ ತುಂಬಿದಂತಾಯಿತು. ಶ್ರೀಕಂಠಯ್ಯ ಯಾವ ಕೆಲಸಕ್ಕೂ

ಹೋಗದೆ, ಮನೆಯಲ್ಲಿಯೇ ಉಳಿದರು. ಮೋಹನ ತನ್ನ ಸಂಬಳದಲ್ಲಿ ಪ್ರತಿ ತಿಂಗಳೂ ಐವತ್ತು ರೂಪಾಯಿ ಕಳಿಸುತ್ತಿದ್ದ. ಅಶೋಕನ ಸಂಬಳ ಅವನ ಸಂಸಾರಕ್ಕೇ ಸರಿಯಾಗುತ್ತಿತ್ತು.

ಗೋವಿಂದರಾಯರು, ಮೊಮ್ಮಗನಿಗೆ ಶುಭಾಶಯಗಳನ್ನು ತಾವಿದ್ದಲ್ಲಿಂದಲೇ ಕಳಿಸಿದ್ದರು. ಯಾವುದೊಂದು ಆಸೆಯೂ ಇಲ್ಲದ ಸರೂವಿನ ಬರಿದಾದ ಜೀವನಕ್ಕೆ ಈಗ ವಿಜಯನೊಬ್ಬನೇ ಆಶಾಕಿರಣವಾದ. ಸರೂ ಆ ಮನೆಯ ವಾತಾವರಣಕ್ಕೆ ಹೊಂದಿಕೊಂಡಿದ್ದಳು. ಅನ್ನಿಸಿಕೊಳ್ಳುವುದುಅವಳಿಗೆ ರೂಢಿಯಾಗಿಬಿಟ್ಟಿತ್ತು.

ಸಂಜೆ ಮನೆಗೆ ಬಂದವನೇ ಮಾಧವ ಕೂಗಿದ, "ಸರೂ...."ಎಂದು.

ಅವನ ಮುಖದಲ್ಲಿ ಹರ್ಷವು ಸೂಸುತ್ತಿತ್ತು. ಮುಗುಳ್ನಗೆ ತುಟಿಯಂಚಿನಲ್ಲಿ ಸುಳಿದಾಡುತ್ತಿತ್ತು. ಸರೂ ಅವನ ಕರೆಗೆ ಓಗೊಡದೆಯೇ ಬಂದು ಅವನ ಮುಂದೆ ನಿಂತಳು. "ನಿನಗೊಂದು ಗುಡ್‌ನ್ಯೂಸ್ ಸರೂ." ಎಂದು ಮಾಧವ ಸರೂವನ್ನು ದಿಟ್ಟಿಸಿ ನೋಡುತ್ತಾ ಹೇಳಿದ.

" ಏನು?"

"ನನಗೆ ಮದ್ರಾಸಿನಲ್ಲಿ ಕೆಲಸ ದೊರೆತಿದೆ ಸರೂ. ಈ ದಿನವೇ ಅಲ್ಲಿಂದ ಆರ್ಡರು ಬಂದಿತು. ಅಂತೂ ನಿನ್ನ ಆಸೆ ಫಲಿಸಿತು. ಅಮ್ಮ ಎಲ್ಲಿ ಹೋಗಿದ್ದಾಳೆ, ಕಾಣುವುದಿಲ್ಲಾ? "

"ಪದ್ಮಾವತಿಯ ಮನೆಗೆ ಹೋಗಿದ್ದಾರೆ. ಹಾಗಾದರೆ ಯಾವತ್ತು ಹೊರಡುವುದು?" ಸರೂ ಉತ್ಸುಕಳಾಗಿ ಕೇಳಿದಳು.

"ಇನ್ನು ನಾಲ್ಕು ದಿನಗಳ ಬಿಡುವು ಇದೆ. ನಾನು ಮುಂಚೆ ಹೋಗಿ, ಮನೆ ಮಾಡಿ ನಿನ್ನನ್ನು ಕರೆಸಿಕೊಳ್ಳುವೆ. ತಿಳಿಯಿತೇ?"

"ನಿಮ್ಮನ್ನು ಬಿಟ್ಟು ನಾನೊಬ್ಬಳೇ ಇಲ್ಲಿ ಹೇಗೆ ಇರಲಿ? ನಾನೂ ನಿಮ್ಮ ಜೊತೆಗೇ ಬರುತ್ತೇನೆ. ಅಲ್ಲಿ ಅಣ್ಣನ ದೂರದ ಸಂಬಂಧಿಕರೊಬ್ಬರ ಮನೆ ಇದೆ. ಮನೆ ಸಿಗುವ ವರೆಗೆ ಅಲ್ಲಿಯೇ ಇದ್ದರಾಯಿತು. ನಾನು ಯಾವುದಕ್ಕೂ ನಿಮ್ಮನ್ನು ಕೇಳಿಲ್ಲ, ಆದರೆ ಈ ನನ್ನ ಆಸೆಯನ್ನು ನೆರವೇರಿಸಿರಿ. ನಿಮ್ಮನ್ನು ಬಿಟ್ಟು ನಾನಿಲ್ಲಿರಲಾರೆ. "

"ಆಗಲೀ ನೋಡೋಣಾ. ಅಮ್ಮನ್ನೇ ಕೇಳುತ್ತೇನೆ ಏನು ಹೇಳುತ್ತಾಳೆ ಅಂತ."

"ಯಾರು ಏನೇ ಹೇಳಲಿ, ನಾನು ನಿಮ್ಮೊಂದಿಗೆ ಬಂದೇ ಬರುವವಳು." ಸರೂ ಖಂಡಿತವಾಗಿ ಹೇಳಿದಳು.

"ಇವತ್ತು ಕಾಫಿ-ತಿಂಡಿ ಏನೂ ಇಲ್ಲವೇನು? ಬರಿ ಮಾತಿನಲ್ಲಿಯೇ ಮುಗಿಸುವಂತೆ ಕಾಣುತ್ತೆ."

* ಸರೂ ಎಚ್ಚೆತ್ತವಳಂತೆ ಕಾಫಿ ತರಲು ಅಡುಗೆ ಮನೆಗೆ ಹೋದಳು.

ರಾತ್ರಿ ಮಾಧವ ತಂದೆ-ತಾಯಿಯವರೊಡನೆ ತನ್ನ ಕೆಲಸದ ವಿಚಾರ ಪ್ರಸ್ತಾಪಿಸಿದ. "ಇಲ್ಲಿಯೇ ಯಾವುದಾದರೂ ಕೆಲಸವಾಗಿದ್ದರೆ ಚೆನ್ನಾಗಿತ್ತು. ನೀನೂ ಮನೇ ಕಡೆ ನೋಡಿಕೊಳ್ಳಬಹುದಾಗಿತ್ತು. ಆಗಲಿ ಏನಾದರೂ ಹೊಟ್ಟೇ ಪಾಡಿಗೆ ದುಡಿಯಲೇಬೇಕಷ್ಟೆ. ಹೋಗಿ ಬಾ ಅದಕ್ಕೇನು." ಎಂದರು ಶ್ರೀಕಂಠಯ್ಯ.

"ಸಧ್ಯ ನಿನಗೆ ಆ ಕಾರ್ಖಾನೆಯ ಹುಚ್ಚು ಬಿಟ್ಟು, ಕೆಲಸಕ್ಕೆ ಸೇರುವೆ ಎನ್ನುವಂತಾಯಿತಲ್ಲಾ, ಅಷ್ಟೇ ಸಾಕು. ಎಲ್ಲಿಯಾದರೂ ನೀನು ಸುಖವಾಗಿ ಯಾವ ಕಷ್ಟ ಕಾರ್ಪಣ್ಯವೂ ಇಲ್ಲದಂತೆ ಬಾಳಿದರೆ ಸಾಕು!" ಎಂದರು ಜಾನಕೀ ಬಾಯಿ.

"ನಿನಗೆ ಸಾಧ್ಯವಾದರೆ, ನಿನ್ನ ತಂದೆ ತಾಯಿಗಳಿಗೆ ಸಹಾಯ ಮಾಡ ಬೇಕೆಂದು ಆಸೆ ಇದ್ದರೆ, ಏನಾದರೂ ಕಳಿಸು. ನಿನ್ನ ಹೊಟ್ಟೆ, ಬಟ್ಟೆ ಕಟ್ಟಿ ನನಗೇನೂ ಮಾಡಬೇಡ. ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು, ಅವರ ವರ ಪಾಡಿಗೆ, ಕಷ್ಟವಿಲ್ಲದೆ, ಸುಖವಾಗಿ, ನೆಮ್ಮದಿಯಾಗಿದ್ದರೆ, ಅವರವರ ಸಂಸಾರದ ಹೊಣೆಯನ್ನು ಅವರವರು ನೋಡಿಕೊಂಡರೆ, ಅದಕ್ಕಿಂತ ಹೆಚ್ಚಿನ ಸುಖ, ಮಕ್ಕಳನ್ನು ಹಡೆದ ತಂದೆ-ತಾಯಿಯರಿಗೆ ಬೇರಾವುದೂ ಇಲ್ಲ. ನಿಮ್ಮ ಜವಾಬ್ದಾರಿ ನೀವು ನೋಡಿಕೊಂಡರೆ, ಅದೇ ನನಗೆ ದೊಡ್ಡ ಉಪಕಾರ. ನೀವೆ ಲ್ಲರೂ ಸಂತೋಷವಾಗಿದ್ದರೆ ಸಾಕು. ಗಂಡುಮಕ್ಕಳಿಗೆ ಅವರು ಓದುವಷ್ಟು ವಿದ್ಯಾಭ್ಯಾಸ ಕೊಡಿಸುವುದು, ಅವರು ಯಾವ ದಾರಿಯಲ್ಲಿ ಆಸಕ್ತಿ ತೋರಿಸು ವರೋ ಅದರಲ್ಲಿಯೇ ಅವರ ಜೀವನೋಪಾಯ ಕಲ್ಪಿಸುವುದು, ಹೆಣ್ಣುಮಕ್ಕ ಳಿಗೆ ಒಳ್ಳೆಯ ಮನೆ ನೋಡಿ ಮದುವೆ ಮಾಡಿ ಕೊಡುವುದು, ಇದು ತಂದೆಯ ಕರ್ತವ್ಯ. ನನ್ನ ಮಟ್ಟಿಗೆ ನಾನು ನನ್ನ ಕರ್ತವ್ಯವನ್ನು ಮಾಡಿದ್ದೇನೆಂದು ಕೊಂಡಿದ್ದೇನೆ. ಎಲ್ಲಿಯಾದರೂ ಸುಖವಾಗಿ ಬಾಳು ಮಗೂ." ಶ್ರೀಕಂಠಯ್ಯ ತಮ್ಮ ಮನೋಭಾವ ವ್ಯಕ್ತಮಾಡಿದರು.

ಮಾತು ಮುಗಿಯುವ ಹೊತ್ತಿಗೆ 'ಅಜಾ....'ಎಂದು ಕೂಗುತ್ತಾ ವಿಜಯ ಓಡಿ ಬಂದು, ಶ್ರೀಕಂಠಯ್ಯನವರ ತೊಡೆಯ ಮೇಲೆ ಕುಳಿತ.

"ಏನೋ, ನನ್ನ ಬಿಟ್ಟು ಊರಿಗೆ ಹೋಗುತ್ತೀಯಾ, ಅಣ್ಣನ ಜೊತೆ ಪಲ್ಲಿ? ನಾನು ಬರುತ್ತೇನೆಂದರೆ ನೋಡು ನಿನ್ನಪ್ಪ ಬೇಡಾ ಅನ್ನುತ್ತಾನೆ." ಶ್ರೀಕಂಠಯ್ಯ ಮೊಮ್ಮಗನ ತಲೆ ನೇವರಿಸುತ್ತಾ ಹೇಳಿದರು.

"ನಾ ಹೋಗೋಲ್ಲಾ, ನೀನೂ ಬಂದರೇ ಹೋಗುತ್ತೀನಿ" ಎಂದು ತನ್ನ ಮುದ್ದು ಭಾಷೆಯಲ್ಲಿಯೇ ನುಡಿದ.

"ಹಾಗಾದರೆ ಅಮ್ಮ ಅಣ್ಣ ಇಬ್ಬರೂ ಹೋಗಲಿ ಬಿಡು ಮಗೂ. ನಾನೂ ನೀನು ಇಲ್ಲಿಯೇ ಇರೋಣಾ." ಎನುತ್ತಾ ಮಗುವನ್ನು ಅಪ್ಪಿಕೊಂಡರು.

ಶ್ರೀಕಂಠಯ್ಯನವರಿಗೆ ಮೊಮ್ಮಗನೆಂದರೆ ಪ್ರಾಣ. ಬೆಳಿಗ್ಗೆ ಎದ್ದವನೇ ಅವರ ಬಳಿಗೆ ಹೋದರೆ ರಾತ್ರಿ ಮಲಗುವಾಗಲೂ ಅವರ ಜೊತೆಗೇ ಮಲಗ ಬೇಕು. ಹಾಲು ಕುಡಿಸುವುದು, ಅನ್ನ ತಿನ್ನಿಸುವುದು, ಎಲ್ಲಾ ಅವರೇ ಮಾಡ ಬೇಕು. ಪ್ರತಿ ದಿನ ಅಜ್ಜ-ಮೊಮ್ಮಗರ ಮಡಿ ಒಟ್ಟಿಗೇ ಆಗುತ್ತಿತ್ತು. ಅವರ ಅಜ್ಜನನ್ನು ಯಾವ ಕೆಲಸಕ್ಕೂ ಬಿಡುತ್ತಿರಲಿಲ್ಲ ಇವನ ಕಣ್ಣು ತಪ್ಪಿಸಿ ಪೇಪ ರನ್ನು ಓದಬೇಕಾದರೇ ಅವರಿಗೆ ಸಾಕುಬೇಕಾಗುತ್ತಿತ್ತು. ಪ್ರತಿ ದಿನ ಸಾಯಂ ಕಾಲ ಅವನನ್ನು ವಾಕಿಂಗ್ ಕರೆದೊಯ್ಯಲೇಬೇಕು. ಹಾಗೇನಾದರೂ ಅವ ನಿಗೆ ಮರೆಮಾಚಿ ಎಂದಾದರೂ ಹೊರಗೆ ಹೋದರೆಂದರೆ ತೀರಿತು, ಅವರು ಬರುವ ವರೆಗೂ ಅವನ ಅಳು ನಿರಾತಂಕವಾಗಿ, ತಡೆ ಇಲ್ಲದೆ ಸಾಗುತ್ತಿತ್ತು. ಮನೆಗೆ ಬಂದ ಮೇಲೆ ಶ್ರೀಕಂಠಯ್ಯ ಅನನನ್ನು ಎತ್ತಿಕೊಂಡು ಒಂದು ರೌಂಡ್ ಹೋಗಿ ಬಂದ ಹೊರತು ಅವನಿಗೆ ತೃಪ್ತಿಯಾಗುತ್ತಿರಲಿಲ್ಲ. ಹೀಗೆ ಅವರಿಬ್ಬರ ಜೀವ ಸಮ್ಮಿಳನವಾಗಿ ಒವ.್ಮಖವಾಗಿ, ಒಂದೇ ಪ್ರವಾಹ೯ಂತೆ ಸಾಗಿತ್ತು.

ಒಂದು ಸಲಕ್ಕೆ ಸದ್ಯ ಈ ಮನೆಯಿಂದ ಬಿಡುಗಡೆ ದೊರೆಯಿತಲ್ಲಾ ಎಂದು ಸರೂ ಅತ್ಯಂತ ಆನಂದಿತಳಾದಳು. ಪತಿಯ ಮತ್ತು ಮಗುವಿನ ಬಟ್ಟೆ ಬರೆಗಳನ್ನೆಲ್ಲಾ ಶುಭ್ರವಾಗಿ ಒಗೆದು ಇಸ್ತ್ರಿ ಮಾಡಿಟ್ಟಳು. ತನಗೆ ಬೇಕಾಗುವ ಪಾತ್ರೆ ಪದಾರ್ಥಗಳನ್ನು, ಅತ್ತೆಯವರು ತಾವಾಗಿಯೇ ತೆಗೆದುಕೋ ಎಂದು ಹೇಳಿದುವನ್ನು ಜೋಡಿಸಿಟ್ಟಳು. ಬಟ್ಟೆಬರೆ ಎಲ್ಲವನ್ನೂ ಟ್ರಂಕಿಗೆ ತುಂಬಿ, ಪ್ರಯಾಣದ ಸಿದ್ಧತೆ ನಡೆಸಿದಳು. ಮನೆಗೆಲಸದಲ್ಲಿಯೂ ಎಲ್ಲಿಲ್ಲದ ಉತ್ಸಾಹ ಬಂದಿತ್ತು. ಸೊಸೆಯು ಹೊರಟು ಹೋಗುತ್ತಾಳಲ್ಲಾ ಎಂದು ಜಾನಕೀಬಾಯಿ

ಯವರು ಈಚೆಗೆ ತಮ್ಮ ಸ್ವಭಾವವನ್ನು ಸ್ವಲ್ಪ ಬದಲಾಯಿಸಿದ್ದರು. ಸೊಸೆಯ ಬಗ್ಗೆ ಇಲ್ಲದ ಆದರ ತೋರಿಸಹತ್ತಿದರು.

ಆ ಮನೆಯಲ್ಲಿ ಅವಳ ನಿಜವಾದ ಹಿತಚಿಂತಕರೆಂದರೆ ಶ್ರೀಕಂಠಯ್ಯ. ಅವರಿಗೆ ಸರೂವಿನ ಬಗ್ಗೆ ಅಪರಿಮಿತವಾದ ವಾತ್ಸಲ್ಯ, ಕರುಣೆ ಇದ್ದಿತು. ಸರೂವಿಗಾಗಿ ಮರುಗುವವರೆಂದರೆ ಅವರೊಬ್ಬರೇ. ಸರೂವಿನ ಅವಿಶ್ರಾಂತವಾದ ದುಡಿತವನ್ನು ನೋಡಿ ಅವರು ಅನೇಕ ಬಾರಿ ಹೆಂಡತಿಯ ಕೈಲಿ ಅಂದಿದ್ದೂ ಉಂಟು. "ಏನು ಸೊಸೆ ಬಂದ ಮೇಲೆ ಮಹಾರಾಣಿಯಾಗಿಬಿಟ್ಟಿದ್ದೀಯಲ್ಲಾ. ಪಾಪ ಅವಳು ಒಬ್ಬಳೇ ಎಷ್ಟೂ ಅಂತ ಮಾಡೋದಕ್ಕಾಗುತ್ತೆ? ಅಡುಗೆಮನೆ ಮುಖವನ್ನೇ ನೋಡಿಲ್ಲವಲ್ಲಾ ಅವಳು ಬಂದಲಾಗಾಯ್ತು?" ಎಂದು ರೇಗಿದ್ದೂ ಉಂಟು.

ವಿನೀತಳಾದ ಅಂತಹ ಸೊಸೆ, ಅದಕ್ಕಿಂತ ಹೆಚ್ಚಾಗಿ ತಮ್ಮ ಎರಡನೇ ಜೀವದಂತಿರುವ ಮೊಮ್ಮಗ, ತಮ್ಮ ಬಲಗೈನಂತಿಪ್ಪ ಮಗ, ದೂರ........ದೂರ ಹೊಟುಹೋಗುತ್ತಾರಲ್ಲಾ ಎಂದು ಶ್ರೀಕಂಠಯ್ಯ ವ್ಯಥೆಪಟ್ಟರು. ನಾಳೆ ನಾಡಿದ್ದು, ಎನ್ನುತ್ತಿರುವಂತೆಯೇ ಹೊರಡುವ ದಿನವೂ ಬಂತು. ಜಾನಕೀಬಾಯಿ ತಾವೇ ಒಲೆಯ ಮುಂದೆ ಕೂತು ದಾರಿಗೆ ಬೇಕಾಗುವ ತಿಂಡಿ-ತಿನಿಸು ಮಾಡಿದರು. ಮೊಮ್ಮಗನಿಗೆ ತಾನೇ ಎಣ್ಣೆ ನೀರು ಹಾಕಿದರು. ಅವನಿಗೆ ಹೊಸ ಬಟ್ಟೆ ಹೊಲಿಸಿದರು. ಔತಣದ ಅಡುಗೆಯನ್ನು ತಾವೇ ಮಾಡಿದರು. ಸರೂ ಸಹಾಯ ಮಾಡಲು ಬಂದಾಗ "ನೀನು ನಿನ್ನ ಸಾಮಾನು ಎಲ್ಲಾ ಸರಿಯಾಗಿ ಇಟ್ಟುಕೋ. ಮಗುವಿಗೆ 'ಫ್ಲಾಸ್ಕ್'ನಲ್ಲಿ ಹಾಲು, ಚೊಂಬಿನಲ್ಲಿ ನೀರು ಎಲ್ಲಾ ಸಿದ್ಧಪಡಿಸಿ ಇಟ್ಟುಕೋ, ನಿನ್ನ ಕೆಲಸ ನೀನು ಮಾಡಿಕೋ ಹೋಗು. ಇದೆಷ್ಟರ ಅಡುಗೆ ನಾನೇ ಮಾಡುತ್ತೇನೆ." ಎಂದರು.

ಹಾಸಿಗೆ, ಪಾತ್ರೆ-ಪದಾರ್ಥ, ಬಟ್ಟೆ-ಬರೆಗಳ ಟ್ರಂಕ್ ಎಲ್ಲಾ ಸಿದ್ಧವಾಯಿತು. ರಾತ್ರಿಯ ಗಾಡಿಗೇ ಹೊರಡುವುದೆಂದು ಗೊತ್ತಾಯಿತು. ಶ್ರೀಕಂಠಯ್ಯ ಇನ್ನೂರು ರೂಪಾಯಿಗಳನ್ನು ಮಗನ ಕೈಗೆ ಖರ್ಚಿಗೆ ಇರಲಿ ಎಂದು ಕೊಟ್ಟರು. ಮಾಧವ ಕೃತಜ್ಞತೆಯಿಂದ ತೆಗೆದುಕೊಂಡ. ಆ ದಿನವೆಲ್ಲಾ ಶ್ರೀಕಂಠಯ್ಯ ವಿಜಯನನ್ನು ಕೆಳಗೆ ಬಿಡಲೇ ಇಲ್ಲ. ಮುರಲಿ-ಮುಕುಂದರು ಅತ್ತಿಗೆ ಹೊರಟು ಹೋಗುತ್ತಾಳಲ್ಲಾ ಎಂದು ವ್ಯಥೆಪಟ್ಟರು. ಸೊಸೆಯನ್ನು ಕಂಡರೆ ಎಷ್ಟೇ ತಿರಸ್ಕಾರವಿರಲಿ, ಭೇದಭಾವನೆ ಇರಲಿ, ಅವಳು ತಮಗಾಗಿ ದುಡಿದಿದ್ದಾಳೆ, ಅವಳು

ತಮ್ಮ ಮಗನ ಹೆಂಡತಿ ಎಂದು ಜಾನಕೀಬಾಯಿಯವರೂ, ಸರೂ ಹೋಗುವು ದಕ್ಕಾಗಿ ಪೇಚಾಡಿದರು.

ತನ್ನವರು, ತನ್ನ ಮನೆಯಂತೆ ಇದ್ದ ಆ ಮನೆ, ಅತ್ತೆ-ಮಾವಂದಿರು, ಮೈದುನಂದಿರು ಇವರನ್ನೆಲ್ಲಾ ಬಿಟ್ಟು ಹೋಗಬೇಕೆಂದು ಸರೂ ದುಃಖಿಸಿದಳು. ಎಲ್ಲರೂ ಬೇಗ ಬೇಗನೆ ಊಟ ಮುಗಿಸಿದರು. ಟ್ಯಾಕ್ಸಿಯನ್ನೇ ಗೊತ್ತುಮಾಡಿ ವ್ವಾಯ್ತು. ಸರೂ ದೇವರಲ್ಲಿ ನಮಸ್ಕರಿಸಿ, ಅನನ್ಯಭಕ್ತಿಯಿಂದ ಬೇಡಿಕೊಂಡಳು: "ದೇವರೇ, ಕಡೆಗೂ ನನ್ನ ಈ ಸೆರೆಮನೆಯ ವಾಸ ತಪ್ಪಿಸಿದೆಯಲ್ಲಾ ನನ್ನಪ್ಪಾ! ಅವರು, ಆ ನನ್ನ ಮಗು, ಇವರು ಸುಖದಿಂದಿರುವಂತೆ ಮಾಡು ಸ್ವಾಮಿ!" ಅವಳ ಪ್ರಾರ್ಥನೆ ಅವ್ಯಾಹತವಾಗಿ ನಡೆದೇ ಇತ್ತು. "ಹೊತ್ತಾಗುತ್ತಾ ಬಂತು ಸರೂ, ಆಯಿತೋ ಇಲ್ಲವೋ ನಿನ್ನ ಕೆಲಸ?" ಎಂದು ಜಾನಕೀಬಾಯಿ ಬಂದು ಕೂಗಿದಾಗಲೇ ಸರೂವಿಗೆ ಎಚ್ಚರ.

ಸರೂ ಅತ್ತೆಯ ಪಾದಗಳನ್ನು ಹಿಡಿದು ನಮಸ್ಕರಿಸಿ "ನಾನಾವ ಅಪ ರಾಧ ಮಾಡಿದ್ದರೂ ಕ್ಷಮಿಸಿರಿ. ನೀವು ಹಿರಿಯರು, ತಾಯಿ ಇದ್ದ ಹಾಗೆ. ಅನೇಕ ವೇಳೆ ನಿಮ್ಮ ಮನ ನೋಯುವಂತೆ ವರ್ತಿಸಿರುವೆ. ಅದೆಲ್ಲಾ ಮರೆತು ಬಿಡಿ. ಈ ನಿಮ್ಮ ಸರೂ ನಮಸ್ಕರಿಸುತ್ತಾಳೆ, ಆಶೀರ್ವದಿಸಿ." ಎನ್ನುತ್ತಾ ಸರೂ ಕಣ್ಣೀರು ತಂದಳು. ಎರಡು ಹನಿ ಜಾನಕೀಬಾಯಿಯವರ ಪಾದಗಳ ಮೇಲೂ ಬಿದ್ದುವು

"ಈ ಸಂತೋಷದ ಸಮಯದಲ್ಲಿ ಕಣ್ಣೀರೇಕೆ ಸರೂ ? ನಿನ್ನ ಮನೆಗೆ ನೀನು ಹೋಗುವುದಕ್ಕೆ ಅಳಬೇಕೆ? ಮಗೂವನ್ನು ಚೆನ್ನಾಗಿ ನೋಡಿಕೊ ಒಬ್ಬ ನನ್ನೇ ಹೊರಗೆ ಬಿಡಬೇಡ. ಮಾಧು, ಮೊದಲಿಂದಲೂ ಸ್ವಲ್ಪ ದುಡುಕು ಸ್ವಭಾವದವ; ಅವನನ್ನು ಜಾಗ್ರತೆಯಿಂದ ನೋಡಿಕೋ. ಅವನ ಮನಸ್ಸು ನೋಯದಂತೆ, ನೋಡಿಕೊಳ್ಳುವುದು ನಿನ್ನ ಕೆಲಸ. ಸುಖವಾಗಿ ಹೋಗಿ ಬಾ." ಎಂದು ಜಾನಕೀಬಾಯಿ ಸರೂವನ್ನು ಹಿಡಿದೆತ್ತಿ ಹೊರಗೆ ಕರೆದೊಯ್ದರು. ಅಲ್ಲಿ ಹೊರನಿಂತಿದ್ದ ಮಾವನವರಿಗೂ ಸರೂ ನಮಸ್ಕರಿಸಿದಳು. ಮುರಲೀ, 'ನಾನೂ ಬರುವೆ ಅತ್ತಿಗೆ ನಿನ್ನ ಜೊತೇಲಿ." ಎಂದು ಅತ್ತಿಗೆಗೆ ಗಂಟುಬಿದ್ದಿದ್ದ. ಆನಂದ ಅತ್ತಿಗೆ ಹೋಗುವಳೆಂದು ಅಳುತ್ತಲೇ ಇದ್ದ. ಅಲ್ಲಿಯೇ ಇದ್ದಾಗ ಸರೂವನ್ನು ಯಾರೂ ಗೌರವದಿಂದ ಕಾಣುತ್ತಿರಲಿಲ್ಲ. ಆದರೆ ಈಗ ಅವಳು ಹೊರಟುಹೋಗುತ್ತಾಳೆ ಎಂಬುದು ತಿಳಿದ ಮೇಲೆ, ಎಲ್ಲರೂ ಅವಳ ಅಗಲಿಕೆ

ಗಾಗಿ ದುಃಖಿಸಿದರು. ಮನೆಗೆ ಬಂದ ನಾಲ್ಕು ವರ್ಷಗಳಲ್ಲಿ ಸರೂ, ಅತ್ತೆಯ ಮನೆ ಬಿಟ್ಟು ಹೊರಗೆ ಹೋದುದೇ ಇಲ್ಲ. ಎದುರಿಗೇ ಇರುವಾಗ ಯಾರ ಕರುಣೆ, ಸಹಾಯ, ಅವರ ಕೆಲಸ, ಅವರ ಗುಣ, ಯಾವುದೂ ಕಾಣುವುದಿಲ್ಲ ಆದರೆ ಅವರು ಹೊರಟು ಹೋದಾಗ ಅವರ ಗುಣ ಸಹಾನುಭೂತಿ, ದಾಕ್ಷಿಣ್ಯ ಇವೆಲ್ಲ ಅತ್ಯಂತ ಬೆಲೆಯುಳ್ಳವಾಗಿ ಕಾಣುತ್ತೆ. ಸರೂವಿನ ವಿಷಯದಲ್ಲೂ ಅವರೆಲ್ಲರಿಗೂ ಹಾಗೆಯೇ ಅನಿಸಿತು.

ಮನೆಗೆ ಬೀಗ ಹಾಕಿ ಎಲ್ಲರೂ ನಡೆದರು. ಸ್ಟೇಷನ್‌ನಲ್ಲಿಯ ಜನರ ಗಲಾಟೆ ಗದ್ದಲ ಇವುಗಳನ್ನು ಎಂದೂ ನೋಡದ ವಿಜಯ ಭಯದಿಂದ ಅಜ್ಜ ನಿಗೇ ಅಂಟಿಕೊಂಡಿದ್ದ. ಗಾಡಿ ಹೊರಡುವುದಕ್ಕೆ ಇನ್ನೂ ಸಮಯವಿದ್ದು ದರಿಂದ ಶ್ರೀಕಂಠಯ್ಯ ವಿಜಯನನ್ನು ಎತ್ತಿಕೊಂಡು ಒಳಗೇ ಕೂತಿದ್ದರು. ವಿಜಯ ಕೇಳಿದ್ದೆಲ್ಲಾ ಅವನ ಬಳಿಯಲ್ಲಿಯೇ. ಬೆಲೂನು, ಪೀಪಿ, ಚಾಕಲೇಟು, ಬಿಸ್ಕಿಟ್ಟು ಎಂದು ಕೇಳಿದ್ದೆಲ್ಲಾ ಕೊಡಿಸಿದರು ಶ್ರೀಕಂಠಯ್ಯ. ಮುರಲಿ-ಮುಕುಂದರು, 'ವಿಜಯಾ, ಟಾಟಾ...ಟಾಟಾ!' ಎಂದು ಅವನ ಸುತ್ತಲೂ ಗುಂಪು ಕಟ್ಟಿ, ಕೂಗುತ್ತಾ ನಿಂತಿದ್ದರು. ಬೆಲ್ ಆಯಿತು. ಶ್ರೀಕಂಠಯ್ಯ ಗಾಡಿಯಿಂದ ಇಳಿದರು. ವಿಜಯ ಕಿಟಕಿಯಿಂದಲೇ ಕೈನೀಡಿ 'ಅಜಾ ನಾನೂ ಬಲತ್ತೀನಿ' ಎಂದು ಅಳಲು ಶುರುಮಾಡಿದ. ಗಾಡಿ ನಿದಾನವಾಗಿ ಚಲಿಸಿತು. ವಿಜಯ ಕಿರುಚುತ್ತಲೇ ಇದ್ದ. 'ಹೋಗಿ ಬರುತ್ತೀರಾ ಅಣ್ಣಾ-ಅತ್ತಿಗೇ' ಎಂದು ಒಂದೇ ಬಾರಿಗೆ ಕೂಗಿದರು ಮುರಲಿ-ಮುಕುಂದರು. ಶ್ರೀಕಂಠಯ್ಯ 'ವಿಜಯಾ-ವಿಜಯಾ!' ಎಂದು ಕೂಗು ವಾಗಲೇ ರೈಲು ಮುಂದಕ್ಕೆ ಹೋಯಿತು. ವಿಜಯನೂ ಕಣ್ಮರೆಯಾದ. ಎಲ್ಲರೂ ಮನೆಗೆ ಭಾರವಾದ ಹೃದಯದಿಂದ ಹಿಂತಿರುಗಿದರು.

ಮಾಧವ, ನೇರವಾಗಿ ಸರೂವಿನ ಸಂಬಂಧಿಕರಾದ ನಾರಾಯಣಸ್ವಾಮಿ ಯವರ ಮನೆಗೆ ಹೋಗಿ ಇಳಿದ. ಸರೂ ಅವರಿಗೆ ಮಗಳಾಗಬೇಕಿತ್ತು. ಅಪರೂಪಕ್ಕೆ ಬಂದ ಮಗಳು ಅಳಿಯರನ್ನು ಆದರದಿಂದಲೇ ಬರಮಾಡಿಕೊಂಡರು. ಅಂದೇ ಮಾಧವ ಆಫೀಸಿಗೆ ಹೋಗಿ ಡ್ಯೂಟಿಗೆ ಹಾಜರಾದ. ಸರೂವಿನ ಚಿಕ್ಕಮ್ಮ ಮಗ

ಳನ್ನು ನೋಡಿ ಸಂತೋಷಪಟ್ಟರು. ಮಾಧವ ಮನೆಯನ್ನು ಹುಡುಕಲು ಕಷ್ಟ ಪಡಲೇ ಇಲ್ಲ. ಅವನ ಗೆಳೆಯನೊಬ್ಬ ಮನೆ ಬಿಟ್ಟು ಬೇರೆ ಊರಿಗೆ ಹೋಗುವ ವನಿದ್ದ. ಅವನ ಮನೆ ಖಾಲಿಯಾದ ಕೂಡಲೇ ಮಾಧವ ಅವನ ಮನೆಗೇ ಹೋಗುವವನಿದ್ದ. ಸಂಜೆ ಕೆಲಸ ಮುಗಿಸಿ ಮನೆಗೆ ಬಂದವನೇ ಮಾಧವ ಹೇಳಿದ: "ಮನೆ ಸಿಕ್ಕಿಯಾಯಿತು. ಬಾಡಿಗೆ ಮೂವತ್ತು ರೂಪಾಯಿ. ನಾಳೆ ನಾಡಿದ್ದು ಅಲ್ಲಿಗೆ ಹೋಗುವಾ." ಎಂದು.

"ಅಷ್ಟೇನು ಅವಸರ ಹೊರಡಲು? ಇಲ್ಲಿಯೇ ಇದ್ದರಾಗದೇ ? ಇದೇನು ಕಂಡವರ ಮನೆಯೇ ?" ಸುಶೀಲಮ್ಮ ಆತ್ಮೀಯರಾಗಿ ಹೇಳಿದರು.

"ಹಾಗೇನಿಲ್ಲಾ, ಎಂದಾದರೂ ಬೇರೆ ಮನೆಗೆ ಹೋಗಲೇಬೇಕಷ್ಟೆ? ಮನೆ ಖಾಲಿಯಾಗಿದೆ, ಈಗಲೇ ಹೋಗುವುದು ವಾಸಿ. ನಾಳೆ ಹೇಗಿದ್ದರೂ ಭಾನುವಾರ. ರಜಾ ಇದೆ. ನಾಳೆಯೇ ಸಾಮಾನು ಸಾಗಿಸಿದರಾಯಿತು."ಎಂದು ಮಾಧವ ಉತ್ತರಿಸಿದ್ದಕ್ಕೆ ಸುಶೀಲಮ್ಮ ಏನೂ ಹೇಳಲಿಲ್ಲ.

ಮನೆ ಇದ್ದುದು ಟ್ರಿಪ್ಲಿಕೇನ್‌ನಲ್ಲಿ. ಚಿಕ್ಕದಾಗಿ ಬೆಲ್ಲದ ಅಚ್ಚಿನ ಮಾದರಿ ಯಾಗಿದ್ದಿತು. ಇದ್ದುದು ಒಂದು ರೂಮು, ಅಡುಗೆಮನೆ, ಬಚ್ಚಲುಮನೆ, ಚಿಕ್ಕದಾದ ವೆರಾಂಡಾ. ಮನೆ ಚಿಕ್ಕದಾದರೂ ಸರೂವಿನ ಪುಟ್ಟ ಸಂಸಾರಕ್ಕೆ ಸಾಕಾಗಿತ್ತು. ಸಾಮಾನೆಲ್ಲವನ್ನೂ ಶನಿವಾರ ರಾತ್ರಿಯೇ ಸಾಗಿಸಿದ್ದಾಯ್ತು. ಬೆಳಗ್ಗೆ ಕಾಫಿ ತಿಂಡಿ ಮುಗಿದ ನಂತರ ಸರೂ ಹೇಳಿದಳು "ಈ ದಿನ ರಾತ್ರಿ ನೀವೆಲ್ಲರೂ ಅಲ್ಲಿಗೇ ಬಂದುಬಿಡಿ ಚಿಕ್ಕಮ್ಮ ಊಟಕ್ಕೆ. ಅಲ್ಲಿಯೇ ಮಲಗಿದ್ದು ಬೆಳಗ್ಗೆ ಬಂದರಾಯಿತು. ನಾವಿನ್ನು ಬರುತ್ತೇವೆ. ನಿಮ್ಮ ಉಪಕಾರ ಬಹಳ ದೊಡ್ಡದು ಚಿಕ್ಕಮ್ಮ."

"ಸಾಕು ಬಿಡೇ, ಏನು ಮಾತಾಡುತ್ತೀ? ಮಕ್ಕಳು ಮನೆಗೆ ಬಂದರೆ, ಊಟ ಹಾಕುವುದೂ ಉಪಕಾರವೇ?" ಸುಶೀಲಮ್ಮ ಕೋಪಗೊಂಡವರಂತೆ ನುಡಿದರು.

ಸರೂ ತನ್ನ ಕನಸಿನ ಮನೆಯನ್ನು, ತನ್ನ ಬಯಕೆಯ ಮನೆಯನ್ನು, ಕಡೆಗೂ ಒಮ್ಮೆ ಕಂಡಳು. ಸರೂವಿನ ಸಡಗರಕ್ಕೆ ಕೊನೆಯೇ ಇಲ್ಲ. ಮನೆಗೆ ಬರುವ ವೇಳೆಗೆ ಹತ್ತುಗಂಟೆಯಾಗಿತ್ತು. ಅಷ್ಟು ಹೊತ್ತಿನ ಮೇಲೆ ಅಡುಗೆ ಯನ್ನು ಮಾಡುವುದು ಹೊತ್ತಾಗುತ್ತದೆಂದು, ಹೋಟೆಲಿನಿಂದಲೇ ಊಟ ತಂದು, ಊಟ ಮಾಡಿದ್ದಾಯ್ತು. ವಿಜಯ ಆದೇ ತಾನೇ ಮಲಗಿದ್ದ. ಸರೂ

ವೀಳ್ಯವನ್ನು ಮಾಧುವಿಗೆ ಕೊಡುತ್ತಾ ಹೇಳಿದಳು: "ಪಾಪ, ಚಿಕ್ಕಪ್ಪ ಅಂತಹ ಅನುಕೂಲವಂತರೇನೂ ಅಲ್ಲ; ಅವರ ಮನೆಯಲ್ಲಿ ನಾವೂ ಎಂಟು ದಿನ ಇದ್ದಾಯ್ತು. ನಮಗೇಕೆ ಅವರ ದಾಕ್ಷಿಣ್ಯ? ಅದಕ್ಕೆ ಅವರಿಗೆ ಏನಾದರೂ ಕೊಟ್ಟು ಅವರ ಉಪಕಾರದ ಹೊರೆ ಆದಷ್ಟು ಕಡಮೆ ಮಾಡೋಣಾ."

"ಅದಿರಲಿ, ಸಾಯಂಕಾಲ ಬೇಕಾದರೆ ಪೇಟೆ ಕಡೆ ಹೋಗೋಣಾ. ಅಲ್ಲಿ ಅಂತೂ ಕೆಲಸದ ನೆಪ ಹೇಳುತ್ತಿದ್ದೆ. ಇಲ್ಲಿ ಈಗ ಯಾವ ಕೆಲಸವೂ ಇಲ್ಲ ವಲ್ಲಾ?" ಮಾಧವ ಅರ್ಥಗರ್ಭಿತವಾಗಿ ಅವಳ ಕಡೆ ನೋಡಿದ. ಸರೂ ಅವನ ಇಷ್ಟವನ್ನು ಗ್ರಹಿಸಿದಳು. "ನಿಮ್ಮ ಇಷ್ಟಕ್ಕೆ ನಾನೆಂದಾದರೂ ಬೇಡವೆಂದಿರು ವೆನೇ?" ಸರೂ ಮಾಧವನ ಬಳಿಸಾರಿದಳು. ಸರೂ ಯಾವ ಯೋಚನೆಯೂ ಇಲ್ಲದೆ, ನಿರಾಳವಾಗಿ ನಿದ್ದೆ ಹೋದಳು. ವಿಜಯ ಎದ್ದು ಅಳಲು ಶುರು ಮಾಡಿದ ಮೇಲೆಯೇ ಸರೂವಿಗೆ ಎಚ್ಚರವಾಗಿದ್ದು. ಬೆಂಗಳೂರಿನಿಂದಲೇ ತಂದಿದ್ದ ಪುಟ್ಟದಾದ ಅಗ್ಗಿಷ್ಟಿಕೆಯನ್ನು ಹೊತ್ತಿಸಿ ಕಾಫಿ ಮಾಡಿದಳು. ವಿಜಯ ಕಾಫಿ ಕುಡಿದು ಆಟವಾಡಿಕೊಂಡಿದ್ದ. ಸರೂ ತಲೆ ಬಾಚಿ, ಹೊಸ ಸೀರೆ ಯುಟ್ಟು ಸಿದ್ಧಳಾಗುವ ವೇಳೆಗೆ, ಮಾಧವ ನಿದ್ರೆಯಿಂದ ಎಚ್ಚೆತ್ತ. ಸಂಜೆ ಯಾದೊಡನೆ ವಿಜಯ 'ಟಾಟಾ ಹೋಗೋಣಾ' ಎಂದು ರಾಗ ತೆಗೆದ.

ಸರೂ ವಿಜಯನನ್ನೆತ್ತಿಕೊಂಡು ಮನೆಗೆ ಬೀಗ ಹಾಕಿ ಹೊರಟು ನಿಂತಳು. ಟ್ರಾಮಿನಲ್ಲಿಯೇ 'ಮೂರ್ ಮಾರ್ಕೆಟ್' ತಲುಪಿದರು. ವಿಜಯ ಅಲ್ಲಿಯ ಆಟದ ಸಾಮಾನುಗಳನ್ನೆಲ್ಲಾ ನೋಡಿ 'ಕೊಡಿಸು' ಎಂದು ಹಟ ಹಿಡಿದ. ಅವನನ್ನು ಸಮಾಧಾನ ಪಡಿಸಿ, ತಮಗೆ ಬೇಕಾದ ಸಾಮಾನು, ಚಿಕ್ಕಮ್ಮನಿಗೆ ಒಂದು ರವಕೆ ಖಣ, ಆ ಎರಡು ಮಕ್ಕಳಿಗೆ ಷರಟು ಬಟ್ಟೆ, ಮನೆಗೆ ಬೇಕಾದ ತರಕಾರಿ ಎಲ್ಲಾ ತೆಗೆದುಕೊಂಡು ಬರುವ ವೇಳೆಗೆ ಕತ್ತಲೇ ಆಯಿತು. ಸರೂ ಮನೆಗೆ ಬಂದವಳೇ ಅಡುಗೆ ತಯಾರಿಗಾರಂಭಿಸಿದಳು. ವಿಜಯ ಮಾಧವನ ಬಳಿ ಯಲ್ಲಿಯೇ ಇದ್ದ.

ರಾತ್ರಿ ಒಂಬತ್ತರ ವೇಳೆಗೆ ಸುಶೀಲಾ, ನಾರಾಯಣಸ್ವಾಮಿ, ಅವರ ಎರಡು ಮಕ್ಕಳು ಎಲ್ಲಾ ಬಂದರು. ಸರೂ ಒಂದು ಪುಟ್ಟ ಹಬ್ಬದ ಅಡುಗೆ ಯನ್ನೇ ಮಾಡಿದ್ದಳು. ಹುಡುಗರು ಬಂದೊಡನೆಯೇ ವಿಜಯ 'ಮಾಮಾ ಬಂದ' ಎಂದು ಅವರ ಬಳಿಗೋಡಿದ.

ಊಟ ಮಾಡುವಾಗ ನಾರಾಯಣಸ್ವಾಮಿ, ಸರೂವಿನ ತಂದೆ-ತಾಯಿ,

ಅತ್ತೆಯವರ ವಿಷಯವಾಗಿ ಹೇಳಿದ. ಸರೂ ಅತ್ತೆಯನ್ನು ನೆನೆದು ಕಣ್ಣೀರು ಇಟ್ಟಳು. ತಂದೆ ಕಾಶಿಯಲ್ಲಿರುವುದಾಗಿಯೂ ಹಿಂದಕ್ಕೆ ಬರುವ ಯೋಚನೆ ಮಾಡಿಲ್ಲವೆಂದೂ ಹೇಳಿ ಪೇಚಾಡಿದಳು.

"ಗೋವಿಂದನ್ನ ನೋಡಿ ಎಷ್ಟು ವರ್ಷವಾಯಿತೋ ಏನೋ! ನೀನು ಎಳೆಯ ಮಗುವಾಗಿದ್ದಾಗ ನಿನ್ನ ತಾಯಿಯನ್ನೂ, ಅಕ್ಕನನ್ನೂ ನೋಡಿದ್ದೆ. ಮೊನ್ನೆ, ನೀನು ಕಾಗದ ಬರೆದು ನೀನು ಬರುವುದನ್ನು ತಿಳಿಸದಿದ್ದರೆ, ನಿನ್ನ ಗುರುತು ನನಗೆ ಆಗುತ್ತಿತ್ತೋ ಇಲ್ಲವೋ ಗೊತ್ತಿಲ್ಲ. ನೋಡು ನಿನಗೆ ಚಿಕ್ಕಪ್ಪ ಎಷ್ಟು ಬಳಕೆಯಲ್ಲಿದ್ದಾನೆಂದು!" ನಾರಾಯಣಸ್ವಾಮಿ ನೊಂದು ನುಡಿದರು.

ವಿಜಯ ಊಟದ ಕಡೆಗೂ ಗಮನ ಕೊಡದೆ ಹುಡುಗರ ಜೊತೆಯಲ್ಲಿಯೇ ಆಡುತ್ತಿದ್ದ. ಸರೂ ತನ್ನ ಅತ್ತೆಯ ಮನೆಯ ವಿಷಯವನ್ನೆಲ್ಲಾ ಹೇಳುತ್ತಾ ಸುಶೀಲಳೊಂದಿಗೆ ಮಾತಾಡುತ್ತಿದ್ದಳು. 'ನನಗೆ ಅತ್ತೆ ಮಾವ ಅಂದರೆ ತಂದೆ ತಾಯಿಗಳಂತೆ. ಅವರು ತನ್ನ ಭಾಗದ ದೇವರು' ಎಂದೆಲ್ಲಾ ಹೇಳಿದಳು ಸರೂ ತನ್ನ ಮನಸ್ಸಿನಲ್ಲಾದ ಪರಿಣಾಮವನ್ನು ಸ್ವಲ್ಪವೂ ಹೇಳಲಿಲ್ಲ. ಸುಶೀಲಾ, ಸರೂವಿನ ಅಚ್ಚು-ಕಟ್ಟು, ಒಪ್ಪ-ಓರಣ ಇವುಗಳನ್ನು ನೋಡಿ ಬೆರಗಾದಳು. ಮಾಧವ, ನಾರಾಯಣಸ್ವಾಮಿಯ ಮಕ್ಕಳು ಎಲ್ಲಾ ರೂಮಿನಲ್ಲಿಯೇ ಮಲಗಿ ದರು. ಸರೂ, ಸುಶೀಲಾ ಇಬ್ಬರೂ ಅಡುಗೆಮನೆಯಲ್ಲಿಯೇ ಮಲಗಿದರು. ಸುಶೀಲಾ ತನ್ನ ಸಂಸಾರದ ಕಷ್ಟಸುಖಗಳನ್ನೆಲ್ಲಾ ಹೇಳಿಕೊಂಡಳು. ಅವರಿಬ್ಬ ರಿಗೂ ಮಾತಿನಲ್ಲಿಯೇ ಬೆಳಗಾಯಿತು.

ಸರೂ ಬೇಗನೆ ಎದ್ದು ಪೂರಿ-ಆಲೂಗಡ್ಡೆ ಪಲ್ಯೆ, ಕಾಫಿ ಮಾಡಿದಳು.

ಒಬ್ಬೊಬ್ಬರಾಗಿ ಎದ್ದು ಎಲ್ಲರೂ ಸ್ನಾನ ಮುಗಿಸಿದರು. ಉಪಹಾರ ಸೇವನೆಯೂ ಆಯಿತು. ಸರೂ ತಟ್ಟೆಯಲ್ಲಿ ತೆಂಗಿನಕಾಯಿ ಎಲೆ-ಅಡಿಕೆ ಇಟ್ಟು ಖಣವನ್ನು ಕೊಟ್ಟು, ಚಿಕ್ಕಮ್ಮನಿಗೆ ನಮಸ್ಕರಿಸಿದಳು. ರಾಮು, ಸುಂದರ ಇವ ರಿಗೆ ಬಟ್ಟೆಯನ್ನೂ ಕೈಗಿತ್ತಳು.

"ಇದೇನು ಸರೂ, ಮನೆಗೆ ಬಂದ ಮಗಳು ನೀನು, ನಿನ್ನನ್ನು ಬರಿಯ ಕೈಲಿ ಕಳಿಸಿ, ನಿನ್ನಿಂದ ನಾನು ತೆಗೆದುಕೊಳ್ಳುವುದು ಇದಾವ ನ್ಯಾಯ? ಇದೆಲ್ಲಾ ನನಗೆ ಬೇಡ ಮಗೂ, ಬರಿಯ ಕುಂಕುಮ ಕೊಡು ಸಾಕು. ಅದೊಂದು ನನಗೆ ಸಾಯುವ ವರೆಗೆ ಒಡವೆಯಾಗಿರಲಿ." ಸುಶೀಲಾ ಮನನೊಂದು ನುಡಿದಳು. ಸರೂವಿನ ಬಲವಂತದಿಂದ ವಿಧಿಯಿಲ್ಲದೇ ಸುಶೀಲಾ ಉಡುಗೊರೆಯನ್ನು ತೆಗೆದ

ಕೊಳ್ಳಬೇಕಾಯಿತು. ಎಲ್ಲರೂ ಹೊರಟು ನಿಂತರು.

ವಿಜಯ ರಾಮುನಿಗೇ ಅಂಟಿಕೊಂಡುಬಿಟ್ಟಿದ್ದ. ಎಲ್ಲಿ ಹೋದರೂ ಅವನನ್ನು ಬಿಡಲೇ ಒಲ್ಲ. ಅವನ ಕಣ್ಣು ತಪ್ಪಿಸಿ, ಸುಶೀಲಾ ಹೋಗಬೇಕಾದರೆ ಒಂದು ದೊಡ್ಡ ಸಾಹಸಕಾರ್ಯವೇ ಆಯಿತು.

ಸರೂ ಈಗ ಸರ್ವಸ್ವತಂತ್ರಳು. ಅವಳೀಗ ಯಾರಿಗೂ ಹೆದರಬೇಕಾದುದಿಲ್ಲ. ಎಲ್ಲಿಗೆ ಬೇಕಾದರೂ ಹೋಗಬಹುದು, ಬರಬಹುದು; ಯಾವಾಗ ಬೇಕಾದರೂ ಮಲಗಬಹುದು;ಇಷ್ಟ ಬಂದಾಗ ಏಳಬಹುದು. ಅವಳೀಗ ನೆಮ್ಮದಿಯಾಗಿದ್ದಾಳೆ. ಅವಳ ಎಲ್ಲಾ ಬಯಕೆಯೂ ನೆರವೇರಿದೆ. ಆಫೀಸಿಗೆ ಮಾಧವ ಬೆಳಿಗ್ಗೆ ಹತ್ತುಗಂಟೆಗೆ ಊಟ ಮಾಡಿಕೊಂಡು ಹೋದರೆ ಮನೆಗೆ ಬರುವುದು ಸಾಯಂಕಾಲ ಐದೂವರೆ, ಆರು ಗಂಟೆಗೆ. ಮಾಧವ ಉಪಹಾರ ತೀರಿದ ನಂತರ ಸರೂವನ್ನು ಎಲ್ಲಿಗಾದರೂ ಕರೆದೊಯ್ಯುತ್ತಿದ್ದ. ಈ ದಿನ ಚೈನಾ-ಬಜಾರ್, ನಾಳೆ ಮ್ಯುಜಿಯಂ, ನಾಡಿದ್ದು ಲೈಟ್‌ಹೌಸ್, ಬೀಚ್, ಎಂದು ಎಲ್ಲಾ ಕಡೆಗೂ ಕರೆದುಕೊಂಡು ಹೋಗಿ ಸುತ್ತಾಡಿಸಿಕೊಂಡು ಬರುತ್ತಿದ್ದ. ವಿಜಯ ತಾಯಿಗಿಂತ ಹೆಚ್ಚಾಗಿ ತಂದೆಯನ್ನೇ ಹೊಂದಿಕೊಂಡಿದ್ದ. ಪ್ರತಿ ವಾರಕ್ಕೊಂದು ಸಿನೀಮಾ ಅಂತೂ ಖಂಡಿತ. ರಾತ್ರಿ ಬರುವುದು ತಡವಾದರೆ ಒಂದೊಂದು ದಿನ ಹೋಟೆಲ್‌ನಲ್ಲಿಯೇ ಊಟ ಮುಗಿಸಿಕೊಂಡು ಮನೆಗೆ ಬರುತ್ತಿದ್ದರು. ಸರೂ ಯಾವುದಾವುದಕ್ಕಾಗಿ ಹಂಬಲಿಸಿದಳೋ, ಅವೆಲ್ಲವನ್ನೂ ಮಾಧವ ನೆರವೇರಿಸಿದ್ದ. ಅವಳಿಗೀಗ ಯಾವ ಕೊರತೆಯೂ ಇರಲಿಲ್ಲ. ಅವಳೀಗ ತನ್ನದೇ ಆದ ಸುಖ-ಸಂತೋಷದಲ್ಲಿ ಮೈಮರೆತಿದ್ದಳು.

ಸರೂ ತನ್ನ ಹೊಸ ಮನೆಯ ಸಂಸಾರವನ್ನೂ ವಿಜಯನ ಆಟಪಾಟವನ್ನೂ ಪೂರ್ತಿಯಾಗಿ ವಿವರಿಸಿ ತಂದೆಗೆ ಕಾಗದ ಬರೆದಳು. ತನ್ನ ಸುಖವನ್ನು ನೋಡಲು ಅತ್ತೆಯವರು ಬದುಕಿಲ್ಲವಲ್ಲಾ ಎಂದೂ ಹಲುಬಿದಳು.

ಶ್ರೀಕಂಠಯ್ಯ ಕಾಗದ ಬರೆಯುತ್ತಿದ್ದರು. "ವಿಜಯ ಏನನ್ನುತ್ತಾನೆ? ಸರಿಯಾಗಿ ಊಟ ಮಾಡುತ್ತಾನೆಯೆ ? ಅವನು ಕೇಳಿದ್ದು ಕೊಡು; ಅವನ ಮನಸ್ಸು ನೋಯಿಸಬೇಡ. ಮಕ್ಕಳು ಎಂದರೆ ಹೂವಿನ ಹಾಗೆ. ಅದು ಎಷ್ಟು ಬೇಗ ಅರಳುವುದೋ ಅಷ್ಟೇ ಬೇಗ ಬಾಡುವುದು. ಮಕ್ಕಳ ಮನಸ್ಸೂ ಅದೇ ರೀತಿ ನವಿರಾಗಿರುತ್ತೆ. ಸರೂವನ್ನು ಚೆನ್ನಾಗಿ ನೋಡಿಕೊ. ಇಲ್ಲಿ ನೀವಿಲ್ಲದಿರುವುದು ಬಹಳ ಬೇಜಾರು." ಎಂದೆಲ್ಲಾ ಬರೆಯುತ್ತಿದ್ದರು. ಮಾಧವನೂ ತಂದೆಗೆ ಉತ್ತರ

ಬರೆಯುತ್ತಿದ್ದ.

ಮನೆಗೆ ಬಂದ ಹೊಸತರಲ್ಲಿ ಸರೂ ಕೆಲಸವಿಲ್ಲದೆಯೇ ಚಡಪಡಿಸಿದಳು. ಅಮೇರಿಕದ ನಿಗ್ರೋ ಗುಲಾಮರನ್ನು ಅಬ್ರಹಾಂಲಿಂಕನ್ ಗುಲಾಮಗಿರಿಯಿಂದ ಬಿಡುಗಡೆ ಮಾಡಿದಾಗ, ಸುಖವೆಂದರೇನು ಎಂಬುದನ್ನೇ ಅರಿಯದ ನಿಗ್ರೋಗಳು ಸುಮ್ಮನೇ ಕೂತಿರಲಾರದೆ, ಕೆಲಸ ಮಾಡಲು ಚಡಪಡಿಸಿದರಂತೆ. ಸರೂ ಅಲ್ಲಿ ಯಾವಾಗಲೂ ದುಡಿಯುತ್ತಿದ್ದವಳು ಈಗ ಕೆಲಸವೇ ಇಲ್ಲದ್ದರಿಂದ ಅವಳಿಗೂ ಹಾಗೆಯೇ ಆಯಿತು. ಬೆಳಿಗ್ಗೆ ಹತ್ತರ ವೇಳೆಗೆ ಮಾಧವ-ವಿಜಯರಿಗೆ ಊಟವಾದ ಮೇಲೆ ತಾನೂ ಊಟ ಮಾಡಿ, ಮೇಲು ಮೇಲಿನ ಕೆಲಸ ಮುಗಿಸಿದರೆ ಮತ್ತೆ ಸಂಜೆ ನಾಲ್ಕರ ತನಕ ಯಾವ ಕೆಲಸವೂ ಇಲ್ಲದೆ, ಹೊತ್ತು ಕಳೆಯುವುದೇ ಪ್ರಯಾಸವಾಯಿತು.

ಸರೂವಿನ ಪಕ್ಕದ ಮನೆ, ಪಂಜಾಬಿಯರದು. ಈ ಕಡೆಯದು ವೈಷ್ಣವ ಬ್ರಾಹ್ಮಣರದ್ದು. ಹೊತ್ತು ಕಳೆಯುವುದಕ್ಕಾಗಿ ಸರೂ, ಕಸೂತಿ ಕೆಲಸಕ್ಕೆ ತೊಡಗಿದಳು. ಮನೆಯ ಕಿಟಕಿ ಬಾಗಿಲುಗಳಿಗೆಲ್ಲ ಪರದೆ ಬಂದಿತು. ಶ್ರೀಕಂಠಯ್ಯ ಕೊಟ್ಟಿದ್ದ ಹಣ, ಹದಿನೈದು ದಿನಗಳಿಗೇ ಮಾಯವಾಯಿತು. ಮನೆಯನ್ನು ಈಗಿನ ಆಧುನಿಕ ಕಾಲದಂತೆ ಸಿಂಗರಿಸಬೇಕು, ಮನೆ ಅಂದ ಮೇಲೆ ಒಂದು ಸೋಫಾ, ಎರಡು ಕುರ್ಚಿಗಳಾದರೂ ಇರಬೇಡವೇ, ಎಂಬ ಸರೂವಿನ ಆಸೆಯಿಂದ ಮನೆಗೆ ಕುರ್ಚಿ, ಮೇಜು, ಸೋಫಾ, ಷೆಲ್ಫ್ ಎಲ್ಲಾ ಬಂದುವು. ಮಾಧವ ಅಂದಿನಿಂದಲೂ ಕೂಡಿಟ್ಟ ಹಣವೂ, ಹತ್ತದಾಯಿತು. ಇದ್ದ ಒಂದು ರೂಮು, ಅದೇ ಆಫೀಸ್ ರೂಮು, ಡ್ರೆಸಿಂಗ್ ರೂಮು, ಬೆಡ್‌ರೂಮು, ಗೆಸ್ಟ್ ರೂಮು, ಎಲ್ಲವೂ ಅವರಲ್ಲಿಯೇ ಅಡಕವಾಗಿತ್ತು. ವೆರಂಡಾದಲ್ಲಿ ದುಂಡಾದ ಮೇಜು, ಅದರ ಮೇಲೆ ಅಂದವಾದ ಫ್ಲವರ್‌ವಾಸ್, ಕಾಗದದ ಹೂವುಗಳ ಬಂಚ್ ಒಂದನ್ನು ಅದರಲ್ಲಿಟ್ಟು ಅಲಂಕರಿಸಿದ್ದಾಯ್ತು.

ಕಾಶ್ಮೀರೀ ಸೀನರಿಯ ಮೂರು ನಾಲ್ಕು ಫೋಟೋಗಳನ್ನು ಕೊಂಡು ತಂದು, ವೆರಾಂಡಾದಲ್ಲಿ ಹಾಕಿದ್ದಾಯ್ತು. ಹೀಗೆ ದಿನವೆಲ್ಲಾ ಮನೆಯನ್ನು ಅಂದವಾಗಿ, ಮೋಹಕವಾಗಿ, ಆಕರ್ಷಣೀಯವಾಗಿ ಇಡಲು ಸರೂ ಯಾವಾಗಲೂ ಪ್ರಯತ್ನಿಸುತ್ತಿದ್ದಳು. ರೂಮಿನಲ್ಲೇ ಆಗಲೀ, ಅಡುಗೆ ಮನೆಯಲ್ಲಿಯೇ ಆಗಲೀ, ಹುಡುಕಿದರೂ ಒಂದು ಕಣದಷ್ಟು ಕಸ ಸಿಗುತ್ತಿರಲಿಲ್ಲ. ಎಲ್ಲವೂ ಒಪ್ಪವಾಗಿ, ಓರಣವಾಗಿ, ಕಂಗೊಳಿಸುತ್ತಿತ್ತು. ಯಾರು ನೋಡಿದರೂ ಅವಳ

ಮನೆಯ ಚೊಕ್ಕಟ ಶುಭ್ರತೆಯನ್ನು ಮೆಚ್ಚುತ್ತಿದ್ದರು.

ಸರೂ ಬೇಸರವಾಗಿ, ಗೇಟಿನ ಬಳಿ ನಿಂತಿದ್ದಳು. ಕಾಂಪೌಂಡು ಸಣ್ಣ ದಾದರೂ, ಸರೂ ಕುಂಡಾಗಳಲ್ಲಿಯೇ ಕೆಲವು ಹೂವಿನ ಸಸಿಗಳನ್ನು ನೆಟ್ಟು ಬೆಳೆಸಲಾರಂಭಿಸಿದಳು. ಗಿಡದಲ್ಲಿ ಇನ್ನೂ ಹೂವು ಬಿಟ್ಟಿರಲಿಲ್ಲ. ಪಕ್ಕದ ಮನೆ ಯಿಂದ, ತರುಣಿಯೊಬ್ಬಳು ಹೊರಗಡೆ ಕಸ ಎತ್ತಿ ಹಾಕುವುದಕ್ಕಾಗಿ ಬಂದಿ ದ್ದಳು. ಅಲ್ಲಿಯೇ ಕಾಂಪೌಂಡಿನ ಮೇಲೆ ಹತ್ತಿ ಕುಳಿತ ವಿಜಯ 'ಅಕ್ಕಾ!' ಎಂದು ಕೂಗಿ ಕೈಸೀಡಿ ಕರೆದ. ಅವಳು ತಿರುಗಿ ನೋಡಿ 'ಆವ್' ಎಂದು ಕರೆ ದಳು. ಸರೂ ಅವಳನ್ನು ನೋಡಿ ಮುಗಳ್ನಗೆ ನಕ್ಕಳು. "ಆಪಕ ನಾವ್?" ಆಕೆ ಹಿಂದಿಯಲ್ಲಿಯೇ ಪ್ರಶ್ನಿಸಿದಳು.

ಸರೂ ತನ್ನ ಹೆಸರು ಹೇಳಿದಳು. ಅವಳು ಹೈಸ್ಕೂಲಿನಲ್ಲಿ ಕಲಿತ ಹಿಂದಿ ಯನ್ನು ಇನ್ನೂ ಮರೆತಿರಲಿಲ್ಲ. ಹಾಗೆಯೇ ಅವರ ಪರಿಚಯ ಬೆಳೆಯಿತು.

ಆಕೆ ಹೀರಾಲಾಲನ ಪತ್ನಿ. ಅತ್ತೆ ರೋಹಿಣಿ, ಮಾವ ಮಣಿಲಾಲ್. ಆಕೆಯ ಹೆಸರು ರೂಪಾ. ಅವಳು ಶ್ರೀಮಂತರ ಮಗಳು. ಬೇಕಾದ್ದನ್ನೆಲ್ಲಾ ಬಳುವಳಿ ಕೊಟ್ಟಿದ್ದಾರೆ. ಇಲ್ಲಿ ಅತ್ತೆ ಅವಳನ್ನು ಗೋಳು ಹುಯ್ದು ಕೊಳ್ಳುತ್ತಾಳೆ. ಹೋಗಲೀ ಎಷ್ಟು ಕಷ್ಟವಾದರೂ ಅತ್ತೆಮನೆ ಎಂದು ಸಹಿಸಿಕೊಂಡಿರಬಹುದು. ಅವಳ ಗಂಡ ಹೀರಾಲಾಲ್‌ನ ನಡತೆ ಸ್ವಲ್ಪವೂ ಚೆನ್ನಾಗಿರಲಿಲ್ಲ. ಮನೆಗೆ ಬಂದ ಕೂಡಲೇ ತಾಯಿ, ಇದ್ದದ್ದು ಇಲ್ಲದ್ದು, ಎಲ್ಲಾ ಸೇರಿಸಿ ಸೊಸೆಯ ಮೇಲೆ ದೂರು ಹೇಳುತ್ತಾಳೆ. ಹೀರಾಲಾಲ ಹಿಂದು ಮುಂದು ನೋಡದೆ ಹೆಂಡತಿ ಯನ್ನು ಬಡಿಯುತ್ತಾನೆ. ಆ ಮನೆ ಅವಳಿಗೆ ಸಜೀವ ನರಕವಾಗಿತ್ತು. ಸರೂವಿ ನೊಡನೆ ಮಾತನಾಡುವಾಗಲೂ ಅವಳು ಅತ್ತೆ ಮಾವನ ಕಣ್ಣು ತಪ್ಪಿಸಿ ಮಾತನಾಡಬೇಕಿತ್ತು. ವಿಜಯ ಅವಳಿಗೆ ಹೊಂದಿಕೊಂಡಿದ್ದ. ಅವಳೇ ಹೇಳಿ ಕೊಟ್ಟ ಮಾತಿನಂತೆ ವಿಜಯ ಆಕೆಯನ್ನು 'ಆಂಟೀ' ಎಂದೇ ಕರೆಯುತ್ತಿದ್ದ.

ಮಧ್ಯಾಹ್ನ ಮೂರು ಗಂಟೆಯಾಗಿತ್ತು. ಸರೂ ವಿಜಯನೊಡನೆ ಕಾಗೆ, ನರಿ ಕತೆ ಹೇಳುತ್ತಿದ್ದಳು. ವಿಜಯ ತಲ್ಲೀನನಾಗಿ ಕೇಳುತ್ತಲೇ ಇದ್ದ. ಮನೆ ಯೊಳಕ್ಕೆ ಯಾರೋ ಬಂದಂತಾಯಿತು. ನೋಡುವಲ್ಲಿ ಬಂದವಳು ರೂಪಾ. ಅವಳನ್ನು ನೋಡಿದ ಕೂಡಲೇ ವಿಜಯ 'ಆಂಟೀ' ಎನ್ನುತ್ತಾ ಅವಳಿಗೆ ಅಂಟಿ ಕೊಂಡ. ರೂಪಾ, ಯಾವ ಮಾತನ್ನೂ ಆಡದೇ ಮೌನವಾಗಿ ಅವನನ್ನು ಎತ್ತಿ ಕೊಂಡಳು. ಅವಳ ಮುಖ ಕೆಂಪಾಗಿ ಊದಿಕೊಂಡಿತ್ತು. ಕಣ್ಣುಗಳು ಅತ್ತೂ

ಅತ್ತೂ ಕೆಂಪಾಗಿದ್ದುವು.

"ಬಹೆನ್, ನಾನು ಈ ಮನೆಯಲ್ಲಿ ಇನ್ನು ಅರೆ ನಿಮಿಷವೂ ಇರಲಾರೆ. ಅಯ್ಯೋ ನಾನು ಈಗಲೇ ಎಲ್ಲಿಗಾದರೂ ಓಡಿ ಹೋಗುವೆ ಬಹೆನ್." ರೂಪಾ ಬಿಕ್ಕಿ ಬಿಕ್ಕಿ ಅತ್ತಳು.

"ಯಾಕೆ ಅಷ್ಟು ಅಧೀರಳಾಗುವೆ, ಹೇಳು ರೂಪಾ, ಏನು ನಡೆಯಿತು?" ಸರೂ ಪರಿತಾಪಪಟ್ಟು ಕೇಳಿದಳು. ವಿಜಯ ಆಂಟೀ ಅಳುವುದನ್ನು ನೋಡಿ ತಾನೂ ಅಳಲು ಶುರು ಮಾಡಿದ.

"ನೋಡಿ ಬಹೆನ್, ಒಲೆಯ ಮೇಲೆ ಹಾಲು ಇಟ್ಟಿದ್ದೆ. ಉಕ್ಕಿಬಿಟ್ಟು ಸ್ವಲ್ಪ ಚೆಲ್ಲಿ ಹೋಯಿತು. ಅದಕ್ಕೆ ಅತ್ತೆ ಬಂದು ನನ್ನ ಬೈದು, ಹೊಡೆದು, ಕೂಗಾಡಿ, ಕಿರಿಚಾಡಿ, ಮಗ ಬಂದೊಡನೆಯೇ 'ಅಷ್ಟು ಹಾಲನ್ನೂ ಉಕ್ಕಿಸಿ ಚೆಲ್ಲಿಬಿಟ್ಟ' ಎಂದು ಹೇಳಿ ಅವರ ಕೈಲಿಯೂ ಹೊಡಿಸಿದ್ದಾರೆ. ಒಂದು ಚಿಕ್ಕ ಮಾತಿಗೇ ಇಷ್ಟು ಮಾಡುವವರ ಕೈಲಿ, ಹೇಗೆ ಬಾಳುವುದು? ನೀವೇ ನೋಡಿ ಬಹೆನ್, ನಾನೇನೂ ಸುಳ್ಳು ಹೇಳುವುದಿಲ್ಲ." ರೂಪಾ ತೋಳು ತೋರಿಸಿದಳು. ದಪ್ಪವಾದ ಬಾಸುಂಡೆಗಳು, ರಕ್ತ ಕಟ್ಟಿ ನೀಲಿಯ ವರ್ಣವನ್ನು ತಳೆದಿದ್ದುವು. ಸರೂ ಅದನ್ನು ನೋಡಿ ಕಂಪಿಸಿದಳು. ಕೂಡಲೇ ಎದ್ದು ಹೋಗಿ ಸಿಬಿಜಾಲ್ ಮುಲಾಮನ್ನು ತಂದು ಸವರಿದಳು. ಬೆನ್ನಮೇಲೆ ದಪ್ಪವಾಗಿ ಬಿದ್ದಿರುವ ಬಾಸುಂಡೆಗಳನ್ನು ಮುಟ್ಟುವಾಗ ಸರೂವಿನ ಮೈ ನವಿರೆದ್ದಿತು. ವಿಜಯ ಗಾಬರಿಯಾಗಿ ದೂರದಿಂದಲೇ 'ಆಂಟೀ'ಗೆ ಏನೋ ಆಗಿದೆ ಎಂದು ನೋಡುತ್ತಾ ನಿಂತಿದ್ದ.

"ಯಾವುದಕ್ಕೂ ಕಾಲ ಬರಬೇಕು ರೂಪಾ. ಸುಮ್ಮನೆ ಆತುರಪಟ್ಟರೆ ಏನು ಉಪಯೋಗವಿಲ್ಲ. 'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ' ಎಂದು ನಮ್ಮ ಜನದಲ್ಲಿ ಗಾದೆ ಹೇಳುತ್ತಾರೆ. ಸಹಿಸಿಕೋ ರೂಪಾ. ಸಹನೆಯೇ ಹೆಂಗಸಿಗೆ ಇರುವ ಗುಣ. ಸಹನೆಯೇ ಸಂಸಾರದ ಅಡಿಗಲ್ಲು ಎಂದು ನಮ್ಮ ತಾಯಿ ಪದೇ ಪದೇ ಹೇಳುತ್ತಿದ್ದರು. ನೀನು ನಿಜವಾಗಿಯೂ ನಿರಪರಾಧಿಯಾದ ಪಕ್ಷಕ್ಕೆ ದೇವರು ನಿನ್ನನ್ನು ಎಂದಿಗೂ ಕೈಬಿಡುವುದಿಲ್ಲ. ಒಂದು ಸ್ವಲ್ಪ ದಿನ ಅವರೂ ಹಾಗೆ ಆಡುತ್ತಾರೆ. ಕುಣಿದು ಕುಣಿದು ಕಾಲು ಸೋತರೆ ತಾವೇ ಸುಮ್ಮನಾಗುತ್ತಾರೆ. ನಿನಗೆ ಕಷ್ಟ ಆಗುತ್ತೆ ನಿಜ, ಆದರೆ ತಾಳಿಕೊ. ನಿನ್ನ ಗಂಡ ನಿನ್ನ ಮಾತು ಕೇಳುವುದೇ ಇಲ್ಲವೆ?"

"ಅವರೊಬ್ಬರು ಸರಿಯಾಗಿದ್ದು, ನನ್ನನ್ನು ಪ್ರೀತಿಸುತ್ತಿದ್ದರೆ, ಇದಕ್ಕಿಂತ ನೂರುಪಾಲು ಹೆಚ್ಚು ಕಷ್ಟವಾಗಲೀ ತಾಳಿಕೊಳ್ಳುತ್ತಿದ್ದೆ. ಆದರೆ ನನ್ನ ವಿಧಿ, ಅವರು ನನ್ನ ಕಡೆ ತಿರುಗಿ ಕೂಡಾ ನೋಡುವುದಿಲ್ಲ. ಅವರಿಗೆ ಇದ್ದಾರೆ ಬೇರೇ ಜನ, ಅವರ ಮನ ತೃಪ್ತಿಯಾಗಲು. ಅಲ್ಲಿ ಅವರಿವರ ಜೊತೆ ಮೆರೆದು, ಮನೆಗೆ ಸುಸ್ತಾಗಿ ಬರುವುದು, ಹೆಂಡತಿ ಎನ್ನುವ ಪ್ರಾಣಿಯನ್ನು ಹಿಡಿದು ಬಡಿಯುವುದು ಅಷ್ಟು ಗೊತ್ತಿದೆ ಅವರಿಗೆ. ಅವರಿಗೇ ನಾನು ಬೇಡವಾದ ಮೇಲೆ ನಾನು ಯಾರಿಗಾಗಿ ಬದುಕಲೀ ಬಹನ್? ನಾನು ಎಲ್ಲಿಯಾದರೂ ಸತ್ತುಹೋಗುವೆ." ಹೇಳುತ್ತಾ ಹೇಳುತ್ತಾ ಅವಳ ದನಿ ಗದ್ಗದಿತವಾಗುತ್ತಾ ಬಂದಿತು.

"ಮನುಷ್ಯ ಹುಟ್ಟಿದ ಮೇಲೆ ಸಾಯಲೇಬೇಕು. ಅದು ನಿಜ. ಆದರೆ ಅದಕ್ಕೂ ಕಾಲ ಬರಬೇಕು. ಹುಟ್ಟಿರುವುದು ಸಾಯುವುದಕ್ಕಾಗಿಯೇ. ಪ್ರತಿಯೊಬ್ಬನಿಗೂ, ತನ್ನ ಕರ್ತವ್ಯವಿದೆ. ಅದನ್ನು ಅವನು ಮಾಡಿಯೇ ತೀರಬೇಕು. ಮಾನವ ಎಂದೆಂದಿಗೂ ಕರ್ತವ್ಯಚ್ಯುತನಾಗಬಾರದು. ಯಾವುದೋ ಕೆಲಸಕ್ಕಾಗಿ ದೇವರು ನಿನ್ನನ್ನು ಇಲ್ಲಿ ಹುಟ್ಟಿಸಿದ್ದಾನೆ. ನಿನ್ನ ಕೆಲಸ ಮುಗಿಯಿತು ಅಂದ ಕೂಡಲೇ, ಅವನಾಗಿ ಅವನೇ ನಿನ್ನನ್ನು ತನ್ನ ಬಳಿ ಕರೆದುಕೊಳ್ಳುತ್ತಾನೆ. ಯಾರ ಇಚ್ಛೆಯಿಂದ ನೀನು ಇಲ್ಲಿಗೆ ಬಂದಿದ್ದೀಯೋ, ಅವನ ಇಷ್ಟದ ಪ್ರಕಾರವೇ ನೀನು ಅಲ್ಲಿಗೆ ಹೋಗಬೇಕು. ಜನನ, ಮರಣ, ಇವು ಎರಡೂ ಮನುಷ್ಯನ ಕೈಲಿ ಇಲ್ಲ ರೂಪಾ. ಅಷ್ಟೆಲ್ಲಾ ಯಾಕೆ, ಆ ಸೃಷ್ಟಿಕರ್ತ ದೇವರ ಆಜ್ಞೆ ಇಲ್ಲದೆ, ಅವನ ಇಷ್ಟವಿಲ್ಲದೆ, ಒಂದು ಹುಲ್ಲು ಕಡ್ಡಿಯನ್ನು ಕೂಡಾ ಎತ್ತಲು ಮಾನವನಿಂದ ಸಾಧ್ಯವಿಲ್ಲ ತಿಳಿಯಿತೆ? ದೇವರು ದಯಾಮಯ. ಅವನು ನಿರಪರಾಧಿಗಳನ್ನು ಎಂದಿಗೂ ಕೈಬಿಡುವುದಿಲ್ಲ. ನೀನು ಧೈರ್ಯ ನಾಗಿ ಇರು ರೂಪಾ. ಎಲ್ಲಾ ಅವನ ಮೇಲೆಯೇ ಭಾರ ಹಾಕು. ಅವನನ್ನು ನಂಬು. ನಿನಗೆ ಒಳ್ಳೆಯದಾಗುತ್ತೆ." ಪರೂ ತನಗೆ ತಿಳಿದಿರುವುದನ್ನೆಲ್ಲಾ ಅವಳಿಗೆ ಬೋಧೆ ಮಾಡಿದಳು.

"ಆಗಲೀ ಬಹನ್, ನೀವು ಹೇಳಿದಂತೆ ಸಹಿಸುವೆ. ಆದರೆ ಯಾವುದಕ್ಕೂ ಒಂದು ಎಲ್ಲೆ ಇದೆ. ನಾನೂ ಸಹಿಸುವ ವರೆಗೂ ಸಹಿಸುತ್ತೇನೆ. ಮಿತಿ ಮೀರಿದರೆ, ಅದೇನಾಗುವುದೋ ನಾನು ಹೇಳಲಾರೆ." ರೂಪಾ ವಿಜಯನನ್ನು ಒಮ್ಮೆ ಮುದ್ದಾಡಿ 'ಟಾ-ಟಾ, ನಾನು ಹೋಗುವೆ' ಎಂದು ಹೇಳುತ್ತಲೇ ಮನೆಗೆ ಓಡಿದಳು. ಅವಳ ಸುಖ-ಸಂತೋಷವಿಲ್ಲದ ಮರುಳುಗಾಡಿನಂತೆ ಇರುವ

ಅವಳ ಜೀವನದಲ್ಲಿ, ಸರೂ ಅವಳಿಗೆ ಮರುಳುಗಾಡಿನ ದಾಹ ದೂರ ಮಾಡಲು ದೈವಾಯತ್ತವಾಗಿ ಬಂದ ಶೀತಲ ಜಲಧಾರೆಯಂತೆ ತೋರಿಬಂದಳು. ಸರೂ ಒಬ್ಬಳು ಅವಳಿಗೆ ದೊರೆಯದೇ ಹೋಗಿದ್ದರೆ ಈ ವೇಳೆಗೆ ರೂಪಾ ಭೂಮಿಯ ಮೇಲೆಯೇ ಇರುತ್ತಿರಲಿಲ್ಲವೇನೊ! ರೂಪಾ ಬದುಕಿದ್ದು ಸರೂವಿನ ಬೋಧನೆಯಿಂದ; ಮತ್ತೆ ವಿಜಯನ ನಿಷ್ಕಲಂಕವಾದ, ನಿರ್ಮಲವಾದ, ಸೀಮಾತೀತವಾದ ಪ್ರೇಮದಿಂದ. ಮನದಲ್ಲಿ ಎಷ್ಟೇ ಕೊರಗುತ್ತಿರಲಿ, ಆ ವಿಜಯನ ಮುದ್ದು ಮುಖವನ್ನು ನೋಡಿದ ಕೂಡಲೇ, ಅವಳ ದುಃಖವೆಲ್ಲಾ ಮರೆತು ಹೋಗಿ, ಅವನ ಸಂತೋಷದಲ್ಲಿ ಭಾಗಿಯಾಗುತ್ತಿದ್ದಳು. ಹೀಗೆ ರೂಪಾಳ ಬರಡಾದ, ಬೆಂದು ಹೋದ, ನಿಸ್ಸಾರವಾದ ಜೀವನದಲ್ಲಿ, ಸರೂ-ವಿಜಯರು ಸವಿ ತುಂಬಿದರು, ಸಾರ ತೋರಿದರು, ಸತ್ವ [illegible]ಸಿದರು.

ಮಾಧವ ತನ್ನ ತಿಂಗಳ ಮೊದಲನೇ ಸಂಬಳವನ್ನು ಇನ್ನೂರಾ ಐವತ್ತು ರೂಪಾಯಿಗಳನ್ನು ತಂದು ಸರೂವಿನ ಕೈಗೇ ನೇರವಾಗಿ ಕೊಟ್ಟ. ತನಗಾಗಿ ಏನನ್ನೂ ಇಟ್ಟುಕೊಳ್ಳಲಿಲ್ಲ. ಅವನ ಈ ಉದಾರ ಬುದ್ಧಿಯನ್ನು ನೋಡಿ ಸರೂವಿನ ಹೃದಯ ತುಂಬಿ ಬಂತು.

"ಮಾವನವರಿಗೆ ಕಳಿಸುವುದಿಲ್ಲವೇ? ಪಾಪ, ಅವರು ಒಬ್ಬರೇ ಅಲ್ಲಿ ಎಷ್ಟು ಕಷ್ಟಪಡುತ್ತಾರೋ ಏನೋ!"

"ಇಷ್ಟು ಕಳಿಸಬೇಕೂ ಅಂತ ನೀನು ಸ್ಯಾಂಕ್ಷನ್ ಮಾಡಿದ ಮೇಲೇ ತಾನೇ ಕಳಿಸುವುದು ? ಎಷ್ಟು ಕಳಿಸು ಅಂತೀಯೋ ಅಷ್ಟು ಕಳಿಸುತ್ತೇನೆ. ಆಮೇಲೆ ಮನೆ ಖರ್ಚಿಗೆ ಸಾಲದು ಅಂತ ಗೊಣಗಾಡಿದರೆ ನಾನು ಸುಮ್ಮನೆ ಇರುವುದಿಲ್ಲ."

"ಪಾಪ, ಎಲ್ಲದಕ್ಕೂ ನನ್ನನ್ನೇ ಕೇಳಿ ಕೆಲಸ ಮಾಡುವವರ ಹಾಗೆ ಮಾತಾಡುತ್ತೀರಲ್ಲಾ! ನಿಮ್ಮ ತಂದೆಗೆ ನೀವು ದುಡಿದ ಹಣವನ್ನು ಕಳಿಸಲು ನಾನು ಬೇಡಾ ಎನ್ನುತ್ತೇನೆಯೆ ?"

"ನೀನು ಬೇಡಾ ಅನ್ನುವುದಿಲ್ಲ ಸರಿ. ಹಾಗಾದರೆ ಐವತ್ತು ಕಳಿಸಲೇ?"

"ಈ ಸಲ ಮನೆಗೇ ಸ್ವಲ್ಪ ಸಾಮಾನು ತರುವುದಿದೆ,ಅದರಿಂದ ಮೂವತ್ತು ಕಳಿಸಿ, ಸಾಕು. ಮುಂದಿನ ತಿಂಗಳು ಬೇಕಾದರೆ ಹೆಚ್ಚಾಗಿ ಕಳಿಸಿದರಾಯಿತು."

ಸರೂ ಪುನಃ ಮಾತೆತ್ತಿದಳು: "ನಿಮಗೆ ಸರಿಯಾದ ಬಟ್ಟೆಗಳೇ ಇಲ್ಲ ಹಾಕಿಕೊಳ್ಳಲು. ಹೊರಗೆ ಹೋಗುವ ಗಂಡಸರು ನೀವು, ಲಕ್ಷಣವಾಗಿ ಬಟ್ಟೆ ಹಾಕಿಕೊಳ್ಳದೆ ಹೋದರೆ ಹೇಗೆ? ಹೇಗಿದ್ದರೂ ಸಂಬಳ ಬಂದಿದೆ, ಮುಂಚೆ ನಿಮಗೆ ಎರಡು ಪ್ಯಾಂಟು, ಷರಟು, ಬುಷ್‌ಕೋಟು ಎಲ್ಲಾ ಹೊಲಿಸಲು ಕೊಟ್ಟು ಬನ್ನಿ. ನಾಳೆಯೇ ಹೋಗೋಣಾ. ಹಾಗೇ ವಿಜಯನಿಗೂ ಸ್ವಲ್ಪ ಬಟ್ಟೆ ಬೇಕಾಗಿತ್ತು."

"ಎಲ್ಲರಿಗೂ ಆಯಿತು, ನಿನಗೇ?"

"ನನಗೆ ಇರುವ ಸೀರೆಗಳೇ ಸಾಕು. ನನಗೇನು ಹೇಗಿದ್ದರೂ ಆಗುತ್ತೆ. ನಿಮ್ಮದು ಮುಂಚೆ ಆಗಲಿ. ಬೇಕಾದರೆ ಮುಂದಿನ ತಿಂಗಳು ತೆಗೆದುಕೊಂಡರೆ ಆಯಿತು."

ಮಾರನೆಯ ದಿನವೇ ಬಟ್ಟೆಗಳನ್ನು ಹೊಲಿಸಲು ಅಂಗಡಿಗೆ ಕೊಟ್ಟುಬಂದ ಮಾಧವ.

ಮಾಧವನ ಆಫೀಸು 'ದಿ ಎವರೆಸ್ಟ್ ಪ್ರಾಡಕ್ಟ್ಸ' ಇದ್ದುದು 'ಕೋಡಂಬಾಕುಂ'ನಲ್ಲಿ. ಪ್ರತಿ ದಿನಾ ಟ್ರಿಪ್ಲಿಕೇನ್‌ನಿಂದ ರೈಲಿನಲ್ಲಿಯೇ ಆಫೀಸಿಗೆ ತಲಪುತ್ತಿದ್ದ. ಅವನಿದ್ದುದೊಂದು ಕಂಪನಿ. ರೇಡಿಯೋ, ಬ್ಯಾಟರಿಗಳು, ಕಾರುಗಳಿಗೆ ಬೇಕಾಗುವ ಪಾಲಿಷ್, ಮತ್ತು ಕಾರುಗಳ ಭಾಗಗಳು ಇವುಗಳನ್ನು ತಯಾರು ಮಾಡುವ ಕಂಪನಿ ಅದು. ಮಾಧವ ಅಲ್ಲಿಯ ಅಸಿಸ್ಟೆಂಟ್ ಮೇನೇಜರ್.

ಆ ಕಂಪನಿಯ ಯಜಮಾನನಾದ ಅನಂತಸಿಂಗ್, ಶ್ರೀಕಂಠಯ್ಯನವರ ಸಹಪಾಠಿಯಾಗಿದ್ದ. ಅವರಿಬ್ಬರೂ ಕೂಡಿಯೇ ಇಂಟರ್‌ಮೀಡಿಯೇಟ್ ಪಾಸು ಮಾಡಿದ್ದರು. ಧನಿಕನಾದ ಅನಂತಸಿಂಗ್, ತಂದೆಯು ಹಾಕಿಕೊಟ್ಟ ಬಂಡವಾಳದಿಂದ 'ದಿ ಎವರೆಸ್ಟ್ ಪ್ರಾಡಕ್ಟ್ಸ' ಎಂಬ ಹೆಸರಿನಲ್ಲಿ ಕಾರ್ಖಾನೆಯೊಂದು ತೆಗೆದ. ಮಾಧವ ಕೆಲಸಕ್ಕಾಗಿ ಇಂಟರ್‌ವ್ಯೂಗೆ ಬಂದಿದ್ದಾಗ, ಮಾಧವನ ಹೇಳಿಕೆಯಿಂದ ಅವನು ತನ್ನ ಸ್ನೇಹಿತ ಶ್ರೀಕಂಠಯ್ಯನ ಮಗ ಎಂಬುದನು ತಿಳಿದ ಅನಂತಸಿಂಗ್, ಮಾಧವನನ್ನು ಒಂದೇ ಬಾರಿಗೆ ಅಸಿಸ್ಟೆಂಟ್ ಮ್ಯಾನೇಜರರಾಗಿ ನೇಮಕ ಮಾಡಿದ. ಇದಕ್ಕಾಗಿ ಶ್ರೀಕಂಠಯ್ಯ ತಮ್ಮ ಸ್ನೇಹಿತನಿಗೆ ಧನ್ಯವಾದ ಪತ್ರವನ್ನೊಂದನ್ನು ಬರೆದು ತಮ್ಮ ಕೃತಜ್ಞತೆಯನ್ನು ಸೂಚಿಸಿದ್ದರು

ಮಾಧವ ಕೆಲಸಕ್ಕೆ ಬಂದಾಗಿನಿಂದ ಟೈಪಿಸ್ಟ್ ರಜಾದ ಮೇಲಿದ್ದಳು. ಅದ ರಿಂದ ಟೈಪಿಸ್ಟ್ ಯಾರು ಎಂಬುದನ್ನೇ ಮಾಧವ ನೋಡಿರಲಿಲ್ಲ. ಮಾಧವ ತನ್ನ ಕರ್ತವ್ಯವನ್ನು ಚೆನ್ನಾಗಿಯೇ ಅರಿತು, ಅದರಂತೆ ಕೆಲಸ ಮಾಡುತ್ತಿದ್ದ. ಇತರ ನೌಕರರಿಗೂ ಅವನಲ್ಲಿ ಒಂದು ಬಗೆಯ ಗೌರವವಿದ್ದಿತು. ಕೇವಲ ಸ್ನೇಹಿಯ ಮಗ ಎಂಬುದನ್ನು ತಿಳಿದ ಮಾತ್ರಕ್ಕೆ, ಯಾವ ಅನುಮಾನವೂ ಇಲ್ಲದೆ, ತನ್ನ ಮಾತಿನಲ್ಲಿ ನಂಬುಗೆ ಇಟ್ಟು, ತನಗೆ ಕೆಲಸ ಕೊಟ್ಟ ಯಜಮಾನ ಅನಂತ ಸಿಂಗ್, ತನ್ನಲ್ಲಿ ತಳೆದಿರುವ ಉದಾತ್ತಭಾವನೆಯನ್ನು, ತಾನು ಕಡೆಯವರೆಗೂ ಕಾಪಾಡಿಕೊಳ್ಳಬೇಕು, ಎಂದು ಮಾಧವನ ಮನೋಭಾವ. ಅದರಿಂದ ಅವನು ಯಜಮಾನನನ್ನು ಅತ್ಯಂತ ಗೌರವವಾಗಿ ಕಾಣುತ್ತಿದ್ದನು. ತನ್ನನ್ನು ಅವನು ಎಷ್ಟು ನಂಬಿ ಇರುವನೋ ಅದೇ ರೀತಿ ತಾನೂ ಅವನಿಗೆ ಸೇವೆ ಸಲ್ಲಿಸಬೇಕು, ಅವನ ಕಂಪನಿಯನ್ನು ಊರ್ಜಿತಗೊಳಿಸಬೇಕು ಎಂದುಕೊಂಡೇ ಅವಿರತ ದುಡಿ ಯುತ್ತಿದ್ದ ಮಾಧವ.

ಯಾವುದೋ ಒಂದು ದಿನ. ಮಾಧವನ ಜೀವನದಲ್ಲಿ ಒಂದು ಘಟನೆ ನಡೆದುಹೋಯಿತು. ಅದು ಆಕಸ್ಮಿಕ. ಆದರೆ ದೈವಸಂಚಿತವಿರಬೇಕು. ಅದ ರಿಂದ ಮಾಧವನ ಈ ವರೆಗಿನ ಜೀವನದ ಗತಿ, ವಿಷಮಗತಿಗೆ ತಿರುಗುವಂತಾ ಯಿತು. ಸರೂ-ಮಾಧವರ ಸಂಸಾರಜೀವನ ಅಂದಿನಿಂದ ಇವಮ್ಮುಖವಾಗು ವಂತಾಯಿತು; ಒಂದು ಅನರ್ಥಪರಂಪರೆಗೇ ಇಂಬುಗೊಟ್ಟಿತು ಆ ಒಂದು ನಿಮಿಷ.

ನಡೆದದ್ದು ಹೀಗೆ:

ಮಾಧವ ಎಂದಿನಂತೆಯೇ ಹತ್ತು ಗಂಟೆಗೆ ಆಫೀಸಿಗೆ ಬಂದು ಕುಳಿತ. ಮನಸ್ಸು ಯಾಕೋ ಒಂದು ಬಗೆಯಾಗಿದ್ದಿತು. ನೌಕರರೆಲ್ಲ ಹಾಜರಿ ಒಪ್ಪಿಸಿ ಯಾಗಿತ್ತು. ಏನೂ ಮಾಡಲೂ ತೋಚದೆ, ಅಲ್ಲಿಯೇ ಬಿದ್ದಿದ್ದ ಹಳೆಯ 'ವಿಕ್ಲಿ' ತೆಗೆದು ನೋಡಲಾರಂಭಿಸಿದ. ಸ್ವಲ್ಪ ಹೊತ್ತಿನೊಳಗೇ "ನಾನು ಒಳಗೆ ಬರ ಬಹುದೇ?" ಎಂಬ ಧ್ವನಿ ಕೇಳಬಂತು. ಮಾಧವ ಕತ್ತೆತ್ತಿ ನೋಡಿದ. ಬಾಗಿ ಲಲ್ಲಿ ಮುಗುಳ್ನಗೆ ಬೀರುತ್ತಾ ಆಂಗ್ಲ ಪೋಷಾಕಿನಲ್ಲಿದ್ದ ತರುಣಿಯೊಬ್ಬಳು

ಕಾಣಿಸಿದಳು. ಮಾಧವ ಅವಳನ್ನೇ ದಿಟ್ಟಿಸಿ ನೋಡಿದ. ಮೊಣಕಾಲಿನ ವರೆಗೆ ಇರುವ ತಿಳಿ ನೀಲ ಬಣ್ಣದ ಫ್ರಾಕ್, ಕಾಲುಗಳಲ್ಲಿ ಎತ್ತರದ ಹಿಮ್ಮಡಿ ಇರುವ ಬೂಟುಗಳು, ಕೈಗಳಲ್ಲಿ ಒಂದು ಕೈಗೆ ಸಣ್ಣದಾದ ಸ್ವಿಸ್‌ವಾಚ್, ಇನ್ನೊಂದು ಕೈಗೆ ಒಂದು ಜೊತೆ ಬಂಗಾರದ ಬಳೆ, ಕೂದಲನ್ನು ಅರ್ಧಕ್ಕೇ ಕತ್ತರಿಸಿ ಅದನ್ನು ಬಲೆಯಾಕಾರದಲ್ಲಿ, ಹೆಗಲ ಮೇಲೆ ಹರಡಿಕೊಂಡಿದ್ದಂತೆ ಕಾಣುತ್ತಿತ್ತು. ಎಳ ಸಾದ ಚೂಪಾದ ಮೂಗು, ಪುಟ್ಟದಾದ ತುಟಿ, ಸಣ್ಣ ಗಲ್ಲ, ತುಂಬಿದ ಕೆನ್ನೆ, ಅಗಲವಾದ ನೀಳವಾದ ಕಣ್ಣುಗಳು, ತುಟಿಯಂಚಿನಲ್ಲಿಯೇ ಸುಳಿಯುತ್ತಿರುವ ಮುಗುಳ್ನಗೆಯಿಂದ ಕೂಡಿರುವ ಆ ತರುಣಿಯನ್ನು ನೋಡಿಯೇ ನೋಡಿದ ಮಾಧವ. ಆಕೆಯೂ ಅಲ್ಲಿಯೇ ನಿಂತು ಅದೇ ಮಂದಹಾಸವನ್ನು ಬೀರಿದಳು. ಕ್ಷಣಕಾಲ ಈರ್ವರ ಕಣ್ಣುಗಳೂ ಸೇರಿದುವು. ಅವಳ ಒಂದೇ ಒಂದು ನೋಟಕ್ಕೆ ಮಾಧವ ಜರ್ಜರಿತನಾದ. ಅವನ ಶರೀರವೆಲ್ಲಾ ಕಂಪಿಸತೊಡಗಿತು. ಮುಖದ ಮೇಲೆಲ್ಲಾ ಬೆವರು ಸುರಿಯಿತು. ಮಾಧವ ಅವಳ ನೋಟದಿಂದ ಚೇತರಿಸಿ ಕೊಳ್ಳಲಾರದವನಾದ. ಆ ಒಂದು ನೋಟದಲ್ಲಿ ಅದಾವ ಶಕ್ತಿ ಇದ್ದಿತೋ, ಮಾಧವ ತಿಳಿಯದವನಾದ. ಮಂತ್ರಮುಗ್ಧವಾದ ನಾಗರಹಾವಿನಂತೆ ಸುಮ್ಮನೇ ಅವಳ ಕಡೆಗೇ ನೋಡುತ್ತಾ ಕುಳಿತ ಮಾಧವ. ಅವಳು ಕೇಳಿದ ಪ್ರಶ್ನೆಯಾಗಲೀ ಅದಕ್ಕೆ ತಾನು ಉತ್ತರ ಕೊಡಬೇಕೆಂಬ ಎಚ್ಚರವಾಗಲೀ ಅವನಿಗಾಗಲಿಲ್ಲ. ಅವನು ಬೇರೆ ಯಾವುದೋ ಸ್ವಪ್ನಲೋಕದಲ್ಲಿರುವಂತೆ ಕಾಣುತ್ತಿದ್ದ.

ಇವನ ಮನೋಭಾವ ಅವಳಿಗೆ ತಿಳಿಯದೇ ಇರಲಿಲ್ಲ. ಆದರೂ ಇನ್ನೊಮ್ಮೆ ಗಟ್ಟಿಯಾಗಿ ಕೂಗಿ ಹೇಳಿದಳು ' ನಾನು ಒಳಗೆ ಬರಲೆ ?" ಎಂದು.

ಈ ಬಾರಿ ಮಾಧವ ಎಚ್ಚರಗೊಂಡ. ' ಒಳಗೆ ಬನ್ನಿ. ' ಎಂದಿಷ್ಟು ಹೇಳ ಬೇಕಾದರೆ ಮಾಧವನ ತುಟಿಯೊಣಗಿ ಬಂತು.

ಆಕೆ ಯಾವ ಮಾತನ್ನೂ ಆಡದೆ ತನ್ನ ಡ್ಯೂಟಿಯ ರಿಪೋರ್ಟನ್ನು ಅವನಿಗೆ ಕೊಟ್ಟಳು. ಮಾಧವ ಗಮನವಿಟ್ಟು ಅದನ್ನು ಓದಿ ನೋಡಿ "ಹಾಗಾದರೆ ನೀವೇನೆ ಇಲ್ಲಿಯ ಟೈಪಿಸ್ಟು ? ಈ ದಿನದಿಂದ ಡ್ಯೂಟಿಗೆ ಬರುವಿರಾ?" ಎಂದು ಕೇಳಿದ.

"ಹೌದು" ಕೊರಳನ್ನು ಕೊಂಕಿಸುತ್ತಾ ನುಡಿದಳು ಆಕೆ.

" ಸರಿ, ನೀವಿನ್ನು ಹೋಗಬಹುದು."

"ನಮಸ್ತೇ" ಎರಡೂ ಕೈಗಳನ್ನೂ ಎತ್ತಿ ಮುಗಿದು ನುಡಿದಳಾಕೆ. ಮಾಧವ

ತನ್ನ ಸಮಾಧಿಯಿಂದ ಪೂರ್ತಿಯಾಗಿ ಚೇತರಿಸಿಕೊಂಡು, ಪ್ರತಿ ಸಂಪಸೆಯನ್ನು ಮಾಡುವ ವೇಳೆಗೆ ಅಲ್ಲಿ ಅವಳು ಇರಲೇ ಇಲ್ಲ. ತನ್ನ ದುರ್ಬಲತೆಗಾಗಿ ಮಾಧವ ತಾನೇ ನಾಚಿಕೊಂಡ. ಅವನಿಗೆ ಅವಳು ನಿಂತ ನಿಲುವಿನ ಭಂಗಿ, ಅವಳ ಮಾಟ ಮಾದ ಮೈ, ಕಣ್ಣಿಗೆ ಕಟ್ಟಿದಂತಿತ್ತು. ಅವನ ತಲೆಯ ತುಂಬಾ ಅವಳ ವಿಚಾರವೇ ತುಂಬಿತ್ತು. ಯಾವ ಕೆಲಸ ಮಾಡಲೂ ಅವನ ಬುದ್ಧಿಯೇ ಓಡಲಿಲ್ಲ. ಅವನ ಮನಸ್ಸು ವಿಹ್ವಲವಾಗಿತ್ತು. ಯಾರದಾದರೂ ಹೆಜ್ಜೆಯ ಸಪ್ಪಳ ಕೇಳಿ ಬಂದರೆ ಅವಳೇ ಬಂದಳೇನೋ ಎಂಬ ಭ್ರಮೆಯಿಂದ,ಆಸೆಯಿಂದ ಕತ್ತೆತ್ತಿ ನೋಡುವನು. ಬಂದವರು ಯಾವನಾದರೂ ಒಬ್ಬ ನೌಕರನಾಗಿದ್ದರೆ ನಿರಾಸೆಗೊಳ್ಳುವನು. ಎದ್ದು ಎಂದಿನಂತೆ ಕಾರ್ಖಾನೆಯಲ್ಲಿ ಸುತ್ತಾಡಿ, ಕೆಲಸ ಹೇಗೆ ನಡೆದಿದೆ ಎಂಬು ದನ್ನು ನೋಡುವುದಕ್ಕಾಗಿ ತೆರಳಿದ. ಎಲ್ಲರೂ ಅವರವರ ಕೆಲಸದಲ್ಲಿ ಮಗ್ನ ರಾಗಿದ್ದರು. ಆರ್ಡರುಗಳು ಬಹಳವಾಗಿದ್ದುವು. ಅದಕ್ಕೆ ತಕ್ಕಂತೆ ಸಾಮಾನುಗಳು ತಯಾರಾಗಬೇಕಿತ್ತು. ಕೆಲಸವೆಲ್ಲಾ ಜೋರಿನಿಂದಲೇ ಸಾಗಿತ್ತು.

ಮಾಧವನ ಮನಸ್ಸು ಅವನ ಹಿಡಿತದಲ್ಲಿರಲಿಲ್ಲ. ಆಕೆಯನ್ನು ನೋಡ ಬೇಕು, ಅವಳೊಡನೆ ಮಾತನಾಡಬೇಕು ಎಂಬುದೇ ಅವನ ಹಂಬಲವಾಗಿತ್ತು. ಕೆಲಸ ಮುಗಿದೊಡನೇ ಮನೆಗೆ ತೆರಳಿದರೂ ಅವನ ಮನಸ್ಸು ಅವಳ ಹಿಂದೆಯೇ ಓಡಾಡುತ್ತಿತ್ತು.

ವಿಜಯ 'ಅಣ್ಣ ಬಂದ' ಎಂದು ಕೂಗಿಕೊಂಡು ತಂದೆಗೆ ಆದರದ ಸ್ವಾಗತ ಬಯಸಿದಾಗ ಎಂದಿನಂತೆ ಮಾಧವ ಅವನನ್ನು ಎತ್ತಿಕೊಂಡು ಮುದ್ದಾ ಡಲೇ ಇಲ್ಲ. ನೇರವಾಗಿ ಹೋದವನೇ ಮಂಚದ ಮೇಲೆ ಬಿದ್ದುಕೊಂಡ. ಒಳಗೆ ಇದ್ದ ಸರೂ ವಿಜಯನಿಂದ ಮಾಧವ ಬಂದಿರುವ ಸಮಾಚಾರ ತಿಳಿದು, ಕಾಫಿ ಮತ್ತು ತಿಂಡಿಯನ್ನು ತೆಗೆದುಕೊಂಡು, ಹರ್ಷದಿಂದ ರೂಮಿಗೆ ಬಂದಳು. ಅವಳ ಸಂತೋಷಕ್ಕೆ ಪ್ರತಿಯಾಗಿ ಯಾವ ಪ್ರತಿಸ್ಪಂದನವೂ ಮಾಧವನಿಂದ ಬರಲಿಲ್ಲ. ಮಾಧವ ಕಣ್ಣು ಮುಚ್ಚಿ ಮಲಗಿಯೇ ಇದ್ದ. ಸರೂವನ್ನು ಕಣ್ಣು ತೆರೆದು ನೋಡಿ ಪುನಃ ಕಣ್ಣುಮುಚ್ಚಿ ಮಲಗಿದ. ಯಾವದೊಂದು ಮಾತೂ ಅವನಿಂದ ಹೊರಡ ಲಿಲ್ಲ. ಪ್ರತಿದಿನವೂ ಉಲ್ಲಾಸವಾಗಿ ಬರುತ್ತಿದ್ದ ಮಾಧವ ಈ ದಿನ ಈ ರೀತಿ ಇರಲು ಕಾರಣವೇನೆಂಬುದೇ ತಿಳಿಯದಾಯಿತು ಸರೂಗೆ.

"ಯಾಕೆ ಮೈ ಸರಿ ಇಲ್ಲವೇ? ಮಲಗಿದ್ದೀರಿ!" ಎಂದು ಸರೂ ಮಾಧವನ ಬಳಿಯಲ್ಲಿ ಕುಳಿತು ಅವನ ಹಣೆ ಮುಟ್ಟಿ ನೋಡಿದಳು. ತಲೆ ಕಾದು ಕೆಂಡ

ವಾಗಿತ್ತು. ತಲೆಯ ನರಗಳೆಲ್ಲಾ ಜೋರಾಗಿ ಮಿಡಿಯುತ್ತಿದ್ದುವು. ಸರೂ ಕೂಡಲೇ ಎದ್ದು ಹೋಗಿ ಅಮೃತಾಂಜನ ತಂದು ಹಣೆಗೆ ಹಚ್ಚಿದಳು. ಜ್ವರ ಬಂದಿದೆಯೇನೋ ಎಂದು ಮೈ ಕೈ ಮುಟ್ಟಿ ನೋಡಿದಳು. ಜ್ವರವೇನೂ ಬಂದಿರಲಿಲ್ಲ.

"ಬರಿಯ ಕಾಫಿಯನ್ನಾದರೂ ಕುಡಿಯಿರಿ, ತಲೆನೋವು ಕಡಮೆಯಾಗುತ್ತೆ. ಯಾಕೆ ಮಾತನ್ನೇ ಆಡುವುದಿಲ್ಲ? ಏನಾಗಿದೆ ನಿಮಗೆ ಹೇಳಬಾರದೇ?" ಸರೂ ಆತಂಕದಿಂದ ಹೇಳಿದಳು. ಗಾಬರಿ ಅವಳ ಮುಖದಲ್ಲಿ ಎದ್ದು ಕಾಣುತ್ತಿತ್ತು.

ಮಾಧವ ಸರೂವನ್ನೇ ನೇರವಾಗಿ ನೋಡುತ್ತಾ ಹೇಳಿದ: ಎಲ್ಲರಂತೆ ನೀನು ಯಾಕೆ ಯಾವ ಬೆಡಗು, ಬಿನ್ನಾಣ, ಒಯ್ಯಾರದಿಂದ ನನ್ನ ಮನಸು ಆಕರ್ಷಿಸುವುದೇ ಇಲ್ಲ? ನೀನು ಯಾವ ಹಾವಭಾವಗಳನ್ನೂ ಯಾಕೆ ಪ್ರದರ್ಶಿಸುವುದಿಲ್ಲ? ನಿನ್ನ ನೋಟದಲ್ಲಿ ಯಾವ ಬಗೆಯ ಮಾತು-ಕತೆಯೂ ಇರುವುದಿಲ್ಲ. ಯಾಕೆ? ಸಂಸಾರದಲ್ಲಿ ಯಾವುದೇ ಆಸಕ್ತಿ ಇಲ್ಲದ ಒಬ್ಬ ವಿರಾಗಿಣಿಯಂತೆ ಕಾಣುವೆಯಲ್ಲಾ ಸರೂ, ಅದೇಕೆ?"

ಸರೂ ಮಾಧವನ ಮಾತನ್ನು ಕೇಳಿ ಚಕಿತಳಾದಳು. ಈ ನಾಲ್ಕು ವರ್ಷಗಳ ತಮ್ಮ ದಾಂಪತ್ಯ-ಜೀವನದಲ್ಲಿ ಹಿಂದೆಂದೂ ಹೀಗೆ ಮಾತನಾಡದ ಮಾಧವ ಇಂದು ಹೀಗೇಕೆ ಆಡುತ್ತಾನೆ? ಏನು ಕಾರಣ? ಸರೂ ಮಾಧವನನ್ನೇ ದಿಟ್ಟಿಸಿ ನೋಡಿದಳು. ಅವನ ಕಣ್ಣುಗಳು, ಅವನ ಆತುರತೆ, ಉದ್ವಿಗ್ನತೆಯನ್ನು ಸೂಸುತ್ತಿದ್ದುವು. ಮಾಧವ ಯಾತಕ್ಕಾಗಿ ಹೀಗೆ ಉನ್ಮಾದಗ್ರಸ್ತನಾಗಿದ್ದಾನೆ ಎಂಬ ಪ್ರಶ್ನೆಗೆ ಎಷ್ಟು ಯೋಚಿಸಿದರೂ ಅವಳಿಗೆ ಉತ್ತರವೇ ದೊರೆಯಲ್ಲಿಲ್ಲ.

"ಕೈ ಹಿಡಿದ ಹೆಂಡತಿಯನ್ನು ಪ್ರೀತಿಸುವುದಕ್ಕೆ ಯಾವ ಹಾವ-ಭಾವ, ಅಂಗವಿನ್ಯಾಸ, ಬೆಡಗು-ಬಿನ್ನಾಣ ಯಾವುದೂ ಬೇಕಿಲ್ಲ. ಪ್ರೀತಿ ಹುಟ್ಟುವುದು ಹೃದಯದ ಅಂತರಾಳದಿಂದ. ಬರೀ ಈ ಮೇಲು ಮೇಲಿನ ಮೋಹಕತೆಯಿಂದಲ್ಲ. ಹೆಂಡತಿಯಾದವಳು, ಗಂಡನನ್ನು ಆಕರ್ಷಿಸಲು ಯಾವ ನೃತ್ಯ; ನಾಟ್ಯಪ್ರದರ್ಶನವನ್ನೂ ಮಾಡಬೇಕಿಲ್ಲ. ಹಾಗೆಲ್ಲಾ ಇತರ ಗಂಡಸರನ್ನು ಆಕರ್ಷಿಸಲು ಮಾಡುವವರು ಬೇರೆಯೇ ಇದ್ದಾರೆ. ನಾವೀಗ ನಿಮ್ಮೆದುರು ನಾಟ್ಯ ಮಾಡಲು, ನಾವೇನು ಲಲಿತಳೋ ಪದ್ಮಿನಿಯೋ? ನಿಮಗೆ ನಿಜಕ್ಕೂ ಅದರಲ್ಲಿ ಸಂತೋಷ ಸಿಗುವುದಾದರೆ ಹೇಳಿ, ನಾಳೆಯಿಂದ ಕಲಾಶಾಲೆಗೆ ಹೋಗಿ ನೃತ್ಯವನ್ನಾದರೂ ಕಲಿತು ಬರುವೆ. ನಿಮ್ಮ ಮನಸ್ಸು ಸಂತೋಷವಾಗಿರಿಸಲು ನಾನು ಏನು

ಬೇಕಾದರೂ ಮಾಡುವೆ."

"ಈ ನಿನ್ನ ಉಪದೇಶ ನನಗೆ ಬೇಕಿಲ್ಲ ಸರೂ. ನಿನ್ನನ್ನು ಮದುವೆಯಾಗಿ ಇರುವುದು, ನಿನ್ನಿಂದ ವೇದಾಂತವನ್ನು ಕಲಿಯುವುದಕ್ಕಲ್ಲ, ಸುಖಪಡಬೇಕೆಂದು. ಒಂದೇ ಒಂದು ಬಾರಿಯ ನೋಟದಿಂದ, ಆ ವ್ಯಕ್ತಿಯನ್ನೇ ಹಸ್ತಗತ ಮಾಡಿಕೊಳ್ಳುವುದು, ನಿಜವಾಗಿಯೂ ಅದೊಂದು ಕಲೆಯೇ ಸರಿ. ಎಲ್ಲರಿಗೂ ಬಾ ಎಂದರೆ ಎಲ್ಲಿಂದ ಬರಬೇಕು? ಅದೊಂದು ದೈವದತ್ತವಾದ ಕಲೆಯೇ ಸರಿ. ನಿನಗೂ ಅದಕ್ಕೂ ಬಹಳ ಅಂತರ. ಕೈಗೆ ಸಿಗದ ವಸ್ತುವಿಗಾಗಿ ಬಾಯಿಬಿಡುವ ನಾನೇ ಮೂರ್ಖ." ಮಾಧವ ಮುಖ ಮುದುಡಿಸಿ ಮಲಗಿದ. ತಿಂಡಿ ಅಲ್ಲಿಯೇ ಆರಿ ತಂಗಳಾಗಿತ್ತು.

"ಅಪ್ಪಾ, ಟಾ ಟಾ ಹೋಗೋಣಾ, ಬಾ, ಬೇಜಾರು." ವಿಜಯ ತಂದೆಯನ್ನು ಕಾಡಿಸತೊಡಗಿದ.

"ಅಣ್ಣಾ, ಅವರಿಗೆ ತಲೆನೋವಂತೆ. ಅವರು ಮಲಗಲಿ ಮಗು. ಗಲಾಟೆ ಮಾಡದೇ ಸುಮ್ಮನಿರು. ನಾಳೆ ಹೋಗೋಣವಂತೆ." ಸರೂ ವಿಜಯನನ್ನು ರಮಿಸಿ ಹೊರಗೆ ಕರೆದೊಯ್ದಳು. ಮಾಧವನ ಚರ್ಯೆಯೇ ಅವಳಿಗೆ ತಿಳಿಯಲಿಲ್ಲ. ಯಾವುದೋ ಅನರ್ಥವಾಗುವುದೆಂದು ಯೋಚಿಸಿ ಸರೂ ದಿಕ್ಕುಗೆಟ್ಟಳು. ಪ್ರತಿದಿನ ಹೊರಗೆ ತಿರುಗಾಡಲು ಅಭ್ಯಾಸವಾಗಿದ್ದ ವಿಜಯ ಈ ದಿನ ಹೋಗದಿದ್ದುದರಿಂದ ಒಂದೇ ಸಮನೆ, ರಗಳೆ ಶುರು ಮಾಡಿದ. ಸರೂ ವೆರಂಡಾದ ಬಾಗಿಲಲ್ಲೇ ನಿಂತಿದ್ದಳು. ಮಾಧವ ಅಲ್ಲಿಯೇ ನಿದ್ರೆಹೋಗಿದ್ದ.

ಪಕ್ಕದ ಮನೆಯ ರೂಪಾ ಹೊರಗೆ ಬಂದಳು. ಸರೂ ನಿಂತಿರುವುದನು ನೋಡಿ ಕೇಳಿದಳು: "ಹೊರಗೆ ಹೋಗುವುಲ್ಲದಿವೇಕೆ ಬಹನ್? ವಿಜಯ ಯಾಕೆ ತಂಟೆ ಮಾಡುತ್ತಿದ್ದಾನೆ?" ಎಂದು ಕೇಳುವ ಹೊತ್ತಿಗೆ ಅವಳನ್ನು ನೋಡಿ ಅವಳ ಬಳಿಗೇ ಓಡಿದ ವಿಜಯ.

"ಆಂಟೀ......ಅಣ್ಣನಿಗೆ ತಲೆ ನೋವು ಮಾಕೊಂಡಿದ್ದಾನೆ. ನಾವೇ ಹೋಗೋಣಾ ಬಾ ಆಂಟೀ" ಎಂದು ವಿಜಯ ದೂರು ಕೊಟ್ಟ. ಸರೂವಿನ ಮುಖ ಕಂದಿಹೋಗಿತ್ತು. ಯಾವಾಗಲೂ ಹಸನ್ಮುಖಿಯಾಗಿ ನಗುನಗುತ್ತಾ ಮಾತಾಡುತ್ತಿರುವ ಸರೂಬಹನ್ ಈ ದಿನ ಹೀಗೇಕೆ ಇದ್ದಾರೆ ಎಂಬುದು ರೂಪಾಳಿಗೆ ತಿಳಿಯಲಿಲ್ಲ. ರೂಪಾ ಆ ಬಗ್ಗೆ ಕೇಳಿದಾಗ, ಸರೂ ಆ ಮಾತನ್ನು

ತನ್ನ ಮಂದಹಾಸದಲ್ಲಿಯೆ ಮುಳುಗಿಸಿಬಿಟ್ಟಳು. ರೂಪಾ ನಿರುಪಾಯಳಾದಳು.

ಮಾಧವ ಆಫೀಸಿಗೆ ಬಂದ. ಅವನಿಗೆ ಇದ್ದುದು ಒಂದೇ ಯೋಚನೆ, ಅವಳನ್ನು ಕಂಡು ಮಾತನಾಡಬೇಕು. ಆದರೆ ಅದು ಹೇಗೆ ಸಾಧ್ಯ ? ತಾನಾಗಿ ಅವಳಿದ್ದಲ್ಲಿಗೆ ಹೋಗುವುದು ಸಾಧ್ಯವಾಗದ ಮಾತು. ಅವಳನ್ನೇ ಇಲ್ಲಿಗೆ ಬರ ಮಾಡಬೇಕು. ಹಾಗೆ ಅವಳು ಇಲ್ಲಿಗೆ ಬರಬೇಕಾದರೆ ಯಾವುದಾದರೂ ಕಾರಣ ಬೇಕಷ್ಟೇ, ಎಂಬ ಯೋಚನೆಯಲ್ಲಿಯೇ ಮುಳುಗಿ ಹೋದ ಮಾಧವ. ಒಂದು ವಾರದ ತನಕ ಅವನಿಗೆ, ಅವಳನ್ನು ಕಾಣಲು ಅವಕಾಶವೇ ದೊರೆಯಲಿಲ್ಲ. ಮನೆಗೆ ಬಂದರೆ ಯಥಾಪ್ರಕಾರ ಅದೇ ಬಡಬಡಿಕೆ, ಅದೇ ಉದ್ವಿಗ್ನತೆಯೇ ಕಾಣುತ್ತಿತ್ತು ಮಾಧವನ ಮುಖದಲ್ಲಿ. ಸರೂವನ್ನು ಮಾತನಾಡಿಸುವುದೇ ಕಷ್ಟವಾಗಿತ್ತು ಅವನಿಗೆ. ಸರೂ ಅವನನ್ನು ಎಷ್ಟೋ ಬಗೆಯಲ್ಲಿ ರಮಿಸಿದಳು, ಅನೇಕ ಬಗೆಯಲ್ಲಿ ಆತನ ಬಗ್ಗೆ ತನಗಿರುವ ಪ್ರೀತಿಯನ್ನು ತೋರ್ಪಡಿಸಿದಳು. ಆದರೆ ಅದಾವುದೂ ಮಾಧವನಿಗೆ ರುಚಿಸಲಿಲ್ಲ. ಹಿಂದಿನಂತೆ ಅವನು ಅವಳ ಸುಖಕ್ಕಾಗಿ ಕಾತರಿಸಲೂ ಇಲ್ಲ. ಯಾವಾಗಲೂ ಯೋಚನೆಯಲ್ಲಿರುವಂತೆ ಸದಾ ಅವನ ಮುಖ ಗಂಭೀರವಾಗಿರುತ್ತಿತ್ತು. ಯಾವುದೋ ಕೈಗೆ ಸಿಗದ ವಸ್ತುವನ್ನು ಹೊಂದುವುದಕ್ಕಾಗಿ ಅವನು ಪ್ರಯತ್ನಪಡುವಂತೆ ಕಾಣುತ್ತಿತ್ತು. ದಿನೇ ದಿನೇ ಅವನ ಊಟವೂ ಕಡಿಮೆಯಾಗುತ್ತಾ ಬಂದಿತು. ಅವನ ನಗೆ ಯನ್ನು ಕೇಳಿ ಅದೆಷ್ಟು ದಿನಗಳಾದುವೋ ಎನ್ನುವಂತೆ ಇತ್ತು. ಸರೂ ಪತಿ ಯಲ್ಲಾಗುತ್ತಿರುವ ಪರಿವರ್ತನೆಯನ್ನು ನೋಡಿ ನಡುಗಿದಳು. ಅವನ ಮಾನ ಸಿಕ ಯೋಚನೆಗೆ ಕಾರಣವೇನೆಂಬುದು ತಿಳಿಯಲಾರದೇ ಸರೂ ಬಳಲಿದಳು. ಮಾಧವ, ಕ್ಷಣಕ್ಷಣಕ್ಕೆ, ದಿನದಿನಕ್ಕೆ ಕೃಶವಾಗುತ್ತಿರುವಂತೆ ಕಾಣಿಸಿತು ಸರೂ ವಿಗೆ. ಇನ್ನು ಸ್ವಲ್ಪ ದಿನ ಹೀಗೆಯೇ ಕಳೆದರೆ ಅವನು ಕಾಹಿಲೆ ಬೀಳುವ ನೆಂಬುದಕ್ಕೆ ಅನುಮಾನವೇ ಉಳಿದಿರಲಿಲ್ಲ. ಏನೇ ಆಗಲೀ ಅವನ ದುಃಖ ನಿವಾರಣೆಯನ್ನು ಯಾವುದೇ ಬೆಲೆ ಕೊಟ್ಟಾಗಲೀ, ಮಾಡಿಯೇ ತೀರುವೆನೆಂದು ಸರೂ ಸಂಕಲ್ಪಿಸಿದಳು.

ವಿಜಯ ತಂದೆಯ ನಡುವಳಿಕೆಯನ್ನು ನೋಡಿ ಗಾಬರಿಯಾಗಿದ್ದ. ಯಾವಾಗಲೂ ತನ್ನನು ಎತ್ತಿಕೊಂಡು ಮುದ್ದಾಡಿ, ಆಟವಾಡಿಸುತ್ತಾ ಇದ್ದ ತಂದೆ, ಈಗ ತಾನಾಗಿ ಬಳಿಗೆ ಹೋದರೂ ತನ್ನನ್ನು ಎತ್ತಿಕೊಳ್ಳುವುದಿಲ್ಲ, ಮಾತನಾಡಿಸುವುದಿಲ್ಲ. ಇದು ತಿಳಿದು ಮಾಧವನ ಬಳಿಗೆ ಆ ಮಗು ಸುಳಿಯುತ್ತಲೇ ಇರಲಿಲ್ಲ. ಯಾವಾಗ ನೋಡಿದರೂ ಅಳುತ್ತಾ ಕೂತಿರುವ ಅಮ್ಮ, ಮನೆಗೆ ಬಂದೊಡನೆಯೆ ಮುಸುಕು ಹಾಕಿ ಮಲಗುವ ಅಣ್ಣ, ಇವರ ನಡುವೆ ವಿಜಯ ತನ್ನ ವೇಳೆಯನ್ನು ಕಳೆಯಬೇಕಾಯಿತು. ಅವನೂ ದಿನೇ ದಿನೇ ಮಂಕಾಗುತ್ತಾ ಬಂದಿದ್ದ.

ಸಾಯಂಕಾಲ ಮನೆಗೆ ಬಂದವನೇ ಮಾಧವ ಹಾಸಿಗೆ ಮೇಲೆ ಬಿದ್ದುಕೊಂಡ. ಅವನು ಈ ರೀತಿ ಆಚರಿಸಲು ಶುರುಮಾಡಿ ಎಂಟು ದಿನಗಳಾದುವು. ಸರೂ ಒಂದು ನಿರ್ಧಾರವನ್ನು ಮಾಡಿಕೊಂಡೇ ಬಂದಿದ್ದಳು. "ನಿಮ್ಮ ಮನಸ್ಸಿನಲ್ಲಿ ಅದೇನೆ ಇರಲಿ, ನನಗೆ ಹೇಳಿ. ನಾನು ನಿಮ್ಮ ಪತ್ನಿಯಲ್ಲವೆ? ನನ್ನ ಕೈಲೂ ಹೇಳಬಾರದಂತಹ ಗುಟ್ಟಿನ ವಿಷಯವೇನು? ನಿಮಗೆ ಯಾತರ ಕೊರತೆ ಇದೆ? ಅದೇನೇ ಇರಲಿ, ನಿಮ್ಮ ಮನಸ್ಸು ಸಂತೋಷವಾಗಿರಲು ನಾನು ಏನು ಬೇಕಾದರೂ ಮಾಡುವೆ. ನೀವು ಮುಂಚಿನಂತೆ ಆದರೆ ಸಾಕು. ನಿಮ್ಮ ಸುಖವೇ ನನ್ನದು. ನಿಮ್ಮ ಈ ಕಳೆಗುಂದಿದ, ಚಿಂತೆ ತುಂಬಿದ ಮುಖವನ್ನು ನಾನು ನೋಡಲಾರೆ. ನೀವು ಏತಕ್ಕಾಗಿ ಈ ರೀತಿ ಕೊರಗುತ್ತಿದ್ದೀರಿ ಹೇಳಿ? ಅಂತಹದೇನು ನಿಮ್ಮ ಮೈಮೇಲೆ ಬಿದ್ದಿದೆ? ಹೇಳಿ, ಹೇಳಿ." ಎಂದು ಸರೂ ಮಾಧವನ ತಲೆ ನೇವರಿಸುತ್ತಾ ಕೇಳಿದಳು. ಕಣ್ಣುಗಳಲ್ಲಿ ಕಂಬನಿ ತುಂಬಿ ಬಂದಿತ್ತು. "ನನ್ನ ಮನೋವೇದನೆಯ ಕಾರಣ ನೀನು ತಿಳಿಯಲಾರೆ ಸರೂ! ತಿಳಿದರೂ ಅದನ್ನು ಪರಿಹರಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ನೀನು ನನ್ನ ಕೈ ಹಿಡಿದ ಹೆಂಡತಿ; ನಿನ್ನನ್ನು ಕಾಪಾಡುವುದು ನನ್ನ ಕರ್ತವ್ಯ. ಕೈಗೆ ಸಿಗದೇ ಇರುವುದನ್ನು ಬಯಸಿ ದುಃಖಿಸಿದರೆ ಬಂದ ಭಾಗ್ಯವೇನು?" ಎಂದು ಮಾಧವ ತನ್ನ ದುರ್ಬಲತೆಗಾಗಿ ಪೇಚಾಡಿದ. ಅವನು ಎಲ್ಲಿ ನೋಡಿದರೂ ಅಲ್ಲಿ ಆ ದಿನ ನೋಡಿದ ಆಕೆಯ ರೂಪವೇ ಕಣ್ಣಿಗೆ ಕಟ್ಟಿದಂತೆ ಇತ್ತು. ಅವನು ಅವಳನ್ನು ಮರೆಯಬೇಕೆಂದು ಪ್ರಯತ್ನಿಸಿದಷ್ಟೂ, ಅವನ ಆಸೆ, ಒಂದಕ್ಕೆ ಎರಡರಷ್ಟಾಗಿ ಮುಗಿಲೆತ್ತರಕ್ಕೆ ಬೆಳೆದು ನಿಲ್ಲುತ್ತಿತ್ತು. ಯಾವುದೋ ಒಂದು ಅವ್ಯಕ್ತವಾದ, ಪ್ರಬಲವಾದ ಶಕ್ತಿಯೊಂದು ಅವನನ್ನು ಅವಳ ಕಡೆಗೆ ಎಳೆಯುತ್ತಿತ್ತು. ಅದು ಯಾವ ವಿಷಗಳಿಗೆಯೋ, ರಸನಿಮಿಷವೋ, ಮಾಧವ ಅವಳನ್ನು ನೋಡಿದ, ತೀರಿತು; ಅವನು ಯಾವುದೋ

ಮಾಂತ್ರಿಕ ಶಕ್ತಿಯಿಂದ ಅವಳ ಕಡೆಗೆ ಎಳೆಯಲ್ಪಟ್ಟಿದ್ದ. ಅವನ ದೇಹ, ಮನ ಎರಡೂ ಅವನ ಅಧೀನದಲ್ಲಿಯೇ ಇರಲಿಲ್ಲ. ತನ್ನನ್ನು ಅವಳ ಕಡೆಗೆ ಎಳೆಯು ತ್ತಿರುವ ಪ್ರವಾಹದ ಎದುರು ಈಸಲಾರದೇ ಹೋದ ಮಾಧವ.

ಸರೂ ಗಟ್ಟಿ ಮನಸ್ಸಿನಿಂದ ಹೇಳಿದಳು: "ನಿಮ್ಮ ಕಾರಣವನ್ನು ನೀವು ಹೇಳಿಯೇ ತೀರಬೇಕು; ಅದರಿಂದ ನನ್ನ ಪ್ರಾಣ ಹೋದರೂ ಚಿಂತೆ ಇಲ್ಲ. ನಿಮಗೆ ಸುಖವಾಗುವುದಾದರೆ ನಾನು ನನ್ನ ಪ್ರಾಣವನ್ನೇ ನಿಮಗಾಗಿ ಕೊಡಲು ಸಿದ್ಧಳಿದ್ದೇನೆ. ನೀವು ಖಂಡಿತವಾಗಿಯೂ ಹೇಳಬೇಕು." ಎಂದು ಸರೂ ಒತ್ತಾಯಪಡಿಸಿದಳು.

ವಿಧಿಯಿಲ್ಲದೇ ಮಾಧವ ತನ್ನ ಮನೋವೇದನೆಯನ್ನು ಹೇಳಿದ. ಎಲ್ಲ ವನ್ನೂ ಹೇಳಿದ ಬಳಿಕ "ನನಗಿನ್ನಾವ ಆಸೆಯೂ ಇಲ್ಲ ಸರೂ, ಒಮ್ಮೆ ಅವಳನ್ನು ಕಣ್ತುಂಬ ನೋಡಿ ಮನದಣಿಯುವಂತೆ ಮಾತನಾಡಬೇಕು ಎಂಬ ಆಸೆ ಇದೆ ..." ಎಂದು ಅರ್ಥಪೂರ್ಣವಾಗಿ ಅವಳನ್ನು ನೋಡಿದ. ಆ ದೃಷ್ಟಿಯಲ್ಲಿ ಅವನ ಆಶಯವೆಲ್ಲವೂ ವ್ಯಕ್ತವಾಗಿತ್ತು.

ಸರೂವಿಗೆ ಅರ್ಥವಾಯಿತು. ತಾನು ಕೊಡಬಹುದಾದ ಒಪ್ಪಿಗೆ ತನ್ನ ಜೀವನ ದಲ್ಲಿ ತರಬಹುದಾದ ಅನರ್ಥಪರಂಪರೆಯ ಕಲ್ಪನೆಯೂ ಅವಳಿಗೆ ಹೊಳೆಯಿತು. ಆದರೂ ಗಂಡನಿಗೆ ಸುಖ ತರುವ ಯಾವುದೇ ಮಾತನ್ನು ನಡೆಯಿಸಲು ಅವಳ ಮನಸ್ಸು ಸಿದ್ಧವಿತ್ತು. ಈ ಭಾವನೆಯನ್ನೇ ಒಳಗಿಟ್ಟುಕೊಂಡು ಮಾಧವನಿಗೆ ಹೇಳಿದಳು: "ನೀವು ಯೋಚನೆ ಮಾಡಬೇಡಿ. ನಾಳಿನ ಭಾನುವಾರ ನಿಮ್ಮಿಬ್ಬರ ಭೇಟಿ ಮಾಡಿಸುವುದು ನನ್ನ ಭಾರ. ಏಳಿ, ಈಗ ಕಾಫಿ ಕುಡೀರಿ, ಎಲ್ಲಾ ಕಡಿಮೆ ಯಾಗುತ್ತೆ." ಎಂದು ಕಾಫಿಯನ್ನು ತಾನೇ ಕೈಲಿ ಹಿಡಿದು ಅವನಿಗೆ ಕುಡಿಸಿದಳು. ಸರೂವಿನ ಮಾತು ಕೇಳಿದ ಕೂಡಲೆ ಮಾಧವನ ಮುಖ ಹೂವಿನಂತೆ ಅರಳಿತು. ಕಣ್ಣುಗಳು ಸಂತೋಷದಿಂದ ಹೊಳೆಯಹತ್ತಿದುವು. ಆ ಸಂತೋಷದ ಭರದಲ್ಲಿ "ಸರೂ.... ನನ್ನ ಸರೂ...." ಎಂದವಳನ್ನಪ್ಪಿದ.

ಲೂಸಿ ಲೀಯ ಮನೆ ಇದ್ದುದು ಕೋಡಂಬಾಕುಂನಲ್ಲಿಯೆ. ಅವಳು ವಾಸ

ವಾಗಿದ್ದುದು ಅವಳ ಚಿಕ್ಕಮ್ಮನ ಮನೆಯಲ್ಲಿ. ಸಣ್ಣ ವಯಸ್ಸಿನಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ ಲೂಸಿ, ಚಿಕ್ಕಮ್ಮನ ಮನೆ ಸೇರಬೇಕಾಯ್ತು. ಆಕೆಯ ಮನೆಯಲ್ಲಿಯೇ ಲೂಸಿಯ ವಿದ್ಯಾಭ್ಯಾಸ ಕಾಲೇಜಿನವರೆಗೂ ನಡೆಯಿತು. ಅದಾದ ನಂತರ ಒಂದು ವರ್ಷ ಟೈಪ-ರೈಟಿಂಗ್ ಕಲಿತು, ಮನೆಯಲ್ಲಿಯೇ ಇದ್ದಳು. 'ದಿ ಎವರೆಸ್ಟ ಪ್ರಾಡಕ್ಟ್ಸ' ನವರು ಪೇಪರಿನಲ್ಲಿ ಟೈಪಿಸ್ಟಗಾಗಿ, 'ಅಡ್ವರ್ಟೈಜ್' ಮಾಡಿದಾಗ, ಲೂಸಿಯೂ 'ಅಪ್ಲಿಕೇಷನ್' ಹಾಕಿದ್ದಳು. ಅದೃಷ್ಟಕ್ಕೆ ಸರಿಯಾಗಿ ಅವಳಿಗೆ ಅಲ್ಲಿಯೇ ಕೆಲಸ ದೊರೆಯಿತು. ಲೂಸಿ ತನ್ನ ಕೈಲಾದ ಮಟ್ಟಿಗೆ ತನ್ನ ಚಿಕ್ಕಮ್ಮನಿಗೆ ಉಪಕಾರ ಮಾಡುತ್ತಿದ್ದಳು.

ಶನಿವಾರ, ಆಫೀಸಿನಿಂದ ಮನೆಗೆ ಬಂದ ಲೂಸಿಗೆ, ಕಾಗದವೊಂದು ಅವಳಿಗಾಗಿ ಕಾದಿತ್ತು. ಅದೊಂದು ಆಹ್ವಾನ ಪತ್ರಿಕೆ. ಮುದ್ದಾದ ಕನ್ನಡ ಅಕ್ಷರಗಳಲ್ಲಿ ಬರೆಯಲ್ಪಟ್ಟಿತ್ತು.

ನಂ. 2435. ಚೆಟ್ಟಿಯಾರ್ ಬೀದಿ,
ಕೋಡಂಬಾಕಂ.

ಭಗಿನಿ,

ನಾಳೆ ಭಾನುವಾರ ನಮ್ಮ ಮಗುವಿನ ಹುಟ್ಟಿದ ದಿವಸ. ನೀವು ತಪ್ಪದೇ ಸಂಜೆಯ ಉಪಹಾರಕ್ಕಾಗಿ ಬರಬೇಕೆಂದು ಪ್ರಾರ್ಥಿಸುವೆ. ನಿಮ್ಮೊಡನೆ ಸ್ವಲ್ಪ ಮಾತನಾಡುವುದಿದೆ. ದಯವಿಟ್ಟು ಬರುವಿರಾ?

ಇತಿ
ನಿಮ್ಮ ಸಹೋದರಿ
—ಸರಸೂ

ಹೀಗೆ ಅಪರಿಚಿತಳೊಬ್ಬಳಿಂದ ಬಂದಿರುವ ಕರೆಯೋಲೆಯನ್ನು ನೋಡಿ ಲೂಸಿ ಚಕಿತಳಾದಳು. ಯಾರದಾದರೂ ತಪ್ಪಿ ತನಗೆ ಬಂದಿದೆಯೋ ಎಂದು ನೋಡಿದಳು. ವಿಳಾಸ ತನ್ನ ಹೆಸರಿಗೇ ಇದ್ದಿತು. 'ಇದೂ ಒಂದು ಚಮತ್ಕಾರ, ಹೋಗಿಯೇ ನೋಡುವಾ' ಎಂದುಕೊಂಡಳು.

ಅಂದು ಭಾನುವಾರವಾದ್ದರಿಂದ, ಮಧ್ಯಾಹ್ನ ಮೂರು ಗಂಟೆಯ ವರೆಗೂ ಮಲಗಿದಳು. ಎಚ್ಚರವಾದ ಕೂಡಲೇ ಅವಳ ಕಣ್ಣಿಗೆ ಅಲ್ಲಿಯೇ ಮೇಲಿದ್ದ, ನಿನ್ನೆ ಬಂದಿದ್ದ ಕರೆಯೋಲೆ ಕಾಣಿಸಿತು. ಸರಿ ಅಲ್ಲಿಗೆ ಹೋಗುವಾ ಎಂದುಕೊಂಡು ಮೈಮುರಿಯುತ್ತಾ ಎದ್ದು ಒಳಗೆ ಹೊರಟಳು. ಲೂಸಿ, ಆ ದಿನ ಮನ

ಮುಟ್ಟಿ ಸಿಂಗರಿಸಿಕೊಂಡಳು. 'ಬಾಬ್' ಮಾಡಿಕೊಂಡ ಕೂದಲನ್ನು ನಯ ವಾಗಿ ಬಾಚಿಕೊಂಡು, 'ಸೆಟ್' ಹಾಕಿಕೊಂಡಳು. ಮುಖಕ್ಕೆ ತೆಳುವಾಗಿ ಪೌಡರ್ ಹಚ್ಚಿಕೊಂಡಳು. ತುಟಿಗೆ ಲಿಪ್‌ಸ್ಟಿಕ್, ಕೆನ್ನೆಗೆ ರೂಜ್, ಎಲ್ಲಾ ಸಿಂಗರವೂ ಆಯಿತು. ಕತ್ತಿನಲ್ಲಿ 'ನೆಕ್‌ಲೇಸ್' ಕಂಗೊಳಿಸಿತು. ತಿಳಿ ಹಸುರಾದ ಜಾರ್ಜೆಟ್ ಸೀರೆಯುಟ್ಟು ಆದಕ್ಕೊಪ್ಪುವ ರವಕೆ ತೊಟ್ಟಳು. ಕಾಲಿಗೆ ಬೂಟುಗಳ ಬದಲಿ ಚಪ್ಪಲಿಯೇ ಬಂದಿತು. ಇಷ್ಟೆಲ್ಲಾ ಆಗುವ ವೇಳೆಗೆ ಗಂಟೆ ನಾಲ್ಕು ಆಯಿತು.

"ನಾನು ಇಲ್ಲಿಯೇ ಸ್ವಲ್ಪ ಹೊರಗೆ ಹೋಗಿ ಬರುವೆ ಆಂಟೀ. ಬರುವುದು ತಡವಾದರೆ ನೀನೇನೂ ಯೋಚಿಸಬೇಡ." ಎಂದು ಹೇಳಿ ಲೂಸಿ ಹೊರಟಳು.

ಪ್ರತಿ ಭಾನುವಾರವೂ ಲೂಸಿಗೆ ಯಾವುದಾದರೂ 'ಎಂಗೇಜ್‌ಮೆಂಟ್' ಇದ್ದೇ ಇರುತ್ತಿದ್ದಿತಾದ್ದರಿಂದ ಅವಳ ಚಿಕ್ಕಮ್ಮ ಎಲ್ಲಿಗೆ, ಏನು ಎಂದು ಕೇಳಲೇ ಇಲ್ಲ.

ಇತ್ತ ಮಾಧವನೂ ಅತ್ಯಂತ ಆಸಕ್ತಿ ಇಟ್ಟು 'ಡ್ರೆಸ್' ಮಾಡಿಕೊಂಡ. ಸರೂ ಮನೆಯನ್ನೆಲ್ಲಾ ಶುಭ್ರವಾಗಿಟ್ಟಿದ್ದಳು. ಅವಳ ಉಪಹಾರಕ್ಕೆಂದು ರವೆಯ ಉಪ್ಪಿಟ್ಟು, ಬಾದಾಮಿ ಹಲ್ವ, ಕೇಸರಿಬಾತ್ ಸಿದ್ಧಪಡಿಸಿದಳು. ವಿಜಯನಿಗೂ ಒಳ್ಳೆಯ ಹೊಸಬಟ್ಟೆ ಹಾಕಿ, ತಲೆ ಬಾಚಿದಳು. ತಾನೂ ತಲೆ ಬಾಚಿ, ಹೂ ಮುಡಿದುಕೊಂಡು, ಒಂದು ಧರ್ಮಾವರದ ಸೀರೆಯುಟ್ಟು, ಅತಿಥಿಯ ಆಗಮನ ವನ್ನು ಕಾದು ಕುಳಿತಳು. ಮಾಧವನ ಗಮನವೆಲ್ಲಾ ಗಡಿಯಾರದ ಮೇಲೆಯೇ ನಾಟಿದ್ದಿತು. ತನ್ನ ಮನೋದೇವತೆಯನ್ನು ಯಾವಾಗ ನೋಡೇನು, ಯಾವಾಗ ಮಾತನಾಡಿಸಿಯೇನು ಎಂದು ತಹ ತಹ ಪಡುತ್ತಿದ್ದ.

ಸರೂ ಕಾಗದ ಬರೆದು ಮನೆಯ ಗುರುತುಗಳನ್ನೆಲ್ಲಾ ತಿಳಿಸಿದ್ದರಿಂದ ಲೂಸಿಗೆ ಮನೆಯನ್ನು ಗೊತ್ತುಮಾಡುವುದು ಹೆಚ್ಚಿನ ಪ್ರಯಾಸವೇನೂ ಆಗ ಲಿಲ್ಲಿ. ಮೇಲಾಗಿ ಸರೂ ಬಾಗಿಲಲ್ಲೇ ನಿಂತಿದ್ದಳು, ಲೂಸಿ ಬಂದಾಗ. ಅವಳು ಬಂದವಳೇ ಕೇಳಿದಳು, "ಇದೇನೇ 2435ನೇ ನಂಬರಿನ ಮನೆ?"

"ಹೌದು. ಒಳಗೆ ಬನ್ನೀಮ್ಮಾ! ನಾನೇ ನಿಮ್ಮನ್ನು ಆಹ್ವಾನಿಸಿದವಳು." ಸರೂ ಒಳಗೆ ನಡೆದಳು ಲೂಸಿಯೂ ಅವಳನ್ನೇ ಹಿಂಬಾಲಿಸಿದಳು. ಮನೆಯನ್ನು ಇಟ್ಟಿರುವ ಬಗೆಯನ್ನು ನೋಡಿ ಲೂಸಿ ಬಹಳ ಮೆಚ್ಚಿಕೊಂಡಳು. ವೆರಂಡಾ ದಲ್ಲಿಯೇ ಮೂರು ಕುರ್ಚಿಗಳು ಹಾಕಲ್ಪಟ್ಟಿದ್ದುವು. ಲೂಸಿ ಅಲ್ಲಿಯೇ ಕೂತಳು. ಸರೂ ಒಂದು ನಿಮಿಷದಲ್ಲಿಯೇ ಉಪಹಾರವನ್ನು ತಂದು ಮೇಜಿನ ಮೇಲಿಟ್ಟಳು.

ಕೈ ತೊಳೆಯಲು ನೀರು, ಕೈ ಒರಸಿಕೊಳ್ಳಲು ವಸ್ತ್ರ, ಕುಡಿಯಲು ಕಾಫಿ ಎಲ್ಲಾ ತಂದು ಸಿದ್ಧಪಡಿಸಿದಳು. ಸರೂ ವಿಜಯನಿಗೆ 'ನಮಸ್ತೇ ಮಾಡು, ಆಂಟೀಗೆ ವಿಜಯ." ಎಂದು ಹೇಳಿ ಅವನ ಕೈಲಿ ನಮಸ್ತೇ ಮಾಡಿಸಿದಳು. ಲೂಸಿ ನಕ್ಕು ಪ್ರತಿಯಾಗಿ ನಮಸ್ತೇ ಮಾಡಿದಳು.

"ಹೋಗು ವಿಜಯ, ಅಣ್ಣಾವರನ್ನು ಕರೆದು ಬಾ."ಎಂದು ಸರೂ ವಿಜಯನನ್ನು ಒಳಗೆ ಕಳಿಸಿ ತಾನೂ ಒಂದು ಖುರ್ಚಿಯ ಮೇಲೆ ಕುಳಿತಳು. ವಿಜಯ ಮಾಧವನೊಡನೆ ಹೊರಗೆ ಬಂದ. ಲೂಸಿ ಮಾಧವನನ್ನು ನೋಡಿದ ಕೂಡಲೇ ವಿಸ್ಮಿತಳಾದಳು.

"ಹಲ್ಲೋ! ಗುಡ್ ಈವನಿಂಗ್!" ಲೂಸಿ ನಗುತ್ತಾ ಹೇಳಿದಳು.

"ಗುಡ್ ಈವನಿಂಗ್" ಮಾಧವ ಪ್ರತಿ ನುಡಿದ.

"ತೆಗೆದುಕೊಳ್ಳಿ, ತಿಂಡಿಯನ್ನು." ಸರೂ ಅವರಿಬ್ಬರಿಗೂ ಕೊಟ್ಟು ತಾನೂ ತೆಗೆದುಕೊಂಡಳು ವಿಜಯ ಸರೂಳ ತೊಡೆಯ ಮೇಲೆಯೇ ಕೂತಿದ್ದ.

ಮಾಧವ ಲೂಸಿಯನ್ನು ಸರೂವಿಗೆ ಪರಿಚಯ ಮಾಡಿಕೊಡುತ್ತಾ ಹೇಳಿದ: "ಇವರು ನಮ್ಮ ಕಂಪನಿಯ ಟೈಪಿಸ್ಟ್, ಹೆಸರು........" ಮಾಧವ ಹೇಳಲು ಬಾರದೇ ಲೂಸಿಯ ಕಡೆಗೆ ನೋಡಿದ.

ಲೂಸಿ ಆವನನ್ನೇ ಓರೆಗಣ್ಣಿನಿಂದ ನೋಡುತ್ತಾ ಅವನ ವಾಕ್ಯಪೂರ್ತಿ ಮಾಡಿದಳು, "ಲೂಸಿ ಲೀ" ಎಂದು.

"ಇವರು ನಮ್ಮ ಮಿಸೆಸ್ ಸರಸು. ಇವನು ನನ್ನ ಮಗ ವಿಜಯ. ಇಂದಿಗೆ ಇವನಿಗೆ ಎರಡು ವರ್ಷ" ವಿಜಯನಿಗೆ ಇನ್ನೂ ಒಂದೂವರೆ ವರ್ಷ ವಯಸ್ಸಾಗಿದ್ದರೂ, ಅಂದು ಅವನಿಗೆ ಎರಡು ವರ್ಷದ ಹುಟ್ಟಿದ ಹಬ್ಬವೆಂದೇ ಹೇಳಿದ. ಇದೆಲ್ಲಾ ಆ ಲೂಸಿ ಲೀಯನ್ನು ಕರೆಸಲು ಮಾಡಿದ ತೋರಿಕೆಯ ಆಟ ಎಂದು ಪಾಪ, ಅವಳಿಗೆ ಹೇಗೆ ತಿಳಿಯಬೇಕು? ಮಾಧವ ಲೂಸಿಯನ್ನೇ ನೋಡುತ್ತಿದ್ದ. ಅವನ ಹೃದಯ ಜೋರಾಗಿ ಬಡಿದುಕೊಳ್ಳಲಾರಂಭಿಸಿತು. ಅವನ ಮುಖವೆಲ್ಲಾ ಕೆಂಪಗಾಯಿತು.

ಸರೂ ಮಾಧವನನ್ನು ಈಕ್ಷಿಸುತ್ತಲೇ ಇದ್ದಳು. ಮಾಧವ ಎಷ್ಟು ಜಾಗ್ರತೆ ವಿಕಸಿತಗೊಂಡ ಅವಳನ್ನು ನೋಡಿದ ಕೂಡಲೇ! ಅವನ ಮುಖ ಹೇಗೆ ಅರಳಿತು? ಅವನ ಮುಖ ಎಷ್ಟು ಪ್ರಸನ್ನವಾಗಿದೆ! ಅವನ ಕಣ್ಣುಗಳು ಹೇಗೆ ಹೊಳೆಯುತ್ತಿವೆ? ಮಾಧವ ಇಷ್ಟು ಹರ್ಷವಾಗಿರುವುದನ್ನು ತಾನು ಒಂದು

ಬಾರಿಯೂ ನೋಡಿಯೇ ಇರಲಿಲ್ಲವಲ್ಲಾ! ಅವನನ್ನು ಅಷ್ಟರ ಮಟ್ಟಿಗೆ ತನ್ನ ಕಡೆ ಸೆಳೆದುಕೊಳ್ಳಲು ನಿಜವಾಗಿಯೂ ಅವಳಲ್ಲಿ ಯಾವುದೋ ಒಂದು ಆಕರ್ಷಕ ಶಕ್ತಿ ಇರಬೇಕು ಎಂದೆಲ್ಲಾ ಸರೂ ಯೋಚಿಸಿದಳು. ಅವರಿಬ್ಬರೂ ಮಾತನಾಡುತ್ತಲೇ ಇದ್ದರು. ತಾನು ಎದುರಿಗೆ ಇದ್ದರೆ ಎಷ್ಟಾದರೂ ಅವರಿಗೆ ಮಾತನಾಡಲು ಸಂಕೋಚ ಎಂದುಕೊಂಡು ಸರೂ, ವಿಜಯನಿಗೆ ಕೈತೊಳೆ ಸುವ ನೆವದಿಂದ ಒಳಗೆ ಹೋದಳು. ಸರೂ ಹೊರಟು ಹೋದುದನ್ನು ನೋಡಿ ಮಾಧವ ತನ್ನ ಮನಸ್ಸಿನಲ್ಲಿದ್ದುದನೆಲ್ಲಾ ಹೇಳಬೇಕೆಂದು ಬಯಸಿದ. ಆದರೆ ಮಾತು ಶುರುಮಾಡುವುದು ಹೇಗೆ? ಮಾಧವ ಇನ್ನೂ ಸಮಸ್ಯೆಯಲ್ಲಿಯೇ ತೊಳಲಾಡುತ್ತಿದ್ದಾಗ ಲೂಸಿ ಕೇಳಿದಳು:

"ಬೇರೆಯವರೆಲ್ಲಾ ಬಂದು ಹೋದರೇನು?"

"ಯಾರು ಬರಬೇಕಾಗಿತ್ತು? ಬರುವವರು ನೀವೊಬ್ಬರು." ಮಾಧವ ಲೂಸಿಯನ್ನು ನೋಡಿದ. ಇವೆಲ್ಲಾ ನಿನಗಾಗಿಯೇ ಮಾಡಿದುದು ಎನ್ನುವಂತಿತ್ತು ಆ ನೋಟ.

"ನನಗೆ ಬರುವಾಗ ಇದು ನಿಮ್ಮ ಮನೆ ಎಂದು ತಿಳಿದಿರಲಿಲ್ಲ. ಇಲ್ಲಿಗೆ ಬಂದ ಮೇಲೆ ಗೊತ್ತಾಯಿತು."

"ಗೊತ್ತಾಗದೆ ಬಂದುದರಿಂದ ಈಗ ಆದ ತೊಂದರೆಯಾದರೂ ಏನು?"

"ಹಾಗೆ ಗೊತ್ತಿದ್ದರೆ, ಆ ವಿಷಯವೇ ಬೇರೆಯಾಗಿತ್ತು. ಈಗೇತಕ್ಕೆ ನನ್ನ ಕರೆಸಿದಿರಿ?"

"ನನ್ನ ನಿಮ್ಮ ಪರಿಚಯವಾಗಲೆಂದು."

"ಅದು ಆಫೀಸಲ್ಲಿಯೇ ಆಗಬಹುದಾಗಿತ್ತಲ್ಲಾ? ಮನೆಗೆ ಕರೆಸುವ ಅವಶ್ಯಕತೆ ಏನಿತ್ತು?" ಕೋಪಗೊಂಡವಳಂತೆ ನುಡಿದಳು ಲೂಸಿ.

"ಆ ಪ್ರಕರಣವೇ ಈಗ ಬೇಡ. ಇಂದಿನಿಂದ ನಾವಿಬ್ಬರೂ ಸ್ನೇಹಿತರು, ಆಯಿತೇ?"

"ಓಹೋ, ಧಾರಾಳವಾಗಿ ಆಗಬಹುದು."

ಮಾಧವ ಲೂಸಿಯನ್ನು ಬಹುವಚನದಲ್ಲಿಯೇ ಮಾತನಾಡಿಸುತ್ತಿದ್ದ. ಅದನ್ನು ಗಮನಿಸಿದ ಲೂಸಿ ಹೇಳಿದಳು: "ನೀವೇನೂ ನನ್ನನ್ನು, 'ಬನ್ನಿ ಹೋಗಿ' ಎಂದು ಕರೆಯಬೇಡಿ. 'ಲೂಸೀ ಬಾ, ಹೋಗು' ಎಂದರೇ ಸಾಕು." ಲೂಸಿ ವಯ್ಯಾರದಿಂದ ಕೊರಳು ಬಗ್ಗಿಸಿದಳು. ಮಾಧವ ಅವಳನ್ನೇ ತಿಂದುಬಿಡುವಂತೆ

ನೋಡುತ್ತಿದ್ದ. ಅವನ ಮುಖದಲ್ಲಿ ಒಳಗಿನ ಉದ್ವಿಗ್ನತೆ ಎದ್ದು ಕಾಣುತ್ತಿತ್ತು. ಮಾಧವ ಮಾತಿನಲ್ಲಿ ಅವಳ ಬಳಿ ಸಾರಿದಷ್ಟೂ, ಲೂಸಿ ಹಿಂದುಹಿಂದಕ್ಕೆ ಹೋದಳು. ಮಾಧವ ಲೂಸಿಯ ಮನಸ್ಸು ತಿಳಿಯಲಾರದವನಾದ. ಲೂಸಿ ಒಂದೇ ಬಾರಿಗೆ ಮಾಧವನ ಮನಸ್ಸನ್ನರಿತಳು. ಅವಳು ಅವನನ್ನು ಸಂಪೂರ್ಣ ವಾಗಿ ಆಕರ್ಷಿಸಿಬಿಟ್ಟಿದ್ದಳು. ಮಾಧವ ತನ್ನ ಬಲೆಗೆ ಬಿದ್ದನೆಂಬುದರಲ್ಲಿ ಅವಳಿಗೆ ಸಂದೇಹವೇ ಇರಲಿಲ್ಲ.

ಮಾಧವ ಎಷ್ಟೆಷ್ಟೋ ಬಗೆಯಲ್ಲಿ, ಲೂಸಿಯ ಬಗ್ಗೆ ತನಗಿರುವ ಮನ ಸ್ಸನ್ನು ಹೇಳಿದ. ಆದರೆ ಲೂಸಿ ಯಾವುದನ್ನೂ ತಿಳಿಯದವಳಂತೆ, ಮುಗ್ಧಳಾದ ಬಾಲಿಕೆಯಂತೆ, ಅವನ ಮಾತಿಗೆ ಯಾವ ಬೆಲೆಯನ್ನೂ ಕೊಡದೆ ಸುಮ್ಮ ನಾದಳು. ಆದರೆ ಅವಳ ಆ ತೀಕ್ಷ್ಣವಾದ, ಮಿಂಚಿನಂತಹ ನೋಟ ಮಾಧ ವನ ಮೇಲೆ ಕೊನೆ ಇಲ್ಲದೆಯೇ ಸಾಗಿದ್ದಿತು. ಮಾಧವ ಆ ನೋಟವನ್ನು ಎದುರಿಸಲಾರದವನಾದ. ಅವನ ಮೈ ಕಾದು ಕೆಂಡವಾಗಿತ್ತು. ನೀರಿನಿಂದ ಹೊರಗೆ ಬಂದ ಮೀನಿನಂತೆ, ಮಾಧವ ಲೂಸಿಗಾಗಿ ಒದ್ದಾಡಿದ. ಲೂಸಿ ಒಳ ಗಿಂದೊಳಗೇ ನಗುತ್ತಿದ್ದಳು, ಅವನ ಅವಸ್ಥೆಯನ್ನು ನೋಡಿ. ಏನು ಮಾಡಿ ದರೂ ಮಾಧವ ಲೂಸಿಯ ಮನವನ್ನು ತಿಳಿಯಲಾರದವನಾದ. ಎಷ್ಟೇ ಸಾಹಸ ಪಟ್ಟರೂ ತನ್ನ ಅಭಿಪ್ರಾಯವನ್ನು ತಿಳಿಸುವುದು ಅವನಿಗೆ ಕಡೆಯ ವರೆಗೂ ಸಾಧ್ಯವಾಗಲಿಲ್ಲ ಲೂಸಿ ಗಡಿಯಾರದ ಕಡೆ ನೋಡುತ್ತ ಎದ್ದು ನಿಂತಳು. "ನಾನು ಬರುವೆ; ಹೊತ್ತಾಯಿತು. ಮಾತಿನಲ್ಲಿ ಕಾಲ ಕಳೆದುದೇ ತಿಳಿಯಲಿಲ್ಲ. ಎಲ್ಲಿ ನಿಮ್ಮ ಮಿಸೆಸ್ ಅವರನ್ನು ಕೂಗಿ. ಅವರಿಗೆ ಹೇಳಿ ಹೋಗುವುದಿದೆ." ಎಂದಳು.

"ಹಾಗಾದರೆ ಈಗಲೇ ಹೊರಟೇಬಿಡುವಿರಾ?" ಮಾಧವ ಅವಳು ಹೋಗುವಳೆಂಬುದನ್ನು ಕೇಳಿ ಕಳೆಗುಂದಿದ

"ನೋಡಿದಿರಾ ನಾನು ಹೇಳಿದ್ದು ಎಷ್ಟು ಬೇಗ ಮರೆತುಬಿಟ್ಟಿರಿ. ಪುನಃ ನಿಮ್ಮ ಮರ್ಯಾದೆಯನ್ನೇ ಶುರು ಮಾಡಿದಿರಲ್ಲಾ?" ಲೂಸಿ ಒಮ್ಮೆ ಒಯ್ಯಾರ ದಿಂದ ಬಳುಕಿದಳು. ಅವಳ ಆ ನಿಂತ ಭಂಗಿಯನ್ನು ನೋಡಿ ಮಾಧವ 'ಓಡಿ ಹೋಗಿ ಹಾಗೇ ಅಪ್ಪಿಕೊಳ್ಳಲೇ' ಎನ್ನುವಷ್ಟು ಉತ್ತೇಜಿತನಾದ.

"ಹೋಗಿ ಬರುವೆಯಾ ಲೂಸೀ? ಇನ್ನೆಂದು ನೀನು ಬರುವುದು?" ಕಾತರಗೊಂಡು ಕೇಳಿದ.

"ಮುಂದಿನ ಭಾನುವಾರ ನಿಮ್ಮ ಮಗನ ಮೂರನೇ ಹುಟ್ಟಿದ ಹಬ್ಬ ವಾಗುತ್ತದೆಯಲ್ಲಾ ಅಂದು ಬರುವೆ" ಲೂಸಿ ನಗಲಾರಂಭಿಸಿದಳು. ಲೂಸಿ ತನ್ನ ಎಲ್ಲಾ ವಿಕೃತನಾಟಕವನ್ನು ತಿಳಿದುಬಿಟ್ಟಳೆಂದು ಮಾಧವ ನಾಚಿಕೊಂಡ.

"ನಿಮ್ಮ ಮಿಸೆಸ್ ಬರಲೇ ಇಲ್ಲ? ನನಗೆ ಹೊತ್ತಾಯಿತು, ನಾನು ಬರುವೆ. 'ಗುಡ್-ನೈಟ್' " ಎಂದು ಲೂಸಿ ಕೈ ನೀಡಿದಳು. ಮಾಧವ ಅವಳ ಕೈಯನ್ನು ಹಿಡಿದ. ಆ ಸ್ಪರ್ಶಕ್ಕೆ ಅವನ ಮೈ ನವಿರೆದ್ದಿತು. ಮುಖವೆಲ್ಲಾ ಕೆಂಪಾಗಿ, ಮಾಧವ ಬೆವರಲಾರಂಭಿಸಿದ. ತಾನು ಆವಳ ಕೈಹಿಡಿದಿದ್ದು ಏತಕ್ಕೆ ಎಂಬುದೇ ಅವನಿಗೆ ಮರೆತು ಹೋಯಿತು. ಅವನು ಸ್ವಪ್ನವನ್ನೇ ಕಾಣಲಾರಂಭಿಸಿದ್ದ. ಲೂಸಿ ಗಟ್ಟಿಯಾಗಿ ತಾನೇ ಕೈ ಕುಲುಕಿ 'ಗುಡ್-ನೈಟ್' ಎಂದವಳೇ ಕೈಬಿಡಿಸಿ ಕೊಂಡು 'ಏನು; ಇವರ ಮನೆಯ ಹೆಣ್ಣುಮಕ್ಕಳು ಎಂತಹರು' ಎಂದುಕೊಂಡು ಸರಸರನೆ ಹೊರಟು ಹೋದಳು. ಬೀದಿಯಲ್ಲಿ ದೀಪಗಳು ಆಗ ತಾನೇ ಹತ್ತಿದ್ದವು. ಮಾಧವ ಅವಳು ಹೋದ ದಾರಿಯನ್ನೇ ನೋಡುತ್ತಾ ನಿಂತ. ಅವನ ಮುಖದಲ್ಲಿ ಮೂಡಿದ್ದ ಕಳೆ ಎಂದೋ ಮಾಯವಾಗಿತ್ತು.

ಸರೂ, ತನಗೆ ಅಲೌಕಿಕವೆನಿಸಿದರೂ ತನ್ನ ಪತಿಯ ಆಸೆಯನ್ನು ನೆರವೇರಿಸಲು ಏನಾದರೊಂದು ಉಪಾಯವನ್ನು ಹೂಡಲೇಬೇಕಾಯಿತು. ಆ ಉಪಾಯವನ್ನು ಕಂಡುಹಿಡಿಯುವಾಗ ಏನೇನೋ ಯೋಚನೆಗಳು—ಇಷ್ಟವೊ ಅನಿಷ್ಟವೊ—ಅವಳ ತಲೆಯಲ್ಲಿ ಸುಳಿದು ಹೋದುವು. ಇದೇ ಸಮಯವನ್ನು ಸಾಧಿಸಿ ಹಿಂದಿನ ಕೆಲ ನೆನಪುಗಳೂ ಒಳನುಗ್ಗಿ ಬಂದವು. ತಾನು ಶಾಲೆಯಲ್ಲಿದ್ದಾಗ 'ಮಾಲವಿಕಾಗ್ನಿಮಿತ್ರ' ಸಂಸ್ಕೃತ ನಾಟಕದಲ್ಲಿ ರಾಣಿಯ ಪಾತ್ರ ವಹಿಸಿ ಬಹುಮಾನ ಪಡೆದಿದ್ದಳು. ಈಗ ಆ ಪಾತ್ರವೇ ತನ್ನ ಜೀವನದಲ್ಲಿಯೂ ತನಗಾಗಿ ಕಾಯ್ದು ಕುಳಿತಿರುವಂತೆ ಅವಳಿಗೆ ಅನಿಸಿತು. ದೈವದ ಈ ವಿಚಿತ್ರತೆಯನ್ನು ಬಗೆದು ವಿಸ್ಮಿತಳಾದಳು. ತಾನಿನ್ನೂ ಯಾವ ಯಾವ ಪಾತ್ರ ವಹಿಸಬೇಕಾಗಿದೆಯೋ, ಏನೇನು ಸಿಹಿ ಕಹಿ ಉಣ್ಣಬೇಕಾಗದೆಯೋ ಯಾರು ಬಲ್ಲರು! ಇದು ನಾಟಕ ಎಂಬ ಅರಿವಿದ್ದರೂ ಅಳುವಾಗ ನಿಜವಾಗಿ ಅತ್ತಂತೆಯೇ ಅಳಬೇಕು,

ನಗುವಾಗ ನಿಜವಾಗಿ ನಕ್ಕಂತೆಯೇ ನಗಬೇಕು; ಆದರೆ ಎರಡೂ ತನ್ನವೇ ಅಳು-ನಗುಗಳಲ್ಲದಂತೆಯೂ ಇರಬೇಕು. ಸಾಕ್ಷಿಯಾಗಿ ಭೋಗಿಸಬೇಕು. ಕೊಟ್ಟ ಪಾತ್ರ ವಹಿಸಬೇಕು, ಹೌದೆನ್ನುವಂತೆ ಅಭಿನಯಿಸಬೇಕು ಎನ್ನುವ ಮೆಟ್ಟಲಕ್ಕೆ ಬಂದು, ಸರೂ ಏನೋ ಒಂದು ನಿಶ್ಚಯ ಮಾಡಿದ್ದಳು. ಅದರಂತೆ ಮಾಧವನಿಂದ ಅವಳ ವಿಳಾಸ ಕೇಳಿ ತಿಳಿದುಕೊಂಡು, ಮಗುವಿಗೆ ಇಲ್ಲದ ಹುಟ್ಟಿದ ಹಬ್ಬವನ್ನು ನೆನಪು ಮಾಡಿ ಲೂಸೀಯನ್ನು ಆಹ್ವಾನಿಸಿ ಮನೆಗೆ ಕರೆ ತಂದಳು. ಅವಳೂ ಬಂದಳು. ಅಲ್ಲಿಗೆ ಸರೂ ತಾನು ಕೊಟ್ಟ ಮಾತಿನಂತೆ ನಡೆದು ಕೊಂಡಳು. ಅವಳನ್ನು ಕರೆತರುವುದು ಮಾತ್ರ ಅವಳ ಕೆಲಸ. ಅದನ್ನು ಅವಳು ನೆರವೇರಿಸಿದಳು. ಲೂಸೀ ಒಳಗೆ ಬಂದೊಡನೆ, ಮಾಧವನನ್ನು ಅವಳೊಡನೆ ಮಾತಾಡಲು ಬಿಟ್ಟು ಸರೂ ನೇರವಾಗಿ ಅಡುಗೆ ಮನೆಗೆ ಹೋದಳು. ತಕ್ಷಣ ಏನೋ ಜ್ಞಾಪಿಸಿಕೊಂಡವಳಂತೆ, ಬಚ್ಚಲುಮನೆಗೆ ಹೋಗಿ ಕೈಕಾಲು ತೊಳೆದು ಬಂದಳು. ದೇವರಿಗೆ ತುಪ್ಪದ ದೀಪ ಹತ್ತಿಸಿದಳು. ದೇವರಿಗೆ ನಮಸ್ಕರಿಸಿ ಬೇಡಿ ಕೊಂಡಳು, "ದೇವರೇ, ನನ್ನ ಪತಿ, ನನ್ನ ಪಾಲಿನ ದೇವರು, ನನ್ನ ಸ್ವಾಮಿ, ಎಂದೆಂದಿಗೂ ನನ್ನವರಾಗಿಯೇ ಇರುವಂತೆ ಮಾಡು ಸ್ವಾಮೀ! ಅವರ ಪಾದ ಸೇವೆ ನನಗೆ ಎಂದೆಂದಿಗೂ ಶಾಶ್ವತವಾಗಿರಲಿ." ಎಂದು ತನ್ನ ಪತಿಯ ಸಂಕಟ ನೋಡಲಾರದೇ, ತಾನೇ ಅವನ ಬಯಕೆಯ ಲೂಸಿಯನ್ನು ತನ್ನ ಬುದ್ಧಿಬಲ ದಿಂದಲೇ ಕರೆತಂದು, ಅವನಿಗೊಪ್ಪಿಸಿದ್ದಾಳೆ. ಅವನು ಲೂಸಿಯ ಜೊತೆಯಲ್ಲಿ ಮಾತನಾಡುವಾಗ ಅವನ ಕಣ್ಣುಗಳಲ್ಲಿ ಉಕ್ಕಿ ಬರುತ್ತಿವ ಸಂತೋಷವನ್ನೂ ಅವಳು ಕಣ್ಣಾರೆ ಕಂಡಿದ್ದಾಳೆ. ಆಗ ಅವಳಿಗೆ ಸುಖವೂ ಆಗಿರಬೇಕು, ದುಃಖವೂ ಆಗಿರಬೇಕು. ಈ ಸುಖದುಃಖದ ಗಾಳಿಗೆ ತನ್ನ ಮೈಯೊಡ್ಡುವುದೇ ತನ್ನ ಜೀವನದಲ್ಲಿಯ ಒಂದು ಸಾಧನೆ ಎಂದೂ ತಿಳಿದಿದ್ದಾಳೆ. ತನ್ನ ಪತಿಯ ಸುಖ ಸಂತೋಷ ತನ್ನ ಸುಖ-ಸಂತೋಷ, ಅದಕ್ಕಾಗಿ ತನ್ನದೆಲ್ಲವನ್ನೂ ತ್ಯಾಗ ಮಾಡಲು ಸಿದ್ಧಳಿದ್ದಾಳೆ. ಆ ತ್ಯಾಗದಲ್ಲಿಯೆ ಅವಳಿಗೆ ಸುಖವಿದೆ. ತನ್ನ ತಾಯಿಯ ಕೊನೆಯ ಗಳಿಗೆಯ ಮಾತುಗಳು ಅವಳ ಹೃದಯದಲ್ಲಿ ಅಚ್ಚಳಿಯ ದಂತೆ ಇನ್ನೂ ನಾಟ ನಿಂತಿವೆ. 'ಪತಿಯ ಸುಖಕ್ಕಾಗಿ ಯಾವ ಕೆಲಸಕ್ಕೂ ಹಿಂಜರಿಯಬೇಡ. ಒಂದು ವೇಳೆ ಅವನ ಸುಖ ನಿನ್ನ ಪ್ರಾಣದ ಮೇಲೆ ಅವ ಲಂಬಿಸಿದ್ದರೆ ನೀನು ನಿನ್ನ ಪ್ರಾಣವನ್ನು ನಿನ್ನ ಪತಿಯ ಪಾದಗಳಲ್ಲಿ ಅರ್ಪಿಸಲು ಹಿಂತೆಗೆಯಬೇಡ' ಸರೂ ಈ ಒಂದು ಮನೋನಿಶ್ಚಯದಿಂದ ಲೂಸಿಯನ್ನು

ಕರೆತಂದು ಮಾಧವನಿಗೆ ಒಪ್ಪಿಸಿದ್ದರೂ, ಅವಳ ಅಂತರಾಳದಲ್ಲಿ ಯಾವುದೋ ಅವ್ಯಕ್ತವಾದ ಭಯವು ಆವರಿಸಿದ್ದಿತು. ತಾನಾಗಿಯೇ ಮಾಡಿಕೊಟ್ಟ ಪರಿಚಯದ ಕಾರಣವಾಗಿ ಮಾಧವ ತನ್ನಿಂದ ದೂರ ಹೋದರೆ? ಸರೂ ಆ ಕಲ್ಪನೆಯನ್ನು ನೆನೆದು ನಡುಗಿದಳು. ಅವಳು ಸಮಾಧಾನದಿಂದಿರಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಮಾಧವನಲ್ಲಿ ಅವಳು ಆತ್ಮಾರ್ಪಣೆಯನ್ನು ಮಾಡಿಕೊಂಡಿದ್ದೇನೋ ನಿಜ. ಅವನ ಮನೋಭಾವನೆಗಳಿಂದ ತನ್ನದು ಬೇರೆಯಾಗಿರಲಿಲ್ಲ, ಅದೂ ಸರಿ. ಆದರೆ ಎಷ್ಟೇ ಆಗಲಿ, ಶರೀರ ಬೇರೆ ಇರುವಂತೆ ಮನಸ್ಸೂ ಹಲವು ಬಗೆಯಾಗಿರುತ್ತದೆ. ಹಾಗೆಯೇ ಸರೂ ತನ್ನದಾಗಿ ಯಾವ ಭಾವನೆಯೂ ಇಲ್ಲವೆಂದು ತಿಳಿದಿದ್ದರೂ ಕೂಡಾ, ಅವಳಿಗೆ ಸಹಿಸಲಸಾಧ್ಯವಾದ ವೇದನೆಯುಂಟಾಯಿತು. ಒಂದು ದಿನವೂ ಮಾಧವ ತನ್ನನ್ನು ಅಷ್ಟು ಪ್ರೀತಿಯಿಂದ ಮಾತಾಡಿಸಿರಲಿಲ್ಲವಲ್ಲಾ! ಬರಿಯ ಶರೀರಸುಖಕ್ಕೆ ವಿನಹ ಬೇರೆ ಯಾವುದಕ್ಕಾಗಿ ತನ್ನನ್ನು ಪ್ರೀತಿಸಿದ್ದ? ಒಂದು ದಿನವಾದರೂ ಅವರು ತನಗಾಗಿ ಈ ರೀತಿ ಹಂಬಲಿಸಿದರೇ? ಈ ರೀತಿ ವಿಲಪಿಸಿದರೆ? ಈ ದಾರಿಯಲ್ಲಿ ಯೋಚಿಸಿದಷ್ಟೂ ಸರೂವಿಗೆ ಅತ್ಯಂತ ಸಂಕಟವಾಯಿತು. ಆಡಲಾರಳು, ಅನುಭವಿಸಲಾರಳು. ಮನಸ್ಸು ಯಾವಾಗ ಈ ಬೇಗುದಿಗೆ ಅವಕಾಶ ಕೊಟ್ಟಿತೋ, ಆಗ ಸರೂ ದೇವರನ್ನು ಮೊರೆಹೊಕ್ಕಳು. ವಿಜಯನಿಗೆ ಹೊರಗಡೆ ಆಡಿಕೊಳ್ಳುವಂತೆ ಹೇಳಿ, ಒಳಗೆ ಹೋಗಿ ತಾನು ಪ್ರಾರ್ಥನೆಗೆ ತೊಡಗಿದಳು. ಹೊರಗಡೆ ವಿಜಯ ಹೂಗಿಡಗಳ ಹತ್ತಿರ ತನ್ನ ಪಾಡಿಗೆ ತಾನು ಚೆಂಡಾಡುತ್ತಾ ಕುಳಿತ್ತಿದ್ದ. ಮಾಧವ-ಲೂಸಿಯರ ಸಂಭಾಷಣೆ ಇನ್ನೂ ನಡದೇ ಇತ್ತು. ಸರೂ ತನ್ನ ರಾಮನಾಮ ಜಪವನ್ನು ಮಾಡುತ್ತಾ ಕುಳಿತಳು. ನೂರು, ಇನ್ನೂರು, ಮುನ್ನೂರು ಹೀಗೆಯೇ ನಡೆದಿತ್ತು, ಜಪ. ಆ ನಾಮಸ್ಮರಣೆಯಿಂದ ಸರೂವಿಗೆ ಏನೋ ಒಂದು ಶಾಂತಿ ದೊರೆತಂತಾಯ್ತು. ಮನಸ್ಸಿನ ಬೇಗುದಿ, ಕಳವಳ, ಕಡಿಮೆಯಾದವು. ಆ ಧ್ಯಾನದಲ್ಲಿಯೇ ಸರೂವಿಗೆ ತೃಪ್ತಿಯೆನಿಸಿತು. ಚಿತ್ತ ಈ ರೀತಿಯ ಪ್ರಸನ್ನತೆಯಲ್ಲಿರುವಾಗಲೆ ಅವಳು ಹೊರ ಬಂದಳು. ಮಾಧವ ಅಲ್ಲಿಯೇ ನಿಂತಿದ್ದ. ಲೂಸಿಗಾಗಿ ಹೇಗೆ ಕೈ ನೀಡಿದ್ದನೋ, ಅದು ಹಾಗೆಯೇ ಇದ್ದಿತು. ಅದನ್ನು ಹಿಂದಕ್ಕೆ ತೆಗೆದು ಕೊಳ್ಳಬೇಕೆನ್ನುವ ಯೋಚನೆಯೂ ಅವನಿಗೆ ಬರಲಿಲ್ಲ. ಸರೂ ಹಿಂದಿನಿಂದ ಬಂದು ಅವನ ಕೈ ಸರಿಸಿದಳು. ಅವಳ ಸ್ಪರ್ಶವಾದೊಡನೆ 'ಲೂಸೀ....' ಎನ್ನುತ್ತಾ ಮಾಧವ ಹಿಂತಿರುಗಿ ನೋಡಿದ. ಆದರೆ ಅಲ್ಲಿ ಇದ್ದವಳು

ಪಳು ಲೂಸಿಯಲ್ಲ, ಸರೂ. ಅವನ ಮುಖ ಬಾಡಿಹೋಯಿತು. ಸರೂ ಅವನ ಲ್ಲಾದ ಬದಲಾವಣೆಯನ್ನು ಗ್ರಹಿಸಪೇ ಇರಲಿಲ್ಲ.

"ಆಕೆ ಹೊರಟು ಹೋದರೆ?" ಸರೂ ಪ್ರಶ್ನಿಸಿದಳು.

"ನನಗೆ ಬಹಳ 'ಥ್ಯಾಂಕ್ಸ್' ಸರೂ, ನೀನು ನುಡಿದಂತೆ ನಮ್ಮ ಭೇಟಿ ಮಾಡಿಸಿದೆ."

"ನಿಮ್ಮ ಸೇವೆಗಾಗಿಯೇ ಇರುವ ಈ ಸರೂ, ನಿಮ್ಮ ಕೋರಿಕೆಯನ್ನು ನೆರವೇರಿಸುವುದರಲ್ಲಿ ನಿಮ್ಮಿಂದ ಯಾವ 'ಥ್ಯಾಂಕ್ಸ್'ನ್ನೂ ಬಯಸುವುದಿಲ್ಲ. ನೀವು ಹರ್ಷಚಿತ್ತರಾಗಿದ್ದರೆ, ಅದೇ ನನಗೆ ದೊಡ್ಡ ಉಪಕಾರ."

"ನೀನೇ ಹೇಳು ಸರೂ, ಲೂಸಿ ನಿಜವಾಗಿಯೂ ರೂಪಸಿಯಲ್ಲವೆ?"

"ಪೂರ್ಣಿಮಾ ಚಂದಿರನನ್ನು ನೋಡಿ, ಯಾರಾದರೂ ಅವನು ಕಳಾ ಹೀನನೆಂಬುವುದಕ್ಕೆ ಸಾಧ್ಯವೇ ಸ್ವಾಮಿ ?"

ಸರೂವಿನ ಹೊಗಳಿಕೆಯಿಂದ ಮಾಧವ ಇನ್ನಷ್ಟು ಉತ್ಸುಕನಾಗಿ ಹೇಳ ತೊಡಗಿದ: ಆ ಲೂಸಿಯ ನೋಟದಲ್ಲಿ, ಅವಳ ಪ್ರಕಾಶಿತವಾದ ಕಣ್ಣುಗಳಲ್ಲಿ ಅದು ಯಾವ ಆಕರ್ಷಕ ಶಕ್ತಿ ಇದೆ ಸರೂ? ಯಾವನೇ ಆಗಲೀ, ಎಂತಹ ದೃಢಮನಸ್ಕನಾಗಲೀ ಅವಳನ್ನು ಒಮ್ಮೆ ನೋಡಿದರೆ ತೀರಿತು, ಅವನ ಮನಸ್ಸು ಚಂಚಲವಾಗುತ್ತದೆ. ಅವಳಿಗೆ ಯಾವುದಾದರೂ ವಶೀಕರಣ ಮಂತ್ರ ಬರು ತ್ತದೆಯೋ, ಎಂದು ನನಗನಿಸುತ್ತದೆ. ತನ್ನ ಇಂಗಿತವನ್ನೆಲ್ಲಾ ಅವಳು ಮುಖ ದಲ್ಲಿಯೇ ಹೇಗೆ ತಿಳಿಸುತ್ತಾಳೆ ಗೊತ್ತಿದೆಯೇ ಸರೂ? ಅವಳ ಧ್ವನಿ ಎಷ್ಟು ಮಧುರ! ಅವಳ ನಡಿಗೆ ಎಷ್ಟು ಸುಂದರ!...." ಮಾಧವ ಹೇಳುತ್ತಲೇ ಇದ್ದ. ತಾನು ಯಾರ ಗುಣಗಾನ ಮಾಡುತ್ತಿದ್ದೇನೆ, ಯಾರ ಮುಂದೆ, ಇದರಿಂದ ಕೇಳುವವರ ಮೇಲೆ ಯಾವ ಪರಿಣಾಮವಾಗಬಹುದು ಎಂಬ ಕಲ್ಪನೆಯೇ ಆವನಿಗೆ ಬರಲಿಲ್ಲ. ಸರೂ ನಿಜವಾಗಿಯೂ ಪ್ರಸನ್ನಚಿತ್ತಳಾಗಿ, ಅವನ ಜೊತೆಗೂ ತಾನೂ ಲೂಸಿಯ ಗುಣವನ್ನು ಹೊಗಳಿದಳು. ಮಾಧವ ಅವಳ ಈ ಪರಿವರ್ತನೆಯಿಂದ ಆನಂದಿತನಾದ. ಇಡೀ ರಾತ್ರಿಯೆಲ್ಲಾ ಬರಿಯ ಲೂಸಿಯ ವಿಷಯದ ಹೊರತಾಗಿ ಬೇರೆ ಯಾವ ಮಾತೂ ಇರಲಿಲ್ಲ. ಸರೂ ಬೇಸರಿಸದೆ ಕೇಳಿಯೇ ಕೇಳಿದಳು.

ಲೂಸಿ ಮನೆಗೆ ನಗುಮುಖಳಾಗಿ ಯಾವುದೋ ಒಂದು ಇಂಗ್ಲೀಷ್ ಹಾಡನ್ನು ಕಿರುದನಿಯಲ್ಲಿ ಹೇಳುತ್ತಾ ಬಂದಳು. ಅವಳ ಚಿಕ್ಕಮ್ಮ ಫಿಲೋಮಿನಾ ರೂಮಿನಲ್ಲಿಯೇ ಕೂತಿದ್ದಳು. ಗೆಲುಮುಖದ ಲೂಸಿಯನ್ನು ನೋಡಿ, "ಏನೆ, ಇಷ್ಟು ಉಲ್ಲಾಸವಾಗಿರುವೆ? ಯಾವುದಾದರೂ ಹೊಸ ಬೇಟೆ ಬಿತ್ತೇನು ಬಲೆಯಲ್ಲಿ?" ಎಂದು ಮರ್ಮದ ಮಾತಾಡಿದಳು.

"ಹೌದು ಆಂಟೀ, ಪಾಪ ಆವನೊಬ್ಬ 'ಇನ್ನೋಸೆಂಟ್' ಫೂಲ್! ನಾನಿದ್ದ ಕಂಪನಿಯ ಮ್ಯಾನೇಜರು. ಮೊದಲ ದಿನವೆ ನನ್ನನ್ನು ನೋಡಿದೊಡನೆಯೇ ಸುಸ್ತಾದ ಪ್ರಾಣಿ."

"ಪರವಾಗಿಲ್ಲ ಕಣೇ, ನೀನೇ 'ಲಕೀ ಡಾಗ್'! ಒಬ್ಬರಿಗಿಂತ ಒಬ್ಬರು ಬಲವಾದ ಗಿರಾಕಿಗಳೇ ನಿನಗೆ ದೊರಕುತ್ತಾರೆ. ಆತನಿಗೆ ಮದುವೆಯಾಗಿದೆಯೇ ?"

"ಮದುವೆಯೂ ಆಗಿದೆ, ಮಕ್ಕಳೂ ಆಗಿದೆ. ಆದರೆ ನೋಡು ಆಂಟೀ, ಆಕೆಯೇ ನನ್ನನ್ನು ಅಲ್ಲಿಗೆ ಬರಮಾಡಿಕೊಂಡು, ನಮ್ಮ ಪರಿಚಯವಾಗಲು ಅನುಕೂಲ ಮಾಡಿಕೊಟ್ಟರು. ಅದೇ ಆಶ್ಚರ್ಯದ ಸಂಗತಿ ಆಕೆಯನ್ನು ನೋಡಿದರೆ ನನಗೆ ಅಯ್ಯೋ ಅನ್ನಿಸಿತು. ಆದರೆ ಇದರಲ್ಲಿ ನನ್ನದೇನೂ ಇಲ್ಲ ಆಂಟೀ. ಅವರಾಗಿ ವರೇ ಕರೆಸಿದರು! ಯಾರಾದರೂ ಬಂದಿದ್ದರೇನು?" ಸೀರೆ ಬದಲಾಯಿಸುತ್ತಾ ಕೇಳಿದಳು ಲೂಸಿ.

"ಅದೇ ಆ ಜಾನ್ ಬಂದಿದ್ದ, ಸಂಜೆ ಐದರ ವೇಳೆಗೆ, ನಿನ್ನನ್ನು ಹುಡುಕಿಕೊಂಡು."

"ಓ ಸರಿ, ಅವನೇ! ಈಗ ನನಗೆ ಬಹಳ ಕೆಲಸವಿದೆ ಎಂದೂ ಇನ್ನೂ ಕೆಲವು ಕಾಲ ನನ್ನನ್ನು ಕಾಣುವ ಪ್ರಯತ್ನ ಮಾಡಬಾರದೆಂದೂ ತಿಳಿಸು. ಅವನೊಬ್ಬ ಶುದ್ಧ ಪೆಚ್ಚು." ಅವನ ಬಗ್ಗೆ ತಿರಸ್ಕಾರ ವ್ಯಕ್ತಪಡಿಸುತ್ತಾ ಹೇಳಿದಳು ಲೂಸಿ.

"ಅವನೇಕೆ ಈಗ ಬೇಕಾಗಬೇಕು, ನಿನಗೆ ಹೊಸ ಪ್ರೇಮಿಯೊಬ್ಬ ದೊರಕಿರುವಾಗ?" ಫಿಲೋಮಿನಾ ಕಣ್ಣು ಮಿಟುಕಿಸಿದಳು. ಲೂಸಿ ಅಲ್ಲಿಯೇ ಇದ್ದ ತನ್ನ ಮಂಚದ ಮೇಲೆ ಬಿದ್ದುಕೊಂಡು "ನನಗೆ ಹಸಿವೆಯೇ ಇಲ್ಲಾ ಆಂಟೀ. ಅಲ್ಲಿಯೇ ನನಗೆ ಉಪಹಾರ ಆಯಿತು. ಅಂಕಲ್ ಇನ್ನೂ ಮನೆಗೆ ಬಂದಿಲ್ಲವೇನು?" ಎಂದಳು.

"ನಿನ್ನ ಅಂಕಲ್ ಅವರು! ಇಂದು ಭಾನುವಾರವಲ್ಲವೇ, ಅವರೇಕೆ ಇಷ್ಟು

ಬೇಗ ಬರಬೇಕು? ಬರುತ್ತಾರೆ ಹನ್ನೊಂದಕ್ಕೋ, ಹನ್ನೆರಡಕ್ಕೋ. ನಿನ್ನ ಪ್ರಿಯ ವಾದ ಕೇಕ್ ಮಾಡಿದ್ದೇನೆ. ಅದನ್ನಾದರೂ ತಿನ್ನು. ನನಗಂತೂ ಹಸಿವೆಯಾಗು ತ್ತಿದೆ, ನಾನು ಊಟ ಮಾಡುವೆ. ಬಾ ನನ್ನ ಜೊತೆಗೇ ತಿನ್ನುವಿಯಂತೆ."ಎಂದು ಫಿಲೋಮಿನಾ, ಲೂಸಿಯನ್ನೆಳೆದುಕೊಂಡು ಹೋದಳು.

ಲೂಸಿ ಬರಿಯ ಎರಡು ಕೇಕ್‌ಗಳಲ್ಲಿಯೇ ತನ್ನ ಊಟ ಮುಗಿಸಿದಳು.

"ಯಾವುದಾದರೂ ಡ್ರಿಂಕ್ಸ್ ತೆಗೆದುಕೊಳ್ಳೋಣವೆ ಆಂಟೀ? ಯಾಕೋ ಬಹಳ ಬಾಯಾರಿಕೆ."

"ಡ್ರಿಂಕ್ಸ್ ಆದರೂ ತೆಗೆದುಕೋ, ಏನಾದರೂ ತೆಗೆದುಕೋ. ನನಗೆ ಏನೂ ಬೇಡ. ನನಗೂ ವಯಸ್ಸಾಯಿತು, ಕಾಲವಾಯಿತು. ನೀನು ಇನ್ನೂ ಹುಡುಗಿ, ಅವೆಲ್ಲಾ ನಿನಗೆ ಬೇಕು. ನನಗೆ ಯಾಕೆ?"

"ಯಾಕೆ, ನೀನಾಗಲೇ ಮುದುಕಿಯಾಗಿಬಿಟ್ಟಿಯಾ? ಇನ್ನೂ ನಲವತ್ತು ಕೂಡಾ ಇಲ್ಲ!"

"ಆಗದಿದ್ದರೇನು, ಮೂರು ಮಕ್ಕಳಾಗಲಿಲ್ಲವೆ? ನಿನ್ನನ್ನು ಬಯಸುವ ಹಾಗೆ, ನನ್ನನ್ನು ಯಾರು ಕೇಳುತ್ತಾರೆ? ಈಗ ನಿನ್ನ ಕಾಲ, ಸುಖಪಡು."

ಲೂಸಿ ಮಾಧವನನ್ನು ಮನಸಾರೆ ಮೆಚ್ಚಿಕೊಂಡಿದ್ದಳು. ಅವನ ರೂಪ ಕ್ಕಾಗಿ ಅವಳೂ ಮಾರುಹೋಗಿದ್ದಳು. ತನ್ನ ಮತ್ತು ಮಾಧವನ ವಿಷಯವಾಗಿ ಅನೇಕ ಸುಂದರ ಸ್ವಪ್ನಗಳನ್ನೇ ಕಂಡಳು.

ಲೂಸಿಯ ಸಿಂಗಾರ ದಿನದಿನಕ್ಕೆ ಹೆಚ್ಚಾಗತೊಡಗಿತು. ಮಾಧವನನ್ನು ಇನ್ನೂ ಹೆಚ್ಚು ಹೆಚ್ಚಾಗಿ ಆಕರ್ಷಿಸಲು ಎಷ್ಟು ಮಾಡಬೇಕೋ ಅಷ್ಟೂ ತನ್ನ ಸೌಂದರ್ಯಸಾಧನೆಯಲ್ಲಿಯೇ ಮುಳುಗಿದಳು. ಮಾರನೆಯ ದಿನ ಲೂಸಿ ಮಹಡಿಯ ಮೆಟ್ಟಲುಗಳನ್ನು ಹತ್ತುತ್ತಿರುವಾಗ, ಬಾಗಿಲಲ್ಲಿಯೇ ಇವಳ ಬರವಿ ಗಾಗಿ ಕಾದು ನಿಂತ ಮಾಧವ ಕಾಣಿಸಿದ. ಲೂಸಿ ಅವನನ್ನು ನೋಡಿದ ಕೂಡಲೇ ಮುಗುಳ್ನಗೆಯಿಂದ 'ಗುಡ್-ಮಾರ್ನಿಂಗ್' ಎಂದಳು. ಮಾಧವ ಪ್ರತಿಯಾಗಿ 'ಗುಡ್-ಮಾರ್ನಿಂಗ್' ಹೇಳಿದ. ಲೂಸಿ ದೇಹವನ್ನು ಹಾವಿನಂತೆ ಬಳುಕಿಸುತ್ತಾ, ಒಯ್ಯಾರದಿಂದ, ಒನಪಿನಿಂದ ಮೆಟ್ಟಲು ಹತ್ತಿ ಮೇಲೆ ಹೋದಳು.

ಲೂಸಿಯ ಸ್ನೇಹದಿಂದ ಮಾಧವ ಸ್ಫೂರ್ತಿ ಹೊಂದಿದ. ಕಾರ್ಖಾನೆಯ ಲ್ಲೆಲ್ಲಾ ತಿರುಗಾಡಿ, ಕೆಲಸಗಾರರಿಗೆ ಸಲಹೆ ಕೊಟ್ಟ. ಹಳೆಯ ಲೆಕ್ಕಗಳನ್ನೆಲ್ಲಾ ಪರಿಶೀಲನೆ ಮಾಡಿದ. ಅಂದಿನ ಅಂಚೆಯ ಕಾಗದಗಳನ್ನೆಲ್ಲಾ ನೋಡಿ, ಉತ್ತರ

ಬರೆಯಬೇಕಾದುದಕ್ಕೆ ಬರೆದು ಕಳಿಸಿದ. ಅಂದಿನ ದಿನದ ವ್ಯಾಪಾರ, ಆರ್ಡರು ಗಳು ತಯಾರಾಗಿರುವ ಸಾಮಾನುಗಳು ಎಲ್ಲಾ ವರದಿಯನ್ನೂ 'ಜನರಲ್ ಮೇನೇಜರಿ'ಗೆ ತಿಳಿಸಿದ. ಅವನ ಕಾರ್ಯದಕ್ಷತೆಯನ್ನು ನೋಡಿ ಅವರೂ ಸಂತಸ ಗೊಂಡರು. ಹೀಗೆ ದಿನವಿಡೀ ಉತ್ಸಾಹಭರಿತನಾಗಿ ಮಾಧವ ಮೇಲ್ವಿಚಾರಣೆ ಯನ್ನು ನೋಡಿಕೊಳ್ಳುತ್ತಲೇ ಇದ್ದ.

ವೇಳೆಯಾದೊಡನೆ ಮಾಧವ ನೇರವಾಗಿ ಸರ್ಕಲ್ ಬಳಿ ಹೋಗಿ ನಿಂತ. ಲೂಸಿ ತನ್ನ ಮನೆಗೆ ಹೋಗುವಾಗ, ಆ ಸರ್ಕಲ್‌ನ್ನು ಹಾದೇ ಹೋಗಬೇಕು. ಮಾಧವ ಕಳೆದ ಎಂಟು ದಿನಗಳಿಂದ ಅವಳು ಹೋಗುವ ಹಾದಿಯನ್ನು ಕಂಡು ಕೊಂಡಿದ್ದ. ಕೈಯಲ್ಲಿ ಪ್ಲಾಸ್ಟಿಕ್-ಬ್ಯಾಗ್ ಹಿಡಿದು, ಟಪ್-ಟಪ್ ಎಂದು ಬೂಟಿನ ಶಬ್ದ ಮಾಡುತ್ತಾ ಲೂಸಿ ನಡೆದು ಬಂದಳು. ಮಾಧವ ಅವಳನ್ನು ನೋಡಿದ ಕೂಡಲೇ 'ಹಲ್ಲೋ....!' ಎಂದು ಕೂಗಿದ. ಲೂಸಿ ತಿರುಗಿ ನೋಡಿ ದಳು, ತನ್ನನ್ನು ಕರೆದವರಾರೆಂದು. ರಸ್ತೆಯ ಬಳಿಯಲ್ಲಿಯೆ ನಗುತ್ತ ನಿಂತಿದ್ದ ಮಾಧವ ಕಾಣಿಸಿದ. ಲೂಸಿ ನಿಧಾನವಾಗಿಯೆ ಅವನ ಬಳಿ ಬಂದಳು. "ಆದೇನು ಅಷ್ಟು ಆತುರ ಮನೆಗೆ ಹೋಗಲು?" ಎಂದು ಕೇಳಿದ.

"ಕೆಲಸ ಮುಗಿದ ಮೇಲೆ ಮನೆಗಲ್ಲದೆ ಇನ್ನೆಲ್ಲಿ ಹೋಗಬೇಕು? ಇಲ್ಲಿ ನನ ಗಾಗಿ ಯಾರು ಕಾಯುತ್ತಾರೆ?" ಎಂದು ಮುಖ ನೋಡಿದಳು.

"ನಾನು."

"ನೀವು ಇಲ್ಲಿ ನಿಂತಿರುವುದು ನನಗೆ ತಿಳಿಯಲಿಲ್ಲವಲ್ಲಾ? ನಿಮ್ಮನ್ನು ಗಮ ನಿಸದೆಯೇ ಹೋದುದಕ್ಕಾಗಿ ಕ್ಷಮಿಸಿರಿ."

"ಕಾಫಿಯನ್ನಾದರೂ ತೆಗೆದುಕೊಂಡು ಹೋಗುವಾ, ಬನ್ನಿ." ಎಂದು ಮಾಧವ ಹೊರಟು ನಿಂತ. ಲೂಸಿಯೂ ಅವನನ್ನನುಸರಿಸಿದಳು. ಮಾಧವ ಹತ್ತಿರದಲ್ಲೇ ಇದ್ದ ರೆಸ್ಟೋರಾಂಟನ್ನು ಪ್ರವೇಶಿಸಿದ. ಫ್ಯಾಮಿಲಿ ರೂಮಿಗೇ ಹೋಗಿ ಕುಳಿತರು. ಸರ್ವಂಟ್ ಬಂದು ವಿಚಾರಿಸಿದ.

"ನೀನೇ ಹೇಳು ಲೂಸಿ, ನಿನಗೆ ಬೇಕಾದ್ದು." ಮಾಧವ ನುಡಿದ.

"ನನಗೆ ಬರಿಯ ಕಾಫಿ ಸಾಕು, ತಿಂಡಿ ಏನೂ ಬೇಡ."

ಎರಡು ಕಾಫಿ, ಎರಡು ದೋಸೆ, ಐಸ್‌ಕ್ರೀಮ್, ಮಾಧವ ಸರ್ವಂಟ್‌ಗೆ ಹೇಳಿದ. ಅವನು ಕೂಡಲೇ ಹೊರಟುಹೋದ.

"ಅದೆಲ್ಲಾ ಯಾಕೆ ಹೇಳಿದಿರಿ? ಈಗ ನನಗೆ ಹಸಿವೆಯಿಲ್ಲವೇ ಇಲ್ಲ."

ಲೂಸಿ ಮೈಮುರಿಯುತ್ತಾ ಹೇಳಿದಳು.

"ಪರವಾ ಇಲ್ಲ, ನನಗಾಗಿ ತೆಗೆದುಕೋ, ನಿನಗೆ ಬೇಡವಾದರೂ."

ಲೂಸಿ ಯಾವ ಮಾತನ್ನೂ ಆಡದೆ, ಬ್ಯಾಗಿನೊಳಗಿಂದ ಸಿಗರೇಟು ತೆಗೆದು ಹತ್ತಿಸಿ ಸೇದುತ್ತ ಸುಳಿಸುಳಿಯಾಗಿ ಹೋಗುತ್ತಿರುವ ಅದರ ಹೊಗೆಯನ್ನೇ ನೋಡುತ್ತಾ ಕುಳಿತಳು. ಮಾಧವ ಅವಳನ್ನು ನೋಡಿ ವಿಸ್ಮಿತನಾದ.

"ಓಹೋ, ನೀನೂ ಧೂಮ್ರಪಾನ ಮಾಡುವಿಯಾ ? ನನಗೆ ತಿಳಿದೇ ಇರಲಿಲ್ಲ!"

"ಯಾಕೆ ನಿಮಗೆ ಹಿಡಿಸುವುದಿಲ್ಲವೆ? ಹಾಗಾದರೆ ಹೊರಗೆ ಹೋಗುವೆ." ಲೂಸಿ ಕುರ್ಚಿಯಿಂದೆದ್ದಳು.

"ಹಾಗೇನೂ ಇಲ್ಲ. ನೀನು ಇಲ್ಲಿಯೇ ಕೂತುಕೋ. ಅದರಿಂದ ನನಗೆ ಏನೂ ತೊಂದರೆ ಇಲ್ಲ." ಎಂದು ಅವಳು ಏಳುವುದನ್ನು ನೋಡಿ ಗಾಬರಿಯಾಗಿ ಮಾಧವ ನುಡಿದ. ಮಾಧವನಿಗೆ ನಿಜಕ್ಕೂ ಸಿಗರೇಟು ಎಂದರೇ ಆಗುತ್ತಿರಲಿಲ್ಲ. ಆದರೂ ಅದು ತನ್ನ ಲೂಸಿಗೆ ಪ್ರಿಯವಾಗಿದ್ದರಿಂದ, ಆ ಸಿಗರೇಟಿನ ಹೊಗೆ, ವಾಸನೆ, ಅವನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಲೂಸಿಗೆ ಬೇಕಾದ್ದು ತನಗೂ ಬೇಕು ಎಂಬ ಮನೋಭಾವ ಅವನಲ್ಲಿ ಉಂಟಾಗಿತ್ತು. ಅವಳಿಗಾಗಿ ಅವನು ಏನು ಬೇಕಾದರೂ ಸಹಿಸಲೂ, ಮಾಡಲೂ ಸಿದ್ಧನಿದ್ದ.

ಉಪಹಾರದ ಜೊತೆಗೂ ಮಾತು ನಡೆದೇ ಇತ್ತು. ಮಾಧವ ಮಾತಾಡುತ್ತಾ ಆಡುತ್ತಾ, ಲೂಸಿಯ ಸಮೀಪಕ್ಕೆ ಬಂದ. ಲೂಸಿ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಮಾಧವ ಉಕ್ಕಿ ಬರುತ್ತಿದ್ದ ಬಯಕೆಯನ್ನು ತಡೆಯಲಾರದವನಾದ. ಅವನ ಹೃದಯದ ಬಡಿತ ಜೋರಾಗಿ ಕೇಳುತ್ತಿತ್ತು. ಮಾಧವ ಲೂಸಿಯ ಕೈಯನ್ನು ಮೃದುವಾಗಿ ಹಿಡಿದು ಅದುಮಿದ. ಅವನ ಮೈ ರೋಮಾಂಚಗೊಂಡಿತು. "ಲೂಸೀ, ಡಿಯರ್!" ಎಂದು ನುಡಿದ. ಮಾಧವನ ಆ ಒಂದು ಮಾತಿನಲ್ಲಿ ಅವನ ಬಯಕೆ ಎಲ್ಲಾ ವ್ಯಕ್ತವಾಗುತ್ತಿತ್ತು.

"ಏನು ಡಾರ್ಲಿಂಗ್?" ಲೂಸಿ ಅವನ ಕೈಯನ್ನು ನೇವರಿಸಿದಳು. ಅವಳ ಮಾತಿನಿಂದ ಉತ್ತೇಜಿತನಾದ ಮಾಧವ ಅವಳ ತೀರಾ ಸಮೀಪಕ್ಕೆ ಸರಿದ. ಅವನ ಆ ಕಾತುರತೆಯನ್ನು ನೋಡಿ ಲೂಸಿ ಭಯಗೊಂಡು "ನೀವು ಈಗ ಎಲ್ಲಿ ಇರುವಿರಿ ತಿಳಿಯಿತೆ? ಇದು ಮನೆಯಲ್ಲ ಹೋಟೆಲ್. ಹೀಗೆ ಪರವಶ

ರಾದರೆ ಹೇಗೆ ಸಾಧ್ಯ? ನಡೆಯಿರಿ. ಮನೆಗೆ ಹೋಗುವಾ." ಎಂದು ಲೂಸಿ ಕೈಬಿಡಿಸಿಕೊಂಡು ಎದ್ದು ನಿಂತಳು. ಮಾಧವ ನಿರಾಶೆಗೊಂಡು "ನಾನು ನಿನಗಾಗಿ, ಎಷ್ಟು ಆತುರನಾಗಿದ್ದೇನೆ ತಿಳಿಯಿತೆ ಲೂಸಿ?" ಎಂದ.

"ಯಾವುದಕ್ಕೂ ಮುಂಚೆ ಮನೆಗೆ ಹೋಗುವಾ ನಡೆಯಿರಿ" ಲೂಸಿ ರೂಮಿನಿಂದ ಹೊರಬಿದ್ದಳು. ವಿಧಿಯಿಲ್ಲದೆ ಮಾಧವನೂ ಹೊರಟ. ದಾರಿಯುದ್ದಕ್ಕೂ ಅವರ ಮಾತು ನಡೆದೇ ಇತ್ತು.

ಲೂಸಿಯ ಮನೆಯ ಹತ್ತಿರ ಬಂದಾಗ "ಮನೆಗೆ ಯಾವಾಗ ಬರುವೆ?" ಎಂದು ಮಾಧವ ಕೇಳಿದ.

"ಸನ್‌ಡೇ, ಬರುತ್ತೇನೆ. ಗುಡ್‌ಈವನಿಂಗ್" ಎಂದು ಲೂಸಿ ಮಾಧವನ ಉತ್ತರಕ್ಕಾಗಿ ನಿಲ್ಲದೆ ನಡೆದೇ ಬಿಟ್ಟಳು. ಮಾಧವ ಅವಳು ಹೋದ ದಾರಿಯನ್ನೇ ನೋಡುತ್ತಾ ನಿಲ್ದಾಣದ ಕಡೆ ತೆರಳಿದ.

ಪ್ರತಿ ದಿನವೂ ಆರು ಗಂಟೆಗೇ ಬರುವವರು ಈ ದಿನ ಯಾಕೆ ಇನ್ನೂ ಬಂದಿಲ್ಲ, ಎಂದು ಸರೂ ಮನೆಯ ಹೊರಗೂ ಒಳಗೂ ಲಾಳಿಯಂತೆ ತಾರಾಡಿದಳು. ಯಾವುದೋ ಭೀತಿ ಅವಳನ್ನು ಕಾಡುತ್ತಿತ್ತು. ಸರೂವಿನ ಮುಖದ ವರ್ಚಸ್ಸೇ ಬದಲಾಯಿಸಿ ಬಿಟ್ಟಿದ್ದಿತು.

ರೂಪಾ ಕೆಲಸವೆಲ್ಲಾ ಮುಗಿಸಿ ಬಂದು "ಯಾಕೆ ಬಹನ್ ಹೀಗೆ ಇದ್ದೀರಿ? ಇತ್ತೀಚೆಗೆ ಬಹಳ ಇಳಿದುಹೋಗಿರುವಿರಲ್ಲಾ !" ಎಂದು ಮರುಕಗೊಂಡು ಹೇಳಿದಳು.

"ನಿನ್ನ ಸ್ಥಿತಿಯೇ ನನಗೂ ಬಂದಿದೆ ರೂಪಾ. ಅವರು, ಆ ದಿನ ಬಂದಿದ್ದಳಲ್ಲಾ ಆ ಲೂಸಿಯ ಜೊತೆಗೇ ಯಾವಾಗಲೂ ಇರುತ್ತಾರೆ. ನನ್ನನ್ನು ಕೇಳುವುದೇ ಇಲ್ಲ."

"ನೀವೇಕೆ ಕಣ್ಣಾರೆ ನೋಡಿಯೂ ಸುಮ್ಮನಿರುವಿರಿ? ಹಾಗೆಲ್ಲಾ ಮಾಡಬಾರದು ಎಂದು ಹೇಳಬಾರದೆ? ನಿಮ್ಮ ಹಾಗೆ ಪ್ರತ್ಯಕ್ಷವಾಗಿ ನಾನೇನಾದರೂ ನೋಡಿದ್ದರೆ, ನಾನು ಏನೇ ಆಗಲೀ ಅವರನ್ನು ಹಾಗೆಯೇ ಬಿಡುತ್ತಿರಲಿಲ್ಲ."

"ಅದೆಲ್ಲಾ ಸಾಧ್ಯವಿಲ್ಲ ರೂಪಾ. ಅವರು ಆಕೆಗಾಗಿ ಹಂಬಲಿಸಿ, ವಿಲಪಿಸಿದ ಬಗೆಯನ್ನು ನೀನು ನೋಡಿದ್ದರೆ, ಹಾಗೆ ಹೇಳುತ್ತಿರಲಿಲ್ಲ. ನಾನು ಇರುವುದು ಯಾತಕ್ಕಾಗಿ? ಅವರನ್ನು ಸುಖವಾಗಿರಿಸುವುದಕ್ಕಾಗಿ. ಅವರಿಗೆ ನನ್ನಲ್ಲಿ ತೃಪ್ತಿಯಾಗಲಿಲ್ಲವೆಂದು ಕಾಣುತ್ತೆ. ಅವರನ್ನು ತೃಪ್ತಿಪಡಿಸುವ, ಹರ್ಷಗೊಳಿಸುವ, ಆನಂದವಾಗಿರಿಸುವ ಶಕ್ತಿ ಅವಳಲ್ಲಿದೆಯೆಂದು ಕಾಣುತ್ತೆ. ಅದಕ್ಕೇ ಅವರು ಅವಳಿಗೆ ಮಾರುಹೋದರು. ಈಗ ಅವಳ ಸಹವಾಸದಲ್ಲಿ ಅವರು ಅತ್ಯಂತ ಹರ್ಷಯುತರಾಗಿದ್ದಾರೆ, ಅಷ್ಟೇ ಸಾಕು. ನನಗೆ ಇನ್ನಾವ ಸುಖವೂ ಬೇಕಿಲ್ಲ."

"ಅದೇನೋ ನಿಮ್ಮ ಮಾತುಗಳೇ ನನಗೆ ಹಿಡಿಸುವುದಿಲ್ಲ ಬಹನ್. ನಿಮುಗೂ ನನ್ನ ಗಾಳಿಯು ಬೀಸಿದಂತೆ ಕಾಣುತ್ತೆ. ಈ ಹೆಣ್ಣು ಜನ್ಮವನ್ನು ದುಃಖ ಅನುಭವಿಸಲಿಕ್ಕಾಗಿಯೇ ಹುಟ್ಟಿಸಿದ್ದಾನೆಂದು ಕಾಣುತ್ತೆ, ದೇವರು. ಇದೆಲ್ಲಾ ನೋಡಿದರೆ, ಮದುವೆಯಾಗದೇ ಇರುವುದು ಒಳ್ಳೆಯದೆನಿಸುತ್ತದೆ. ಯಾವ ತಾಪತ್ರಯವೂ ಇಲ್ಲದೆ ಹಾಯಾಗಿರಬಹುದು."

ಸಮಾನವಾದ ಕಷ್ಟಗಳನ್ನನುಭವಿಸಿದ ಆ ಎರಡು ಜೀವಗಳೂ ಒಂದಾಗಿದ್ದುವು. ಇಬ್ಬರಿಗೂ ಬೇರೆ ಯಾವ ಆಪ್ತೇಷ್ಟರೂ ಇರಲಿಲ್ಲ. ರೂಪಾ, ದುಃಖಗೊಂಡಾಗ ಸರೂ, ಸರೂ ವ್ಯಥೆಪಟ್ಟಾಗ ರೂಪಾ, ಹೀಗೆ ಒಬ್ಬರನ್ನೊಬ್ಬರು ಸಂತೈಸುತ್ತಿದ್ದರು. ಸರೂವಿಗೆ ಆಶಾಕಿರಣದಂತೆ ಇರುವ ಒಬ್ಬ ಮಗನಾದರೂ ಇದ್ದ. ಆದರೆ ರೂಪಾಳಿಗೆ ಯಾವುದೂ ಇರಲಿಲ್ಲ. ವಿಜಯ ಅವರಿಬ್ಬರ ಬಳಲಿ ಬೆಂಡಾದ ಜೀವನವನ್ನು, ಸಹಿಸಲು ಸಾಧ್ಯವಾಗುವಂತೆ ಮಾಡಿದ್ದ. ಅವನ ಆ ಮುದ್ದಾದ ಮಾತುಗಳು, ಅವನ ಆಟ-ಪಾಟಗಳು, ಅವನ ಆ ಒಂದು ನಗುವಿನಿಂದ ಅವರು ತಮ್ಮ ಕಷ್ಟವನ್ನೆಲ್ಲಾ ಮರೆತು, ಅವನ ಆಟವನ್ನು ನೋಡಿ ಸಂತಸಗೊಳ್ಳುತ್ತಿದ್ದರು.

ಸರೂ, ರೂಪಾ ಇವರ ಮಾತು ನಡೆದಿರುವಾಗಲೇ ಮಾಧವ ಬಂದ. ರೂಪಾ ಮನೆಗೆ ಹೊರಟುಹೋದಳು. ಸರೂ ಕಾಫಿಯನ್ನು ತರಲು ಅಡುಗೆ ಮನೆಯ ಕಡೆಗೆ ನಡೆದಳು. ಮಾಧವ ಹೇಳಿದ:"ನಾನು ಬರುವಾಗ ಹೋಟೆಲ್‌ಗೆ ಹೋಗಿದ್ದೆ ಸರೂ. ನನಗೆ ಈಗ ಯಾವುದೂ ಬೇಡಾ." ಕೋಟನ್ನು ಕಳಚುತ್ತಾ ಸುತ್ತಲೂ ನೋಡಿ "ವಿಜಯ ಎಲ್ಲಿ? ಕಾಣಿಸುವುದಿಲ್ಲ?" ಎಂದು ಕೇಳಿದ.

"ಆ ಹುಡುಗನ ಜೊತೆ ಹೋಗಿದ್ದಾನೆ. ನಾನೇ ಕಳಿಸಿದೆ?"

"ಹುಡುಗ ಯಾರು? ಅವನ ಜೊತೆಯಲ್ಲಿ ಯಾತಕ್ಕೆ ಕಳಿಸಿದೆ?"

"ನೀವು ಮನೆಗೆ ಬರುವುದೇ ಆರು ಗಂಟೆಯಾಗುತ್ತೆ; ದುಡಿದು, ದಣಿದು ಬರುತ್ತೀರಿ; ಇನ್ನು ಆಮೇಲೆ ತಿರುಗಾಡಲು ಹೋಗುವುದೆಂದರೆ ಹೇಗೆ? ನಮ್ಮ ನಮ್ಮ ಅನುಕೂಲ ಅನಾನುಕೂಲ, ವಿಜಯನಿಗೆ ಹೇಗೆ ತಿಳಿಯುತ್ತದೆ? ಸಾಯಂಕಾಲ ಅವನಿಗೆ ಮನೆಯಲ್ಲಿರುವುದೆಂದರೆ ಬೇಜಾರು. ಎಲ್ಲಿಯಾದರೂ ಹೋಗಬೇಕೆನ್ನುತ್ತಾನೆ. ಅದರಿಂದ ಪಕ್ಕದ ಮನೆಯ ಕೆಲಸದವನ ಮಗ ಸುಮಾರು ಹದಿನೈದು ವರ್ಷದವನು ಅವರ ಮನೆಗೆ ಬರುತ್ತಿದ್ದ. ಅವನನ್ನು ಕೇಳಿದೆ 'ದಿನಾ ಸಂಜೆ ಮಗುವನ್ನು ತಿರುಗಾಡಿಸಿಕೊಂಡು ಬಾ, ತಿಂಗಳಿಗೆ ನಾಲ್ಕು ರೂಪಾಯಿ ಕೊಡುವೆ' ಎಂದು. ಅವನೂ ಒಪ್ಪಿಕೊಂಡ. ಈಗ ಮೂರು ದಿನದಿಂದ ಅವನನ್ನು ಹೊರಗೆ ಆ ಹುಡುಗನ ಸಂಗಡ ಕಳಿಸುತ್ತಿದ್ದೇನೆ."

"ಒಳ್ಳೆಯದಾಯಿತು ಬಿಡು, ತಿರುಗಾಡಿಕೊಂಡು ಬರಲಿ." ಮಾಧವ ಯಾವ ಬಗೆಯ ಭಾವನೆಯೂ ಇಲ್ಲದೆ ನುಡಿದ. ಅವನ ಮಾತು ಎಂದರೆ ಬರಿಯ ಲೂಸಿಯ ಗುಣಗಾನ; ಅವಳ ವರ್ಣನೆ. ಅವೆಲ್ಲಾ ತನಗೆ ಬೇಡವಾದರೂ, ಅದನ್ನು ಹೇಳುವುದರಿಂದ ಪತಿಗೆ ಸಂತೋಷವಾಗುತ್ತದೆ ಎಂಬುದನ್ನು ಅರಿತು, ಸರೂ ಮನಗೊಟ್ಟು ಅವನ ಲೂಸಿಯ ವರ್ಣನೆಯನ್ನು ಕೇಳುತ್ತಿದ್ದಳು. ಅವಳ ಆ ಒಂದು ಸುಖಕ್ಕಾಗಿ ಕಾತರಿಸುತ್ತಿದ್ದ ಮಾಧವ, ಈಗ ಸರೂ ತಾನಾಗಿ ಅವನ ಬಳಿಗೆ ಬಂದು ರಮಿಸಿದರೂ, ಅವಳ ಕಡೆ ಗಮನವನ್ನೇ ಕೊಡುತ್ತಿರಲಿಲ್ಲ. ಅವನ ಈ ಭೀಕರ ಪರಿವರ್ತನೆಗಾಗಿ ಸರೂ ದುಃಖಿಸಿದಳು.

ಮಾಧವ ಹಾಸುಗೆಯ ಮೇಲೆ ಮಲಗಿದ್ದ. ವಿಜಯ ತೊಟ್ಟಿಲಿನಲ್ಲಿ ನಿದ್ದೆ ಹೋಗಿದ್ದ. ಕೆಲಸವೆಲ್ಲಾ ಮುಗಿಸಿ, ಬಾಗಿಲುಗಳಿಗೆ ಸರಿಯಾಗಿ ಚಿಲಕ ಹಾಕಿ, ಕೈಯಲ್ಲಿ ವೀಳ್ಯವನ್ನು ಹಿಡಿದು ಬಂದಳು ಸರೂ. ಅವಳು ಬಂದುದು ನೋಡಿಯೂ ಮಾಧವ ಯಾವದೊಂದು ಉತ್ಸುಕತೆಯನ್ನೂ ತೋರಿಸಲಿಲ್ಲ. ವೀಳ್ಯವನ್ನು ಮಡಿಸಿ, ಸರೂ ಅದನ್ನುಮಾಧವನ ಬಾಯ ಸಮೀಪಕ್ಕೆ ತಂದಳು. ಹಿಂದಿನಂತೆ ಅದನ್ನು ಸ್ವೀಕರಿಸಲು ಮಾಧವ ಇಂದು ಉತ್ಸಾಹಿತನಾಗಲಿಲ್ಲ. ಆ ಒಂದು ವೀಳ್ಯವನ್ನು ತೆಗೆದುಕೊಳ್ಳುವುದಕ್ಕೆ ಅವನು ಎಷ್ಟು ಹೊತ್ತು ಸರೂವನ್ನು ಕಾಡಿಸುತ್ತಿದ್ದ! ಕಡೆಗೆ ಅವಳ ಕಣ್ಣಲ್ಲಿ ನೀರು ಬರುವವರೆಗೂ ಸರಿ ಅವಳನ್ನು ಗೋಳು ಹುಯ್ದುಕೊಳ್ಳುತ್ತಿದ್ದ. ಆದರೆ ಇಂದಿನ ಅವನ ವರ್ತನೆಯೇ ಬೇರೆಯ ತೆರನಾಗಿತ್ತು. ಸರೂ ಬಾಯಿಗೆ ಹಿಡಿದಿದ್ದ ವೀಳ್ಯವನ್ನು ತಾನೇ ತೆಗೆದುಕೊಂಡು

ಬಾಯಿಗೆ ಹಾಕಿಕೊಂಡ. ಸರೂ ಅವನನ್ನೇ ಎವೆಯಿಕ್ಕದಂತೆ ನೋಡಿದಳು. ಮಾಧವ ಯಾವುದೋ ಯೋಚನೆಯಲ್ಲಿ ಮುಳುಗಿದ್ದ. ತನ್ನ ಇದಿರಿಗೆ ಕೂತಿದ್ದ ಸರೂ ಅವನ ಕಣ್ಣಿಗೇ ಕಾಣುತ್ತಿರಲಿಲ್ಲ. ಸರೂ ಅವನ ಸಮೀಪಕ್ಕೆ ಬಂದು ಮೃದುವಾಗಿ ಅವನ ತಲೆ ನೇವರಿಸಿದಳು.

"ನೀವೇಕೆ ಹೀಗೆ ಅನ್ಯಮನಸ್ಕರಾಗಿರುವಿರಿ? ನಿಮಗೆ ಇನ್ನಾವ ಚಿಂತೆ ಇದೆ? ನನ್ನಿಂದ ಹೀಗೇಕೆ ದೂರ ದೂರ ಸರಿಯುತ್ತಿರುವಿರಿ? ನಾನು ಮಾಡಿದ ಅಪರಾಧವಾದರೂ ಏನು ಸ್ವಾಮಿ? ನಾನು ನಿಮ್ಮ ಸರೂ ಅಲ್ಲವೆ? ನಿಮ್ಮ ಮುದ್ದಿನ ವಿಜಯನ ತಾಯಿಯಲ್ಲವೆ? ನನ್ನಿಂದ ಹೀಗೆ ಏಕೆ ಹಿಂದಕ್ಕೆ ಹೋಗುತ್ತಿರುವಿರಿ? ನನ್ನ ಎಂದೆಂದಿಗೂ ಕೈಬಿಡಬೇಡಿ, ನನ್ನ ದೊರೆ!" ಸರೂ ಮನ ಕರಗುವಂತೆ ನಿವೇದಿಸಿದಳು.

ಮಾಧವ ಹೇಳಿದ: "ನನ್ನ ಮನಸ್ಸಿನ ಹೊಯ್ದಾಟ ನಿನಗಿನ್ನೂ ಅರಿವಾಗಿಲ್ಲ ಸರೂ! ನನ್ನ ಹೃದಯದಲ್ಲಿ ಯುದ್ಧವೊಂದು ನಡೆಯುತ್ತಿದೆ. ಸುರಾಸುರ ಯುದ್ಧ ಅದು. ಒಂದು ಕಡೆ ನೀನು, ಇನ್ನೊಂದು ಕಡೆ ಲೂಸಿ. ನೀನು ನನ್ನ ಕೈಹಿಡಿದ ಧರ್ಮಪತ್ನಿ, ನಾನು ನಿನಗೆ ಪತಿ. ನಿನ್ನನ್ನು ನನ್ನ ಜೀವನಾದ್ಯಂತ ನನ್ನ ಕಷ್ಟ-ಸುಖಗಳಲ್ಲಿ ಭಾಗಿಯಾಗಿ ಮಾಡಿಕೊಂಡು ಕಾಪಾಡುವುದು ನನ್ನ ಕರ್ತವ್ಯ. ಇದು ಧರ್ಮದ ರೀತಿಯಲ್ಲಿ. ಅದು ಯಾವ ಹಿಂದಿನ ಜನ್ಮದ ಪುಣ್ಯವೋ, ಪಾಪವೋ, ನನ್ನ ಪ್ರಥಮ ನೋಟದಲ್ಲಿಯೇ ನಾನು ಲೂಸಿಗೆ ಮಾರುಹೋಗಿದ್ದೇನೆ. ಅದು ಒಳ್ಳೆಯದೋ ಕೆಟ್ಟದ್ದೋ ನನಗೆ ಯಾವುದೂ ತಿಳಿಯುತ್ತಾ ಇಲ್ಲ. ನಾನು ಕೂತಾಗ, ನಿಂತಾಗ, ಮಲಗಿದಾಗ ಕೂಡಾ ಅವಳ ಆ ರೂಪು ಕಣ್ಣಿಗೆ ಕಾಣಿಸುತ್ತದೆ. ನನಗಿರುವ ಯೋಚನೆ ಎಲ್ಲಾ ಒಂದೇ. ಅದು ಲೂಸಿ. ಅವಳು ತನ್ನ ಒಂದು ನೋಟದಿಂದ ನನ್ನ ದೇಹ ಮನ ಎರಡನ್ನೂ ಅಪಹರಿಸಿಬಿಟ್ಟಿದ್ದಾಳೆ. ನಾನೀಗ ಅವಳ ಸೂತ್ರದ ಬೊಂಬೆಯಂತಾಗಿದ್ದೇನೆ. ಈ ಇಡೀ ಪ್ರಪಂಚವೇ ನನ್ನ ಪಾಲಿಗೆ ಒಂದು ಭಾಗ, ಆ ಲೂಸಿಯೇ ಒಂದು ಭಾಗ. ಅವಳಿಗಾಗಿ ನಾನು ಏನು ಮಾಡಲೂ ಸಿದ್ಧವಿದ್ದೇನೆ ಸರೂ. ಅವಳಿಗಾಗಿ ನನ್ನ ತಾಯಿ ತಂದೆ, ನನ್ನ ಹೆಂಡತಿಯಾದ ನೀನು, ನನ್ನ ಮಗು ವಿಜಯ, ಕಡೆಗೆ ನನ್ನ ಜಾತಿ, ಮತ, ದೇವರು ಎಲ್ಲವನ್ನೂ ತೊರೆಯಲು ಸಿದ್ಧನಿದ್ದೇನೆ ಸರೂ. ಲೂಸಿ ಇಲ್ಲದ ಬಾಳು ವ್ಯರ್ಥ. ಅವಳನ್ನು ಹೊಂದದೇ ನಾನು ಈ ಜೀವದಿಂದಿರಲಾರೆ ಸರೂ. ನಾನೂ ಅನೇಕ ಯುವತಿಯರನ್ನೂ, ಲೂಸಿಗಿಂತ ಹತ್ತು ಪಾಲು

ಚೆಲುವೆಯಾಗಿರುವವರನ್ನೂ ನೋಡಿದ್ದೇನೆ. ಅದೇನೋ, ಆದಾವ ಕಾರಣವೋ, ಲೂಸಿಯನ್ನು ನೋಡಿದ ಕೂಡಲೇ ಅವಳು ನನ್ನವಳು, ಅವಳನ್ನು ಪಡೆಯ ಬೇಕು ಎಂಬ ಪ್ರಬಲವಾದ ಆಸೆ ಅಂಕುರಿಸಿತು. ಅವಳನ್ನು ಹೊಂದುವ ತನಕ ನನ್ನ ಬುದ್ಧಿ ನನ್ನ ಕೈಲಿ ಇಲ್ಲ ಸರೂ. ಈ ನನ್ನ ಮಾತಿನಿಂದ ನಿನಗೆ ನೋವಾ ಗುತ್ತದೆಂಬುದು ನಿಜ. ಆದರೆ ನಾನು ನನ್ನ ಹೃದಯ ಬಿಚ್ಚಿ ನುಡಿದಿದ್ದೇನೆ. ನಿನ್ನಲ್ಲಿ ಯಾವ ಮುಚ್ಚು ಮರೆಯನ್ನೂ ಮಾಡಿಲ್ಲ. ನೀನು ನನ್ನ ಆತ್ಮತೃಪ್ತಿ ಗಾಗಿ, ನಿನ್ನ ಮನಸ್ಸಿನ ವೇದನೆಯನ್ನು ನನಗಾಗಿ ಸಹಿಸುವೆ ಎಂದು ತಿಳಿದಿರುವೆ ಅಲ್ಲವೇ ಸರೂ? ನೀನು, ನನಗೆ ಸಂತೋಷವಾದರೆ ನೀನೂ ಕೂಡಾ ಸಂತೋ ಷಿಸುವುದಿಲ್ಲವೆ?" ಬಗ್ಗಿದ್ದ ಸರೂವಿನ ತಲೆಯನ್ನು ಮೇಲಕ್ಕೆತ್ತಿ ಹಿಡಿದು ಕೇಳಿದ ಮಾಧವ: "ನನ್ನ ಸಂತೋಷವೇ ನಿನ್ನದು ಅಲ್ಲವೇ ಹೇಳು ಸರೂ, ಅಲ್ಲವೇ?"

ತನ್ನ ಹೃದಯದಲ್ಲಾಗುತ್ತಿರುವ ತಳಮಳವನ್ನಡುಮಿ ಹೇಳಿದಳು ಸರೂ "ನನ್ನದೆನ್ನುವುದು ಯಾವ ಭಾವನೆಯೇ ಆಗಲೀ ನನಗೆ ಇಲ್ಲ ನನ್ನ ದೊರೆ. ನನ್ನ ಸ್ವಾಮಿ ಸುಖದಿಂದಿರುವುದನ್ನು ನೋಡಿ ಸಂತೋಷಪಡುವುದಕ್ಕಿಂತ ಬೇರೆ ಯಾವ ಸುಖವಿದೆ....?" ಸರೂ ಪೂರ್ತಿಯಾಗಿ ಹೇಳಲಾರದೇ ತೊದಲಿದಳು.

"ಹೆಂಡತಿ ಎಂದರೆ ನೀನೀಗ ಸರಿಯಾದ ಹೆಂಡತಿ" ಮಾಧವ ಸರೂವನ್ನು ಮೆಚ್ಚಿಕೊಂಡು "ನನ್ನ ಇಂಗಿತವನ್ನೆಲ್ಲಾ ನೀನು ಬಲು ಬೇಗ ತಿಳಿಯುತ್ತೀ ಸರೂ! ನೀನು ಬಹಳ ಜಾಣೆ!" ಎಳೆಯ ಮಗುವನ್ನು ಜಾಣ ಎಂದು ಹೊಗಳು ವಂತೆ ಮಾಧವ ಸರೂವನ್ನು ಹೊಗಳಿ, ಅವಳ ಉತ್ತರದಿಂದ ಸಂತೋಷ ಗೊಂಡ ಮಾಧವ ಅವಳನ್ನು ಮಗುವಿನಂತೆಯೇ ಮುದ್ದಾಡಿದ. ಆ ಕ್ಷಣಕ್ಕೆ ಅವನಿಗೆ ಸರೂ ಹೆಂಡತಿ ಎಂಬುದೂ ಮರೆತುಹೋದಂತಿತ್ತು.

ಲೂಸಿ-ಮಾಧವರ ಪರಿಚಯ ಬೆಳೆಯುತ್ತಲೇ ಇತ್ತು. ಆಫೀಸಿನಲ್ಲಿ ಲೂಸಿಯನ್ನು ಕಾಣಲಾಗುತ್ತಲಿರಲಿಲ್ಲ. ಅವನ ಕೆಲಸವೇ ಬೇಕಾದಷ್ಟು ಇರು- ತ್ತಿತ್ತು. ಪ್ರತಿ ದಿನ ಸಂಜೆ ಕೆಲಸ ಮುಗಿದ ಮೇಲೆ ಮಾಧವ ಸರ್ಕಲ್ ಬಳಿ ಲೂಸಿಗಾಗಿ ಕಾದಿರುತ್ತಿದ್ದ. ಅವಳು ಬಂದೊಡನೆಯೇ ಇಬ್ಬರೂ ಕೂಡಿ ಎಲ್ಲಿ ಗಾದರೂ ತಿರುಗಾಡಲು ಹೋಗುತ್ತಿದ್ದರು. ಯಾವುದಾದರೂ ಹೋಟೆಲ್ ಒಂದರಲ್ಲಿಯೇ ಉಪಹಾರ ಮುಗಿಯುತ್ತಿತ್ತು. ಮಾಧವ ತನ್ನ ಮನೆಯ ವಿಚಾರ ವನ್ನೆಲ್ಲಾ ಹೇಳಿದ. ತನ್ನ ಹೆಂಡತಿ, ಮಗೂ, ತಂದೆ-ತಾಯಿಯರು ಎಲ್ಲವನ್ನೂ ವಿವರವಾಗಿಯೇ ಹೇಳಿದ. ಮಾಧವ ತನ್ನ ತಂದೆಯ ಆಸ್ತಿ-ಪಾಸ್ತಿಯ ವಿಚಾರ

ವಾಗಿ ಹೇಳಿದಾಗ ಮಾತ್ರ ಲೂಸಿಯ ಕಿವಿ ನೆಟ್ಟಗಾಯಿತು. ಮಾಧವ ಸಾಧಾ ರಣ ಮನುಷ್ಯನೇನೂ ಅಲ್ಲಾ. ಸುಮಾರು ಧನಿಕನೇ ಆಗಿರುವ ಎಂದು ತಿಳಿದು ಲೂಸಿ ಸಮಾಧಾನ ಹೊಂದಿದಳು.

ಒಂದು ದಿನ ಸಂಜೆ, ಹಾಗೆಯೇ ತಿರುಗಾಡುತ್ತಾ ಲೂಸಿ-ಮಾಧವರು ಸಮುದ್ರ ದಂಡೆಯ ವರೆಗೆ ಬಂದಿದ್ದರು. ಆಗಲೇ ಕತ್ತಲಾಗುತ್ತಾ ಬಂದಿತ್ತು. ಬೀಚಿನಲ್ಲಿದ್ದ ಜನರೆಲ್ಲಾ ಚದರಲಾರಂಭಿಸಿದ್ದರು. ದೀಪಗಳು ರಸ್ತೆಯಲ್ಲಿ ಪ್ರಕಾ ಶಿಸುತ್ತಿದ್ದುವು. ಸಮುದ್ರದ ಅಲೆಗಳ ಅರ್ಭಟೆ ಜೋರಾಗಿ ಕೇಳಿಬರುತ್ತಿತ್ತು. ಸಮುದ್ರದ ಗರ್ಜನೆಯಲ್ಲಿ ಬೇರಾವ ಗಲಾಟೆಯೂ ಅಲ್ಲಿರಲಿಲ್ಲ. ಅಲ್ಲಿಯೇ ಒಂದೆಡೆ ಮರಳಿನ ಮೇಲೆ ಲೂಸಿ-ಮಾಧವರು ಕುಳಿತರು. ಮಾಧವನ ಮನ ಸ್ಸನ್ನು ಪೂರ್ತಿಯಾಗಿ ತಿಳಿದುಕೊಳ್ಳಲು ಲೂಸಿ ಬೇಕೂ ಅಂತ ಪ್ರಶ್ನಿಸಿದಳು. "ಡಿಯರ್, ನನಗಾಗಿ ನೀವೇಕೆ ಇಷ್ಟುತೊಂದರೆ ತೆಗೆದುಕೊಳ್ಳುವಿರಿ? ನನ್ನಿಂದಾಗಿ ನಿಮಗೇ ದಿನಾ ಖರ್ಚು. ತಿಂಡಿ ತಿನ್ನುವವಳು ನಾನು, ಕೊಡುವವರು ನೀವು. ಹೀಗೇಕೆ ಮಾಡುವಿರಿ?"

"ಇವೆಲ್ಲಾ ಏನು ಮಹಾ ತೊಂದರೆ ಲೂಸೀ! ನಿನಗಾಗಿ ನಾನು ಏನು ಬೇಕಾದರೂ ಮಾಡುವೆ."

"ಏನು ಬೇಕಾದರೂ?"

"ಹೌದು, ಏನು ಬೇಕಾದೂ ಮಾಡುವೆ. ನೀನು ನನ್ನವಳಾದರೆ ಸಾಕು. ನಾನು ಎಲ್ಲಕ್ಕೂ ಸಿದ್ಧ.

"ಡಿಯರ್, ನಾನೊಂದು ಮಾತು ಹೇಳುವೆ; ಕೋಪಿಸಿಕೊಳ್ಳಬೇಡಿ. ನಿಮಗೆ ಮನೆಯಲ್ಲಿ ಮುತ್ತಿನಂತಹ ಹೆಂಡತಿ ಇದ್ದಾಳೆ. ರತ್ನದಂತಹ ಮಗನಿದ್ದಾನೆ. ನಿಮಗೆ ಕೆಲಸವಿದೆ; ಕೈತುಂಬಾ ಸಂಬಳ ಬರುತ್ತದೆ. ಹೀಗಿದ್ದೂ ನನ್ನಂತಹ ಕೀಳು ಹೆಂಗಸಿಗಾಗಿ ನೀವೇಕೆ ಇಷ್ಟು ಬಳಲುವಿರಿ?"

"ಏನಂದೆ ಲೂಸಿ? ನೀನು ಕೀಳು ದರ್ಜೆಯ ಹೆಂಗಸೇ? ಹಾಗೆಂದವರಿಗೆ ಬುದ್ಧಿಭ್ರಮೆಯಾಗಿದೆ ಎಂದು ತೋರುತ್ತೆ. ನೀನೊಬ್ಬ ಕಲಾದೇವತೆ. ನಿನ್ನ ಪ್ರತಿಯೊಂದು ನಡೆ, ನಡುಗೆ, ಉಡುಗೆ, ಮಾತು, ಎಲ್ಲದರಲ್ಲಿಯೂ ನಿನ್ನದೇ ಆದ ಒಂದು ಬಗೆಯ ಕಲೆಯನ್ನು ಪ್ರದರ್ಶಿಸುವೆ. ನಿನ್ನಂತಹ ದೇವತೆಯನ್ನು ಪಡೆಯಲು ನಿಜವಾಗಿಯೂ ಪುಣ್ಯವಿರಬೇಕು. ಈ ನಿನ್ನ ಮರ್ಮಭೇದಕವಾದ್ದ ಮಾತು ನಿಲ್ಲಿಸು ಲೂಸೀ! ನಾನು ಕೇಳಲಾರೆ. ದೇವರು ನನಗೆ ಈ ಜನ್ಮವನು

ಕೊಟ್ಟಿದ್ದು, ನಿನ್ನನ್ನು ಪಡೆಯುವುದಕ್ಕಾಗಿಯೋ ಏನೋ ಎಂದು ಅನ್ನಿಸುತ್ತದೆ. ನೀನಿಲ್ಲದೆ ನಾನು ಬದುಕಲಾರೆ ಲೂಸಿ. ಇನ್ನು ಎಷ್ಟು ವಿಧದಲ್ಲಿ ಹೇಳಲಿ, ನನಗೆ ನೀನು ಬೇಕು, ಅದಕ್ಕಾಗಿ ನಾನು ಯಾವ ತ್ಯಾಗವನ್ನಾದರೂ ಮಾಡುವೆ ಎಂದು?"

ತನ್ನ ಬಗ್ಗೆ ಅವನಿಗಿರುವ, ಪ್ರೀತಿ, ಗೌರವ, ಆದರ ಸನ್ಮಾನಗಳನ್ನು ನೋಡಿ ಲೂಸಿ, ಮನದೊಳಗೇ ನಕ್ಕಳು. ಎಲ್ಲರಂತೆ ತಾನೂ ಹೆಂಗಸು. ಆದರೆ ಸ್ವಲ್ಪ ಚೆಲುವೆಯಾಗಿರಬಹುದು, ಮೋಹಕಳಾಗಿರಬಹುದು, ಮೃದುವಾಗಿ ಮಾತನಾಡಬಹುದು, ಅಷ್ಟೇ. ಇತರರಲ್ಲಿ ಇರದ ಯಾವ ಆಕರ್ಷಣೆಗಾಗಿ ಮಾಧವ ತನಗಾಗಿ ಒದ್ದಾಡುತ್ತಾನೆ? ತನ್ನಲ್ಲಿ ಇಲ್ಲದ ಗುಣಗಳನ್ನು ಕಲ್ಪಿಸಿ, ತಾನು ಕಲಾದೇವತೆ, ಸೌಂದರ್ಯದ ಖನಿ, ವಾಗ್ದೇವಿ, ಎಂದೆಲ್ಲಾ ಹೊಗಳಿ ತನ್ನನ್ನು ಹೀಗೇಕೆ ಸ್ತುತಿಸುತ್ತಾನೆ ಮಾಧವ? ತನ್ನ ಜನ್ಮವೇ ನನ್ನನ್ನು ಪಡೆಯುವುದಕ್ಕಾಗಿ ಎಂದೆಲ್ಲಾ ಹೇಳುವನಲ್ಲಾ! ಇವನಿಗೆ ಬುದ್ಧಿಭ್ರಮಣೆಯಾಗಿಲ್ಲವಷ್ಟೇ? ಎಂದೆಲ್ಲಾ ಯೋಚಿಸುತ್ತಲೇ ಇದ್ದಳು ಲೂಸಿ.

ಜನರಾರೂ ಬಳಿಯಲ್ಲಿದುದನ್ನು ನೋಡಿ ಮಾಧವ ಉತ್ತೇಜಿತನಾದ. ಲೂಸಿಯ ಸಮೀಪಕ್ಕೆ ಸರಿದು ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡ.

"ಲೂಸೀ, ಇನ್ನು ಎಷ್ಟು ದಿನ ಹೀಗೆ ನನ್ನನ್ನು ನರಳಿಸುವೆ? ನನ್ನ ಮೇಲೆ ದಯೆ ತೋರು ಲೂಸಿ! ನೀನಿಲ್ಲದೆ ನಾನು ಬದುಕಲಾರೆ." ಮಾಧವ ಎಳೆಯ ಮಗುವಿನಂತೆ ಬೇಡಿಕೊಂಡು ಗೋಗರೆದ. ಇವನು ತಗ್ಗಿದಷ್ಟೂ ಅವಳು ಮೇಲೆ ಮೇಲೆ ಏರುತ್ತಿದ್ದಳು. ಅವನನ್ನು ಆ ರೀತಿಯಲ್ಲಿರುವುದನ್ನು ನೋಡುವುದೇ ಲೂಸಿಗೆ ಒಂದು ಬಗೆಯ ಆನಂದವಾಗಿತ್ತು. ಮಾಧವ ಸಮೀಪಕ್ಕೆ ಬರುವವರೆಗೂ ಸುಮ್ಮನಿದ್ದು, ನಂತರ ಅವನಿಂದ ಕೊಸರಿಕೊಂಡು "ಇದೇನಿದು ಹೀಗೆ ಮಾಡುವಿರಿ ಇದು ಬೀಚ್, ಮನೆಯಲ್ಲಾ ತಿಳಿಯಿತೆ?" ಎನ್ನುತ್ತಾ ಅವನನ್ನು ನೋಡಿದಳು. ಆ ಒಂದು ನೋಟಕ್ಕೆ ಮಾಧವ ಮೂರ್ಛಾಹತನಾದ.

"ನಾನು ನಿನ್ನನ್ನು ಹಾಗೆಯೇ ಹೋಗಗೊಡುವುದಿಲ್ಲ ಲೂಸಿ! ಇಂದು ನೀನು ಒಪ್ಪಿಕೊಳ್ಳಲೇಬೇಕು." ಮಾಧವ ಲೂಸಿಯನ್ನು ಗಟ್ಟಿಯಾಗಿ ಹಿಡಿದುಕೊಂಡ. ಅವನ ಬಿಸಿಯುಸಿರು ಅವಳ ಹಣೆಯನ್ನು ಮುಟ್ಟುತ್ತಿತ್ತು. ಆ ಕತ್ತಲೆಯಲ್ಲಿಯೂ ಅವನ ಕಣ್ಣುಗಳು ಹೊಳೆಯುತ್ತಿದ್ದುವು. ಅವನ ಎದೆಯ ಬಡಿತ ಜೋರಾಗಿ ಲೂಸಿಗೂ ಕೇಳುತ್ತಿತ್ತು.

"ಈ ದಿನ ಆಗುವುದಿಲ್ಲ 'ಸ್ವೀಟ್', ಕ್ಷಮಿಸಿರಿ. ಆಗಲೇ ಕತ್ತಲಾಗುತ್ತಾ ಬಂತು. ಮನೆಗೆ ತೀರಾ ಹೊತ್ತಾಗಿ ಹೋದರೆ ಆಂಟೀ ಕೋಪಿಸಿಕೊಳ್ಳು ತ್ತಾರೆ. ನಾಳೆಯ ಭಾನುವಾರ ನೀವು ನಮ್ಮ ಮನೆಗೇ ಬನ್ನಿ. ಈ ಸಲ ನಾನು ನಿಮ್ಮನ್ನು ಕರೆಯುತ್ತೇನೆ. ಆಗ ಏನು ಬೇಕಾದರೂ ಮಾತನಾಡೋಣ. ನನ್ನ ರಾಜಾ, ಖಂಡಿತವಾಗಿ ಬರುವಿರಾ?" ಲೂಸಿ ಮೆಲ್ಲಮೆಲ್ಲನೆ ಅವನ ಹಿಡಿತದಿಂದ ತಪ್ಪಿಸಿಕೊಂಡಳು. ವಿಧಿಯಿಲ್ಲದೆ ಮಾಧವ ಸುಮ್ಮನಾಗಬೇಕಾಯ್ತು. ಲೂಸಿ ಯನ್ನು ಅವಳ ಮನೆಗೆ ತಲುಪಿಸಿ, ಮಾಧವ ತಿರುಗಿ ಮನೆಗೆ ನಡೆದ.

ಭಾನುವಾರ ಬರಲು ಇನ್ನೂ ಮೂರು ದಿನ ಕಾಯಬೇಕು. ಒಂದು, ಎರಡು, ಮೂರು ದಿನಗಳು! ಮಾಧವನಿಗೆ ಆ ಮೂರು ದಿನಗಳು ಮೂರು ಯುಗ ಗಳಂತೆ ಕಂಡುವು. ಲೂಸಿ ತನ್ನನ್ನು ಆಹ್ವಾನಿಸಿದ್ದಾಳೆ. ತಾನು ಅವಳ ಮನೆಗೆ ಹೋಗಬೇಕು. ಅವಳ ಮನೆಗೆ ಬರಿಯ ಕೈಲಿ ಹೋಗುವುದು ಹೇಗೆ? ಏನು ತೆಗೆದುಕೊಂಡು ಹೋಗುವುದು? ಹೂವು, ಹಣ್ಣು; ವಿಳ್ಯದೆಲೆಯನ್ನು ತೆಗೆದು ಕೊಳ್ಳುವುದೋ ಬೇಡವೋ, ಎಲೆ ಅಡಿಕೆ ತೆಗೆದುಕೊಂಡು ಹೋಗಲು ಅವಳು ಬ್ರಾಹ್ಮಣರವಳೇ? ಆದರೆ ಆ ದಿನ ಹೇಳಿದ್ದಳು ಲೂಸಿ 'ನನಗೆ ಬೀಡಾ ಬಹಳ ಇಷ್ಟ' ಎಂದು. ಹಾಗಾದರೆ ಸ್ಪೆಷಲ್ಲಾಗಿ ನಾಲ್ಕು ಬೀಡಾಗಳನ್ನೇ ಕಟ್ಟಿಸಿ ತೆಗೆದು ಕೊಂಡು ಹೋದರಾಯಿತು. ಆಮೇಲೆ ಯಾವುದಾದರೂ ಒಂದು ಸ್ವೀಟ್ ಬೇಡವೇ? ಬರೀ ಸಿಹಿ ತಿಂದರೆ ಬೇಜಾರು. ಅದರಿಂದ ಜೊತೆಗೆ ಯಾವುದಾದ ರೊಂದು ಖಾರ. ಇಷ್ಟೆಲ್ಲಾ ಆಯಿತು. ನನ್ನ ಪ್ರಿಯ ಲೂಸಿಗಾಗಿ ಯಾವುದೂ ಪ್ರೆಸೆಂಟ್ ಬೇಡವೇ? ಏನು ಕೊಡೋದು? ಸೀರೆಯೇ, ಲಂಗವೇ, ಒಡವೆಯೇ, ವಸ್ತುವೇ? ಯಾವುದು? ಉಂಗುರ? ಹೌದು, ಉಂಗುರವೇ ಸರಿಯಾದ ವಸ್ತು. ಅವರಲ್ಲಿ 'ವೆಡ್ಡಿಂಗ್-ರಿಂಗ್' ಎಂದು ಉಂಗುರಕ್ಕೇ ಬಹಳ ಪ್ರಾಧಾನ್ಯತೆ ಕೊಟ್ಟಿ ದ್ದಾರೆ. ಅದರಿಂದ ಅವಳಿಗೆ ತನ್ನ ಹೆಸರಿನ ಉಂಗುರವನ್ನೇ ಕೊಡುವುದು. ಅದು ಲೂಸಿಯ ಬೆರಳಲ್ಲಿ ಹೇಗೆ ಕಾಣುತ್ತದೆ; ಅದನ್ನು ನೋಡಿ ಲೂಸಿ ಎಷ್ಟು ಸಂತೋಷಪಡುತ್ತಾಳೆ; ಹೀಗೇ ಯೋಚಿಸುತ್ತಾ ಮಾಧವ ನಡೆಯುತ್ತಲೇ ಇದ್ದ. ಅಭ್ಯಾಸಬಲದಿಂದ ಅವನ ಕಾಲುಗಳು ಕೋಡಂಬಾಕುಂ ರೈಲ್ವೇ ನಿಲ್ದಾಣದ ಬಳಿ ಸಾಗಿದ್ದುವು. ನಿಲ್ದಾಣವನ್ನು ತಲುಪಿದಾಗಲೇ ಮಾಧವ ತಾನು ಮುಳು ಗಿದ್ದ ಯೋಚನೆಗಳೊಳಗಿಂದ ಎಚ್ಚತ್ತ.

ಅಂದು ಮಾಧವ ಮನೆ ತಲುಪಿದಾಗ ಗಂಟೆ ಒಂಭತ್ತಾಗಿತ್ತು. ಭಾನು

ವಾರದ ದಿನವನ್ನು ನೆನೆಯುತ್ತಾ ಮಲಗಿದ ಮಾಧವನಿಗೆ, ಸ್ವಪ್ನದಲ್ಲೆಲ್ಲಾ ಲೂಸಿಯೇ ಕಾಣಿಸಿದಳು.

ಕಡೆಗೆ ಮಾಧವ ನಿರೀಕ್ಷಿಸುತ್ತಿದ್ದ ಭಾನುವಾರ ಬಂದೇ ಬಿಟ್ಟಿತು. ಆಗ ತಿಂಗಳ ಕೊನೆ. ಲೂಸಿಗೆ ಕಾಣಿಕೆ ಕೊಡಲು, ದುಡ್ಡು ಎಲ್ಲಿಂದ ತರುವುದು? ಮತ್ತೆ ಬರಿಯ ಕೈಲಿ ಹೋಗುವುದಕ್ಕಾಗುವುದಿಲ್ಲ. ಬೇರೆ ಯಾವ ದಾರಿಯೂ ತೋಚದೆ ಮಾಧವ ಸರೂವನ್ನೇ ಕೇಳಲು ನಿರ್ಧರಿಸಿದ.

ವಿಜಯ ತಂದೆಯ ಬಳಿಗೆ ಬಂದು "ಅಣ್ಣಾ ಸಿನೀಮಾ ಹೋಗೋಣ. ನೀನು ನನ್ನ ಕರೆದುಕೊಂಡೇ ಹೋಗೊಲ್ಲಾ. ಟಾ-ಟಾ ಹೋಗೋಣ ಬಾ." ಎಂದು ತಂದೆಯ ಪಂಚೆಯನ್ನು ಹಿಡಿದು ಜಗ್ಗಲಾರಂಭಿಸಿದ.

ಮಾಧವ ಅವನನ್ನೆತ್ತಿ ಮುದ್ದಾಡುತ್ತಾ "ಈಗ ನಾನು ಆಫೀಸಿಗೆ ಹೋಗ ಬೇಕು ಮಗೂ, ನಾಳೆ ಕರೆದುಕೊಂಡು ಹೋಗುತ್ತೇನೆ. ನಿನಗೆ ಪೆಪ್ಪರ್‌ಮೆಂಟ ಎಲ್ಲಾ ತರುವೆ. ನೀನು ಜಾಣನ ಹಾಗೆ ಆಡಿಕೊಂಡಿರು, ಗೊತ್ತಾಯಿತೆ?" ಎಂದು ಉಪಾಯದಿಂದ ವಿಜಯನನ್ನು ಕೆಳಗಿಳಿಸಿ, ಮಾಧವ ಅಡುಗೆಮನೆಗೆ ಹೋದ. ಸರೂ ಬೆಳಗಿನ ತಿಂಡಿಯ ತಯಾರಿಯಲ್ಲಿದ್ದಳು. ಮಾಧವ ಅಲ್ಲಿಯೇ ಒಂದೆಡೆ ಕುಳಿತು "ಸರೂ ನಿನ್ನನ್ನೊಂದು ಮಾತು ಕೇಳುವುದಿದೆ." ಎಂದ.

"ಏನು ಬೇಕಾಗಿತ್ತು?" ಈರುಳ್ಳಿಯನ್ನು ಹೆಚ್ಚುತ್ತಲೇ ಕೇಳಿದಳು ಸರೂ.

"ನನಗೆ ಈಗ ಸ್ವಲ್ಪ ಅರ್ಜೆಂಟಾಗಿ ದುಡ್ಡು ಬೇಕಾಗಿತ್ತು. ನಿನ್ನ ಬಳಿಯಲ್ಲಿ ಏನಾದರೂ ಉಳಿದಿದೆಯೆ ?"

"ನನ್ನ ಬಳಿ ಬರಿಯ ಮೂವತ್ತು ರೂಪಾಯಿ ಇದೆ. ವಿಜಯ ಟ್ರೈಸಿಕಲ್ ಬೇಕೂ ಅಂತ ಆಸೆಪಡುತ್ತಿದ್ದ. ಅದನ್ನು ತೆಗೆದುಕೊಡೋಣಾ ಅಂತ ಉಳಿಸಿದ್ದೆ. ಬೇಕಾದರೆ ಅದನ್ನೇ ತೆಗೆದುಕೊಳ್ಳಿ."

"ಬರಿಯ ಮೂವತ್ತು ರೂಪಾಯಿಯೇ? ಇನ್ನು ನಾಲ್ಕು ರೂಪಾಯಿ ಯಾದರೂ ಬೇಕಿತ್ತು. ಅಷ್ಟು ಇಲ್ಲವೆ ?"

"ನಿಮ್ಮಲ್ಲಿ ನಾನೆಂದಾದರೂ ಸುಳ್ಳು ಹೇಳಿರುವೆನೇ ಸ್ವಾಮಿ? ತೀರಾ ಮನೆಯಲ್ಲಿದ್ದ ಚಿಲ್ಲರೆಯನ್ನೆಲ್ಲಾ ಜೋಡಿಸಿದರೆ ಒಂದೆರಡು ರೂಪಾಯಿಗಳಾಗ ಬಹುದು ಅಷ್ಟೇ."

ಪತಿಯು ದುಡ್ಡು ಕೇಳಿದ. ತನ್ನ ಬಳಿ ಇದ್ದರೆ ಕೊಡುವುದು, ಇಲ್ಲವಾದರೆ

ಇಲ್ಲ ಎನ್ನುವುದು, ಅಷ್ಟೇ ಸರೂವಿಗೆ ತಿಳಿದಿದ್ದು. ಏತಕ್ಕೆ? ಏನು? ಎಂದು ಒಂದು ದಿನವೂ ಪ್ರಶ್ನಿಸಿದವಳಲ್ಲ. ಆದರೂ ಈಗ ಅಷ್ಟು ಹಣಬೇಕಾಗಲು, ಬಂದಿರುವುದಾದರೂ ಏನು? ಬಹುಶಃ ಲೂಸಿಗಾಗಿ ಇರಬಹುದು, ಎಂದು ಕೊಂಡು ಸುಮ್ಮನಾದಳು.

ಮಾಧವ ಮೂರು ಗಂಟೆಗೇ ಮನೆಯಿಂದ ಹೊರಬಿದ್ದ. ತಾನು ಬರುವುದು ತಡವಾಗುವುದೆಂದೂ, ತನಗಾಗಿ ಊಟಕ್ಕೆ ಕಾಯಬಾರದೆಂದೂ ಹೇಳಿ ಹೊರಟುಹೋದ. ನೇರವಾಗಿ 'ಮೂರ್-ಮಾರ್ಕೆಟ್'ಗೆ ಹೋಗಿ ನಾಲ್ಕು ಕುಚ್ಚು ಮಲ್ಲಿಗೆ-ಹೂವು, ಸೇಬು, ದ್ರಾಕ್ಷಿ ಕಿತ್ತಳೆ ಹಣ್ಣುಗಳು, ಐದಾರು ಕಟ್ಟಿದ ಬೀಡಾಗಳೂ ಎಲ್ಲವನ್ನೂ ಒಂದು ಫ್ಯಾನ್ಸಿ ತರಕಾರಿ ಬುಟ್ಟಿಯಲ್ಲಿ ತುಂಬಿಕೊಂಡು, ಪೇಟೆಯ ಕಡೆ ನಡೆದ. ತನಗೆ ಗುರುತಿರುವ ಅಂಗಡಿ ಯೊಂದರಲ್ಲಿ, ಒಂದು ಉಂಗುರವನ್ನು ಖರೀದಿ ಮಾಡಿ, ಅದರ ಮೇಲೆ 'M' ಎಂಬ ಅಕ್ಷರ ಕೆತ್ತಿಸಿಕೊಂಡು ಹೊರಟು ದಾರಿಯಲ್ಲಿಯ ರೆಸ್ಟೋರಂಟ ಒಂದರಲ್ಲಿ ಸ್ವಲ್ಪ ಸಿಹಿ, ಖಾರ ಪೊಟ್ಟಣ ಕಟ್ಟಿಸಿಕೊಂಡು, ಲೂಸಿಯ ಮನೆಗೆ ತಲಪುವ ವೇಳೆಗೆ ಐದು ಗಂಟೆಯೇ ಆಯಿತು. ಲೂಸಿ ಬಾಗಿಲಲ್ಲಿಯೇ ಮುಗುಳ್ನಗೆಯ ಸ್ವಾಗತ ಬಯಸುತ್ತಾ ನಿಂತಿದ್ದಳು.

"ಯಾಕೆ ಇಷ್ಟು ಹೊತ್ತು ಮಾಡಿದಿರಿ ಡಿಯರ್? ನಾಲ್ಕು ಗಂಟೆಯಿಂದ ನಿಮಗಾಗಿಯೇ ಕಾದೂ ಕಾದೂ ಸಾಕಾಯಿತು. ನಿಮ್ಮ ದಾರಿ ನೋಡೀ ನೋಡೀ ನನ್ನ ಕಣ್ಣುಗಳು ನೋಯತೊಡಗಿವೆ." ಎಂದು ಅತಿ ಆಯಾಸ ದಿಂದೆಂಬಂತೆ ಮೈಮುರಿದು ಆಕಳಿಸಿ, ಮಾಧವನನ್ನು ತನ್ನ ರೂಮಿಗೇ ಕರೆದೊಯ್ದಳು. ಮಾಧವ ರೂಮನ್ನು ಸುತ್ತಲೂ ನೋಡಿದ. ಒಂದು ಕಡೆ ಟೇಬಲ್ ಮೇಲೆ ದೊಡ್ಡ ಕನ್ನಡಿ, ಅದರ ಮುಂದೆ, ಟಾಯಲೆಟ್ ಸೆಟ್ ಇದ್ದಿತು. ಅಲ್ಲಿಯೇ ಒಂದು ಕುರ್ಚಿಯೂ ಹಾಕಲ್ಪಟ್ಟಿದ್ದಿತು. ಗೋಡೆಯ ಮೇಲೆ ಲೂಸಿಯದೇ ಮೂರು-ನಾಲ್ಕು ವಿವಿಧ ಭಂಗಿಗಳಲ್ಲಿ ನಿಂತ ಫೋಟೋ ಕಂಗೊಳಿಸುತ್ತಿದ್ದುವು. ಅಲ್ಲಿಯೇ ಇದ್ದ ಸ್ಟಾಂಡ್ ಮೇಲೆ, ಬಟ್ಟೆಗಳು ಓರಣ ವಾಗಿ ಹಾಕಲ್ಪಟ್ಟಿದ್ದುವು. ಅವುಗಳಲ್ಲಿ ಕೆಲವು ಲೂಸಿಯದೇ ಎಂದು ಮಾಧವ ಗುರುತಿಸಿದ. ಕಾಮೋನ್ಮಾದನೆಗಾಗಿ ಕೀಳು ದರ್ಜೆಯ ವಿಲಾಸಮಯವಾದ ಒಂದೆರಡು ಫೋಟೋಗಳೂ ಅಲ್ಲಿ ಕಣ್ಣನ್ನು ಸೆಳೆಯುತ್ತಿದ್ದವು. ಅವುಗಳನ್ನು ನೋಡಿ ಮಾಧವ ಜಿಗುಪ್ಸೆ ಹೊಂದಿದ. ಮಂಚದ ಮೇಲಿದ್ದ ಹಾಸುಗೆ ಹೊದಿಕೆ

ಗಳು ಚೊಕ್ಕಟವಾಗಿಯೇ ಇದ್ದುವು. ಮಾಧವ ಲೂಸಿಯು ಬಗೆ ಯಾವ ಸಂಶಯವನ್ನೂ ಹೊಂದಿರಲಿಲ್ಲ, ಹಾಗೆ ಹೊಂದುವುದೂ ಸಾಧ್ಯವಿರಲಿಲ್ಲ.

ಲೂಸಿ ತಿಂಡಿಯ ತಟ್ಟೆಗಳನ್ನು ಹಿಡಿದು ಒಳಬಂದಳು. ಅವಳ ಹಿಂದೆಯೇ ಅವಳ ಚಿಕ್ಕಮ್ಮನೂ ಬಂದಳು. ಲೂಸಿ ಎದ್ದು ಹೋಗಿ ಹೊರಗಿನಿಂದ ಇನ್ನೊಂದು ಕುರ್ಚಿಯನ್ನು ತಂದು ಹಾಕಿದಳು. ಫಿಲೋಮಿನಾ ಡ್ರೆಸ್ಸಿಂಗ್ ಟೇಬಲ್ ಬಳಿ ಕುಳಿತಿದ್ದಳು. ಲೂಸಿ ಯಾವ ಸಂಕೋಚವೂ ಇಲ್ಲದೆ ಮಾಧವನ ಬಳಿ ಮಂಚದ ಮೇಲೆಯೆ ಕೂತಳು.

"ಇವರು ನಮ್ಮ ಆಂಟೀ, ಫಿಲೋಮಿನಾ." ಎಂದು ಲೂಸಿ ತನ್ನ ಚಿಕ್ಕಮ್ಮನ ಪರಿಚಯವನ್ನು ಮಾಡಿಕೊಡುತ್ತಾ ಹೇಳಿದಳು. ಹಾಗೆಯೇ ಆಂಟೀಯ ಕಡೆ ತಿರುಗಿ, "ಇವರು ನಮ್ಮ ಮ್ಯಾನೇಜರ ಮಾಧವರಾವ್." ಎಂದಳು. ಮಾಧವ ಅವಳ ಕಡೆ ನೋಡಿ 'ನಮಸ್ತೆ' ಎಂದು ಕೈಜೋಡಿಸಿದ. ಪ್ರತಿಯಾಗಿ ಫಿಲೋಮಿನಾ ನಕ್ಕು ಕೈ ಮುಗಿದು "ನಿಮ್ಮ ಬಗ್ಗೆ ನಮ್ಮ ಲೂಸಿಗೆ ಬಹಳ ಗೌರವ. ಯಾವಾಗಲೂ ನಿಮ್ಮ ವಿಷಯವನ್ನೇ ಹೇಳುತ್ತಿರುತ್ತಾಳೆ. ನೀವು ದೊಡ್ಡ ಮನಸ್ಸು ಮಾಡಿ ಬಂದುದು ಬಹಳ ಸಂತೋಷ." ಎಂದು ಒಂದು ತರಹದ ಕೃತ್ರಿಮ ನಗೆ ನಕ್ಕಳು. ಕೃತ್ರಿಮ ದಂತಪಂಕ್ತಿ ಆಗ ಹೊರಗೆ ಬಂದು ಒಳಗೆ ಹೋದುವು. ಅಲ್ಲಿಂದ ಲೂಸಿ ಎದ್ದು ಎಲ್ಲರಿಗೂ ತಿಂಡಿ ಕೊಟ್ಟಳು. ಮಾಧವ ತಟ್ಟೆಯಲ್ಲಿರುವ ತಿಂಡಿಯನ್ನು ನೋಡಿ ಮುಖ ಮುದುಡಿದ. ಅದನ್ನು ನೋಡಿ ಲೂಸಿ "ಯಾಕೆ ನಿಮಗೆ ಆಮ್ಲೆಟ್, ಕೇಕ್ ಯಾವುದೂ ಸೇರುವುದಿಲ್ಲವೆ? ಇವುಗಳೆಂದರೆ ನನಗೆ ಬಹಳ ಆಸೆ. ನಿಮಗಾಗಿ ನಾನು ತಯಾರಿಸಿರುವೆ." ಎಂದು ಕೊರಳು ಕೊಂಕಿಸಿ ಆ ಆಕರ್ಷಕ ನೋಟ ವನ್ನು ಬೀರಿದಳು.

"ಕ್ಷಮಿಸು ಲೂಸಿ, ನನಗೆ ಇವುಗಳ ಅಭ್ಯಾಸವಿಲ್ಲ. ಬರಿಯ ಕಾಫಿ ಯೊಂದೇ ಸಾಕು." ಎಂದು ಆಕೆಯ ಆ ದೃಷ್ಟಿಪಾತಕ್ಕೆ ಹತಚೇತನನಾಗಿ ಬೇಡಿಕೊಂಡ ಮಾಧವ.

"ಹೋಗಲಿ ಬಿಡು ಲೂಸಿ, ಅಭ್ಯಾಸವಿಲ್ಲದವರಿಗೆ, ಏಕೆ ಬಲವಂತ ಮಾಡುವೆ?" ಎಂದು ಫಿಲೋಮಿನಾ ತನ್ನ ದೃಷ್ಟಿಯನ್ನು ಮಾಧವನ ಬುಟ್ಟಿಯ ಕಡೆಗೆ ಹರಿಯಿಸಿ "ಇದೇನು ಬುಟ್ಟಿ ಬೇರೆ ಬಂದಿರುವ ಹಾಗಿದೆ?" ಎಂದು ಕೇಕ್ ಒಂದನ್ನು ಬಾಯಿಗೆ ಹಾಕಿದಳು.

"ಓ, ಅಂದ ಹಾಗೆ ಲೂಸಿ, ಮರೆತೇ ಹೋಗಿತ್ತು. ಅದರಲ್ಲಿ ತಿಂಡಿ ಇದೆ. ತೆಗೆದು ಎಲ್ಲರಿಗೂ ಕೊಡು. ನೋಡು ಅದರ ಗಮನವೇ ಮರೆತುಹೋಗಿತ್ತು." ಮಾಧವ ಪಶ್ಚಾತ್ತಾಪದ ಧ್ವನಿಯಲ್ಲಿ ಹೇಳಿದ.

ಲೂಸಿ ಕೈತೊಳೆದುಕೊಂಡು ಬಂದು ಬುಟ್ಟಿಯಲ್ಲಿದ್ದ ಹಣ್ಣು, ತಿಂಡಿ, ಹೂವು ಎಲ್ಲಾ ಹೊರತೆಗೆದಳು. "ಓಹೋ, ಏನೆಲ್ಲಾ ಬಹಳ ತಂದಿದ್ದೀರಿ!" ಎನ್ನುತ್ತಾ ಪೊಟ್ಟಣ ಬಿಚ್ಚಿ ಮಾಧವನಿಗೆ ತಟ್ಟೆಯಲ್ಲಿ ಹಾಕಿ ಕೊಟ್ಟಳು.

"ನೀನೂ ತೆಗೆದುಕೋ, ಎಲ್ಲವನ್ನೂ ನನಗೇ ಹಾಕಿಬಿಟ್ಟೆಯಲ್ಲಾ?" ಮಾಧವ ಕೇಳಿದ.

"ನಾವು ಈಗ ತಾನೇ ನಿಮ್ಮ ಪಾಲಿನ ತಿಂಡಿಯನ್ನೂ ನಾವೇ ತಿಂದು ಮುಗಿಸಲಿಲ್ಲವೇ? ನೀವು ಏನೂ ತೆಗೆದುಕೊಂಡಿಲ್ಲ. ನೀವು ತಿನ್ನಿ." ಎಂದು ಲೂಸಿ ಉಪಚಾರ ಹೇಳಿದಳು.

"ನಿನಗಾಗಿ ಅವರು ಅಷ್ಟೊಂದು ಹೂವು ತಂದಿದ್ದಾರೆ. ಅವನ್ನು ಮುಡಿದು ಕೊಳ್ಳಲು ನಿನಗೆ ಜಡೆಯೇ ಇಲ್ಲವಲ್ಲಾ ಲೂಸಿ?" ಎಂದು ಫಿಲೋಮಿನಾ ವ್ಯಂಗ್ಯವಾಡಿದಳು.

"ನಾನೇನೂ ಅವರ ಆಶಾಭಂಗ ಮಾಡುವುದಿಲ್ಲ ಆಂಟೀ, ನೀನೇ ನೋಡುತ್ತಿರು, ನಾನು ಹೂವು ಮುಡಿದುಕೊಳ್ಳುವುದನ್ನು." ಎಂದು ಲೂಸಿ ತನ್ನ ತಲೆಗೂದಲನ್ನೆಲ್ಲಾ ಸೇರಿಸಿ ಒಂದು ರಿಬ್ಬನ್ ಕಟ್ಟಿಕೊಂಡಳು. ಹಾಗೆಯೇ ಹೂವನ್ನು ಚಿಕ್ಕಮ್ಮನಿಗೂ ಮುಡಿಸಿ ತಾನೂ ತಲೆಯ ಮೇಲೆ ಹೇರಿಕೊಂಡಳು. ಹೂವು ಮುಡಿದು ಅಭ್ಯಾಸವಾಗಿರದ ಲೂಸಿ, ಹೂವು ಮುಡಿದಿರುವುದನ್ನು ನೋಡಿದರೆ ಅಂದೊಂದು ಹೊರೆಯಂತೆಯೇ ಕಾಣುತ್ತಿತ್ತು.

"ಈಗ ನೋಡು ಆಂಟೀ, ಹೇಗೆ ಕಾಣುತ್ತೇವೆ?"

"ನನ್ನನ್ನು ಯಾಕೆ ಕೇಳುವೆ? ಕೇಳುವವರನ್ನು ಕೇಳು. ಅವರು ಸರಿಯಾಗಿ ಹೇಳುತ್ತಾರೆ." ಎಂದು ಅರ್ಥವಿಟ್ಟು ಉತ್ತರಿಸಿ, "ನಾನಿಲ್ಲೇ ಸ್ವಲ್ಪ ಬಜಾರಿಗೆ ಹೋಗಿ ಬರುವೆ ಲೂಸಿ. ಅವರಿಗೆ ಬೇಕಾದರೆ ಇನ್ನೂ ಸ್ವಲ್ಪ ಕಾಫಿ ಕೊಡು. ಫಿಲ್ಟರ್‌ನಲ್ಲಿಯೇ ಡಿಕಾಕ್ಷನ್ ಇದೆ. ಬಿಸಿ ಮಾಡಿಕೊಡು. ಮನೆಯ ಕಡೆ ಜೋಪಾನ" ಎಂದು ಫಿಲೋಮಿನಾ ಹೊರಟುಹೋದಳು.

"ನಿಮ್ಮ ಆಂಟೀ ಸೂಕ್ಷ್ಮಜ್ಞರು. ಇಲ್ಲದ ಕೆಲಸವನ್ನು ಹುಡುಕಿಕೊಂಡು ಹೋದರು." ಎಂದು ಮಾಧವ ತನಗೆ ಬೇಕಾದಂತೇ ನಡೆಯಿತೆಂದು ಮೆಚ್ಚಿ ನುಡಿದ.

"ನೀವು ಇಲ್ಲಿ ಬಂದಿರುವುದು ಏತಕ್ಕೆ ಎಂಬುದು ಅವಳಿಗೆ ತಿಳಿಯುವು ದಿಲ್ಲವೆ ?" ಎಂದು ಹಾವಿನಂತೆ ಬಳುಕುತ್ತಾ ಹೋಗಿ ಲೂಸಿ ಬೀದಿಯ ಬಾಗಿಲು ಹಾಕಿಕೊಂಡು ಬಂದಳು.

"ಎಲ್ಲಿ ನಿನ್ನ ಕೈ ತೋರಿಸು ಲೂಸಿ ?" ಮಾಧವ ಲೂಸಿಯ ಕೈಹಿಡಿದು, ತಾನು ತಂದಿದ್ದ ಉಂಗುರವನ್ನು ಅವಳ ಬೆರಳಿಗೆ ತೊಡಿಸಿದ. ಅದರ ಅಳತೆ ಸರಿ ಯಾಗಿಯೇ ಇದ್ದು, ಅವಳಿಗಾಗಿಯೇ ಹೇಳಿ ಮಾಡಿಸಿದ್ದಂತೆ ಅದು ಹೊಂದಿ ಕೊಂಡಿತು.

"ಓ, ಎಕ್ಸಲೆಂಟ್ ! ಬಹಳ ಚನ್ನಾಗಿದೆ ಸ್ವೀಟ್! ಪ್ರತಿಯೊಂದರಲ್ಲಿಯೂ ನಿಮ್ಮ 'ಸೆಲೆಕ್ಷನ್' ಬಹಳ ಮೇಲು ಮಟ್ಟದ್ದು." ಲೂಸಿ ಉಂಗುರವನ್ನು ಬಹಳ ವಾಗಿ ಮೆಚ್ಚಿಕೊಂಡಳು.

"ಲೂಸೀ, ನಾನು ಒಂದು ಮಾತು ಕೇಳುವೆ, ನೀನೇನೂ ಬೇರೆ ತಿಳಿದು ಕೊಳ್ಳುವುದಿಲ್ಲವಷ್ಟೇ ?"

"ನಾನು ನಿಮ್ಮವಳೇ ಆಗಿರುವಾಗ, ನೀವು ಕೇಳುವುದಕ್ಕಾಗಿ ನಾನು ಕೋಪಗೊಳ್ಳುತ್ತೇನೆಯೇ ?"

"ನೋಡು, ನಾನು ನಿನಗೆ ಪರಿಚಯವಾಗಿದ್ದು ಇನ್ನೂ ಬಹಳ ದಿನ ಗಳಾಗಿಲ್ಲ. ಹೆಚ್ಚು ಅಂದರೆ ಹದಿನೈದು, ಇಪ್ಪತ್ತು ದಿನಗಳಾಗಿರಬಹುದು. ನಾನು ನಿಮ್ಮ ಮನೆಗೆ ಬಂದಿರುವುದು ಇದೇ ಮೊದಲ ಬಾರಿ ನಿಮ್ಮ ಆಂಟೀ, ನನ್ನನ್ನು ನೋಡಿರುವುದು ಇದೇ ಪ್ರಥಮ ಬಾರಿ. ಅಂತಹವರಲ್ಲಿ, ನನ್ನನ್ನು ನಂಬಿ, ನಮ್ಮಿಬ್ಬರನ್ನೇ ಬಿಟ್ಟು ಹೋಗಿದ್ದಾರಲ್ಲಾ, ನಿಮ್ಮ ಆಂಟೀ, ನಿನಗೇನೂ ಅನ್ನುವುದಿಲ್ಲವೆ?" ಕುತೂಹಲ ಕೆರಳಿ ಮಾಧವ ಕೇಳಿದ.

"ನೀವು ನೇರವಾಗಿ ನನ್ನನ್ನು ಕೇಳಿದ್ದಕ್ಕೆ ಬಹಳ ಸಂತೋಷ ಡಿಯರ್. ನನ್ನದೊಂದು ದೊಡ್ಡ ಕತೆ. ಆಂಟೀ ನನ್ನ ತಾಯಿಯ ತಂಗಿ. ನನ್ನನ್ನು ಚಿಕ್ಕಂದಿ ನಿಂದಲೂ ಸಾಕಿದವಳು ಅವಳೇ. ತಾಯಿ ಇಲ್ಲದ ಮಗು ಎಂದು ಬಹಳ ಮುದ್ದಿಸು ತ್ತಿದ್ದಳು. ನನ್ನ ವಿದ್ಯಾಭ್ಯಾಸ ಮುಗಿದೊಡನೆ ಆಂಟೀ ನನ್ನ ಮದುವೆಯನ್ನು ಮಾಡಲು ಪ್ರಯತ್ನಿಸಿದಳು. ಕಡೆಗೆ ಜಾನ್ ಎಂಬುವವನನ್ನೂ ನನ್ನ ಪತಿ ಯನ್ನಾಗಿ ಮಾಡಲು ನಿಶ್ಚಯಿಸಿದಳು. ಅವನೂ ನಮ್ಮ ಮನೆಗೆ ಬಂದು ಹೋಗಿ ಮಾಡುತ್ತಿದ್ದ. ನಾನೂ ಸಮಯ ಬಂದರೆ ಮಾತ್ರ ಅವನ ಕೈಲಿ ಮಾತನಾಡು ತ್ತಿದ್ದೆ. ಮದುವೆಗೆ ಇನ್ನು ಸ್ವಲ್ಪ ದಿನವೇ ಉಳಿದಿತ್ತು. ಒಂದು ದಿನ ನಾವೆಲ್ಲಾ

ಮಾತನಾಡುತ್ತಾ ಕೂತಿದ್ದವು. ಆಗ ಹೆಂಗುಸೊಬ್ಬಳು ಬಿರುಗಾಳಿಯಂತೆ ನುಗ್ಗಿ ಒಳಗೆ ಬಂದಳು. ಬಂದವಳೇ ನನ್ನನ್ನು ನೋಡಿ ಹೇಳಿದಳು "ನೀನು ಈ ನರಪ್ರಾಣಿಯನ್ನಲ್ಲವೇ ಮದುವೆಯಾಗಬೇಕೆಂದಿರುವವಳು? ನಾನು ಈ ಮನುಷ್ಯನೆಂದು ಕರೆಯಲ್ಪಡುವ, ಈ ಪಶುವಿನ ಹೆಂಡತಿ. ಇವನಿಂದ ನನಗೆ ಬಂದಿರುವ ಅವಸ್ಥೆ ನೋಡು. ಈಗಲೇ ನಿನ್ನನ್ನು ಎಚ್ಚರಿಸಿದ್ದೇನೆ. ಇವನನ್ನು ಮದುವೆಯಾದರೆ ನಿನ್ನ ಬಾಳು ನರಕದ ಕೂಪವಾಗುವುದೆಂದು ತಿಳಿ. ಇವನೊಬ್ಬ ಚಂಡಾಲ!" ಹೀಗೆ ಆ ಹೆಂಗಸು ಏನೇನೋ ಬೈದಳು. ಜಾ:ನ್ ತುಟಿ ಪಿಟ್ಟೆನ್ನದೆ ತಲೆ ಬಗ್ಗಿಸಿ ಕೂತಿದ್ದ. ಅವಳು ಹೊರಟು ಹೋದ ಮೇಲೆ ಅವನು ಯಾವ ಮಾತನ್ನೂ ಆಡದೇ ಹೊರಟು ಹೋದವ ಇಲ್ಲಿಯ ವರೆಗೂ ಏನಾದ ಎಂಬುದೇ ಗೊತ್ತಿಲ್ಲ. ಅದರಿಂದ ದುಃಖಗೊಂಡ ಆಂಟೀ, ನನ್ನ ಮದುವೆಯ ಪ್ರಯತ್ನವನ್ನೇ ಬಿಟ್ಟುಬಿಟ್ಟಳು.

"ಡಿಯರ್, ನಮ್ಮ ಜನದಲ್ಲಿ ನಿಮ್ಮಗಳ ಹಾಗೆ ಹೆಂಗಸು ಮನೆಯ ಹೊಸ್ತಿಲನ್ನು ದಾಟಬಾರದೆಂಬ ನಿಯಮವೇನೂ ಇಲ್ಲ. ನಾವು ಬೇಕಾದಲ್ಲಿ ತಿರುಗುತ್ತೇವೆ, ಎಲ್ಲರೊಡನೆಯೂ ಸಲುಗೆಯಿಂದ ಮಾತನಾಡುತ್ತೇವೆ. ಆಂಟೀ ನನಗೆ ಬೇಕಾದ ಹಾಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದಾರೆ. ಆದರೆ ನಾನು ಆ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಂಡಿಲ್ಲ. ನನ್ನ ಮಾತಿನಲ್ಲಿ ಅವಳಿಗೆ ಅಪಾರವಾದ ನಂಬುಗೆ ಇದೆ. ನಾನು ಹೇಳಿದುದನ್ನು ನಿಜವೆಂದೇ ತಿಳಿಯುತ್ತಾಳೆ. ನಿಮ್ಮ ಪರಿಚಯವಾದುದನ್ನು ಅವಳಿಗೆ ಹೇಳಿದೆ. ಅದಕ್ಕೆ ಅವಳೇನೆಂದಳು ಗೊತ್ತೇ? "ಲೂಸೀ, ನೀನೇನೊ ಚಿಕ್ಕ ಪುಟ್ಟ ಹುಡುಗಿಯಲ್ಲ. ನಿನಗೂ ವಯಸ್ಸಾಗಿದೆ; ತಿಳುವಳಿಕೆಯೂ ಇದೆ. ಈ ವಯಸ್ಸಿನಲ್ಲಿ ನೀನು ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ನಾನೇನೂ ಹೇಳಿಕೊಡಬೇಕಾಗಿಲ್ಲ. ಆದರೂ ನೀನು ಯಾರಾದರೂ ನಿನ್ನ ಮನ ಒಪ್ಪಿದವರನ್ನುಮದುವೆಯಾಗಿ ಸುಖವಾಗಿರು. ನಿನ್ನ ಎಚ್ಚರ ನಿನ್ನ ಕೈಲಿ ಇರಲಿ" ಎಂದು. ನಿಮ್ಮನ್ನು ನೋಡಿದಾರಭ್ಯ ನನ್ನ ಮನಸ್ಸೇ ಸರಿಯಾಗಿಲ್ಲ, ಸ್ವೀಟ್! ನೀವು ನನಗಾಗಿ ಹೇಗೆ ತಪಿಸುತ್ತಿದ್ದೀರೋ, ಹಾಗೆಯೇ ನಾನೂ ಕೂಡಾ ನಿಮಗಾಗಿ ತೊಳಲುತ್ತಿದ್ದೇನೆ. ನನ್ನ ಮೇಲೆ ಯಾವ ಅನುಮಾನವೂ ಇಲ್ಲವಷ್ಟೇ?" ಎಂದು ಲೂಸಿ ಮಾಧವನನ್ನು ನೋಡುತ್ತಾ ಹೇಳಿದಳು.

ಅವಳ ಆ ನೋಟಕ್ಕೆ ಮಾಧವ ತತ್ತರಿಸಿಹೋದ. ಅವನದೆನ್ನುವ ಯಾವ

ಭಾವನೆಯೂ ಉಳಿದಿರಲಿಲ್ಲ. "ಲೂಸಿ ಡಿಯರ್, ನಿನ್ನ ಮೇಲೆ ಅನುಮಾನ? ಅದು ಎಂದಿಗೂ ಸಾಧ್ಯವಾಗದ ಮಾತು. ಸಾಕ್ಷಾತ್ ದೇವರೇ ನನ್ನ ಎದುರಿಗೆ ಬಂದು ನೀನು ಪತಿತೆ ಎಂದು ಹೇಳಿದರೂ ನಾನು ನಂಬಲಾರೆ ಲೂಸೀ..... ಲೂಸೀ....!" ಅವನ ತುಟಿ ಕಂಪಿಸುತ್ತಿತ್ತು. ಕಣ್ಣುಗಳು ಹೊಳೆಯುತ್ತಿದ್ದುವು. "ಮೈ ಲೌವ್ಹ್!" ಎಂದು ಲೂಸಿ ಅವನ ಬಳಿಸಾರಿದಳು.

ಲೂಸಿ ಎಷ್ಟು ಬಲವಂತ ಮಾಡಿದರೂ, ರಾತ್ರಿ ಅಲ್ಲಿ ನಿಲ್ಲದೆ, ಮಾಧವ ಮನೆಗೆ ಹೊರಟಾಗ ಹತ್ತು ಗಂಟೆಯೇ ಆಗಿತ್ತು.

ಸರೂ ಮಾಧವನಿಗಾಗಿ ಸಂಜೆಯಿಂದ ಕಾದು ಕಾದು ಕೂತೇ ಇದ್ದಳು. ವಿಜಯ 'ಅಮ್ಮಾ, ಅಣ್ಣಾ ಎಲ್ಲಿ ಹೋಗಿದ್ದಾನೆ? ನಂಗೆ ಪೆಪ್ಪಿಂಟು ಕೊಡುತ್ತೇನಿ ಅಂತ ಹೇಳಿದ್ದ' ಎಂದು ಹಲವು ಬಾರಿ ಕೇಳಿ ಕೇಳಿ, ಅಮ್ಮನಿಂದ ಸಮಾಧಾನ ಹೊಂದಿ, ಅಣ್ಣನ ತೊಳಲಿಕೆಯಲ್ಲಿಯೇ ಮಲಗಿ ನಿದ್ರೆ ಹೋದ. ಕತ್ತಲಾಗುವ ವರೆಗೆ ರೂಪಾ ಬಂದಿದ್ದಳು. ಅವಳ ಜೊತೆಯಲ್ಲಿ ಮಾತನಾಡಿದ್ದರಿಂದ ಸ್ವಲ್ಪ ಕಾಲ ಕಳೆದಿತ್ತು. ನಂತರ ರೂಪಾ ಹೊರಟು ಹೋದಳು. ಮನೆಯಲ್ಲಿ ಸರೂ ಒಬ್ಬಳೇ. ವಿಜಯ ನಿದ್ರೆ ಹೋಗಿದ್ದ. ಈ ಊರಿಗೆ ಬಂದ ಲಾಗಾಯ್ತು ಒಂದು ದಿನವೂ ಸರೂ ಹೀಗೆ ಒಬ್ಬಂಟಿಗಳಾಗಿ ಇರಲಿಲ್ಲ. ಮಾಧವ ಬರುವುದು ಹೊತ್ತಾಗುತ್ತದೆ ಎಂದು ತಿಳಿದಿದ್ದರಿಂದ ಸರೂ ತಿಂಡಿಯನ್ನೇನೂ ಮಾಡಿರಲಿಲ್ಲ. ವಿಜಯ ತಿಂಡಿ ಕೇಳಿದಾಗ ಬರಿಯ ಎರಡು ಬಿಸ್ಕಿಟ್ ಕೊಟ್ಟು ಅದರಲ್ಲಿಯೇ ಸಮಾಧಾನ ಪಡಿಸಿದಳು. ರಾತ್ರಿಯ ಅಡುಗೆಯನ್ನು ಬೇಗನೇ ಮುಗಿಸಿದಳು. ಬೆಳಿಗ್ಗೆ ಹನ್ನೊಂದರ ವೇಳೆಗೆ ಊಟಮಾಡಿದ್ದರಿಂದ, ಹಸಿವಾಗತೊಡಗಿತು. ಆದರೂ ಸರೂ ಏನನ್ನೂ ತಿನ್ನಲಿಲ್ಲ. ಅವಳ ಮನಸ್ಸೆಲ್ಲಾ ಕಲಕಿಹೋಗಿತ್ತು. ಮಾಧವ ಹೀಗೆ ಯಾವಾಗಲೂ 'ಲೂಸೀ....ಲೂಸೀ....'.... ಎಂದು ಅವಳ ಜೊತೆಯಲ್ಲಿಯೇ ಇದ್ದರೆ, ಮುಂದೆ ತನ್ನ ಗತಿ ಏನು? ಒಂದು ಸಲ ಅನ್ನಿಸುತ್ತಿತ್ತು ನಾನೇ ಆ ಲೂಸಿಯ ಪರಿಚಯ ಮಾಡಿಕೊಟ್ಟದ್ದರಿಂದಲೇ ಅವರು ಹೀಗಾದ ರೇನೋ! ಅವಳನ್ನು ನೋಡುವ ಮುಂಚೆ, ಮಾಧವ ತನ್ನನ್ನು ಎಷ್ಟು ಸುಖ

ನಾಗಿಟ್ಟಿದ್ದ! ಪ್ರತಿದಿನವೂ ಹೊರಗೆ ಸುತ್ತಾಡಿಸಿಕೊಂಡು ಬರುತ್ತಿದ್ದ. ತಾನು ಕೇಳಿದ ಪ್ರತಿಯೊಂದು ಸಾಮಾನನ್ನು ಎಷ್ಟು ಬೇಗ ತಂದು ಕೊಡುತ್ತಿದ್ದ! ಮಾಧವ ಹೀಗೆ ಆಗುತ್ತಾನೆ ಎಂಬುದು ತನಗೆ ಮುಂಚೆಯೇ ತಿಳಿದಿದ್ದರೆ ತಾನು ಮಾಧವ ಕೆಲಸಕ್ಕೆ ಸೇರಲು ಒತ್ತಾಯಪಡಿಸದೆಯೇ ಇರಬಹುದಾಗಿತ್ತು. ಅಲ್ಲಿಯೇ ಯಾವುದಾದರೂ ಕೆಲಸ ದೊರೆತು, ತಂದೆ-ತಾಯಿಗಳ ಜೊತೆ ಯಲ್ಲಿಯೇ ಇದ್ದಿದ್ದರೆ ಮಾಧವ ಹೀಗೆ ತನ್ನನ್ನು ತ್ಯಜಿಸುತ್ತಲಿರಲಿಲ್ಲ. ಅಲ್ಲಿಯೇ ಕಷ್ಟವೋ ಸುಖವೋ, ನರಕವಾಸವೋ ಸಹಿಸಿಕೊಂಡಿರಬಹುದಾಗಿತ್ತು. ಆಗ ತನ್ನ ಪತಿ ತನ್ನವನಾಗಿಯೇ ಇರುತ್ತಿದ್ದ. ಹೀಗೆ ಎಂದಿಗೂ ಆಗುತ್ತಿರಲಿಲ್ಲ. ನಾನೇಕೆ ಸ್ವಾತಂತ್ರ್ಯವನ್ನು ಬಯಸಿದೆ? ನಾನಾಗಿಯೇ ಬಯಸಿ ಬಯಸಿ ನನ್ನ ಮೃತ್ಯುವನ್ನು ತಂದುಕೊಂಡೆನಲ್ಲಾ ಎಂದು ಸರೂ ವಿಲಪಿಸಿದಳು. ತನ್ನವರಿಗಾಗಿ ಯಾರು ಇದ್ದಾರೆ? ತನ್ನ ಕೈಹಿಡಿದ ಪತಿಯೇ ತನ್ನನ್ನು ದೂರ ಮಾಡಿದ ಮೇಲೆ ಇನ್ನು ಯಾರು ತಾನೇ ಕೇಳುತ್ತಾರೆ? ವಿಜಯ್ ಇನ್ನೂ ಮಗು, ಅವನ ವಿಚಾರ ಏನೂ ಯೋಚಿಸುವುದು ಕಷ್ಟ. ಇರುವ ಒಬ್ಬ ತಂದೆ, ಎಲ್ಲಿಯೋ ದೂರ ದೂರ ದಲ್ಲಿದ್ದಾರೆ. ಅವರಿಂದ ಈಗ ಯಾವ ಸಮಾಧಾನದ ಮಾತುಗಳೂ ಕೂಡಾ ದೊರೆಯುವಂತಿಲ್ಲ. ಬರೆದರೆ, ಕಾಗದ ಬರೆದು ತನ್ನ ದುಃಖವನ್ನೆಲ್ಲಾ ತೋಡಿ ಕೊಳ್ಳಬಹುದು. ಆದರೆ ಅದರಿಂದ ಅವರಿಗೆ ಎಷ್ಟು ನೋವಾಗಬಹುದು? ಇರುವ ಒಬ್ಬಳೇ ಮಗಳು, ಗಂಡನ ಮನೆಯಲ್ಲಿ ನೆಮ್ಮದಿಯಾಗಿದ್ದಾಳೆ. ಅವಳ ವಿಚಾರ ವಾಗಿ ಏನೂ ಆತಂಕವಿಲ್ಲ ಎಂದುಕೊಂಡು ದೇವರ ಧ್ಯಾನದಲ್ಲಿಯೇ ಮಗ್ನರಾಗಿ ಇರುವ ಅವರಿಗೆ ಈ ತನ್ನ ಗೋಳನ್ನೆಲ್ಲಾ ಹೇಳಿಕೊಂಡು ಅವರಿಗೂ ದುಃಖ ವನ್ನುಂಟುಮಾಡುವುದರಿಂದ ಆಗುವುದಾದರೂ ಏನು? ಅವರು ಏನು ತಾನೇ ಮಾಡಬಹುದು? ಮಾಧವ ಸಂಪೂರ್ಣವಾಗಿ ಲೂಸಿಗೇ ಮರುಳಾಗಿದ್ದಾನೆ, ಅದನ್ನು ತಪ್ಪಿಸಲು ಯಾರಿಗೆ ಸಾಧ್ಯ? ಇನ್ನು ಇರುವವಳು ಸುಶೀಲಾ ಚಿಕ್ಕಮ್ಮ, ನಾನೇಕೆ ಹೋಗಿ ಸುಮ್ಮನೇ ಇಲ್ಲದ ಮಾತು ಹೇಳಿಕೊಳ್ಳಬೇಕು? ಇದು ಯಾರಿಗೂ ಹೇಳಲೂಬಾರದು, ಹೇಳಿದರೆ ಯಾವ ಬಗೆಯ ಸುಖವೂ ದೊರೆ ಯುವುದಿಲ್ಲ. ನನಗೆ ಬೇಕಾದುದೇನು? ಮಾಧವ ಸುಖವಾಗಿರುವುದು. ಈಗ ಮಾಧವ ಸುಖಿಯಾಗಿದ್ದಾನೆ. ಅವನ ಸುಖವನ್ನು ನೋಡಿ ಸಂತೋಷಪಡುವ ಮನಸ್ಸನ್ನು, ದೇವರು ನನಗೆ ಕೊಡಲಿ, ಎಂದು ಸರೂವಿನ ವಿಚಾರಚಕ್ರ ತಿರು ಗುತ್ತಲೇ ಇತ್ತು. ಬೆಳಗಿನಿಂದ ಈ ರೀತಿಯಾಗಿ ಆಯಾಸ ಹೊಂದಿದ? ಮನ,

ದೇಹ, ಕೊನೆಗೆ ನಿದ್ರೆಯಲ್ಲಿ ವಿಶ್ರಾಂತಿ ಹೊಂದಿದುವು.

ಮಾಧವ ಬಂದು ಬಾಗಿಲನ್ನು ತಟ್ಟಿದಾಗಲೇ ಸರೂವಿಗೆ ಎಚ್ಚರವಾದ್ದು. ಸರೂ ಬಾಗಿಲು ತೆಗೆದಳು. ಮಾಧವ ಒಳಗೆ ಬಂದ. ಅವನ ಮುಖದಲ್ಲಿ ಉತ್ಸಾಹದ ಕಳೆ ಹೊಮ್ಮುತ್ತಿತ್ತು. ಅವನ ಕಣ್ಣುಗಳೇ ಅವನ ಸಂತೋಷವನ್ನು ಸೂಸುತ್ತಿದ್ದುವು. ಯಾವುದೊಂದು ಮಾತೂ ಆಡದೆ ಸರೂ ಅಡುಗೆ ಮನೆಗೆ ಹೋಗಿ, ತಟ್ಟೆಯನ್ನು ಹಾಕಿದಳು. ಮಾಧವ ಬಟ್ಟೆ ಬದಲಾಯಿಸಿ ಬಂದು, ಊಟಕ್ಕೆ ಕುಳಿತ.

ಅವನಿಗೂ ಬಡಿಸಿ, ತಾನೂ ಊಟಮಾಡತೊಡಗಿದಳು. ಅವನು ಎಲ್ಲಿಗೆ ಹೋಗಿದ್ದನೆಂಬುದನ್ನು ಸರೂ ಊಹಿಸಿಯೇ ಇದ್ದಳಾದ್ದರಿಂದ ಅವನನ್ನು ಎಲ್ಲಿಗೆ ಹೋಗಿದ್ದಿರಿ, ಏನು, ಎಂದು ಕೂಡಾ ಕೇಳಲಿಲ್ಲ. ಮಾಧವನೇ ಹೇಳಿದ "ನಿಜ ವಾಗಿಯೂ ಆ ಲೂಸಿ ಎಷ್ಟು ಒಳ್ಳೆಯವಳು ಗೊತ್ತೆ ಸರೂ? ನನಗಾಗಿ ಎಷ್ಟು ಹಾತೊರೀತಾಳೆ ಅಂತೀಯಾ! ನಾನು ನಾಲ್ಕರ ವೇಳೆಗೆ ಬರುತ್ತೇನೆ ಎಂದು ಹೇಳಿದ್ದೆ. ಆದರೆ ಹೋಗುವುದು ಸ್ವಲ್ಪ ತಡವಾಯಿತು. ಅದಕ್ಕೆ ಅವಳು ಎಷ್ಟು ಆತಂಕಪಟ್ಟುಕೊಂಡು ನನ್ನ ದಾರಿಯನ್ನು ಕಾಯುತ್ತಾ ನಿಂತಿದ್ದಳೂ ಅಂತೀ? ಅವಳು ನಿಜವಾಗಿಯೂ ಮನುಷ್ಯಳಲ್ಲ; ಯಾವಳೋ ಒಬ್ಬ ಶಾಪಗ್ರಸ್ತ ದೇವತೆ ಯಾಗಿರಬೇಕು; ಇಲ್ಲವಾದರೆ ಅವಳ ಆ ಒಂದು ನೋಟದಲ್ಲಿಯೇ ನನ್ನನ್ನು ಹಾಗೆ ಪರವಶನನನ್ನಾಗಿ ಮಾಡುತ್ತಿದ್ದಳೇ? ಅವಳೊಂದು 'ಜೆಮ್'!" ಎಂದು ಮಾಧವ ಲೂಸಿಯ ಗುಣಗಾನದಲ್ಲಿಯೇ ತಲ್ಲೀನನಾಗಿ ಊಟ ಮುಗಿಸಿದ. ಸರೂ ಎಲ್ಲದಕ್ಕೂ ತನ್ನ ಮೆಚ್ಚುಗೆಯನ್ನೂ ಸಂತೋಷವನ್ನೂ ಪ್ರಕಟಿಸುತ್ತಲೇ ಇದ್ದಳು. ಊಟ ಮುಗಿದ ಕೂಡಲೇ ಮಾಧವ ರೂಮಿಗೆ ಹೋಗಿ ಮಲಗಿ ಕೊಂಡ. ಅವನ ಮನಸ್ಸು ಹಕ್ಕಿಯಂತೆ ಹಾರಾಡುತ್ತಿತ್ತು. ಲೂಸಿಯ ಸಹವಾಸ ದಿಂದ ಅವನಿಗೆ ಅಪೂರ್ವ ಚೇತನ ಬಂದಂತಾಗಿತ್ತು. ಅದೇ ಹುಮ್ಮಸ್ಸಿನಲ್ಲಿ ಮಲಗಿದ ಕೂಡಲೇ ಮಾಧವ ನಿದ್ರಾಪರವಶನಾದ.

ಸರೂ ತಟ್ಟೆಗಳನ್ನು ತೊಳೆದು, ಎಂಜಲುಗೋಮ ಮಾಡಿ, ಪಾತ್ರೆ ಎಲ್ಲಾ ಒಂದು ಕಡೆ ಜೋಡಿಸಿಟ್ಟು, ಬಾಗಿಲು ಹಾಕಿ ಬರುವ ವೇಳೆಗೆ ಮಾಧವ ನಿದ್ರಿತ ನಾಗಿದ್ದ. ಅವನ ಮುಖ ಪ್ರಶಾಂತವಾಗಿತ್ತು. ಮುಗುಳ್ನಗೆ ಇನ್ನೂ ತುಟಿಯಂಚಿ ನಲ್ಲಿಯೇ ಇದ್ದಿತು. ಸರೂ ಅವನನ್ನು ಒಮ್ಮೆ ಕಣ್ತುಂಬ ನೋಡಿ, ನಿಟ್ಟುಸಿರು ಬಿಟ್ಟು, ಬೇರೆ ಕಡೆಗೆ ಹೋಗಿ ಮಗುವಿನ ಮಗ್ಗುಲಲ್ಲಿ ದೀಪವಾರಿಸಿ ಮಲಗಿ

ದಳು. ಕತ್ತಲೆ ಇಬ್ಬರನ್ನೂ ಒಬ್ಬರೊಬ್ಬರಿಗೆ ಕಾಣದಂತೆ ಮರೆಮಾಡಿತು.

ಜಾನಕೀಬಾಯಿ ಗೊಣಗಾಡುತ್ತಾ ಅಕ್ಕಿಯನ್ನು ಆರಿಸುತ್ತಾ ಕೂತಿದ್ದರು. ಸರೂ ಹೋದಾಗಿನಿಂದ ಮನೆಯ ಕೆಲಸವೆಲ್ಲಾ ಅವರದ್ದೇ ಆಗಿತ್ತು. ಈಗ ನಾಲ್ಕು ವರ್ಷಗಳಿಂದ ಕೆಲಸ ಮಾಡದೆ ಬೆಳೆದ ಮೈ, ಈಗ ಬಗ್ಗಿಸಬೇಕಾದರೆ ಸುಲಭವೇನೂ ಆಗಲಿಲ್ಲ. ಹಿಂದೆ ಆ ರಾಜೂ ಬೇರೆ ಇದ್ದ ಸಹಾಯಕ್ಕೆ. ಅವನ ಮೇಲೆ ಜೋರು ಮಾಡಬಹುದಾಗಿತ್ತು. ಈಗ ಅವನೂ ಹೊರಟುಹೋಗಿದ್ದಾನೆ. ಮುರಲೀ ಮುಕುಂದರು ದೊಡ್ಡವರಾಗಿದ್ದಾರೆ. ಆನಂದ ಪಾಪ, ಇನ್ನೂ ಹುಡುಗ. ಹಾಗಾದರೆ ಯಾರು ಸಹಾಯಮಾಡುವವರು ? ಪ್ರತಿಯೊಂದೂ ಅವರೇ ಮಾಡಬೇಕಾಗುತ್ತಿತ್ತು. ಒಂದು ಕಾಫೀ ಲೋಟಾ ಕೂಡಾ ಯಾರೂ ಗಲಬರಿಸುತ್ತಲಿರಲಿಲ್ಲ. ಆ ಮನೆಯಲ್ಲಿದ್ದಾಗ ಎಲ್ಲ 'ಸ್ಟೌವ್'ನಲ್ಲಿಯೇ ಅಡುಗೆ ಮಾಡಿ ಅಭ್ಯಾಸವಾಗಿತ್ತು. ಆದರೆ ಇಲ್ಲಿ 'ಹೀಟಿಂಗ್-ಸರ್‌ಕ್ಯೂಟ್' ಇಲ್ಲವಾದ್ದರಿಂದ ಸೌದೆಯ ಒಲೆಯೆ ಗತಿಯಾಗಿತ್ತು. ಎಷ್ಟು ಸಲ ಹೇಳಿದಾಗ್ಯೂ ಶ್ರೀಕಂಠಯ್ಯನವರು ಅದನ್ನು ಹಾಕಿಸಲು ಕಿವಿಯ ಮೇಲೆ ಹಾಕಿಕೊಂಡಿರಲಿಲ್ಲ. ಸೌದೆಯು ಹಸಿಯಾಗಿ ಉರಿಯದೇ ಇದ್ದಾಗ ಜಾನಕೀಬಾಯಿಯವರ ಕೋಪವೆಲ್ಲಾ ಅವರ ಪತಿಯ ಮೇಲೇ ತಿರುಗುತ್ತಿತ್ತು. "ಈ ಸೌದೇಲಿ ಅಡುಗೆ ಮಾಡೋದು ನನಗೆ ಸಾಧ್ಯವಿಲ್ಲಾ ಅಂದ್ರೆ! ಆ 'ಹೀಟಿಂಗ್' ಹಾಕಿಸಿರಿ ಅಂದರೆ, ದುಡ್ಡಿಗಾಗಿ ಹಿಂದುಮುಂದು ನೋಡುತ್ತೀರೇ ವಿನಹ, ಆ ಒಲೆ ಊದೀ ಊದೀ ನನ್ನ ಗಂಟಲು ಒಡೆದು ಹೋದರೂ ಪರವಾಗಿಲ್ಲ. ನಿಮ್ಮ ದುಡ್ಡು ನಿಮ್ಮ ಬಳಿಯಲ್ಲಿದ್ದರಾಯಿತು ! ಯಾರು ಇದ್ದರೇನು; ಸತ್ತರೇನು ? ನಿಮಗೇನಾಗಬೇಕಾಗಿದೆ ?"

ಶ್ರೀಕಂಠಯ್ಯನವರಿಗೆ ಈ ರಾಮಾಯಣವೇನೂ ಹೊಸದಾಗಿರಲಿಲ್ಲ. ಸರೂ ಹೋದ ದಿನದ ಮೊದಲುಗೊಂಡು ಇಂದಿನವರೆಗೂ ಇದೇ ರೀತಿ, ಜಾನಕೀಬಾಯಿಯವರ ಕೂಗಾಟ, ಕಿರುಚಾಟ ನಡದೇ ಇತ್ತು. ತೀರಾ ತಾಳ್ಮೆ ಮೀರಿದಾಗ "ಇಷ್ಟು ದಿನ ಆ ಸರೂ ಮಾಡುತ್ತಿರಲಿಲ್ಲವೆ ? ಅವಳು ಮಾಡಬಹುದು,

ನೀನು ಮಾಡಬಾರದು? ಅವಳು ಇದ್ದಾಗ ಮನೆಯಲ್ಲಿ ಎಲ್ಲರೂ ಇದ್ದರು. ಇದರ ಜೊತೆಗೆ ಬರುವವರು ಹೋಗುವವರು. ಅವರಿಗೆಲ್ಲಾ ಅವಳು ಮಾಡು ತ್ತಿರಲಿಲ್ಲವೆ? ಈಗ ಇಲ್ಲಿರುವವರು ನಾವು ಐದು ಜನ. ಇಷ್ಟಕ್ಕೇ ಹೀಗಾಡುತ್ತೀ ಯಲ್ಲಾ? ಇನ್ನು ಆವಾಗಿನಂತೆ ಮನೆಯಲ್ಲಿ ನೆಂಟರು ಇದ್ದರೆ ನೀನೇನು ಮಾಡಿ ಹಾಕುತ್ತಿದ್ದೆಯೋ ನಾ ಬೇರೆ ಕಾಣೆ!" ಎಂದು ಶ್ರೀಕಂಠಯ್ಯ ಪತ್ನಿಯ ಬಾಯನ್ನು ಮುಚ್ಚುತ್ತಿದ್ದರು.

ಜಾನಕೀಬಾಯಿಯವರಿಗೆ, ಈ ಹೊಸ ಮನೆಗೆ ಬಂದ ಮೇಲೆ ಕ್ಲಬ್ ಗೆಳತಿಯರ ಓಡಾಟ ಎಲ್ಲಾ ಕಡಮೆಯಾಯಿತು. ಇಲ್ಲಿಂದ ಮಲ್ಲೇಶ್ವರದ ಕ್ಲಬ್‌ಗೆ ಹೋಗಿ ಬರುವುದು ಅಸಾಧ್ಯದ ಮಾತಾಗಿತ್ತು. ಇವರ ಮನೆಯು ದೂರವಾದ್ದರಿಂದ, ಮನೆಗೆ ಬರುವ ಸ್ನೇಹಿತೆಯರ ತಂಡವೂ ಕೊಂಚ ಕಡಿಮೆ ಯಾಗಿತ್ತು. ಹಿಂದಿನಂತೆ ತಿರುಗಾಡುವ ಶಕ್ತಿಯೂ ಕಡಿಮೆಯಾಗಿತ್ತು ಜಾನಕೀಬಾಯಿಯವರಿಗೆ. ಮನೆಯ ಕೆಲಸವೆಲ್ಲಾ ಮುಗಿದು ಬಿಡುವು ದೊರೆತಾಗ ಯಾವುದಾದರೂ ಪುಸ್ತಕಗಳನ್ನೋದುವುದು, ಇಲ್ಲವೇ ಪೇಪರ ನ್ನೋದುವುದು, ಮಕ್ಕಳಿಗೆಲ್ಲಾ ವಾರಕ್ಕೆ ಒಂದಾವರ್ತಿ ಕಾಗದ ಬರೆಯುವುದು, ಹೀಗೆಯೇ ಕಳೆಯುತ್ತಿತ್ತು ಅವರ ಕಾಲ. ಮೊದಲಿಂದಲೂ ವೇದಾಧ್ಯಯನ ಗಳಲ್ಲಿ ಆಸಕ್ತಿ ಹೊಂದಿದ್ದ ಶ್ರೀಕಂಠಯ್ಯ ಈಗ ತಮ್ಮ ಪೂರ್ತಿ ವೇಳೆಯನ್ನೆಲ್ಲಾ, ಗ್ರಂಥಗಳನ್ನೋದುವುದು, ಉಪನಿಷತ್, ಗಾಯತ್ರಿಜಪ ಮೊದಲಾದವುಗಳಿಗೆ ಟಿಪ್ಪಣಿ ಬರೆದು ತಾವು ತಿಳಿದಿರುವುದನ್ನು ಸಾಧ್ಯವಾದಷ್ಟು ಮಟ್ಟಿಗೆ ವಿವರಿಸು ವುದು, ಮೊದಲಾದ ಕೆಲಸಗಳಿಗೆ ವಿನಿಯೋಗಿಸುತ್ತಿದ್ದರು. ಬೆಳಗ್ಗೆ ಸುರ್ಯೋದ ಯಕ್ಕೆ ಮುಂಚಿತವಾಗಿಯೇ ಎದ್ದು ಸ್ನಾನ ಮುಗಿಸಿ, ಎರಡು ಗಂಟೆಗಳ ಕಾಲ ಪ್ರಾಣಾಯಾಮ, ಜಪ, ಸಂಧ್ಯಾವಂದನೆ ಮಾಡುವುದು; ನಂತರ ದೇವ ರಿಗೆ ಶಾಸ್ತ್ರೋಕ್ತವಾಗಿ ಅಭಿಷೇಕ, ಅರ್ಚನೆಗಳನ್ನು ಮಾಡುವದು. ಇವೆಲ್ಲಾ ಮುಗಿದ ಮೇಲೆಯೇ ಕಾಫಿ ತೆಗೆದುಕೊಳ್ಳುವುದು. ಸ್ವಲ್ಪ ಹೊತ್ತು ವರ್ತಮಾನ ಪತ್ರಿಕೆಯನ್ನೋದುವುದು. ಆ ವೇಳೆಗೆ ಆನಂದ ಬಂದು ಯಾವುದಾದರೂ ಆಲ್ಜೀಬ್ರವನ್ನೋ ಲೆಕ್ಕವನ್ನೋ ಹೇಳಿಕೊಡು ಎಂದು ತಂದೆಯನ್ನು ಕೇಳು ತ್ತಾನೆ. ಅವನ ಸ್ಕೂಲಿನ ವೇಳೆಯವರೆಗೂ ಅವನಿಗೆ ಹೇಳಿಕೊಡುವುದೇ ಆಗುತ್ತೆ. ನಂತರ ಊಟ, ಮಧ್ಯಾಹ್ನ ವಿಶ್ರಾಂತಿ ಸಾಯಂಕಾಲ ತಿರುಗಾಟ, ಮತ್ತೆ ಜಪ, ತಪ, ದೇವರ ಭಜನೆ, ಹೀಗೆಯೇ ಶ್ರೀಕಂಠಯ್ಯ ಕಾಲ ತಳ್ಳುತ್ತಾ

ಬಂದಿದ್ದರು. ಪ್ರತಿ ದಿನಾ ಹೊರಗೆ ಹೊರಡುವಾಗಲೂ ವಿಜಯನ ನೆನವು ಬಂದೇ ಬರುವುದು.' ಮಗು ಈಗ ಹೇಗಿದ್ದಾನೋ ಪಾಪ, ಒಂದು ಸಲ ಹೋಗಿನೋಡಿ ಕೊಂಡು ಬರಬೇಕು' ಎಂದುಕೊಳ್ಳುವರು. ಹೀಗೇ ಅವರ ಕಾಲಚಕ್ರ ಉರುಳುತ್ತಲೇ ಇತ್ತು.

ಕೊನೆಯ ದಿನದ ಪರೀಕ್ಷೆಯನ್ನೂ ಮುಗಿಸಿ, 'ಉಸ್ಸಪ್ಪಾ' ಎಂದು ಮನೆಗೆ ಬಂದ ಮುರಲಿ.

"ಹೇಗೆ ಮಾಡಿದ್ದೀಯೋ ಈ ದಿನ ಮುರಲೀ? ಪ್ರಶ್ನೆಗಳು ಸುಲಭವಾಗಿ ದ್ದುವೇ?" ಅಕ್ಕಿಯನ್ನಾರಿಸುತ್ತಿದ್ದ ಜಾನಕೀಬಾಯಿಕೇಳಿದರು.

"ಹೇಗೆ ಇರುವುದೇನು? ಸುಮಾರಾಗಿದ್ದುವು. ಸದ್ಯ ಈ ಪರೀಕ್ಷೆಯ ಕಾಟವೊಂದು ಕಳೆಯಿತಲ್ಲ. ಇನ್ನು ಏನಾದರೂ ಆಗಲೀ, ಅವರ ಗೊಡವೆ ನನಗೇಕೆ?" ಮುರಲಿ ಮೈ ಮುರಿಯುತ್ತಾ ಕುರ್ಚಿಯ ಮೇಲೆ ಕುಳಿತ.

"ಹಾಗೆಂದರೆ ಹೇಗೆ? ನಿನಗೆ ಪಾಸಾಗಬೇಡವೇ? ಇನ್ನೂ ಮುಂದಕ್ಕೆ ಓದಬೇಡವೆ?"

"ಹೋಗವ್ಮಾ, ಯಾರು ಓದೀ ಓದೀ ತಲೆಕೆಡಿಸಿಕೊಳ್ಳುತ್ತಾರೆ. ನನಗೆ ಪಾಸಾದರೂ ಆಗಲೀ ಫೇಲಾದರೂ ಆಗಲೀ, ನಾನು ಬೇರೆ ಇನ್ನು ಓದೋ ದಿಲ್ಲ ಅದು ಖಂಡಿತ."

"ಬರಿಯ ಇಂಟರ್ ಮಾಡಿಕೊಂಡರೆ ನಿನಗಾವ ಕೆಲಸ ಸಿಕ್ಕುತ್ತೆ? ಈಗಿನ ಕಾಲ ಬಿ. ಎ. ಮಾಡಿರೋವರಿಗೇ ಲಾಟರೀ, ಕೆಲಸ ಸಿಗೋದಕ್ಕೆ. ಅಂತಾದ್ದು ನೀನು ಹೀಗೆ ಇಷ್ಟಕ್ಕೇ ಮುಕ್ತಾಯ ಮಾಡಿದರೆ ಹೇಗೆ?"

"ಕೆಲಸಕ್ಕೇ ಸೇರಬೇಕೂ ಅಂತ ಏನು ಶಾಸ್ತ್ರ? ನಾನೂ 'ಬಿಜಿನೆಸ್' ಮಾಡುತ್ತೇನೆ."

"ಸಾಕು ಸದ್ಯ ಸುಮ್ಮನಿರು ಮಹಾರಾಯ. ನಿಮ್ಮ ತಂದೆಯವರು ಮಾಡಿ ಲಾಭ ಗಳಿಸಿದ್ದು ಸಾಕು. ಇನ್ನು ನೀನು ಬೇರೆ ಪುನಃ ಅದೇ ದಾರಿಗೆ ಹೋಗಬೇಡ. ಆ ಬವಣೆ, ಆ ತಾಪತ್ರಯ, ಆ ಹೊಣೆಗಾರಿಕೆ, ಜನ್ಮಜನ್ಮಕ್ಕೂ ಬೇಡ. ನೂರಲ್ಲ ಐವತ್ತು ರೂಪಾಯಿ ಸಂಬಳ ಬರಲಿ, ಸುಖವಾಗಿರಬಹುದು. ಸರಕಾರೀ ಕೆಲಸವೇ ಸರಿ."

"ನಾನು ಹೇಳಿದರೆ ನಿನಗೇನೂ ತಿಳಿಯೋದಿಲ್ಲ ಹೋಗವ್ಮಾ. ಮಾತೆತ್ತಿ ದರೆ ಸರೀ, ತೆಗೆಯುತ್ತೀಯಾ ನಿನ್ನ ಹಳೆಯ ಪುರಾಣಾನ. ಈಗ ನಾನು

ಮಾಡುವುದು ಅಣ್ಣ ಮಾಡಿದ ಹಾಗೆ ಕಾರ್ಖಾನೆಯಲ್ಲ, ನಾನು ತೆಗೆಯುವುದು ಗ್ಯಾರೇಜು."

"ಏನು ಗ್ಯಾರೇಜು ತೆಗೆಯುವೆಯಾ!" ಆಶ್ಚರ್ಯದಿಂದ ಕೇಳಿದರು ಜಾನಕೀಬಾಯಿ.

"ಹೌದು. ಬಂಡವಾಳವಿಲ್ಲದೇ ಯಾವ ಬಿಜಿನೆಸ್ ಕೂಡಾ ನಡೆಯುವು ದಿಲ್ಲ ಅಮ್ಮ. ಅಣ್ಣ ಮಾಡಿದ ಹಾಗೆ ಸಾಲ ಮಾಡಿಯೂ ತೆಗೆಯಬಾರದು. ಸ್ವಂತ ದುಡ್ಡು ಹಾಕಿ ಮಾಡಿದರೆ, ಈ ಲೈನ್‌ನಲ್ಲಿ ಒಂದಕ್ಕೆ ಹತ್ತರಷ್ಟು ಲಾಭ ಬರುತ್ತದೆ ತಿಳಿಯಿತೆ? ಯಾವುದಕ್ಕೂ ಅಣ್ಣನನ್ನು ಕೇಳುತ್ತೇನೆ, ಏನು ಹೇಳು ತ್ತಾರೋ ನೋಡೋಣ. ಸುಮ್ಮನೆ ಬಿ. ಎ ಮಾಡಿ ಹೈಸ್ಕೂಲು ಉಪಾಧ್ಯಾ ಯನೋ ಇಲ್ಲವೇ ಗುಮಾಸ್ತನೋ ಆಗಿ ಅವರು ಕೊಡುವ ಎಂಬತ್ತು ಅಥವಾ ಅರವತ್ತು ರೂಪಾಯಿ ಸಂಬಳಕ್ಕಾಗಿ ಅವರ ಗುಲಾಮನಾಗುವುದು ಬೇಡ. ಅದೃಷ್ಟವಿದ್ದರೆ ಬರಿಯ ಎಂಬತ್ತು ಅಲ್ಲಾ ಎಂಬತ್ತು ಸಾವಿರ ರೂಪಾಯಿಗಳನ್ನು ಗಳಿಸುವೆ ತಿಳಿಯಿತೆ? ಅದಿರಲಿ ಈಗ ನನ್ನ ಹೊಟ್ಟೆ ತಾಳಹಾಕುತ್ತಾ ಇದೆ. ನನಗೆ ಏನಾದರೂ ತಿನ್ನಲು ಕೊಡು." ಮುರಲಿ ಎದ್ದು ನಿಂತ. ಜಾನಕೀಬಾಯಿ ಅಕ್ಕಿ ಆರಿಸುವುದನ್ನು ಬಿಟ್ಟು ಮಗನನ್ನು ಹಿಂಬಾಲಿಸಿದರು.

ರಾತ್ರಿ ಊಟಕ್ಕೆ ಕುಳಿತಾಗ ಮುರಲಿ ತನ್ನ ಆಸೆಯನ್ನೆಲ್ಲಾ ಬಿಡಿಸಿ ತಂದೆಗೆ ತಿಳಿಸಿದ. ಸ್ವತಂತ್ರವಾಗಿರಬೇಕು, ಒಬ್ಬರ ಅಡಿಯಾಳಾಗಿರಬಾರದು, ಎನ್ನುವ ತನ್ನ ಧ್ಯೇಯ ಅವನಲ್ಲಿ ಒಬ್ಬನಲ್ಲಿಯಾದರೂ ಮೂಡಿದುದಕ್ಕೆ ಶ್ರೀಕಂಠಯ್ಯ ಸಂತೋಷಪಟ್ಟರು. ಆದರೆ ಮರುಕ್ಷಣದಲ್ಲಿಯೇ ಆ ದಾರಿಯಲ್ಲಿ ಸಾಕಷ್ಟು ಕಷ್ಟವನ್ನನುಭವಿಸಿದ್ದ ತಾವು ಅವನ ಅಭಿಪ್ರಾಯವನ್ನು ಒಂದೇ ಬಾರಿಗೆ ಅನುಮೋದಿಸುವುದು ಸರಿ ಎನಿಸಲಿಲ್ಲ. ಬಿಜಿನೆಸ್ ಮಾಡಲು ಹೇರಳ ವಾದ ಬಂಡವಾಳವಿರಬೇಕು, ಅದನ್ನು ನಡೆಸಿಕೊಂಡು ಹೋಗಲು ತಕ್ಕ ದಕ್ಷತೆ ಇರಬೇಕು. ಆಳುಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು, ಹಾಗೆ ಹೀಗೆ ಎಂದು ಅದರಲ್ಲಿರುವ ಕಷ್ಟ ಸುಖಗಳೆಲ್ಲವನ್ನೂ ತಿಳಿಯಹೇಳಿದರು. ಏನಾದರೂ ಮುರಲಿಯದು ಒಂದೇ ಮಂತ್ರ, 'ನಾನು ಗ್ಯಾರೇಜ್ ತೆಗೆಯುವೆ ಎಂದು' ಅದರಲ್ಲಿಯ ಅನುಕೂಲ ಅನಾನುಕೂಲತೆಗಳನ್ನು ತಿಳಿಸಿದರೂ ಕೂಡಾ ಮುರಲಿ ತನ್ನ ಹಟವನ್ನು ಬಿಡದೇ ಇದ್ದುದರಿಂದ ಶ್ರೀಕಂಠಯ್ಯ ಅವನ ಮಾತಿಗೇ ಒಪ್ಪಿ ಕೊಳ್ಳಬೇಕಾಯಿತು.

ಮುರಲಿಯ ತಮ್ಮ ಮುಕುಂದ, ಜ್ಯೂನಿಯರ್ ಇಂಟರ್ ಓದುತ್ತಿದ್ದ. ಮುಕುಂದ ಮುರಲಿಗಿಂತ ಒಂದೇ ವರ್ಷ ಚಿಕ್ಕವ. ಇಬ್ಬರೂ ಒಂದೇ ಪಡಿಯಚ್ಚಿನಲ್ಲಿ ಮಾಡಿದಂತಿದ್ದರು. ನೋಡುವವರಿಗೆ ಅವರು ಅವಳಿ ಮಕ್ಕಳಂತೆಯೇ ಕಾಣುತ್ತಿದ್ದರು. ಹಾಗೆಯೇ ಅವರಿಬ್ಬರಲ್ಲಿ ಗಾಢವಾದ ಪ್ರೀತಿ ಇದ್ದಿತು. ಯಾವುದೇ ವಿಚಾರದಲ್ಲೂ ಅವರಿಬ್ಬರ ಅಭಿಪ್ರಾಯಗಳೂ ಒಂದೇ ತೆರನಾಗಿರುತ್ತಿದ್ದುವು. ಮುರಲಿ ವಿದ್ಯಾಭ್ಯಾಸವನ್ನು ಮುಗಿಸಿ ಗ್ಯಾರೇಜ್ ತೆಗೆಯಲು ಮನಸ್ಸು ಮಾಡಿದಾಗ ಮುಕುಂದನೂ ಅವನ ಸಲಹೆಯನ್ನೇ ಅಂಗೀಕರಿಸಿದನು. ಇನ್ನು ಒಂದು ವರ್ಷ ಅವನೂ ಓದಿ ಇಂಟರ್ ಮುಗಿಸಬೇಕು, ನಂತರ ಮುರಲಿಯ ಬಿಜಿನೆಸ್‌ನಲ್ಲಿಯೇ ಭಾಗವಹಿಸಬೇಕು, ಹೀಗೆ ಅವರಿಬ್ಬರಲ್ಲೂ ಒಂದು ಒಪ್ಪಂದವಾಯಿತು.

ಬಿಜಿನೆಸ್ ಮಾಡುವುದಂತೂ ಸರಿ. ಅದಕ್ಕೆ ಮುಖ್ಯವಾದ ಬಂಡವಾಳವನ್ನೆಲ್ಲಿಂದ ತರುವುದು ? ತಂದೆಯ ಬಳಿ ಇರುವುದು ಏಳೆಂಟು ಸಾವಿರಗಳಾಗಬಹುದು. ಅದು ಎಲ್ಲರ ಮದುವೆ ಮತ್ತು ವಿದ್ಯಾಭ್ಯಾಸಕ್ಕೆಂದು ತೆಗೆದಿಟ್ಟ ಹಣ. ಅದನ್ನಂತೂ ಕೇಳುವಂತಿಲ್ಲ. ಇನ್ನೂ ಆನಂದನ ಓದು, ಮತ್ತು ತಮ್ಮ ನಾಲ್ವರ ಮದುವೆಯಾಗಬೇಕು. ಸಾಲ ಮಾಡುವುದು ಬೇಕಿರಲಿಲ್ಲ. ಕಡೆಗೆ ಧೈರ್ಯಮಾಡಿ ಮುರಲಿ ಕೇಳಿದ, ತನ್ನ ಪಾಲನ್ನು ಕೊಡಬೇಕೆಂದು. ಶ್ರೀಕಂಠಯ್ಯನವರಿಗೆ ಸುಖ-ದುಃಖಗಳು ಏಕಕಾಲದಲ್ಲುಂಟಾದುವು, ಮಗನ ಮಾತು ಕೇಳಿ. ಅವನು ಧೈರ್ಯದಿಂದ ತಮ್ಮ ಎದುರಿಗೇ ಪಾಲು ಕೇಳಿದ್ದಕ್ಕಾಗಿ ಸಂತೋಷವೂ, ತಾನು ಬದುಕಿರುವಾಗಲೇ ಮಗ ಈ ರೀತಿ ಕೇಳಿದನಲ್ಲಾ ಎಂದು ದುಃಖವೂ ಉಂಟಾಯಿತು. 'ನಿನಗೆ ಬಂಡವಾಳ ಎಷ್ಟು ಬೇಕು ಹೇಳು? ನಾನು ಒದಗಿಸುವೆ ' ಎಂದು ಹೇಳಿದರೂ ಮುರಲಿಯು ಒಪ್ಪದೆ, ಇತರರ ಹಣ ತನಗೆ ಬೇಡವೆಂದೂ, ನ್ಯಾಯವಾಗಿ ತನಗೆ ಬರಬೇಕಾದ ಪಾಲಿನ ಹಣ ಮಾತ್ರ ಬೇಕೆಂದೂ ಹಟ ಹಿಡಿದ. ಯಾರ ಹೇಳಿಕೆಯೂ ಅವನ ಮುಂದೆ ಉಪಯೋಗಕ್ಕೆ ಬಾರದವುಗಳಾಗಿದ್ದುವು. "ಅವನ ಆಸೆಯನ್ನು ಯಾಕೆ ವ್ಯರ್ಥವಾಗಿಸಬೇಕು ? ನಮ್ಮ ದೇಹ ಗಟ್ಟಿರುವಾಗಲೇ ಅವರವರ ಪಾಲಿನದನ್ನು ಅವರವರಿಗೆ ಕೊಟ್ಟುಬಿಡೋಣ. ಏನಾದರೂ ಮಾಡಿಕೊಳ್ಳಲಿ. ನಾನು ಸತ್ತ ಮೇಲೆ, 'ತಂದೆ ಪಾಲುಮಾಡಲಿಲ್ಲ. ಬರಿಯ 'ವಿಲ್' ಬರೆದು ಹೋಗಿದ್ದಾರೆ, ಪಕ್ಷಪಾತಮಾಡಿದ್ದಾರೆ' ಎಂಬ ದೂರುಗಳೇ ಬೇಡ. ಅವರಿಗೆ ಬಂದಿದ್ದನ್ನು ಅವರು

ಪಡೆದು ಸುಖವಾಗಿರಲಿ." ಎಂದು ಕಡೆಯ ನಿರ್ಧಾರಕ್ಕೆ ಬಂದರು ಶ್ರೀಕಂಠಯ್ಯ. ಜಾನಕೀಬಾಯಿಯವರು ಕೂಡಾ ಚರ್ಚೆಯಲ್ಲಿ ಭಾಗ ವಹಿಸಿದರು. ಕಡೆಗೆ ಅವರ ಒಪ್ಪಿಗೆಯ ಮೇಲೆ ಮಲ್ಲೇಶ್ವರದಲ್ಲಿರುವ, ಅವರ ತಂದೆಯ ಮನೆಯನ್ನು ಮಾರುವುದೆಂದೂ, ಈಗಿರುವ ಮನೆಯನ್ನು ತಾವಿಬ್ಬರೂ ಸತ್ತಮೇಲೆ ಮಾರಿ ಬಿಟ್ಟು ಅದನ್ನು ಹಂಚಿಕೊಳ್ಳುವುದೆಂದೂ ಗೊತ್ತಾಯಿತು. ಅದರಿಂದ ಈಗ ಇರುವ ಮನೆಯು ಹಾಗೆಯೇ ಇರಬೇಕು. ಮಲ್ಲೇಶ್ವರದ ಮನೆಯನ್ನು ಮಾರಿ, ಅದನ್ನು ಎಲ್ಲರಿಗೂ ಹಂಚಬೇಕೆಂದೂ ತೀರ್ಮಾನವಾಯಿತು.

ಜಾನಕೀಬಾಯಿ ನಡುವೆಯೇ ಹೇಳಿದರು. "ಇದು ನನ್ನ ತಂದೆ ನನಗಾಗಿ ಕೊಟ್ಟಿರುವ ಮನೆ. ಈ ಮನೆಯ ಜೊತೆಗೆ ಹತ್ತುಸಾವಿರ ರೂಪಾಯಿಗಳೂ ನನಗೆ ಬಂದುವು. ನೀವು ಆರು ಜನ ಹುಡುಗರಿದ್ದೀರಿ, ಆದರೆ ಒಬ್ಬಳೇ ಮಗಳು. ತಾಯಿ-ತಂದೆಯವರ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೂ ಹಕ್ಕು ಇದೆ. ಅವಳನ್ನೂ ನಮ್ಮ ಜೊತೆಗೇ ಸೇರಿಸಿಕೊಂಡು, ಎಲ್ಲರಿಗೂ ಸಮನಾಗಿ ಪಾಲು ಮಾಡಿರಿ. ಹಾಗೆ ಮಾಡುವಿರಾದರೆ ನಾನು ಈ ಮನೆಯನ್ನು ಮಾರಲು ಅನುಮತಿ ಕೊಡುವೆ. ಇಲ್ಲವಾದರೆ ನನ್ನ ಸ್ವಂತ ಹಕ್ಕಿನ ಆ ಮನೆಯನ್ನು ಪೂರ್ತಿಯಾಗಿ ನಾನು ಸುಂದರಾಳಿಗೇ ಬಳುವಳಿಯಾಗಿ ಕೊಟ್ಟುಬಿಡುವೆ ತಿಳಿಯಿತೆ?" ಎಂದು ತಮ್ಮ ನಿರ್ಧಾರವನ್ನು ಸ್ಪಷ್ಟವಾಗಿ ತಿಳಿಸಿದರು. ಮುರಲಿಗೂ ತಂಗಿ ಎಂದರೆ ಪ್ರೀತಿ ಇದ್ದಿತು. ಎಲ್ಲರೂ ತಾಯಿಯ ಮಾತಿಗೆ ಒಪ್ಪಿಕೊಂಡರು.

ಮಾರನೆಯ ದಿನವೇ ಶ್ರೀಕಂಠಯ್ಯ ತಮ್ಮ, ದೂರದ ಊರುಗಳಲ್ಲಿರುವ ಮಕ್ಕಳಿಗೆ ಕಾಗದ ಬರೆದರು. "ಬಹಳ ಅರ್ಜೆಂಟಾದ ವಿಚಾರ ಮಾತನಾಡುವುದಿದೆ. ನೀನು ಖಂಡಿತವಾಗಿಯೂ ಬಂದೇ ತೀರಬೇಕು. ಇದು ಟೆಲಿಗ್ರಾಂ ಎಂದು ತಿಳಿದುಕೋ. ಎಂಟು ದಿನಗಳ ರಜೆಯನ್ನು ಪಡೆದುಕೊಂಡು ಬಾ." ಎಂದು ಮೂವರಿಗೂ ಒಂದೇ ರೀತಿಯಲ್ಲಿ ಕಾಗದ ಬರೆದರು.

ಮಾಧವ ಆಫೀಸಿನಲ್ಲಿರುವಷ್ಟೂ ವೇಳೆ ತಂದೆಯಿಂದ ಬಂದ ಕಾಗದವನ್ನು ನೋಡಲು ಸಾಧ್ಯವೇ ಆಗಲಿಲ್ಲ. ಕೆಲಸ ಮುಗಿದು ಹೊರಗೆ ಹೊರಡು

ಪಾಗ ಆ ಕಾಗದ ಕೈಗೆ ತೆಗೆದುಕೊಂಡ. ಹಾಗೆ ಅದನ್ನು ಬಿಚ್ಚಿ ಅದರ ಮೇಲೆ ಕಣ್ಣಾಡಿಸಿದ. ಏನೋ ಮಹತ್ವಪ್ಪೆನಿಸಿ ಮತ್ತೊಮ್ಮೆ ನೋಡಿದ. ನೋಡಿ ಚಕಿತ ನಾದ. ತಂದೆ ಯಾವ ವಿಷಯಕ್ಕಾಗಿ ಆ ರೀತಿ ಬರೆದಿರಬಹುದು? ಬಹುಷಃ ತನ್ನ ಮತ್ತು ಲೂಸಿಯ ಸಂಬಂಧ ಅವರಿಗೆ ತಿಳಿದು, ಅದಕ್ಕಾಗಿ ಬರಲು ಬರೆದಿದ್ದಾರೆಯೆ? ಅಥವಾ ಮೋಹನನಿಗೆ ಮದುವೆ ಗೊತ್ತುಮಾಡುವುದಕ್ಕಾಗಿಯೇ? ಯಾತಕ್ಕಾಗಿ ತನ್ನನ್ನು ಬರಲು ಬರೆದಿದ್ದಾರೆ? ಅದೂ ಎಂಟು ದಿನಗಳ ಮೇಲೆ! ಅಷ್ಟು ದಿನ ಲೂಸಿಯನ್ನು ಬಿಟ್ಟಿರುವುದು ಹೇಗೆ? ಈ ಒಂದು ತಿಂಗಳಲ್ಲಿ ಅವಳ ಸ್ನೇಹ ಎಷ್ಟು ಬಲಿತಿದೆ? ಆ ಆಮ್ಲೇಟ್, ಅದರ ವಾಸನೆಯೂ ಸೇರದಿದ್ದ ತನಗೆ, ಎಷ್ಟು ಚಮತ್ಕಾರವಾಗಿ ತಾನೇ ಅದನ್ನು ತಿನ್ನಿಸಿದಳು? ಆ ಶಾಂಪೇಯಿನ್ ಪಾನೀಯವನ್ನು ಕೂಡಾ ಹೇಗೆ ಕುಡಿಸಿದಳು? ಯಾವುದು ಸಾಧ್ಯವಿಲ್ಲ ಎನ್ನುತ್ತಿದ್ದನೋ, ಅದನ್ನೆಲ್ಲಾ ಸಾಧ್ಯವನ್ನಾಗಿ ಮಾಡಿ ತೋರಿಸಿದಳು. ಈಗ ತಾನು ಎಂಟು ದಿನಗಳ ರಜೆಯ ಮೇಲೆ ಊರಿಗೆ ಹೋಗುವೆನೆಂದರೆ ಅವಳು ನಿಜವಾಗಿಯೂ ತನ್ನನ್ನು ಹೋಗಗೊಡಿಸುತ್ತಾಳೆಯೆ? ಆದರೆ ತಂದೆಯ ಮಾತನ್ನು ಮೀರುವುದೇ? ಏನೇ ಆಗಲೀ ಬೆಂಗಳೂರಿಗೆ ಹೋಗಲೇಬೇಕು. ಬೇಕಾದರೆ ಅಲ್ಲಿಂದಲೇ ಕಾಗದವನ್ನು ಬರೆದು ಇಲ್ಲಿಯ ಕೆಲಸವನ್ನು ತಿಳಿಸಿದರೆ ಆಯಿತು. ಆದರಿಂದ ಲೂಸಿಗೆ ಈಗಲೇ ತಿಳಿಸುವುದೇ ಬೇಡ, ಎಂದು ನಿರ್ಧರಿಸಿಕೊಂಡು ಲೂಸಿಗಾಗಿ ಕಾಯದೆ ನೇರವಾಗಿ ತನ್ನ ಮನೆಗೇ ಬಂದ.

ಲೂಸಿಯ ಪರಿಚಯವಾದ ಮೇಲೆ ಮಾಧವ ಮನೆಗೆ ಬರುತ್ತಿದ್ದುದು ರಾತ್ರಿಯೇ. ಕೆಲಸ ಮುಗಿದೊಡನೆಯೇ ಲೂಸಿಯ ಜೊತೆಯಲ್ಲಿಯೇ ಅವಳ ಮನೆಗೆ ಹೋಗಿ, ಅವಳ ಜೊತೆಯಲ್ಲಿ ಕಾಲ ಕಳೆದು, ಒಂದೊಂದು ದಿನ ಅಲ್ಲಿಯೇ ಊಟ ಮುಗಿಸಿಕೊಂಡು ಮನೆಗೆ ಬರುತ್ತಿದ್ದ ಮಾಧವ, ಈ ದಿನ ಸಂಜೆಗೇ ಮನೆಗೆ ಬಂದುದನ್ನು ನೋಡಿ ಸರೂ ತನ್ನ ಕಣ್ಣುಗಳನ್ನೇ ನಂಬಲಾರದವಳಾದಳು. ಲೂಸಿಯ ಜೊತೆ ಏನಾದರೂ ಮನಸ್ತಾಪ ನಡೆದಿರಬೇಕು. ಅದಕ್ಕಾಗಿ ಬಂದಿದ್ದಾರೆಯೇ? ಏನು ಕಾರಣ ಇರಬೇಕು, ಎಂದು ಸರೂವಿನ ತಲೆಯಲ್ಲಿ ಏನೇನೋ ವಿಚಾರಗಳು ಒಂದು ಕ್ಷಣದಲ್ಲಿ ಬಂದು ಗುದುಮುರಿಗೆ ಹಾಕಿ ಹೋದುವು.

"ನಾನು ರಾತ್ರಿ ಬೆಂಗಳೂರಿಗೆ ಹೊರಡುವೆ ಸರೂ. ಅಣ್ಣಾ ಕಾಗದ ಬರೆದಿದ್ದಾರೆ." ಮಾಧವ ಕಾಗದವನ್ನು ಸರೂವಿನ ಕೈಗಿತ್ತ. ಸರೂ ಓದಿ ಗಾಬರಿ

ಯಾದಳು. ಅಲ್ಲಿ ಎಲ್ಲರೂ ಹುಷಾರಾಗಿದ್ದರೆ ಸಾಕು. ದೇವರೇ, ನನ್ನ ಅತ್ತೆ-ಮಾವಂದಿರು ಸುಖವಾಗಿರಲಿ ಎಂದುಕೊಂಡು ದೇವರಿಗೆ ಬೇಡಿಕೊಂಡಳು. ಅವಳ ಹೃದಯ ಯಾವುದೋ ಅಮಂಗಳವನ್ನು ನೆನೆದು ನಡುಗಿತು. 'ದೇವರೇ, ನನ್ನ ಪತಿಯ ಪ್ರಯಾಣ ಸುಖಕರವಾಗಿರಲಿ, ಅವರಿಗೆ ಒಳ್ಳೆಯದನ್ನು ಮಾಡು' ಎಂದು ಮತ್ತೆ ಮತ್ತೆ ಮನಸ್ಸಿನಲ್ಲಿ ದೇವರಿಗೆ ನಮಸ್ಕರಿಸಿದಳು.

ಅದೇ ಹೊತ್ತಿಗೆ ವಿಜಯ ಆಳಿನ ಜೊತೆಯಲ್ಲಿ ಮನೆಗೆ ಬಂದ. ತಂದೆಯನ್ನು ಅವನು ಸಂಜೆಯ ವೇಳೆ ಮನೆಯಲ್ಲಿ ನೋಡಿ ಅದೆಷ್ಟು ದಿನವಾಗಿತ್ತೋ ಏನೋ! "ಅಣ್ಣಾ........ಯಾವಾಗ ಬಂದೆ? ಪೆಪ್ಪಿಂಟು ತಂದೆಯಾ?" ಎಂದು ಮಾತಿನ ಮಳೆಯನ್ನೇ ಸುರಿಸುತ್ತಾ ವಿಜಯ ತಂದೆಯ ತೊಡೆಯ ಮೇಲೆ ಕುಳಿತುಕೊಂಡ. "ನೋಡು ಮಗು, ಮರೆತೇ ಹೋಯ್ತು. ಹೋಗಲೀ ನೀನೇ ನಾಳೆ ಅಂಗಡಿಗೆ ಹೋಗಿ ಕೊಂಡುಕೋ." ಮಾಧವ ಜೇಬಿನಿಂದ ಬೆಳ್ಳಿಯ ರೂಪಾಯಿ ಒಂದನ್ನು ವಿಜಯನ ಕೈಲಿ ಕೊಟ್ಟು ಮುದ್ದಾಡಿದ. ಕಾಣದ ನಿಧಿಯನ್ನು ಕಂಡಂತೆ, ವಿಜಯ ತಂದೆಯನ್ನು ಅಪ್ಪಿಕೊಂಡ. ತನಗೆ ಬರುವ ಕತೆ ಹೇಳಿದ, ತಾನು ದಿನಾ ಎಲ್ಲೆಲ್ಲಿ ಹೋಗುತ್ತೇನೆ, ಯಾವ ಯಾವ ಆಟ ಆಡುತ್ತೇನೆ ಎಂದೆಲ್ಲಾ ಹೇಳಿದ. ಮಗುವಿನ ನಿರ್ಮಲವಾದ ಮುಗ್ಧವಾದ ಹೃದಯವನ್ನು ನೋಡಿ ಮಾಧವನಿಗೆ 'ಈ ಚಿನ್ನದಂತಾ ಮಗುವನ್ನೂ ಕೂಡಾ ನಾನು ಸರಿಯಾಗಿ ನೋಡಿಕೊಳ್ಳುವುದಿಲ್ಲವಲ್ಲಾ' ಎಂದು ಪಶ್ಚಾತ್ತಾಪವಾಗಿರಬೇಕು.

ಮಾಧವ, ವಿಜಯನನ್ನು ತನ್ನ ತೊಡೆಯ ಮೇಲೆಯೇ ಕೂರಿಸಿಕೊಂಡು ಊಟ ಮಾಡಿದ; ಹಾಗೆಯೇ ಅವನಿಗೂ ತಾನೇ ಊಟ ಮಾಡಿಸಿದ. ವಿಜಯನ ಮಾತು ತುದಿಮೊದಲಿಲ್ಲದಂತೆ ನಿರರ್ಗಳವಾಗಿ, ಸರಾಗವಾಗಿ ನಡೆದೇ ಇತ್ತು. ಕುಣಿದು, ದಣಿದು, ಬಳಲಿದ ವಿಜಯ ತಂದೆಯ ತೊಡೆಯ ಮೇಲೆಯೇ ಮಲಗಿ ನಿದ್ದೆ ಹೋದ.

ಶ್ರೀಕಂಠಯ್ಯ ಮಾಧವನನ್ನು ಇಂತಹದೇ ಕೆಲಸಕ್ಕಾಗಿ ಕರೆಯಿಸಿಕೊಳ್ಳುತ್ತಾರೆ ಎಂಬುದು ಸರೂವಿಗೆ ತಿಳಿದಿದ್ದರೆ, ಅವಳೂ ಅವನ ಜೊತೆಯಲ್ಲಿಯೇ ಹೋಗಬಹುದಾಗಿತ್ತು. ಅದರ ಪರಿಣಾಮವೇ ಬೇರೆಯಾಗಬಹುದಾಗಿತ್ತು.

ಸರೂ ಬೇಗನೆ ಮಾಧವನ ಹಾಸಿಗೆ, ಬಟ್ಟೆಬರೆ ಎಲ್ಲಾ ಕಟ್ಟಿ ಸಿದ್ಧಪಡಿಸಿದಳು. "ವಿಜಯನನ್ನು ಜೋಪಾನವಾಗಿ ನೋಡಿಕೋ, ಒಬ್ಬನನ್ನೇ ಹೊರಗೆ

ಬಿಡಬೇಡ. ಮನೆಯ ಕಡೆ ಎಚ್ಚರದಿಂದಿರು.' ಎಂದೆಲ್ಲಾ ಸರೂವಿನ ಬಗ್ಗೆ ಹೇಳಿ, 'ಲೂಸಿ ಬಂದರೆ ಸರೂ, ಬೆಂಗಳೂರಿನಿಂದ ತಂದೆಯವರಿಂದ ಟೆಲಿಗ್ರಾಂ ಬಂದಿತ್ತೆಂದೂ, ಅದರಿಂದ ಅವಳನ್ನು ಕಾಣದೆಯೇ ಹೋಗಬೇಕಾಗಿ ಬಂದಿತೆಂದೂ, ತಿಳಿಸು. ಕಾಗದ ಬಂದಿತ್ತು ಎಂತ ತಿಳಿಸಬೇಡ. ಆದಷ್ಟು ಬೇಗ ಬರುವೆ ಎಂದು ತಿಳಿಸು." ಎಂದು ಮಾಧವ ಟ್ಯಾಕ್ಸಿಯಲ್ಲಿ ಕುಳಿತ. ಸರೂ ತೇವಗೊಂಡ ಕಣ್ಣುಗಳಿಂದ ಮಾಧವನನ್ನೇ ನೋಡುತ್ತಾ ನಿಂತಿದ್ದಳು. ಕೆಲವೇ ನಿಮಿಷದಲ್ಲಿ ಕಾರು ಕಣ್ಮರೆಯಾಯಿತು. ಭಾರವಾದ ಹೃದಯದಿಂದ ಸರೂ ಒಳಗೆ ನಡೆದಳು.

ಮಾಧವ ಬೆಂಗಳೂರನ್ನು ತಲುಪಿದ ಮಾರನೆಯ ದಿನವೇ ಬೆಳಗಾವಿಯಿಂದ ಅಶೋಕ ಬಂದಿಳಿದ. ನಂತರ ಮೋಹನ ಬಂದ. ಶ್ರೀಕಂಠಯ್ಯನವರ ಮನೆ ಮಕ್ಕಳಿಂದ ತುಂಬಿ ಹೋಗಿತ್ತು. ಮಾಧವನನ್ನು ನೋಡಿದ ಕೂಡಲೇ ಶ್ರೀಕಂಠಯ್ಯ "ವಿಜಯನನ್ನು ಏಕೆ ಕರೆತರಲಿಲ್ಲ? ಅವನನ್ನು ನೋಡಿ ಎಷ್ಟೋ ವರ್ಷಗಳಾದಂತಿದೆ." ಎಂದು ಮೊಮ್ಮಗನನ್ನು ಕಾಣುವ ಬಯಕೆ ತೋರ್ಪಡಿಸಿದರು. ಬಂದ ಒಂದೆರಡು ದಿನ ಬರಿಯ ಮಾತು-ಕತೆ, ಊಟ-ತಿಂಡಿಗಳಲ್ಲೇ ಕಳೆದುಹೋಯಿತು.

ರಾತ್ರಿ ಎಲ್ಲರ ಊಟವೂ ಮುಗಿದು, ವೆರಂಡಾದಲ್ಲಿ ಎಲ್ಲರೂ ಕುಳಿತಿದ್ದರು. ಜಾನಕೀಬಾಯಿಯವರ ಕೆಲಸವೂ ಮುಗಿದು ಅವರೂ ಮಕ್ಕಳ ಜೊತೆ ಬಂದು ಕೂತರು. ಶ್ರೀಕಂಠಯ್ಯ ಆಗ ತಾವು ಅವರನ್ನೆಲ್ಲಾ ಕರೆಸಿದ ವಿಷಯವನ್ನು ಎತ್ತಿದರು.

"ಈಗಲೇ ಪಾಲು ಮಾಡಿಕೊಳ್ಳುವ ಅವಶ್ಯಕತೆಯಾದರೂ ಏನಿದೆ?" ಅಶೋಕ ಕೇಳಿದ.

ಮುರಲಿ ತನ್ನ ಅಭಿಪ್ರಾಯವನ್ನು ತಿಳಿಸಿದ. ಅನೇಕ ಗಂಟೆಗಳ ವರೆಗೆ ಚರ್ಚೆಯಾದ ನಂತರ ಎಲ್ಲರೂ ಮನೆಯನ್ನು ಮಾರುವುದಕ್ಕೆ ತಮ್ಮ ತಮ್ಮ ಸಮ್ಮತಿಯನ್ನು, ಸೂಚಿಸಿದರು.

ಮಾಧವ ತಾನು ಬಂದ ಕೆಲಸ ತಿಳಿದೊಡನೆಯೇ ಲೂಸಿಗೆ ದೀರ್ಘವಾದ

ಪತ್ರವನ್ನೊಂದು ಬರೆದ. ತಾನು ಬರುವುದಕ್ಕೆ ಮುಂಚೆ ಅವಳನ್ನು ನೋಡ
ಲಾರದೇ ಹೋದುದಕ್ಕಾಗಿ ಬಹಳ ವ್ಯಸನಪಟ್ಟು, ಕೆಲಸ ಮುಗಿದೊಡನೇ ಬೇಗ
ಬರುವುದಾಗಿಯೂ ತಿಳಿಸಿದ. ಮತ್ತು ಈಗ ತಾನು ಬಂದಿರುವುದು ಯಾವ
ಕಾರ್ಯಕ್ಕಾಗಿ ಎಂಬುವನ್ನೂ ತಿಳಿಸಿದ.

ಮನೆಯನ್ನು ಮಾರುವುದಕ್ಕೆ ಶ್ರೀಕಂಠಯ್ಯ ಹಿಂದಿನಿಂದಲೂ ಪ್ರಯತ್ನ
ಪಟ್ಟು ಗಿರಾಕಿಯನ್ನು ಹೊಂದಿಸಿದ್ದರು. ಮನೆಯು ಎಂಬತ್ತುಸಾವಿರ ರೂಪಾಯಿ
ಗಳಿಗೆ ಮಾರಾಟವಾಯಿತು. ಜೊತೆಗೆ ಜಾನಕೀಬಾಯಿಯವರ ಕೈಲಿ ನಗದು
ಇದ್ದ ಹತ್ತುಸಾವಿರ ರೂಪಾಯಿಗಳನ್ನೂ ಸೇರಿಸಿ, ಸಮವಾಗಿ ಏಳು ಭಾಗ
ಮಾಡಿದರು. ಪ್ರತಿಯೊಬ್ಬರಿಗೂ ಹನ್ನೆರಡು ಸಾವಿರ ಚಿಲ್ಲರೆ ಬಂದಿತು. ಆನಂದನ
ಮತ್ತು ಸುಂದರಳ ಹಣ ಬ್ಯಾಂಕಿನಲ್ಲಿಡಲ್ಪಟ್ಟಿತು. ಉಳಿದವರ ಹಣವು
ಅವರವರ ಕೈಗೇ ನಗದು ದೊರಕಿತು. ಬಂದ ಕೆಲಸ ಮುಗಿದದ್ದರಿಂದ ಎಲ್ಲರೂ
ಹೊರಡುವ ಯೋಚನೆಯಲ್ಲಿದ್ದರು. ಮಾಧವನೂ ಅದೇ ತಯಾರಿಯಲ್ಲಿರುವಾಗ
ಅವನಿಗೆ ಊರಿನಿಂದ ಕಾಗದವೊಂದು ಬಂದಿತ್ತು. ಅದನ್ನು ಲೂಸಿ ಬರೆದಿದ್ದಳು

ಮದ್ರಾಸ

ಡಾರ್ಲಿಂಗ್, ..........

ಈ ದಿನ ಆಫೀಸಿಗೆ ಹೋದಾಗ, ಎಂದಿನಂತೆ ನಿಮ್ಮನ್ನು ಮಹಡಿಯ
ಬಳಿ ಕಾಣದೇ ನನ್ನ ಹೃದಯ ಹೊಡೆದುಕೊಳ್ಳಲಾರಂಭಿಸಿತು. ವಿಚಾ
ರಿಸಿದಲ್ಲಿ ನೀವು ರಜೆಯ ಮೇಲೆ ಇದ್ದೀರಿ ಎಂದು ತಿಳಿಯಿತು. ಆ ದಿನ
ನನ್ನ ಮನಸ್ಸೇ ನನ್ನ ಕೈಯಲ್ಲಿರಲಿಲ್ಲ. ಅದು ಹೇಗೆ ನನ್ನ ಕೆಲಸ ಮಾಡಿ
ಮುಗಿಸಿದೆನೋ ದೇವರೇ ಬಲ್ಲ. ಕೆಲಸ ಮುಗಿದೊಡನೇ ನಿಮ್ಮ ಮನೆಗೆ
ಓಡಿದೆ ಡಿಯರ್. ನಿಮ್ಮ ಮಿಸೆಸ್ ಎಲ್ಲವನ್ನೂ ಹೇಳಿದರು. ಅವರಿಂದಲೇ
ನಿಮ್ಮ ವಿಳಾಸವನ್ನು ಪಡೆದು ಈಗ ಬರೆಯುತ್ತಿದ್ದೇನೆ. ನೀವು ಸುಖವಾಗಿ
ಅಲ್ಲಿಗೆ ತಲುಪಿದಿರಿ ತಾನೇ? ಅಲ್ಲಿಯ ಕೆಲಸ ಮುಗಿಯಿತೆ? ನಿಮ್ಮನ್ನು
ನೋಡದೇ ಇರುವುದು ನನಗೆ ಹುಚ್ಚು ಹಿಡಿದಂತಾಗಿದೆ, ಸ್ವೀಟ್! ನಾನು
ನಿಮಗಾಗಿ ಕಾಯುತ್ತಿದ್ದೇನೆ, ಬೇಗ ಬನ್ನಿ. ನನಗೆ ದೇವರು ರೆಕ್ಕೆ
ಗಳನ್ನು ಕೊಟ್ಟಿದ್ದರೆ, ನಿಮ್ಮ ಬಳಿಗೆ ಒಂದೇ ಉಸುರಿಗೆ ಹಾರಿ ಬರು
ತ್ತಿದ್ದೆ. ನಿಮ್ಮನ್ನು ಕಾಣದೆ, ನಾನು ಕ್ಷಣವೂ ಇರಲಾರೆ. ಈ ದಿನ

ರಾತ್ರಿಯ ಗಾಡಿಯಲ್ಲಿ ಹೊರಟು ಅಲ್ಲಿಗೆ ಬರುವೆ. ಸ್ಟೇಷನ್ ಬಳಿ ನೀವು ಬರುವಿರಾ? ಖಂಡಿತ ಮರೆಯಬೇಡಿ.

ನಿಮಗಾಗಿ ಹಗಲಿರುಳೂ ಕಾದಿರುವ ನಿಮ್ಮ

—ಲೂಸಿ ಲೀ.

ಮಾಧವ ಕಾಗದವನ್ನು ನೋಡಿ ಅಚ್ಚರಿಗೊಂಡ. ತನಗಾಗಿ ಲೂಸಿ ಎಷ್ಟು ಕಾತರಿಸುತ್ತಾಳೆ! ತನ್ನಲ್ಲಿ ಅವಳು ಎಷ್ಟು ಪ್ರೀತಿ ಇಟ್ಟಿದ್ದಾಳೆ! ತಾನು ಇನ್ನೂ ಬಂದು ಕೇವಲ ನಾಲ್ಕು ದಿನಗಳಾದುವು, ಅಷ್ಟಕ್ಕೆ ಲೂಸಿ ತನ್ನನ್ನಗಲಿರ ಲಾರದೆ, ತಾನೇ ಅಲ್ಲಿಗೆ ಧಾವಿಸಿ ಬರುವಳಲ್ಲಾ! ಅವಳ ಮನಸ್ಸು ಎಂತಹದಿರ ಬಹುದು? ನಿಜಕ್ಕೂ ಅವಳೊಂದು ರತ್ನ ಎಂದುಕೊಂಡು ಆ ಕಾಗದವನ್ನು ಎಷ್ಟು ಭಾರಿ ಓದಿದರೂ ತೃಪ್ತಿಯಾಗಲಿಲ್ಲ. ಬರೆದಿರುವುದು ಸ್ವಲ್ಪವೇ ಆದರೂ ಆ ಕೆಲವೇ ಮಾತುಗಳಲ್ಲಿ ತನ್ನ ಹೃದಯವನ್ನೆಲ್ಲಾ ಹೇಗೆ ತೆರೆದು ತೋರಿದ್ದಾಳೆ! ಒಂದೊಂದು ಮಾತೂ ಎಷ್ಟು ಬೆಲೆಯುಳ್ಳವು! ಎಂದುಕೊಂಡು ಮಾಧವ ಲೂಸಿಯ ಯೋಚನೆಯಲ್ಲಿಯೇ ರಾತ್ರಿಯನ್ನು ಕಳೆದ. ಬೆಳಗ್ಗೆ ಅಷ್ಟು ಹೊತ್ತಿಗೆ ಎದ್ದವನೇ ಮಾಧವ ಬಟ್ಟೆ ಧರಿಸಿ ಹೊರಟು ನಿಂತ. ತಾಯಿಗೆ "ಅಮ್ಮಾ, ಈ ದಿನ ನನ್ನ ಸ್ನೇಹಿತನೊಬ್ಬ ರೈಲಿನಲ್ಲಿ ಬರುವುದಾಗಿ ತಿಳಿಸಿದ್ದಾನೆ. ಅವನನ್ನು ಕಾಣಲು ಹೋಗುವೆ." ಎಂದು ಹೇಳಿ ಹೊರಟೇಬಿಟ್ಟ.

ಕೈಯಲ್ಲಿ ಬ್ಯಾಗ್‌ನ್ನು ಹಿಡಿದು ಗಾಡಿಯಿಂದಿಳಿಯುತ್ತಿರುವ ಲೂಸಿಯನ್ನು ನೋಡಿದ ಕೂಡಲೇ ಮಾಧವ ತಾನಿರುವ ಜಾಗದಿಂದಲೇ ಕೂಗಿದ, ಹಲ್ಲೊ!' ಎಂದು.

ಲೂಸಿ ಮುಗುಳ್ನಗುತ್ತಾ ಅವನ ಬಳಿ ಬಂದಳು. ಅವಳು ಬೇರೆ ಯಾವ ಸಾಮಾನನ್ನೂ ತಂದಿರಲಿಲ್ಲ. ಮಾಧವ ಟ್ಯಾಕ್ಸಿ ಮಾಡಿಕೊಂಡು ನೇರವಾಗಿ 'ಮಾಡರ್ನ್ ಹಿಂದೂ ಹೋಟೆಲ್'ಗೇ ಲೂಸಿಯನ್ನು ಕರೆದೊಯ್ದ. ಅಲ್ಲಿ ಒಂದು ಡಬಲ್ ರೂಮನ್ನು ತೆಗೆದುಕೊಂಡಿದ್ದೂ ಆಯಿತು. ಲೂಸಿ ಸ್ನಾನ ಮುಗಿಸಿ, ಬಟ್ಟೆ ಬದಲಾಯಿಸಿದಳು. ಇಬ್ಬರೂ ಕೂಡಿಯೇ ಉಪಹಾರ ಮುಗಿಸಿದರು. ಮಾಧವ ತನ್ನ ಮನೆಯವರ ಸಮಾಚಾರವನ್ನೆಲ್ಲ ಹೇಳಿದ. ಮಾಧವನ ಕೈಗೆ ಬಂದಿದ್ದ ಪಿತ್ರಾರ್ಜಿತ ನಗದು ಹಣವನ್ನು ನೆನೆದು ಲೂಸಿಯ ಕಣ್ಣುಗಳು ಅರಳಿದುವು.

"ಸುಮ್ಮನೇ ಇಲ್ಲಿ ಕೂತು ಮಾಡುವುದೇನು? ಎಲ್ಲಿಯಾದರೂ ತಿರುಗಾಡಿ

ಕೊಂಡು ಬರೋಣವೇ?" ಲೂಸಿ ಕೇಳಿದಳು.

"ಹೂಂ ಬಾ. ಎಲ್ಲಿಯಾದರೂ ಹೋಗೋಣ." ಅವಳ ಜೊತೆ ನಡೆದು ಹೋದರೆ ಗುರುತಿನವರು ಯಾರಾದರೂ ಸಂಧಿಸಬಹುದೆಂದು ಮಾಧವ ಪುನಃ ಟ್ಯಾಕ್ಸಿಯನ್ನೇ ಗೊತ್ತುಮಾಡಿದ. ಕ್ಯಾಂಟೋನ್‌ಮೆಂಟ್ ಸಿಟಿಯೆಲ್ಲಾ ತಿರುಗಾಡಿದ್ದಾಯಿತು. ಮಾಧವ ಕಾರನ್ನು ತಮ್ಮ ಮನೆಯ ಮುಂದೆ ಬಿಡುವಂತೆ ಹೇಳಿ, ಮನೆಯನ್ನು ಲೂಸಿಗೆ ತೋರಿದ. ಹೊರಗಿನಿಂದಲೇ ನೋಡಿದ ಲೂಸಿ ಮನೆಯನ್ನು ಮೆಚ್ಚಿಕೊಂಡಳು. ಅವರು ಹಿಂತಿರುಗಿದಾಗ ಗಂಟೆ ಹನ್ನೆರಡಾಗಿತ್ತು.

"ನಾನು ಸಾಯಂಕಾಲ ಪುನಃ ಇಲ್ಲಿಗೆ ಬರುವೆ ಲೂಸೀ. ಅಮ್ಮ ನನಗಾಗಿ ಊಟ ಮಾಡದೆ ಕಾದಿರುತ್ತಾರೆ. ಈಗ ನಾನು ಹೋಗಲೇ ಬೇಕು." ಮಾಧವ ಹೊರಟುನಿಂತ.

ಲೂಸಿ ಅವನ್ನನ್ನಗಲಬೇಕಲ್ಲಾ ಎಂದು ಪೆಚ್ಚು ಮೋರೆಯಿಂದಲೇ ಅವನನ್ನು ಬೀಳ್ಕೊಂಡಳು. ಹಿಂತಿರುಗಿ ನೋಡುತ್ತಾ ಮನೆಗೆ, ಮಾಧವ ಹೊರಟು ಹೋದ.

"ಎಲ್ಲಿ ಹೋಗಿದ್ದೆ ಮಾಧೂ ಇಷ್ಟು ಹೊತ್ತು? ಮನೆಯವರ ಊಟವೆಲ್ಲಾ ಮುಗಿಯಿತು. ಅಶೋಕ ಊರಿಗೆ ಹೊರಟುಹೋದ. ನಿನ್ನನ್ನು ನೋಡಬೇಕೆಂದು ಬಹಳ ಹೊತ್ತು ಕಾದು ಕೂತ. ಆದರೆ ರೈಲಿನ ವೇಳೆಯನ್ನು ಮೀರುವುದಕ್ಕಾಗುತ್ತದೆಯೆ? ಹೊರಡುವ ಸಮಯದಲ್ಲಿ ಇಲ್ಲದ ಹಾಗೆ ಎಲ್ಲಿಗೆ ಹೋಗಿದ್ದೆ ಹೇಳು?" ಜಾನಕೀಬಾಯಿ ಅಸಮಾಧಾನಗೊಂಡರು.

"ಅದೇ ಅಮ್ಮ, ಆ ಸ್ನೇಹಿತ ನನ್ನನ್ನು ಬಿಡಲೇ ಇಲ್ಲ. ಅವರ ಮನೆಗೇ ನನ್ನನ್ನೂ ಕರೆದೊಯ್ದು, ಅಲ್ಲಿಯೇ ಊಟ ಮಾಡೆಂದು ಬಲವಂತ ಮಾಡಿದ. ಆದರೆ ನೀನು ನನಗಾಗಿ ಕಾದಿರುವೆ ಎಂದು ಹೇಳಿ, ಅವನನ್ನು ಒಪ್ಪಿಸಿ ಬರೋದಕ್ಕೆ ಇಷ್ಟು ಹೊತ್ತು ಆಯಿತು." ಮಾಧವ ಸುಳ್ಳಿನ ಕತೆಯನ್ನೇ ಕಟ್ಟಿದ.

ಮೋಹನನೂ ಮಧ್ಯಾಹ್ನ ಮೂರು ಗಂಟೆಗೇ ಹೊರಟುಹೋದ. ಉಳಿದವನೆಂದರೆ ಮಾಧವನೊಬ್ಬನೇ.

"ನಾಳಿನ ಬೆಳಗ್ಗೆಯ ಗಾಡಿಗೇ ಹೊರಡುವೆ ಅಮ್ಮಾ? ರಜೆ ಮುಗಿಯುತ್ತಾ ಬಂತು. ಅವನು ಈ ದಿನ ರಾತ್ರಿ ಅಲ್ಲಿಯೇ ಊಟಕ್ಕೆ ಬರಹೇಳಿದ್ದಾನೆ. ಹೊತ್ತಾಗದಿದ್ದರೆ ಮನೆಗೆ ತಿರುಗಿ ಬರುವೆ. ಇಲ್ಲವಾದರೆ, ಅಲ್ಲಿಯೇ ಇದ್ದು ಬೆಳಗ್ಗೆ

ಬರುವೆ." ಮಾಧವ ಬುಷ್‌ಕೋಟ್ ಹಾಕಿಕೊಳ್ಳುತ್ತಾ ಹೇಳಿದ.

"ಅಪರೂಪಕ್ಕೆ ಬಂದಿರುವವನು, ಇರುವ ಎರಡು ದಿನ ಮನೆಯಲ್ಲಿದ್ದು ಮಾತು-ಕತೆಯಾಡದ ಹಾಗೆ, ಅದ್ಯಾವ ಸ್ನೇಹಿತ ಸಿಕ್ಕಿದನೋಪ್ಪ ನಿನಗೆ? ಬಂದಾಗಿನಿಂದ ಲಾಗಾಯ್ತು ತಿರುಗುತ್ತಲೇ ಇದ್ದೀ!" ಜಾನಕೀಬಾಯಿ ಮರುಕಪಟ್ಟು ನುಡಿದರು.

ಮಾಧವ ಹೋದುದು ಅವನ ಸ್ನೇಹಿತೆ ಲೂಸಿಯ ಬಿಡಾರಕ್ಕೆ. ಲೂಸಿ ತನ್ನ ಜಾಣ್ಮೆಯನ್ನೆಲ್ಲಾ ಉಪಯೋಗಿಸಿ 'ಮೇಕ್-ಅಪ್' ಮಾಡಿಕೊಂಡು ಇನ್ನೂ ಹೆಚ್ಚು ಆಕರ್ಷಣೀಯಳಾಗಿ ನಿಂತಳು. ಮಾಧವ ಟ್ಯಾಕ್ಸಿಯನ್ನು ಗೊತ್ತು ಮಾಡಿಕೊಂಡೇ ಬಂದಿದ್ದ. ಲೂಸಿ ಯಾವ ಆಭರಣವನ್ನೂ ಹಾಕಿಕೊಳ್ಳದೆ ನಿರಾಭರಣಸುಂದರಿಯಂತೆ ಕಾಣಿಸಿದಳು. ಮಾಧವ ಅವಳನ್ನು ಪೇಟೆಗೆ ಕರೆದೊಯ್ದನು. ಬೋಳಾಗಿ ಕಾಣುತ್ತಿದ್ದ ಕತ್ತಿಗೆ 'ನೆಕ್‌ಲೇಸ್', ಕೈಗೆ ಎರಡು ಜೊತೆ ಬಳೆಗಳು, ಕಿವಿಗೆ ಲೂಸಿಯೇ ಆಸೆಪಟ್ಟು ತೆಗೆದುಕೊಂಡ ಶಂಖದ ಮಾದರಿಯ 'ಸ್ಟಡ್ಸ್' ಎಲ್ಲಾ, ಲೂಸಿಯ ಕುತ್ತಿಗೆ, ಕೈ, ಕಿವಿಗಳನ್ನಾವರಿಸಿದುವು. ಅಲ್ಲಿಂದ ಜವಳೀ ಅಂಗಡಿಗೆ ಹೋಗಿ ನಾಲ್ಕಾರು ಜಾರ್ಜೆಟ್, ನೀನಾನ್ ಸೀರೆಗಳೂ, ಬ್ಲೌಸ್‌ಪೀಸ್ ಎಲ್ಲಾ ತೆಗೆದಿದ್ದಾಯಿತು. "ಇನ್ನು ಏನು ಬೇಕು ಲೂಸಿ?" ಮಾಧವ ಕೇಳಿದ.

"ಈ ಮೈಸೂರು ಕಡೆಯ ರೇಶ್ಮೆ ಸೀರೆಗಳೆಂದರೆ ಬಹಳ ಚೆನ್ನಾಗಿರುತ್ತವೆ." ಲೂಸಿ ಮಾತು ತೇಲಿಸಿ ನುಡಿದಳು. ಅವಳ ಬಾಯಲ್ಲಿ ಬಂದದ್ದೇ ತಡ, ಮಾಧವ ಅವಳು ಒಪ್ಪಿದ ಎರಡು ರೇಶ್ಮೆ ಸೀರೆಯನ್ನೂ ಖರೀದಿ ಮಾಡಿದ.

ಕಾರಿನೊಳಗೆ ಕೂತ ಮೇಲೆ ಲೂಸಿ ಹೇಳಿದಳು: "ನಿಜವಾಗಿಯೂ, ನಾವಿಬ್ಬರೂ ಒಟ್ಟಿಗೇ ಇರುವ ಒಂದೂ ಫೋಟೋ ಇಲ್ಲವೇ ಇಲ್ಲ. ಈಗ ತೆಗೆಸಿಕೊಳ್ಳೋಣವೆ?" ಲೂಸಿ ಉತ್ಸುಕಳಾಗಿ ನುಡಿದಳು. ಕೆಲವೇ ನಿಮಿಷಗಳೊಳಗಾಗಿ ಕಾರು ವೆಲ್ಡಿಂಗ್ ಫೋಟೋಗ್ರಾಫರ್ಸ್ ಬಿಲ್ಡಿಂಗ್‌ನ ಬಳಿ ಬಂದು ನಿಂತಿತು. ಇಬ್ಬರೂ ಕೂತಿರುವುದು ಒಂದು, ಮತ್ತೆ ಮಾಧವ ಕುಳಿತು ಲೂಸಿಯು ನಿಂತಿರುವುದು ಇನ್ನೊಂದು, ಹೀಗೆ ಎರಡು ಪೋಜುಗಳಲ್ಲಿ ಫೋಟೋ ತೆಗೆಸಿದ್ದಾಯ್ತು. ಪ್ರತಿಯೊಂದೂ ಎರಡೆರಡು ಕಾಪಿಗಳಿಗೆ ಆರ್ಡರು ಕೊಟ್ಟು, ಫೋಟೋವನ್ನು ಮದ್ರಾಸಿಗೇ ಕಳಿಸುವಂತೆ ತಮ್ಮ ವಿಳಾಸವನ್ನು ಕೊಟ್ಟು, ಅಡ್ವಾನ್ಸ್ ಕೊಟ್ಟಿದ್ದಾಯ್ತು. ಇಷ್ಟೆಲ್ಲಾ ಮುಗಿದು ಮಾಧವ-ಲೂಸಿಯರು ರೂಮಿಗೆ ಬರುವ ವೇಳೆಗೆ ರಾತ್ರಿ ಬಹಳ ಸಮಯವೇ ಆಗಿತ್ತು.

ಊಟ ಮುಗಿದ ಮೇಲೆ ಲೂಸಿ ಸಿಗರೇಟ್ ಹೊತ್ತಿಸಿದಳು. ಇನ್ನೊಂದು ಹತ್ತಿಸಿ ಮಾಧವನಿಗೆ ಕೊಡಹೋದಾಗ ಮಾಧವ ಮುಖ ತಿರುಗಿಸಿದ. ಲೂಸಿ ಅಷ್ಟಕ್ಕೇ ಬಿಡದೆ ತಾನೇ ಅವನ ಬಾಯಿಗೆ ಸಿಗರೇಟು ತುರುಕಿದಳು. ಅದರ ಹೊಗೆ ಅವನ ಬಾಯಿಗೆಲ್ಲಾ ಸುತ್ತಿಕೊಂಡು, ಕೆಮ್ಮಲಾರಂಭಿಸಿದ. ಕಣ್ಣು ಮೂಗುಗಳಲ್ಲಿ ನೀರು ತುಂಬಿಕೊಂಡಿತು. ಅವನ ಅವಸ್ಥೆ ನೋಡಿ ಲೂಸಿಗೆ ನಗು ಬಂದಿತು. ಸಿಗರೇಟು ಸೇದುವುದು ಹೇಗೆ, ಹೊಗೆಯನ್ನು ಹೊರಗೆ ಬಿಡು ವುದು ಹೇಗೆ ಎಂದೆಲ್ಲಾ ಹೇಳಿಕೊಟ್ಟು, ಅವನಿಗೆ ಇಷ್ಟವಿಲ್ಲದಿದ್ದರೂ ತಾನೇ ಬಲವಂತ ಮಾಡಿ, ಸಿಗರೇಟು ಸೇದುವ ಬಗೆಯನ್ನುಹೇಳಿಕೊಟ್ಟಳು ಲೂಸಿಯ ಪ್ರೇಮಕ್ಕಾಗಿ ಅವಳು ಏನು ಹೇಳಿದರೂ ಮಾಡಲು ಅವನು ತಯಾರಿದ್ದ. ಲೂಸಿ ಕಾಗದದಲ್ಲಿ ಎಲ್ಲಾ ಬರೆದು ಲೆಕ್ಕ ಮಾಡಿ ಕೇಳಿದಳು: "ಇವತ್ತು ನಿಮ್ಮ ಕೈಯಿಂದ ಎಷ್ಟು ಹಣ ಬಿಟ್ಟುಹೋಗಿದೆ ಗೊತ್ತೇ?"

"ಎಷ್ಟು?"

"ಆರುನೂರಾ ನಾಲ್ವತ್ತು ರೂಪಾಯಿ, ಹತ್ತು ಆಣೆ."

"ನಿನಗಾಗಿ ಖರ್ಚು ಮಾಡಿದ್ದು, ಅದು ಯಾವ ಮಹಾ ಬೆಲೆ? ಈಗ ನೀನು ನಿಜವಾಗಿಯೂ ಯಾರ ಹಾಗೆ ಕಾಣುತ್ತೀ ಗೊತ್ತೇ?"

"ಯಾರ ಹಾಗೆ?" ಸಿಗರೇಟಿನ ಹೊಗೆ ಬಿಡುತ್ತಾ ಕೇಳಿದಳು ಲೂಸಿ.

"ಹಿಂದೆ ಆ ಟ್ರಾ:ಯ್ ದೇಶದ ಹೆಲನ್ ಅಪ್ರತಿಮ ಸುಂದರಿ ಎಂದೆಲ್ಲಾ ಚರಿತ್ರೆಕಾರರು ಬರೆದಿದ್ದಾರೆ. ಅದು ನಿಜವೋ, ಸುಳ್ಳೋ ನನಗೆ ಬೇರೆ ಗೊತ್ತಿಲ್ಲ. ಆದರೆ ಈಗ ನನ್ನ ಕಣ್ಣೆದುರಿಗಿರುವ ಲೂಸಿಯಷ್ಟು ಚೆಲುವೆ, ಈ ಪ್ರಪಂಚ ದಲ್ಲಿಯೇ ಬೇರೆ ಯಾರೂ ಇಲ್ಲಾ ಎಂದೇ ಬರೆಯುವೆ. ನೀನೊಬ್ಬ ಏಂಜಲ್, ಲೂಸೀ....ಏಂಜಲ್!" ಮಾಧವ ಲೂಸಿಯ ಬಳಿಸಾರಿದ.

ಬೆಳಿಗ್ಗೆ ಉಪಹಾರ ಮುಗಿಸಿಕೊಂಡು ಮಾಧವ ಮನೆಗೆ ಹೋದ. ಸಂಜೆ ಏಳರ ಗಾಡಿಗೆ ಹೋಗುವುದಾಗಿ ತಾಯಿಗೆ ತಿಳಿಸಿದ. ಜಾನಕೀಬಾಯಿ ಮಗ ಊರಿಗೆ ಹೊರಡುವನೆಂದು ತಿಳಿದ ಕೂಡಲೇ, ಆ ದಿನ ಔತನದ ಅಡುಗೆಯನ್ನೇ

ಮಾಡಿದರು. ಮೊಮ್ಮಗನಿಗೆ ಎಂದು ತಿಂಡಿ-ತಿನಸು ಮಾಡಿ ಕಟ್ಟಿಕೊಟ್ಟರು. ಎಲ್ಲರಿಗೂ ಹೋಗಿ ಬರುತ್ತೇನೆಂದು ಹೇಳಿ ತಾಯಿ-ತಂದೆಯರಿಗೆ ನಮಸ್ಕರಿಸಿದ. ಶ್ರೀಕಂಠಯ್ಯ "ಇನ್ನೊಮ್ಮೆ ಯಾವಾಗಲಾದರೂ ಬಂದರೆ ನಿನ್ನ ವಿಜಯನನ್ನೂ ಕರೆದುಕೊಂಡು ಬಾ. ನೋಡಬೇಕೆನಿಸುತ್ತಿದೆ" ಎಂದರು. ಮಾಧವ ಎಲ್ಲ ರಿಂದಲೂ ಬೀಳ್ಕೊಂಡು, ತನ್ನ ಸಾಮಾನಿನೊಡನೆ, ರೂಮಿಗೆ ತೆರಳಿದ. ಲೂಸಿ ತನ್ನದೆಲ್ಲವನ್ನೂ ಪ್ಯಾಕ್ ಮಾಡಿ ಸಿದ್ಧಳಾಗಿದ್ದಳು. ಹೋಟೆಲಿನ ಬಿಲ್ ತೀರಿಸಿ, ಇಬ್ಬರೂ ಕೂಡಿಯೇ ಸ್ಟೇಷನ್ ತಲುಪಿದರು. ಮಾಧವ ಹೋಗಿ ಸೆಕೆಂಡ್ ಕ್ಲಾಸ್‌ನ ಎರಡು ಟಿಕೆಟುಗಳನ್ನು ತೆಗೆದು ತಂದ. ಯಾವ ಗಲಾಟೆಯೂ ಇಲ್ಲದೆ ಗಾಡಿಯೊಳಗೆ ಕೂತದ್ದಾಯಿತು. ಗಾಡಿ ಮುಂದಕ್ಕೆ ಚಲಿಸಿತು.

ಮದ್ರಾಸನ್ನು ತಲುಪಿದ ಮೇಲೆ, ಮಾಧವ ನೇರವಾಗಿ ಮನೆಗೆ ಹೋಗದೆ ಲೂಸಿಯ ಮನೆಗೇ ಹೋದ. ಅಲ್ಲಿಯೇ ಊಟ ಮುಗಿಸಿಕೊಂಡು, ವಿಶ್ರಾಂತಿ ಹೊಂದಿದ ಮೇಲೆ, ಮನೆಗೆ ಬರುವ ವೇಳೆಗೆ ಮಧ್ಯಾಹ್ನ ನಾಲ್ಕು ಗಂಟೆ ಯಾಗಿತ್ತು. ಮಾಧವನನ್ನು ನೋಡಿದ ಕೂಡಲೇ ಕೇಳಿದಳು ಸರೂ, "ಮನೆ ಯಲ್ಲಿ ಎಲ್ಲರೂ ಹುಷಾರಾಗಿದ್ದಾರಷ್ಟೇ?"

ಮಾಧವ ಕೆಲವೇ ಮಾತುಗಳಲ್ಲಿ ಅಲ್ಲಿಯ ವಿಷಯವನ್ನೆಲ್ಲಾ ಹೇಳಿದ.

"ಹಾಗಾದರೆ ಮನೆಯನ್ನು ಮಾರಿದ್ದೇ ನಿಜವೇ? ಹಣವನ್ನು ತಂದಿರು ವಿರಾ?"

ಮಾಧವ ತನ್ನ ಹೊಸದಾದ ಬ್ಯಾಗ್ ತೋರಿಸಿದ. ಸರೂ ತೆಗೆದು ನೋಡಿ ಎಣಿಸಿದಳು. ಸರಿಯಾಗಿ ಬರಿಯ ಹನ್ನೆರಡು ಸಾವಿರ ರೂಪಾಯಿ ಗಳಿದ್ದುವು. "ಇಷ್ಟೇನೇ ಹಣ ?" ಸರೂ ಕೇಳಿದಳು.

"ಹೂಂ, ಇನ್ನೆಷ್ಟು? ಅಲ್ಲಿ ಒಂದು ಸ್ವಲ್ಪ ಖರ್ಚಾಯಿತು. ಇಷ್ಟು ದಿನ ವಾಯಿತು ಲೂಸಿಗೆ ಏನನ್ನೂ ಕೊಟ್ಟಿರಲಿಲ್ಲ. ಅದಕ್ಕಾಗಿ ಅವಳಿಗೆ ಕೆಲವು ಬಟ್ಟೆ ಬರೆ, ತೆಗೆದು ಕೊಟ್ಟೆ." ಮುಚ್ಚುಮರೆಯಿಲ್ಲದೆ ಅದನ್ನೂ ಹೇಳಿದ.

ಲೂಸಿಯ ವಿಷಯ ಬಂದೊಡನೆ ಸರೂ ಸುಮ್ಮನಾದಳು. ಯಾವ ಮಾತನ್ನೂ ಹೇಳದೆ ಹಣವನ್ನು ಪೆಟ್ಟಿಗೆಯಲ್ಲಿ ತೆಗೆದಿಟ್ಟಳು. ಮಾರನೇ ದಿನ ಮಾಧವ ಹಣವನ್ನು ಬ್ಯಾಂಕಿನಲ್ಲಿ ತೆಗೆದಿಟ್ಟ.

ಮಾಧವ-ಲೂಸಿಯರ ಪ್ರಣಯ ಬೆಳೆಯುತ್ತಲೇ ಹೋಯಿತು. ಸರೂ ಒಬ್ಬಂಟಿಗಳಾಗಿಯೇ ಉಳಿಯಬೇಕಾಯಿತು. ಮೊದಮೊದಲು ಮಾಧವ

ರಾತ್ರಿ ಮಲಗುವುದಕ್ಕೆ ಎಷ್ಟೇ ಹೊತ್ತಾಗಲೀ ಮನೆಗೇ ಬರುತ್ತಿದ್ದ. ಆದರೆ ಈಚೆಗೆ ಬಂದರೆ ಬಂದ, ಇಲ್ಲವಾದರೆ ಇಲ್ಲ. ಸದಾ ಒಬ್ಬಳೇ ಆ ಮನೆಯಲ್ಲಿ ಭಯದಿಂದಲೂ, ಇಲ್ಲದ ಯೋಚನೆಗಳಿಂದಲೂ, ನಡುಗುತ್ತಾ ಕಾಲ ಕಳೆಯ ಬೇಕಾಯಿತು.

ಲೂಸಿ ಮಾಧವನನ್ನೇನೂ ನಂಬಿಕೊಂಡಿರಲಿಲ್ಲ. ಅವಳು ಅವನನ್ನು ಆಶ್ರಯಿಸಿದ್ದು ಅವನ ಹಣಕ್ಕಾಗಿಯೇ ಹೊರತು, ಅವನಿಗಾಗಿ ಅಲ್ಲ. ಲೂಸಿ ಮೊದಲಿನಿಂದಲೂ ಸ್ವೇಚ್ಛೆಯಾಗಿ ಬೆಳೆದ ಹೆಣ್ಣು. ಅವಳ ಸ್ನೇಹಿತೆಯರು, ಸ್ನೇಹಿತರು ಅನೇಕನಾಗಿದ್ದರು. ಅವಳು ಎಲ್ಲರೊಡನೆಯೂ ಸಲುಗೆಯಿಂದಲೇ ನಡೆದುಕೊಳ್ಳುತ್ತಿದ್ದಳು. ಅವಳನ್ನು ಬಯಸುತ್ತಿದ್ದವರೂ ಅನೇಕ ಮಂದಿ. ಅವ ರೊಡನೆಯೆಲ್ಲಾ ತೀರಾ ಸಲುಗೆಯಿಂದಲೇ ನಡೆದುಕೊಳ್ಳುತ್ತಿದ್ದಳು. ಹೀಗೆಯೇ ಅವಳು ಒಂದೆರಡು ಬಾರಿ ಜಾರಿದುದೂ ಉಂಟು. ಅವಳ ಹಲವು ಪ್ರೇಮಿಗಳಲ್ಲಿ ಜೋಸೆಫ್‌ನೂ ಒಬ್ಬ. ಅವನೊಬ್ಬ ಕುಡುಕ. ಆದರೂ ಅವನು ಲೂಸಿಯ ಅತ್ಯಂತ ಪ್ರಿಯತಮ.

ಜೋಸೆಫ್ ಆಗ ತಾನೆ ಬಂದು ಹೋಗಿದ್ದ. ಲೂಸಿ ಯಾವುದೋ ಹಾಡನ್ನು ಹೇಳಿಕೊಳ್ಳುತ್ತಾ ಅಲ್ಲಿಯೇ ಹಾಸುಗೆಯ ಮೇಲೆ ಬಿದ್ದುಕೊಂಡಿದ್ದಳು. ಫಿಲೋಮಿನಾ ಭರದಿಂದ ರೂಮಿಗೆ ಬಂದಳು.

"ಲೂಸೀ........!" ಅವಳ ಧ್ವನಿ ಗಡುಚಾಗಿತ್ತು.

"ಏನು ಆಂಟಿ ?" ಲೂಸಿ ಎದ್ದು ಕುಳಿತಳು.

"ನಾನು ಹಿಂದಿನಿಂದಲೂ ನಿನಗೆ ಹೇಳುತ್ತಾ ಬಂದಿರುವೆ ಲೂಸೀ, ನಿನ್ನ ಈ ನಡತೆ ಸರಿಯಲ್ಲ. ಈಗಲೂ ಅದೇ ಮಾತನ್ನೇ ಹೇಳುವೆ, ನಿನಗೆ ಯಾರು ಇಷ್ಟವೋ ಹೇಳು. ಅವರೊಂದಿಗೆ ನಾನು ಮದುವೆ ಮಾಡಿಕೊಡುವೆ. ಮದುವೆ ಯಾಗಿ ಮಾನದಿಂದ ಬಾಳ್ವೆಮಾಡು. ಈ ತರಹ ಕೀಳು ಮನೋಭಾವನೆ ಸರಿ ಯಲ್ಲ. ನಿನ್ನ ಈ ನಡತೆಯಿಂದ ನನಗೆ ತಲೆ ತಗ್ಗಿಸುವಂತಾಗಿದೆ. ಪಾಪ, ಆತ ನಿನ ಗಾಗಿ ಎಷ್ಟು ಒದ್ದಾಡುತ್ತಾನೆ? ಅವನು ನಿನ್ನಲ್ಲಿ ಎಷ್ಟು ಗಾಢವಾದ ಪ್ರೀತಿ ಇಟ್ಟಿ ದ್ದಾನೆ.? ಅವನಿಗೆ ನೀನು ಸರಿಯಾಗಿ ಪ್ರಾಮಾಣಿಕವಾಗಿ ಇರಬೇಡವೆ? ನಿನ್ನನ್ನು ನೀನು ತಿದ್ದಿಕೊಳ್ಳಬೇಕು ಲೂಸೀ."

"ನಾನೇನು ಅವನನ್ನೇ ನಂಬಿಕೊಂಡು ಕೂತಿರಲು, ಅವನ ಕೈಹಿಡಿದ ಹೆಂಡತಿಯೇ ? ನನ್ನ ಇಷ್ಟ ಬಂದವರ ಜೊತೆಯಲ್ಲಿ ನಾನಿರುವೆ."

"ನೀನು ಹೀಗೆಲ್ಲಾ ಮಾಡುವೆಯಾದರೆ, ನೀನು ನನ್ನ ಮನೆಯಲ್ಲಿರ ಬೇಡ. ಇಲ್ಲಿಯವರೆಗೂ ತಡೆದದ್ದಾಯಿತು. ಇನ್ನು ನನಗೆ ಸಾಧ್ಯವಿಲ್ಲ. ನೀನು ಮದುವೆಯಾಗಿ ಸಂಸಾರಿಯಾದರೆ ಆಗು, ಇಲ್ಲವಾದರೆ ಈ ಮನೆಯಲ್ಲಿ ನಿನಗೆ ಸ್ಥಳವಿಲ್ಲ."

"ನೀನೇನು ಮಹಾಪತಿವ್ರತೆಯೇ? ನಿನ್ನ ಆ ಆಂಥೋನಿಯ ಸಂಬಂಧ ವನ್ನು ನಾನು ನೋಡಿಲ್ಲವೆ? ನನಗೇ ಹೇಳುವಿಯಲ್ಲಾ ಆಂಟೀ!" ಲೂಸಿ ರೋಷ ಗೊಂಡು ನುಡಿದಳು.

"ಅವನ ವಿಚಾರ ನಿನಗೆ ತಿಳಿದಿದ್ದರೆ ನೀನು ಹೀಗೆ ತಪ್ಪು ಭಾವಿಸುತ್ತಿರ ಲಿಲ್ಲ ಲೂಸೀ! ನಾನೂ ಅವನೂ ಬಾಲ್ಯದ ಗೆಳೆಯರು! ನನಗೆ ಮದುವೆಯಾಗಲು ವಯಸ್ಸಾದಾಗ, ನಾನೂ ಅವನನ್ನೇ ಮಾಡಿಕೊಳ್ಳುವುದಾಗಿ ಹೇಳಿದ್ದೆ. ದುರ ದೃಷ್ಟವಶಾತ್ ನಮ್ಮಿಬ್ಬರ ಮದುವೆ ನಡೆಯಲಿಲ್ಲ. ಈ ನಿನ್ನ ಅಂಕಲ್‌ನೊಡನೆ ಆಯಿತು. ಅವನಿಗೂ ಬೇರೆಯ ಹುಡುಗಿಯೊಡನೆ ಮದುವೆಯಾಯಿತು. ನಾವು ಬೇರೆಬೇರೆಯವರಾದರೂ ನಮ್ಮಿಬ್ಬರ ಜೀವವೂ ಒಂದೇ. ನಮ್ಮ ಪ್ರೇಮ, ಸೀಮಾತೀತವಾದುದು. ನಮ್ಮಿಬ್ಬರ ಹೃದಯ ಒಂದುಗೂಡಿದೆ. ಅವನ್ನು ಬೇರ್ಪಡಿಸಲು ಯಾರಿಂದಲೂ ಸಾಧ್ಯವಿಲ್ಲ. ನಮ್ಮಿಬ್ಬರ ಸಂಬಂಧ ನಿನ್ನ ಅಂಕಲ್‌ರಿಗೆ ತಿಳಿದಿದೆ. ಅವರ ಅನುಮತಿಯನ್ನು ಪಡೆದೇ ನಾನು ಅವನ ಸ್ನೇಹ ಬೆಳೆಸಿರುವೆ. ಅವನನ್ನು ಬಿಟ್ಟು ಬೇರೆ ಯಾರನ್ನೂ ನಾನೂ ಕಣ್ಣೆತ್ತಿ ನೋಡಿಲ್ಲ ತಿಳಿಯಿತೆ? ಅದೇನೇ ಆಗಲೀ, ನೀನು ಮದುವೆಯಾಗದೇ ಹೀಗೆ ಸ್ವೇಚ್ಛಾಚಾರಿಣಿಯಂತಿರಬೇಡ. ಇದೇ ಕಡೆಯ ಸಲ ನಾನು ಹೇಳುವುದು." ಎಂದು ಫಿಲೋಮಿನಾ ಸರಕ್ಕನೆ ಹೊರಟು ಹೋಳು.

ಲೂಸಿ ವಿಚಾರಮಾಡುತ್ತಾ ಹಾಗೆಯೇ ಕೂತಿದ್ದಳು. ಅವಳು ತನ್ನ ಭವಿಷ್ಯದ ಬಗ್ಗೆ ಏನೂ ನಿರ್ಧರಿಸಿರಲಿಲ್ಲ. ಆಂಟೀ ಇಷ್ಟು ಖಂಡಿತವಾಗಿ, ನಿರ್ದಯಳಾಗಿ ತನ್ನನ್ನು ಖಂಡಿಸಿದುದಕ್ಕೆ ಅವಳಿಗೆ ಅತ್ಯಂತ ದುಃಖವಾಯಿತು. ಇದರ ವಿಷಯವಾಗಿ ಮಾಧವನನ್ನು ಕೇಳಿಯೇಬಿಡೋಣವೆಂದು ಅವಳು ನಿರ್ಧರಿಸಿದಳು.

ವಿಜಯು ಈಗ ಮೂರು ವರ್ಷದವ. ಅವನೀಗ ಸಮೀಪದಲ್ಲಿರುವ 'ನರ್ಸರಿ ಹೋಂ' ಒಂದಕ್ಕೆ ಹೋಗುತ್ತಾನೆ. ತಂದೆಯ ಬಳಿ ಹಿಂದಿನಂತೆ ಸಲುಗೆಯೇ ಇಲ್ಲ. ತಂದೆಯನ್ನು ಮನೆಯಲ್ಲಿ ಕಾಣುವುದೇ ದುಸ್ತರವಾಗಿತ್ತು. ಹಿಂದಿನಂತೆ ಮಾಧವ ಅವನನ್ನು ಪ್ರೀತಿಯಿಂದ ಮಾತು ಕೂಡಾ ಆಡಿಸುತ್ತಲಿರಲಿಲ್ಲ. ಯಾವಾಗಲೂ ಅವನು ಸಿಡುಕಿಕೊಂಡೇ ಇರುತ್ತಿದ್ದ. ಅವನ ಪ್ರೀತಿ ಎಲ್ಲಾ ತಾಯಿಯೊಬ್ಬಳಿಗೇ ಮೀಸಲಾಗಿತ್ತು. ಸರೂಗೆ ವಿಜಯು, ವಿಜಯುನಿಗೆ ಸರೂ ಇಬ್ಬರೇ ಆಧಾರವಾಗಿದ್ದರು.

ಸರೂಗೆ ಗೋವಿಂದರಾಯರಿಂದ ಆಗಾಗ್ಗೆ ಕಾಗದ ಬರುತ್ತಲೇ ಇತ್ತು. ಪ್ರತಿಯೊಂದರಲ್ಲಿಯೂ ಅವರು ವೇದಾಂತವನ್ನೇ ಉಪದೇಶಿಸುತ್ತಿದ್ದರು.

ರೂಪಾಳ ಸ್ಥಿತಿ ಈಗ ಸ್ವಲ್ಪ ಸುಧಾರಿಸಿತ್ತು. ಅತ್ತೆ ಈಗ ಸ್ವಲ್ಪ ಕಾಹಿಲೆ ಬಿದ್ದಾಗಿನಿಂದ ರೂಪಾಳ ಕೈಲೇ ಸೇವೆ ಮಾಡಿಸಿಕೊಂಡು, ಅವಳ ನಡತೆಗಾಗಿ ಸ್ವಲ್ಪ ಪ್ರಸನ್ನರಾಗಿದ್ದರು. ಹಿಂದಿನಂತೆ ಮಗ ಬಂದೊಡನೆ ಚಾಡಿ ಹೇಳುವುದೂ ಹೊಡೆಯುವುದೂ, ಬೈಯ್ಯುವುದೂ ಕೂಡಾ ಕಡಮೆಯಾಗಿದ್ದಿತು. ರೂಪಾ ಈಗ ಬಿಳಚಿಕೊಂಡಿದ್ದಳು. ತಿಂದ ಅನ್ನವೆಲ್ಲಾ ವಾಂತಿಯಾಗುತ್ತಿತ್ತು. ಸರೂ ಅವಳನ್ನು ನೋಡಿ ಅವಳಿಗೆ ಬೇಕು ಬೇಕಾದ ತಿಂಡಿ ತಿನಸುಗಳನ್ನು ತಾನೇ ಮಾಡಿಕೊಡುತ್ತಿದ್ದಳು. ರೂಪಾಳಿಗೆ ಆಗಲೇ ನಾಲ್ಕು ತಿಂಗಳಾಗಿತ್ತು

ಸಂಜೆ ಆರರ ಸಮಯವಾಗಿತ್ತು. ವಿಜಯು ಹೊರಗೆ ಹೋಗಿದ್ದ. ಸರೂ ನಿಟ್ಟಿಂಗ್ ಹಾಕತೊಡಗಿದ್ದಳು. ರೂಪಾ ಸರಸರನೆ ಬಂದು, "ನಾನು ಊರಿಗೆ ಹೋಗಿ ಬರುವೆ ಬಹನ್. ನಮ್ಮ ತಂದೆ ಬಂದಿದ್ದಾರೆ ಕರೆದುಕೊಂಡು ಹೋಗಲು." ಎಂದು ಮುಖದಲ್ಲಿ ಮಂದಹಾಸ ತೋರಿ ಹೇಳಿದಳು.

"ಬಹಳ ಸಂತೋಷ ರೂಪಾ. ಸುಖವಾಗಿ ಹೋಗಿ ಬಾ. ಇನ್ನೊಮ್ಮೆ ಬರುವಾಗ ವಿಜಯುನಿಗೆ ತಂಗಿಯನ್ನೇ ಕರೆದುಕೊಂಡು ಬಾ." ಎಂದು ಕೂಡಲೇ ಎದ್ದು ಹೋಗಿ ತಟ್ಟೆಯಲ್ಲಿ ಒಂದು ಖಣವನ್ನು ತಂದಳು. ಮಣೆಯೊಂದನ್ನು ತಂದು ಹಾಕಿ ಅದರ ಮೇಲೆ ರೂಪಾಳನ್ನು ಕೂಡಿಸಿ, ತಾನೇ ಅವಳಿಗೆ ಹಣೆಗೆ ಕುಂಕುಮವಿಟ್ಟು, ಎಲೆಯಡಿಕೆಯ ಜೊತೆ, ಆ ಅಗಲವಾದ ಅಂಚುಳ್ಳ ಕೆಂಪು ಬಣ್ಣದ ಖಣವನ್ನಿಟ್ಟು ಕೊಟ್ಟಳು. ರೂಪಾ ತೆಗೆದುಕೊಳ್ಳಲು ಹಿಂದೆಗೆದರೂ ಸರೂವಿನ ಬಲವಂತದಿಂದ ತೆಗೆದುಕೊಳ್ಳಲೇಬೇಕಾಯಿತು.

"ನನ್ನವಳಾಗಿ ಇರುವವಳು ನೀನೊಬ್ಬಳು ರೂಪಾ, ನೀನೂ ಹೊರಟು

ಹೋದರೆ ನನಗಿನ್ನಾರು ಗತಿ?" ಸರೂ ಅಗಲಿಕೆಯ ದುಃಖದಿಂದ ನುಡಿದಳು. ರೂಪಾ ಸರೂವನ್ನಪ್ಪಿಕೊಂಡು ಗೋಳೋ ಎಂದು ಅತ್ತಳು.

ಲೂಸಿ-ಮಾಧವರು, ಬೀಚನ್ನು ನಡುಗೆಯಿಂದಲೇ ತಲುಪಿದರು. ಅಲ್ಲಿಯೇ ಒಂದೆಡೆ ಇಬ್ಬರೂ ಕೂತರು. ಅನೇಕ ಜನ ತಿರುಗಾಡುತ್ತಲೇ ಇದ್ದರು. ದಂಪತಿಗಳು, ಹುಡುಗರು, ಮಕ್ಕಳು, ಮುದುಕರು ಎಲ್ಲಾ ತರಹದ ಜನರನ್ನೂ ಅಲ್ಲಿ ನೋಡಬಹುದಾಗಿತ್ತು. ಸಮುದ್ರದ ಅಲೆಗಳು ಮೇಲಕ್ಕೆ ಏರಿ, ಇಳಿದು ದಡಕ್ಕೆ ಬಂದು ಅಪ್ಪಳಿಸುತ್ತಿದ್ದುವು. ಕಣ್ಣಿಗೆ ಕಾಣುವಷ್ಟು ದೂರವೂ ಬರಿಯ ನೀಲಿಯ ಆಕಾಶ, ಅದರ ಕೆಳಗೆ ಭೋರ್ಗರೆಯುವ ಸಮುದ್ರ! ಲೂಸಿ ಅಲೆಗಳು ತೆರೆತೆರೆಯಾಗಿ ಮೇಲಕ್ಕೆ ಏಳುವುದನ್ನೂ, ಅದೇ ವೇಗದಲ್ಲಿ ಇಳಿದು ಅಪ್ಪಳಿಸುವುದನ್ನೂ ಎವೆಯಿಕ್ಕದೇ ನೋಡುತ್ತಾ ಕೂತಿದ್ದಳು. ಇಂತಹ ಪ್ರಚಂಡವಾದ ಅಲೆಗಳುಳ್ಳ ಸಮುದ್ರದಲ್ಲಿ, ಬರಿಯ ನೌಕೆಗಳಿಂದ ದೇಶದಿಂದ ದೇಶಕ್ಕೆ ಪ್ರಯಾಣ ಮಾಡುತ್ತಿದ್ದ ನಮ್ಮ ಪೂರ್ವಿಕರು ಎಷ್ಟು ಧೈರ್ಯಶಾಲಿಗಳು! ಇದಕ್ಕಿಂತಲೂ ಭಾರಿಯಾದ ಸಮುದ್ರಗಳ ಮೇಲೆ, ಹೊಸ ದಾರಿಯೊಂದು ಕಂಡು ಹಿಡಿಯಲು ಹೋಗಿ ಹೊಸದೊಂದು ಖಂಡವನ್ನೇ ಕಂಡುಹಿಡಿದ ಮಹಾನುಭಾವ ಕೋಲಂಬಸ್ ಎಂತಹ ಅಪ್ರತಿಮ ಧೈರ್ಯಶಾಲಿ! ಎಂದೆಲ್ಲಾ ಮಾಧವನ ವಿಚಾರ ಸರಣಿ ಗತಕಾಲಗಳನ್ನು ಕುರಿತು ನಡೆದಿತ್ತು.

"ಹೀಗೆಯೇ ಎಷ್ಟು ದಿನ ಅಂತ ನಾವು ಇರುವುದು ಸ್ವಾಮಿ ?" ಲೂಸಿ ಮೌನವನ್ನು ಮುರಿದಳು.

"ಎಷ್ಟು ದಿನ ಅಂದರೆ, ನಮ್ಮ ಆಜೀವಪರ್ಯಂತ. ನನಗೆ ಅನ್ನಿಸುತ್ತದೆ, ನಿನ್ನನ್ನು ಪಡೆಯುವುದಕ್ಕಾಗಿಯೋ ಏನೋ, ನಾನು ಈ ಊರಿಗೆ ಬಂದಿದ್ದು ಎಂದು. ನನ್ನ ಈ ಶರೀರದಲ್ಲಿ ಪ್ರಾಣವಿರುವ ತನಕ ನಾನು ನಿನ್ನನ್ನು ಎಂದೆಂದಿಗೂ ಬಿಡಲಾರೆ ಲೂಸಿ. ಇದು ಸತ್ಯವೆಂದು ತಿಳಿ. ಈ ಪ್ರಪಂಚ ಈ ದಿನವೇ ತಲೆಕೆಳಗಾಗಲೀ, ಏನಾದರೂ ಆಗಲೀ, ನಾನು ನಿನ್ನ ಕೈಬಿಡುವುದಿಲ್ಲ. ಈ ವಿಚಾರವಾಗಿ ನೀನೇನೂ ಯೋಚಿಸಬೇಡ."

"ಡಿಯರ್, ನಾನೂ ಅನೇಕ ಕಷ್ಟ ಸುಖ ಕಂಡವಳು. ನನ್ನ ಆಂಟೀ, ನಾವೀ ರೀತಿ ಇರುವುದು ಒಪ್ಪುವುದಿಲ್ಲ. ನಿನಗೆ ಇಷ್ಟ ಬಂದವರನ್ನು ಮದುವೆ ಮಾಡಿಕೋ, ನಾನು ಮಾಡಿಕೊಡುವೆ. ಆದರೆ ಈ ರೀತಿ ಇರುವುದು ಸರಿಯಲ್ಲ ಎಂದು ಹೇಳುತ್ತಿದ್ದಾರೆ."

"ಯಾವ ರೀತಿ ಇರುವುದು?" ಮಾಧವ ಗಾಬರಿಯಾಗಿ ಕೇಳಿದ.

"ನಿಮ್ಮ ಜೊತೆಯಲ್ಲಿರುವುದು. ನನಗೆ ಇನ್ನಾರ ಮೇಲೆಯೂ ಮನಸ್ಸಿಲ್ಲ ಡಿಯರ್. ನಾನು ಆಂಟೀಗೆ ಹೇಳಿರುವೆ, ನಾನು ಈ ಜನ್ಮದಲ್ಲಿ ಮದುವೆ ಯಾದರೆ ನಿಮ್ಮನ್ನಲ್ಲದೆ ಯಾರನ್ನೂ ಆಗುವುದಿಲ್ಲ ಎಂದು. ಇದಕ್ಕೆ ನೀವೇನು ಹೇಳುವಿರಿ ಡಿಯರ್?"

ಲೂಸಿಯ ಪ್ರಶ್ನೆಯಿಂದ ಮಾಧವ ಅಪ್ರತಿಭನಾದ. ಒಂದಲ್ಲ ಒಂದು ದಿನ ಈ ಪ್ರಶ್ನೆಯೂ ಜನಿಸಬಹುದೆಂದು ಅವನ ಯೋಚನೆಗೇ ಬಂದಿರಲಿಲ್ಲ. ಮದುವೆ? ತನಗೆ ಹಿಂದೆಯೇ ಮದುವೆಯಾಗಿದೆ. ಹೆಂಡತಿಯೂ, ಮಗನೂ ಇದ್ದಾರೆ. ಈಗ ಲೂಸಿಯೊಡನೆ ಮದುವೆ? ತಾನು ಬ್ರಾಹ್ಮಣ. ಅವಳು ಕ್ರಿಶ್ಚಿಯನ್. ತಮ್ಮಿಬ್ಬರ ಮದುವೆ ಎಂದಿಗಾದರೂ ಸಾಧ್ಯವೇ? ಇದಕ್ಕೆ ಸರೂ ಒಪ್ಪುವಳೆ? ತಂದೆ-ತಾಯಿಯರು ಏನನ್ನುತ್ತಾರೆ? ಮದುವೆಯಾಗಲಾರೆ ಎಂದರೆ ಲೂಸಿಯ ಆಸೆಯನ್ನೇ ಬಿಡಬೇಕು. ಲೂಸಿಯನ್ನು ಬಿಡುವುದು? ಅಬ್ಬಾ! ಅದು ಎಂದಿಗೂ ಆಗಲಾರದ ಮಾತು. 'ನನ್ನ ಪ್ರಾಣವೇ ಹೋದರೂ ಲೂಸಿಯನ್ನು ತೊರೆಯಲಾರೆ. ಅವಳನ್ನು ಮದುವೆಯಾದರೆ, ನನಗೆ ಸಮಾಜ ದಲ್ಲಿ ಯಾವ ಸ್ಥಾನ ದೊರೆಯುವುದು? ನನ್ನನ್ನು ಯಾರು ತಾನೇ ಪರಿಗಣಿಸು ತ್ತಾರೆ?' ಒಂದೆಡೆ ಲೂಸಿ, ಇನ್ನೊಂದೆಡೆ ಸರೂ. ಮಾಧವ ಯೋಚಿಸಿ ಚಿಂತಿಸಿ ಹಣ್ಣಾಗಿ ಹೋದ.

"ನಮ್ಮ ಮದುವೆಯು ಖಂಡಿತವಾಗಿ ಆಗಲೇಬೇಕೆ ಲೂಸಿ?" ಮಾಧವ ಎಳೆಯ ಮಗುವಿನಂತೆ ಪ್ರಶ್ನಿಸಿದ.

"ನಿಮ್ಮ ಜೊತೆ ಸರಸವಾಡಲು, ಚಕ್ಕಂದವಾಡಲು ನಾನು ಬೇಕು. ಮನೆಯಲ್ಲಿ ಮದುವೆಯಾದ ಹೆಂಡತಿ, ಮಗು ಇದ್ದಾರೆ. ಹೆಂಡತಿಯ ಸಹ ವಾಸ ಹಳೆಯದೆನಿಸಿ, ಹೊಸದಾಗಿ ನನ್ನ ಹುಡುಕಿದಿರೋ ಏನೋ! ನಾಳೆ ನಾನೂ ಬೇಡವಾಗುತ್ತೇನೆ. ನಾಡಿದ್ದು ಇನ್ನೊಬ್ಬಳು ಸಿಗುತ್ತಾಳೆ. ನಿಮ್ಮ ಮನ ಸಂತೋಷಪಡಿಸಲು ನಾನು ಇಷ್ಟು ಬಿಟ್ಟರಾಯಿತು. ಹಾಗೆ ನಾನು ಇರಲು,

ನಾನೇನು ವೇಶ್ಯೆಯೇ? ನಿಮ್ಮ ಜೊತೆ ನನಗೆ ಯಾವ ಆಸೆಯೂ ಇಲ್ಲವೆ? ನನಗೂ ಮದುವೆಯಾಗಿ ಸಂಸಾರ ಮಾಡಬೇಕೆಂಬ ಬಯಕೆಯೇ ಇಲ್ಲವೆ? ನಿಮ್ಮ ಕಾಲಿನ ಕಸವಾಗಿ ಕಡೆಯ ವರೆಗೂ ಹೀಗೆಯೇ ಬಾಳಬೇಕೆ? ಮುಖ್ಯ ನನ್ನದು ತಪ್ಪು. ಮೊದಲ ಬಾರಿ ನಿಮ್ಮನ್ನು ನೋಡಿದ ಕೂಡಲೇ ನಾನು, ನನ್ನ ಮನಸ್ಸನ್ನೂ, ದೇಹವನ್ನೂ ನಿಮಗೇ ಅರ್ಪಿಸಿದೆ. ನೀವೇ ನನ್ನ ಪತಿ ಎಂದು ಭಾವಿಸಿದೆ. ಆಗ ನನಗೆ ತಿಳಿದಿರಲಿಲ್ಲ ನಿಮಗೆ ಮದುವೆಯಾಗಿದೆ ಎಂದು. ಯಾವುದನ್ನೂ ಹಿಂದು-ಮುಂದು ನೋಡದೆ, ನಾನೇಕೆ ಹಾಗೆ ಮಾಡಬೇಕಿತ್ತು! ಹೋಗಲಿ. ಈ ಜನ್ಮದಲ್ಲಿ ನನಗೆ ಮದುವೆಯಾಗಿ ಸಂಸಾರ ಮಾಡುವ ಭಾಗ್ಯ ನನ್ನ ಹಣೆಯಲ್ಲಿ ಬರೆದಿಲ್ಲ. ಅದರಿಂದ ನಾನು ಯಾವುವಾದರೂ 'ಕಾನ್‌ವೆಂಟ್'ಗೆ ಸೇರಿ 'ನನ್' ಆಗಿಬಿಡುವೆ." ಲೂಸಿಯ ಕಣ್ಣೀರು ಕಪೋಲದ ವರೆಗೂ ಜರಿದು ಬಂದುವು.

ಮಾಧವ ಏನೇ ಆಗಲೀ ಸೈರಿಸುತ್ತಿದ್ದ. ಆದರೆ ಲೂಸಿಯ ಕಣ್ಣೀರು ನೋಡಿ ಅವನಿಗೆ ಸಹಿಸಲಾಗಲಿಲ್ಲ. ಅವಳ ಬಳಿ ಸರಿದು "ಲೂಸೀ,....ಡಿಯರ್ ಲೂಸೀ....ಅಳಬೇಡ ಸುಮ್ಮನಿರು. ನೀನು ದುಃಖಿಸುವುದನ್ನು ನಾನು ನೋಡಲಾರೆ. ದಮ್ಮಯ್ಯಾ ಸುಮ್ಮನಿರು ಲೂಸೀ." ಎಂದು ಅವಳ ಕಣ್ಣೀರನ್ನೂ ತಾನೇ ಒರಸಿ "ನೋಡು ಲೂಸೀ, ಈಗ ನಿನ್ನನ್ನು ಮದುವೆಯಾದೆ ಅಂತ ಇಟ್ಕೊಕೋ. ಆಗ ನಿನ್ನನ್ನು ನಮ್ಮ ಸಮಾಜದಲ್ಲಿ ಸೇರಿಸುವುದಿಲ್ಲ. ನಿಮ್ಮ ಜಾತಿಯಲ್ಲಿ ನನ್ನನ್ನು ಸೇರಿಸುವುದಿಲ್ಲ. ಹೀಗಿರುವಾಗ ಇದಕ್ಕೆ ಪರಿಹಾರವೇನು ಲೂಸಿ? ನೀನೇ ಹೇಳು." ಎಂದು ಕೇಳಿದನು.

"ನೀವು ಹೇಳುವುದು ನಿಜ, ಡಿಯರ್. ಪ್ರೇಮದಿಂದ ಬಂಧಿತರಾಗಿರುವ ನಮಗೆ ಯಾವ ಸಮಾಜವೂ ಬೇಡ, ಜಾತಿಯೂ ಬೇಡ. ನಮ್ಮನ್ನು ಯಾರೂ ಸೇರಿಸುವುದೇ ಬೇಡ. ನಮ್ಮ ಪಾಡಿಗೆ ನಾವು ಇರೋಣಾ. ಇರುವ ತನಕ ಒಂದಾಗಿದ್ದು, ಸಾಯುವಾಗಲೂ ಜೊತೆಯಾಗಿಯೇ ಸಾಯೋಣಾ."

ಮಾಧವ ಪುನಃ ಯೋಚನೆಯಲ್ಲಿ ತೊಡಗಿದ. ಬಹಳ ಹೊತ್ತು ಯೋಚಿಸಿ ಕಡೆಗೆ ಹೇಳಿದ. "ನೀನು ಹೇಳುವುದು ಒಂದು ಭಾಗಕ್ಕೆ ನಿಜ ಲೂಸಿ. ನಿನ್ನ ವಿಷಯದ ಒಂದೇ ಭಾಗವನ್ನೂ ಚೆನ್ನಾಗಿ ಕಣ್ಣಿಟ್ಟು ನೋಡು. ನೀನು ಹೇಳುವೆ, ನಾವಿಬ್ಬರೂ ಸುಖವಾಗಿರೋಣಾ ಎಂದು. ಆದರೆ ಮುಂದೆ ನಮಗೆ ಮಕ್ಕಳೂ ಆಗಬಹುದು. ಹೌದೋ ಅಲ್ಲವೋ?"

"ಹೌದು."

"ಆ ಮಕ್ಕಳು ಬೆಳೆಯುತ್ತವೆ. ದೊಡ್ಡವರಾಗುತ್ತಾರೆ. ವಿದ್ಯಾಭ್ಯಾಸ ಎಲ್ಲಾ ಕಲಿತು ಮುಂದಕ್ಕೆ ಬರುತ್ತಾರೆ. ನಂತರ ಅವರಿಗೆ ಮದುವೆಯನ್ನೂ ಮಾಡಬೇಕಲ್ಲವೆ? ಆ ಮಕ್ಕಳನ್ನು ಯಾರು ತಂದುಕೊಳ್ಳುತ್ತಾರೆ? ಇಲ್ಲವೆ ನಮ್ಮ ಹುಡುಗರಿಗೆ ಯಾರು ಹೆಣ್ಣು ಕೊಡುತ್ತಾರೆ? ನಮ್ಮ ಸಮಾಜವೂ ಸೇರಿಸುವುದಿಲ್ಲ. ನಿಮ್ಮವರೂ ಸೇರಿಸಿಕೊಳ್ಳುವುದಿಲ್ಲ. ಹೀಗಾಗಿ ಅವರು ಜಾತಿಯವರೆಂದು ತಿಳಿಯಬೇಕು? ಅದು ಮುಂದೆ ಎಷ್ಟು ತೊಂದರೆಯಾಗುತ್ತೆ? ಈಗಿನ ನಮ್ಮ ಸುಖಕ್ಕಾಗಿ ಮುಂದೆ ಆ ಅರಿಯದ ಮಕ್ಕಳನ್ನು ಕಷ್ಟಪಡಿಸುವುದು ಯಾವ ನ್ಯಾಯ? ನಾನು ಹೇಳಿದುದು ಸರಿಯೋ ತಪ್ಪೋ?"

"ನೀವು ಹೇಳಿದುದು ಸರಿ. ಇಲ್ಲಾ ಅನ್ನಲು ಸಾಧ್ಯವೇ ನನ್ನ ಧೊರೆ? ಪ್ರೇಮಕ್ಕೆ ಕುಲ, ಗೋತ್ರ, ಜಾತಿ, ಮತ ಯಾವ ಭೇದವೂ ಇಲ್ಲ. ಪ್ರೇಮಕ್ಕೆ ಎಂದೆಂದಿಗೂ ಅಳಿವು ಇಲ್ಲ. ಪ್ರೇಮ ಅನಂತವಾದ್ದು. ಪ್ರೇಮಕ್ಕೆ ಮೂಲ ತ್ಯಾಗ, ಬಲಿದಾನ. ಅದಿಲ್ಲದೇ ಹೋದ ಪ್ರೇಮ, ಪ್ರೇಮವೆನಿಸಲಾರದು. ಅದು ಬರಿಯ ಮೋಹ. ನಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ತ್ಯಾಗ ಮಾಡಲೇಬೇಕು. ಏನನ್ನು? ಜಾತಿಯನ್ನು, ತಿಳಿಯಿತೇ?"

"ಏನು! ಜಾತಿಯನ್ನು ತೊರೆಯಬೇಕೆಂದೆಯಾ ಲೂಸೀ?"

"ಹೌದು ಸ್ವೀಟ್, ಜಾತಿಯನ್ನು, ಮತವನ್ನು ತ್ಯಾಗ ಮಾಡಬೇಕು. ನಾನು ನನ್ನ ಮತವನ್ನು ತೊರೆದು ನಿಮ್ಮವಳಾಗಬಯಸುತ್ತೇನೆ. ನನ್ನನ್ನು ನಿಮ್ಮ ಜಾತಿಯವರು ಪುರಸ್ಕರಿಸುತ್ತಾರೆಯೇ ಹೇಳಿರಿ? ಹಾಗೆ ಅವರು ನನ್ನನ್ನು ನಿಮ್ಮ ಪಂಗಡಕ್ಕೆ ಸೇರಿಸಿಕೊಳ್ಳುವುದಾದರೆ, ನಾನು ಈ ಕ್ಷಣಕ್ಕೆ ಬರಲು ಸಿದ್ಧಳಿದ್ದೇನೆ."

"ಅದೆಂದಿಗೂ ಸಾಧ್ಯವಾಗದ ಮಾತು ಲೂಸೀ. ನಮ್ಮ ಜನ ಇನ್ನೂ ಅಷ್ಟು ಮುಂದುವರಿದಿಲ್ಲ."

"ಹಾಗಾದರೆ ನೀವೇ ನಿಮ್ಮ ಜಾತಿಯನ್ನು ಬಿಡಬೇಕಾಯಿತು. ನೀವು ಯೇಸುವಿನ ಮಗನಾಗಲು ಬಯಸಿದರೆ, ಇದೇ ಕ್ಷಣದಲ್ಲಿ ನಿಮ್ಮನ್ನು ಆದರದಿಂದ ನಮ್ಮ 'ಫಾದರ್' ಬರಮಾಡಿಕೊಳ್ಳುತ್ತಾರೆ. ಹೇಳಿರಿ ಡೀಯರ್, ನೀವು ಕ್ರಿಶ್ಚಿಯನ್ನರಾಗಲು ಸಿದ್ಧರಾಗಿರುವಿರಾ? ನೀವು ಯಾವುದಕ್ಕೂ ಒಪ್ಪದೇ ಹೋದರೆ, ನಾನು ಹೇಳಿದಂತೆ ಈಗಲೇ ಹೋಗಿ ಸನ್ಯಾಸಿಯಾಗುವೆ ಹೇಳಿರಿ.

ಸ್ವೀಟ್, ಸೇರುನಿರಾ ಸೇರುವಿರಾ?” ಲೂಸಿ ಮಾಧವನ ಕೈಗಳನ್ನು ಕುಲುಕಿ ಕೇಳಿದಳು. ಅವಳ ಕಣ್ಣುಗಳು, ಅವಳ ಮನದಿಂಗಿತವನ್ನು ಮುಟ್ಟಿಸಿದ್ದವು. ಅವಳ ಆ ಪ್ರಬಲ ಆಶೆಯ ಮುಂದೆ ಮಾಧವನ ಮನಸ್ಸು, ವಿವೇಕ ತಮ್ಮ ಶಕ್ತಿಯನ್ನು ಕಳೆದುಕೊಂಡಿದ್ದವು.

ದೃಢವಾದ ಸ್ವರದಲ್ಲಿ ಮಾಧವ ಹೇಳಿದ: “ನಾನು ನಿನ್ನ ಮದುವೆ ಯಾಗುವೆ ಲೂಸೀ, ನಿಮ್ಮ ಯೇಸುವಿನ ಸಂಗಡಕ್ಕೇ ಸೇರುವೆ, ಸೇರುವೆ....” ಮಾಧವ ಗಟ್ಟಿಯಾಗಿ ಕಿರುಚಿದ.

“ಈಗ ನಾನ್ಕೇಳಿದ್ದು ನಿಜವೇ?....ನಿಜವೇ....? ಇದು ನಿಜವಾಗಿಯೂ ಸತ್ಯವೇ ಡಿಯರ್?” ಎಂದು ಲೂಸಿ ಸಂತೋಷದ ಭರದಿಂದ, ತಾನೆಲ್ಲಿರುವೆ ಏನು ಎಂಬುದರ ಪರಿವೆಯೇ ಇಲ್ಲದೆ ಮಾಧವನನ್ನಪ್ಪಿಕೊಂಡಳು.

ಮಾಧವ ತಾನು ಲೂಸಿಯನ್ನು ಮದುವೆಯಾಗುವದಾಗಿ ಹೇಳಿದಾಗ, ಸರೂವಿಗೆ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಅವರಿಬ್ಬರ ಪ್ರಣಯ ಪ್ರಸಂಗ ಇಲ್ಲಿಯ ವರೆಗೂ ಬರುವುದೆಂದು ಕನಸು ಮನಸ್ಸಿನಲ್ಲಿಯೂ ಅವಳು ಎಣಿಸಿರಲಿಲ್ಲ. ಈಗಲೇ ಮಾಧವ ತನ್ನಿಂದ ದೂರವಾಗಿದ್ದ. ಈಗ ಇನ್ನೂ, ಇನ್ನೂ, ದೂರ ಹೋಗಿಬಿಡುತ್ತಾನೆ. ಇನ್ನು ಮೇಲೆ ಮಾಧವನ ಮೇಲೆ ತನ್ನ ಯಾವುದೂ ಹಕ್ಕು ಇಲ್ಲ. ಇದು ವರೆಗೂ ಸರೂವಿನ ಪತಿಯಾಗಿದ್ದ ಮಾಧವ ಇನ್ನು ಮೇಲೆ ಲೂಸಿಯ ಪತಿಯಾಗುತ್ತಾನೆ. ಅವಳ ಮತವನ್ನೇ ಸೇರಿಕೊಂಡ ಮೇಲೆ, ಬೇರೆಯ ಹೆಸರು ಇಟ್ಟುಕೊಳ್ಳಬಹುದು. ಯಾವುದಾದರೂ ‘ಜಾನ್, ಡೇವಿಡ್, ಜೋಸೆಫ್’ ಎಂದು ಹೆಸರು ಬರಬಹುದು. ಅವನು ಲೂಸಿಯ ಪತಿ, ತನ್ನ ಹಿಂದಿನ ಮಾಧವನಲ್ಲ...

“ಲೂಸಿ ಎಂಥವಳೋ ಏನೋ? ಅವಳು ನಾಳೆ ಮನೆಗೆ ಬಂದು, ನನ್ನನ್ನು ಮನೆ ಬಿಟ್ಟು ಹೋಗು ಎಂದರೆ, ಆಗ ತಾನು ಎಲ್ಲಿಗೆ ಹೋಗುವದು? ಯಾರ ಮನೆಗೆ ಹೋಗುವದು? ವಿಜಯ ಇನ್ನೂ ಕೇವಲ ಮೂರು ವರ್ಷದ ಮಗು. ಅವನನ್ನು ಕಟ್ಟಿಕೊಂಡು ಎಲ್ಲಿಗೆ ಹೋಗುವದು? ಯಾರ ಸುಖಕ್ಕಾಗಿ ನಾನು ನನ್ನ ದುಃಖವನ್ನೆಲ್ಲಾ ಬದಿಗೊತ್ತಿ ಅವರು ಸುಖವಾಗಿರುವಂತೆ ಮಾಡಿದೆನೋ, ಯಾರಿಗೋಸ್ಕರ ಲೂಸಿಯ ಪರಿಚಯ ಮಾಡಿಕೊಟ್ಟೆನೋ, ಆ ನನ್ನ ಪತಿ, ನನ್ನ ಸ್ವಾಮಿ, ನನ್ನ ದೇವರು, ಈ ನಿರ್ಭಾಗ್ಯ ಸರೂವನ್ನು ಬಿಟ್ಟುಬಿಡುತ್ತಾರೆಯೇ? ಇನ್ನೆಂದೆಂದಿಗೂ ನನ್ನ ಪತಿಯ ಸೇವೆ, ನನ್ನ ಪತಿಯ

ಸುಖ, ಕಡೆಯು ವರೆಗೂ ಇಲ್ಲವಂತಾಗುತ್ತದೆಯೇ? ಅವರನ್ನು ನೋಡದೆ ಹೇಗೆ ಜೀವದಿಂದಿರಲಿ? ಅಯ್ಯೋ! ಅಮ್ಮಾ...ಅವರು ನನ್ನನ್ನು ಕಡೆಗೂ ತೊರೆದು ಬಿಡುತ್ತಾರೆಯೇ ಅಮ್ಮಾ?....ಹೇಗೆ ಈ ದುಃಖ ನುಂಗುವುದು?.... ಆಗದು....ಆಗದು. ಸಹಿಸಲಾರೆ! ಇದರಿಂದ ಸಾವೊಂದೇ ನನ್ನನ್ನು ಪಾರುಮಾಡ ಬಹುದು....ಅದಾವರೂ ಹೇಗೆ ಬಂದೀತು?....ದೇವರೇ....!" ಎಂದು ಸರೂ ಸಂಕಟ ತಾಳಲಾರದೇ ನರಳಿದಳು. ದಿನವಿಡೀ ಅಳುತ್ತಲೇ ಇದ್ದಳು. ದುಃಖಾತಿ ರೇಕದಿಂದ ಗೋಡೆಗೆ ಹಣೆಯನ್ನು ಜಚ್ಚಿಕೊಂಡುದುದರಿಂದ ಅದು ಊದಿ ಕೊಂಡಿತ್ತು. ದುಃಖದ ಜೊತೆಗೆ ಅದರ ನೋವೂ ಸೇರಿಕೊಂಡು, ಸರೂಳ ಜೀವ ವಿಲಿವಿಲಿ ಒದ್ದಾಡಿತು. ಇದೇ ಹೊತ್ತಿನಲ್ಲಿ ಬಳಿಗೆ ಬಂದ ವಿಜಯನನ್ನು ಅಸಹ್ಯಪಟ್ಟುಕೊಂಡು ನೂಕಿದಳು. ತಾಯಿಯ ಈ ವರ್ತನೆಯನ್ನೇ ತಿಳಿದು ಕೊಳ್ಳಲಾರದ ಮಗು ಸುಮ್ಮನೆ ಅಳುತ್ತಾ ಹೋಗಿ ಒಂದು ಕಡೆ ಕೂತು ಕೊಂಡಿತು. ಸರೂ ಒಂದು ದಿನವೂ ಮಗುವನ್ನು ಹೊಡೆದವಳಲ್ಲ. ಆದರೆ ಈಗ ತನ್ನ ದುಃಖ ಮಿತಿ ಮೀರಿಹೋಗಿ ಅವನನ್ನು ಹೊಡೆದಿದ್ದಳು. ಆದರೆ ಅವನ ಅಳುವನ್ನು ಕೇಳಿದ ಕೂಡಲೆ ಸರೂವಿನ ಎದೆಯಲ್ಲಿ ಕಳವಳ ಹುಟ್ಟಿತು. ತಾನು ಮಾಡಿದ್ದಕ್ಕಾಗಿ ತನ್ನನ್ನೇ ಶಪಿಸಿಕೊಳ್ಳುತ್ತಾ ಅವನನ್ನೆತ್ತಿಕೊಂಡು ಮುದ್ದಾಡಿ, ಮುತ್ತು ಕೊಟ್ಟು, ಅವನನ್ನು ಸಮಾಧಾನ ಮಾಡಬೇಕಾದರೆ ಅವಳಿಗೆ ಸಾಕಾಯಿತು. ಅತ್ತೂ ಅತ್ತೂ ದಣಿದಿದ್ದ ವಿಜಯ ತೊಡೆಯ ಮೇಲೆಯೇ ನಿದ್ರೆಹೋದ. ಅವನನ್ನು ಮಲಗಿಸಿ ಬಂದು ಸರೂ ಒಂದು ನಿರ್ಧಾ ರಕ್ಕೆ ಬಂದಳು. ಮಾಧವ ಆಫೀಸಿಗೆ ಹೋಗಿದ್ದ. ವಿಜಯನ ಊಟ ಮುಗಿ ದಿತ್ತು. ಸರೂ ಇನ್ನೂ ಊಟ ಮಾಡಿರಲಿಲ್ಲ. ನೇರವಾಗಿ ಹಿಂದುಗಡೆಯ ನಲ್ಲಿ ಯಲ್ಲಿ ಸ್ನಾನ ಮಾಡಿದಳು. ತಲೆಗೂ ನೀರು ಹಾಕಿ ಕೊಂಡಳು. ಒದ್ದೆಯ ಸೀರೆ ಯಲ್ಲಿಯೇ ದೇವರಿಗೆ ದೀಪಹಚ್ಚಿದಳು. ಒದ್ದೆಯಾಗಿದ್ದ ಕೂದಲನ್ನು ಗಂಟು ಹಾಕಿದಳು. ಲಕ್ಷಣವಾಗಿ, ಎದ್ದು ಕಾಣುವಂತೆ ಕಾಸಿನಷ್ಟಗಲ ಕುಂಕುಮ ವಿಟ್ಟಳು. ಹಾಗೆಯೇ ದೇವರಿಗೆ ಪೂಜೆಮಾಡಿ, ತೆಂಗಿನಕಾಯಿ ನೇವಿದ್ಯಮಾಡಿ ದೇವರಿಗೆ ದೀರ್ಘ ಪ್ರದಕ್ಷಿಣೆ ನಮುಸ್ಕಾರಗಳನ್ನು ಮಾಡಲು ಶುರು ಮಾಡಿದಳು. ನೂರಾ ಎಂಟು ನಮುಸ್ಕಾರಗಳು ಮುಗಿದ ಮೇಲೆ, ಸರೂ ರಾಮನಾಮ ಜಪಕ್ಕೆ ತೊಡಗಿದಳು. ಒಂದು ಗಂಟೆಯ ಕಾಲ, ತದೇಕಚಿತ್ತದಿಂದ ಜಪ ಮಾಡಿದ ಮೇಲೆ ಅವಳ ಮನಸ್ಸಿಗೆ ನೆಮ್ಮದಿಯುಂಟಾಯಿತು. ಶರೀರ, ಮನ

ಎರಡಕ್ಕೂ ಹಾಯೆನಿಸಿತು. ಅವಳ ಹೃದಯದ ಬೇಗುದಿ ಎಲ್ಲಾ ಶಾಂತ ವಾಯಿತು. ಅವಳು ತನ್ನ ದುಃಖ, ಸಂಕಟ, ಅಸೂಯೆ, ಎಲ್ಲವನ್ನೂ ನೀಗಿ ಸಮಾಧಾನಚಿತ್ತಳಾದಳು.

ಮಾಧವ ಸುಖವಾಗಿದ್ದರೆ ಸಾಕು ಎಂದು ತಾನೇ ಅಲ್ಲವೇ ಲೂಸಿಯ ಪರಿಚಯ ಮಾಡಿಕೊಟ್ಟಿದ್ದು ? ಲೂಸಿಯ ಸಹವಾಸದಿಂದ ಮಾಧವ ಅತ್ಯಂತ ತೃಪ್ತನಾಗಿದ್ದಾನೆ. ಅವನಿಗೀಗ ಯಾವುದರ ಕೊರತೆಯೂ ಇಲ್ಲ. ಇಷ್ಟು ದಿನ ಅವಳ ಜೊತೆಗೇ ಇದ್ದವರು ಮದುವೆಯಾದರೆ ಅದರಲ್ಲಿ ತಪ್ಪೇನು ? ಮದುವೆ ಯಾಗದೇ ಇದ್ದರೆ ಎಂದಿನಂತೆ ಮಾಧವ ತನ್ನ ಬಳಿ ಇರುತ್ತಿದ್ದನೇ ? ಎಂದಿಗೂ ಇಲ್ಲ. ಅವನು ಲೂಸಿಯ ಜೊತೆಗೇ ಇರುತ್ತಿದ್ದ. ಆಗ ಬಂದ ಭಾಗ್ಯವೇನು ? ಈಗ ಅವರ ಮದುವೆಯಿಂದ ಕಳೆದು ಹೋಗುವುದೇನು ? ಏನೂ ಇಲ್ಲ. ಮದುವೆಯಾದರೂ ಸರಿ, ಇಲ್ಲದಿದ್ದರೂ ಸರಿ ಮಾಧವ ಎಂದಿಗೂ ಲೂಸಿಯ ವನೇ ಹೊರತಾಗಿ, ತನ್ನವನೇನೂ ಆಗುವುದಿಲ್ಲ. ಹಾಗಿದ್ದಮೇಲೆ ನಾನೇಕೆ ವ್ಯಥೆಪಡಬೇಕು ? ನನಗೆ ಬೇಕಾದುದೇನು ? ನನ್ನ ಕರ್ತವ್ಯವೇನು ? ಮುಂಚೆಯೇ ಎಷ್ಟೋ ಬಾರಿ ಹೇಳಿಯಾಯಿತು, ಲೂಸಿಯ ಸಹವಾಸ ಬೇಡಾ ಎಂದು. ಆದರೆ ಅವರು ಕೇಳಲಿಲ್ಲ. ಒಂದು ವೇಳೆ ನಾನು ಅವರಿಗೆ ಲೂಸಿಯ ಜೊತೆ ಇರಲು ಅವಕಾಶ ಕೊಡದೇ ಹೋಗಿದ್ದರೆ, ಅವರು ಏನಾಗುತ್ತಿದ್ದರು ? ಅವಳಿಗಾಗಿಯೇ ಹಂಬಲಿಸಿ, ಕೊರಗಿ ಕೊರಗಿ ಮೃತ್ಯುಮುಖರಾಗುತ್ತಿದ್ದರು, ಇಲ್ಲವೇ ನನ್ನ ಮಾತಿಗೆ ಬೆಲೆ ಕೊಡದೆಯೇ ತಾವಾಗಿಯೇ ಅವಳನ್ನು ಕೂಡಿ ಕೊಳ್ಳುತ್ತಿದ್ದರು. ಇಲ್ಲಾ, ಇನ್ನಾರ ಬಳಿಯಲ್ಲಾದರೂ ಹೋಗಿ ಮನಸ್ಸಿಗೆ ತೃಪ್ತಿ ಹೊಂದುತ್ತಿದ್ದರು. ಮೊದಲಿಂದಲೂ ಅವರದ್ದು ಒಂದು ಬಗೆಯ ಸ್ವಭಾವ. ಅದಕ್ಕೆ ಯಾರು ಏನು ಮಾಡುವುದು ? ಆದರಿಂದ ಈಗ ಅವರು ಲೂಸಿಯ ಜೊತೆಯಲ್ಲಿರುವುದೇ ಸರಿ, ನನಗೆ ಯಾವ ತೊಂದರೆಯಾದರೂ ಪರವಾ ಇಲ್ಲ. ಅವರು ಅವಳ ಜೊತೆಯಲ್ಲಿ ಅತ್ಯಂತ ಸುಖವಾಗಿದ್ದಾರೆ ಅಷ್ಟು ಸಾಕು. ನನಗೆ ಬೇಕಾದುದು ಅವರು ಸುಖವಾಗಿರುವುದು. ಅವರನ್ನು ಸುಖವಾಗಿಟ್ಟಿರುವುದೇ ನನ್ನ ಕರ್ತವ್ಯ. ಈಗ ನನಗೆ ಬೇಕಾದುದೂ ದೊರೆತಿದೆ. ನಾನು ನನ್ನ ಕರ್ತವ್ಯ ವನ್ನೂ ಮಾಡಿದ್ದೇನೆ. ನಾನು ಸಾಕಷ್ಟು ಎಚ್ಚರಿಕೆಯನ್ನೂ ಕೊಟ್ಟು ನನ್ನ ಮೇಲಿನ ಜವಾಬ್ದಾರಿಯನ್ನು ಕಳೆದುಕೊಂಡಿದ್ದೇನೆ. ನನ್ನ ಕೆಲಸ ನಾನು ಮಾಡಿರುವೆ. ಇನ್ನು ಉಳಿದದ್ದು ದೇವರ ಮೇಲೆ. ಹೀಗೆ ಸರೂ ಯೋಚಿಸಿ

ಕೊಂಡು, ಅಲ್ಲಿಯೇ ದೇವರ ಮನೆಯಲ್ಲಿ ಮಲಗಿದಳು. ಒಂದು ಬಗೆಯ ಆತ್ಮ
ತೃಪ್ತಿಯೆನಿಸಿದ್ದರಿಂದ ಒಡನೆಯೇ ನಿದ್ರೆ ತಾಯಿಯಂತೆ ಒಂದು ತೊಡೆಕೊಟ್ಟು
ಚೈತನ್ಯ ದಾಯಕ ತನ್ನ ಮುಸುಕನ್ನೆಳೆದಳು.

ಫಿಲೋಮಿನಾ, ಲೂಸಿಯ ಮದುವೆಯ ಶುಭ ಸಮಾಚಾರವನ್ನು ಕೇಳಿ
ದಾಗ, ಅತ್ಯಂತ ಸಂತಸಗೊಂಡಳು ಅದೂ ಮಾಧವನೊಡನೆ! ಲೂಸಿಗಾಗಿ
ಅವನು ಮತಾಂತರ ಹೊಂದಲೂ ಸಿದ್ಧನಾಗಿದ್ದಾನೆ. ಅವಳಲ್ಲಿ ಅವನು ಇಟ್ಟಿ
ರುವ ಪ್ರೇಮ ಎಂತಹದು? ಆದರೆ ಈ ಲೂಸೀ ಅವನಿಗೆ ತಕ್ಕ ಹಾಗೆ, ಅವನ
ಲ್ಲಿಯೇ ಇರುತ್ತಾಳೆಯೇ? ಲೂಸಿಯದು ಬಹಳ ಚಂಚಲಸ್ವಭಾವ. ಗಳಿಗೆ ಗಳಿಗೆ
ಗೊಂದು ರೀತಿ ಮಾತನಾಡುವಳು. ಮಾಧವನ ಪ್ರೇಮಕ್ಕೆ ಸರಿಯಾಗಿ, ಅವ
ನಿಗೆ ದ್ರೋಹವೆನಿಸದೆ ಇವಳು ಬಾಳುವಳೇ ಎಂಬ ಸಂಶಯವೂ, ಅವಳಲ್ಲಿ
ಮೂಡಿತು. ಏನಾದರೂ ಆಗಲೀ ಅವಳ ಬಾಳು ನೇರವಾದ, ಸುಗಮವಾದ
ದಾರಿಯನ್ನು ಹಿಡಿದಿದೆ. ಅವಳು ಅವನ್ನೇ ಕಡೆಯ ತನಕ ಅನುಸರಿಸಿಕೊಂಡು
ಹೋಗುವಂತೆ ಆ ಏಸೂ ಬುದ್ಧಿ ಕೊಡಲಿ, ಎಂದುಕೊಂಡು, ಬಹಳ ಉತ್ಸಾಹ
ದಿಂದ ಮದುವೆಯ ತಯಾರಿ ನಡೆಸಿದಳು. ಒಳ್ಳೇ ಸಡಗರದಿಂದ ತನ್ನ ಸ್ನೇಹಿತೆ
ಯರು, ನೆಂಟರಿಷ್ಟರು ಎಲ್ಲರಿಗೂ ಲೂಸಿಯ ಮದುವೆಯ ಬಗ್ಗೆ ತಿಳಿಸಿ ಬಂದಳು.
ಲೂಸಿಯ 'ವೆಡಿಂಗ್‌ಗೌನ್'ನನ್ನು ತಾನೇ ಹೊಲಿಸಿ, ಅದಕ್ಕೆ ಕಸೂತಿ ಕೆಲಸ.
ಶುರುಮಾಡಿ, ತನಗೆ ಬಂದಿರುವ ಕುಶಲ ವಿದ್ಯೆಯನ್ನೆಲ್ಲಾ ಅದರಲ್ಲಿ ತೋರಿಸಿ,
ಅದು ಅಂದವಾಗಿ, ಆಕರ್ಷಣೀಯವಾಗಿ ಕಾಣುವಂತೆ ತಯಾರು ಮಾಡಿದಳು.

ಇತ್ತ ಲೂಸಿಯ ವಿಚಾರವೇ ಬೇರೆಯ ತೆರನಾಗಿತ್ತು. ಅವಳಿಗೆ
ಮಾಧವನೊಡನೆ ಮದುವೆಯಾಗುವುದೂ ಅಷ್ಟೇನೂ ಇಷ್ಟವಿರಲಿಲ್ಲ. ಅವಳ
ಗಮನವೆಲ್ಲಾ ಇದ್ದುದು ಅವನ ಹಣದ ಮೇಲೆ. ಅಂಟೇಯ ಕಾಟಕ್ಕಾಗಿ
ಅವಳು ಮಾಧವನೊಡನೆ ಮದುವೆಯಾಗಲು ಒಪ್ಪಿಕೊಂಡಿದ್ದಳಲ್ಲದೆ, ಬೇರೆ
ಯಾವ ಕಾರಣವೂ ಇರಲಿಲ್ಲ. ಹತ್ತು ಜನರೊಡನೆ, ಕುಣಿದು ಕುಪ್ಪಳಿಸಿದ
ಅವಳಿಗೆ ಮಾಧವನ ಬಗ್ಗೆ ಅಷ್ಟು ಪ್ರೀತಿಯು ಉಂಟಾಗುವುದಕ್ಕೆ ಕಾರಣವಾ

ದರೂ ಏನು? ಮಾಧವನೂ ಹತ್ತು ಜನರಲ್ಲಿ ಒಬ್ಬನಾಗಿದ್ದ. ಏನೇ ಆಗಲೀ ಮದುವೆಯಂತೂ ಮಾಡಿಕೊಳ್ಳುವುದು. ಮುಂದಿನ ವಿಚಾರ ಆಮೇಲೆ, ಎಂಬುದೇ ಲೂಸಿಯ ಹೃದ್ಗತವಾಗಿತ್ತು.

ಸರೂವಿನಿಂದ ತನ್ನ-ಲೂಸಿಯರ ಮದುವೆಗೆ ಸಮ್ಮತಿ ಇಷ್ಟು ಬೇಗ ಇಷ್ಟು ನಿರ್ಮತ್ಸರಭಾವದಿಂದ ದೊರತೀತೆಂದು ಮಾಧವ ಎಣಿಸಿರಲಿಲ್ಲ; ಮತ್ತು ಸರೂ ಜೀವನದ ಯಾವ ಅಂತಸ್ತಿನ ಮೇಲೆ ನಿಂತು ಈ ದೃಷ್ಟಿಯನ್ನು ಈಗ ಪಡೆದಿದ್ದಾಳೆ ಎಂಬುದನ್ನೂ ಅವನು ಊಹಿಸಬಲ್ಲವನಾಗಿರಲಿಲ್ಲ. ಅವನ ಮನಸ್ಸಿನ ಎಳೆತ ಲೂಸಿಯ ಕಡೆಗೆ ಇತ್ತು. ಅದಕ್ಕೆ ಅನುಕೂಲವಾದ ಮಾತೆ ಸರೂವಿನಿಂದ ಬಂದೊಡನೆ ಮಾಧವ ಅತ್ಯಂತ ಉತ್ಸಾಹಿತನಾದ. ಅದೇ ಹುಮ್ಮಸ್ಸಿನಲ್ಲಿ ಬ್ಯಾಂಕಿಗೆ ಹೋಗಿ, ತನ್ನ ಲೆಕ್ಕದಲ್ಲಿದ್ದ ಹಣದಲ್ಲಿ ಒಂದು ಸಾವಿರ ರೂಪಾಯಿ ತಂದು, ಲೂಸಿಯ ಕೈಗೆ ಕೊಟ್ಟು "ಇದು ನೋಡು ಲೂಸೀ, ಇದು ನಮ್ಮ ವಿವಾಹದ ಖರ್ಚಿಗಾಗಿ. ನಿಮ್ಮ ಸಂಪ್ರದಾಯದ ಪ್ರಕಾರ ಏನೇನು ಮಾಡ ಬೇಕೋ ಅದನ್ನೆಲ್ಲಾ ಇದರಲ್ಲಿಯೇ ಮಾಡು. ಹಾಗೆಯೇ ಒಂದು ದಿನ ಕಂಪನಿ ಯವರಿಗೆಲ್ಲಾ ಒಂದು 'ಫೀಸ್ಟು' ಕೊಟ್ಟುಬಿಡೋಣ. ನಿನ್ನ ವಸ್ತ್ರ-ಒಡವೆ, ಸೀರೆ ಎಲ್ಲಾ ಇದರಲ್ಲಿಯೇ ಆಗಬೇಕು. ಇದಕ್ಕೂ ಹೆಚ್ಚಿಗೆ ಖರ್ಚುಮಾಡಲು ಸಾಧ್ಯ ವಿಲ್ಲ ತಿಳಿಯಿತೆ?" ಎಂದು ಮಾಧವ ಕಟ್ಟುನಿಟ್ಟಾಗಿ ಹೇಳಿದ. ಲೂಸಿ ಒಪ್ಪಿ ಕೊಂಡು ಎಲ್ಲ ಸಿದ್ಧತೆಯನ್ನೂ ಮಾಡಿಕೊಂಡಳು. ತನ್ನ ಗೆಳತಿಯರಿಗೆಲ್ಲಾ ತಾನೇ ಆಹ್ವಾನ-ಪತ್ರಿಕೆಗಳನ್ನು ಬರೆದು ಕಳಿಸಿದಳು

ಮದುವೆಯ ದಿನವು ಮುಂಗಾರಿ ಮಳೆಯನ್ನು ತರುವ ರಭಸದ ಗಾಳಿ ಯಂತೆ ಬಹಳ ವೇಗವಾಗಿ ಅಬ್ಬರದಿಂದ ಸಮಿಸಮೀಪ ಬರಹತ್ತಿತು.

ಸರೂ ಮದುವೆಯ ಸಮಾರಂಭಕ್ಕೆ ತಾನೂ ಬರುವವಳೆಂದು ಬಲವಂತ ದಿಂದ ಮಾಧವನ ಒಪ್ಪಿಗೆ ಪಡೆದು ವಿಜಯನೊಡನೆ, ಅವರ ಮದುವೆ ನಡೆ ಯುವ 'ಸೇಯಿಂಟ್ ಜೋಸೆಫ್' ಚರ್ಚಗೆ ಹೋದಳು. ಅಲ್ಲಿ ನೆರೆದವರಲ್ಲಿ ಲೂಸಿಯ ಸ್ನೇಹಿತೆಯರು, ಬಂಧು ಬಳಗದವರು, ಇವರೇ ಹೆಚ್ಚಾಗಿದ್ದರು. ಫಿಲೋಮಿನಾ ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಓಡಾಡುತ್ತಿದ್ದಳು. ಇಂತಹ ಗದ್ದಲದಲ್ಲಿ ಸರೂವನ್ನು ಗುರ್ತು ಹಿಡಿದು ಕರೆಯುವವರಾರು? ಯಾರೂ ಇರಲಿಲ್ಲ. ಅಲ್ಲಿ ಯಾರನ್ನು ಮಾತನಾಡಿಸುವುದು? ಎಲ್ಲಿ ಕುಳಿತುಕೊಳ್ಳುವುದು? ಎಂಬುದು ಏನೂ ಸರೂವಿಗೆ ತಿಳಿಯಲಿಲ್ಲ. ಮಾಧವನ ಗುರುತು ಹಿಡಿದು

ಒಳಗೆ ಹೋಗಬೇಕೆಂದರೆ ಮದುವಣಿಗನಾದ ಅವನು ಎಲ್ಲಿಯೋ ಜನಸಮು ದಾಯದಲ್ಲಿ ಅಡಗಿಹೋಗಿದ್ದ. ಲೂಸಿಯನ್ನಂತೂ ಕಾಣುವ ಹಾಗೆಯೇ ಇರ ಲಿಲ್ಲ. ಏನು ಮಾಡಬೇಕು? ಅಲ್ಲಿಯೇ ಆ ಕ್ರಿಸ್ತಮಂದಿರದ ಮಹಾದ್ವಾರದ ಮೆಟ್ಟಿಲ ಬಳಿ ಸರೂ ವಿಜಯನೊಡನೆ ಕಾಯುತ್ತ ನಿಂತಳು. ಯಾವುದೋ ಕಾರ್‍ಯಕ್ಕಾಗಿ ಹೊರಗೆ ಬಂದ ಫಿಲೋಮಿನಾ ಸರೂವನ್ನು ನೋಡಿ, "ಯಾವು ಬೇಕಾಗಿತ್ತಮ್ಮಾ ನಿಮಗೆ? ಇಲ್ಲಿ ಯಾಕೆ ನಿಂತಿದ್ದೀರಿ?" ಎಂದು ಕೇಳಿದಳು.

"ಮದುವೆಯ ಹುಡುಗಿ ಲೂಸಿಯನ್ನು ಕಾಣಬೇಕಿತ್ತು." ಸರೂ ನಿರ್ಭಯ ವಾಗಿ ನುಡಿದಳು.

ಫಿಲೋಮಿನಾ ವಿಜಯನನ್ನೇ ದಿಟ್ಟಿಸಿ ನೋಡಿದಳು. ಅವಳಿಗೆ ಏನು ಹೊಳೆಯಿತೋ ಏನೋ, "ಬನ್ನೀಮ್ಮಾ ಒಳಗೆ. ಲೂಸಿಯ ಬಳಿ ಕರೆದೊಯ್ಯುವೆ." ಎಂದು ಸರೂಳ ಕೈ ಹಿಡಿದು ಒಳಗೆ ಕರೆದೊಯ್ದಳು. ಲೂಸಿ ಸರ್ವಾಲಂಕಾರ ಭೂಷಿತೆಯಾಗಿ ರಾರಾಜಿಸುತ್ತಿದ್ದಳು. 'ಲೂಸಿ ನಿಜವಾಗಿಯೂ ಚೆಲುವೆ!' ಎಂದು ಕೊಂಡಳು ಸರೂ. ಸರೂ ಅಲ್ಲಿ ಬಂದುದನ್ನು ನೋಡಿ ಲೂಸಿ ಅಚ್ಚರಿಗೊಂಡಳು. ಸರೂ ಇಷ್ಟು ಉದಾರಮನಸ್ಸಿನಿಂದ ತನ್ನ ಪತಿಯ ವಿವಾಹವನ್ನು ನೋಡಲು, ತಾನೇ ಇಲ್ಲಿಯ ವರೆಗೂ ಬಂದುದು ನೋಡಿ, ಲೂಸಿಗೆ ದಿಗ್ಭ್ರಮೆಯಾಯಿತು. ಸರೂವನ್ನು ದೂರಿನಿಂದಲೇ ನೋಡಿ 'ನಮಸ್ತೆ' ಎಂದು ಕೈಮುಗಿದಳು. ಸರೂ ಪ್ರತಿಯಾಗಿ ವಂದಿಸಿದಳು. ಸರೂ ಲೂಸಿಗಾಗಿ ಉಡುಗೊರೆಯೊಂದನ್ನು ತಂದಿ ದ್ದಳು. ಅದೊಂದು ಫೋಟೋ ಫ್ರೇಮು. ಶುದ್ಧವಾದ ಬಿಳಿಯ ದಂತದವಲ್ಲಿ, ಕೆತ್ತನೆಯ ಕೆಲಸಗಳಿಂದ ಕೂಡಿದ, ಅರಳೀಯೆಲೆಯಾಕಾರದಲ್ಲಿರುವ ಆ ಚೌಕಟ್ಟಿನಲ್ಲಿ ಮಾಧವನ ಫೋಟೋ ಒಂದು ಕಂಗೊಳಿಸುತ್ತಿತ್ತು. ಅದರ ಹಿಂದೆಯೇ ಕಾಗದ ಒಂದರಲ್ಲಿ ಸರೂ ತನ್ನ ಶುಭಾಶಯವನ್ನು ಬರೆದು, ಅದಕ್ಕೆ ಅಂಟಿಸಿದ್ದಳು. ಅದು ಇಂಗ್ಲೀಷನಲ್ಲಿಯೇ ಬರೆಯಲ್ಪಟ್ಟಿದ್ದಿತು.

"ಸಿಸ್ಟರ್ ಲೂಸೀ,

ನಾನು ನನ್ನ ಹೃದಯವನ್ನು, ನನ್ನ ಪ್ರಾಣವನ್ನು (ನನ್ನ ಜೀವಿತವೇ ಮೂರ್ತಿಮತ್ತಾಗಿದ್ದ ನನ್ನ ಪತಿಯನ್ನು) ಈ ಶುಭ ದಿವಸ, ನಿನ್ನ ಪತಿಯ ರೂಪದಲ್ಲಿ ನಿನಗೆ ಅರ್ಪಿಸುತ್ತಿದ್ದೇನೆ. ಇಂದಿನಿಂದ ಅವರು ನಿನ್ನವರು. ನೀನು ಅವರಿಗೆ ಕೃತಜ್ಞಳಾಗಿರುವುದು, ಅವರನ್ನು ನೋಡಿ ಕೊಳ್ಳುವುದು, ಇವು ನಿನ್ನ ಕರ್ತವ್ಯ. ಮನುಷ್ಯ ಜಾತಿಗೆಟ್ಟರೂ ನೀತಿ

ಕೆಡಬಾರದು. ನಿಮ್ಮ ಮುಂದಿನ ಬಾಳ್ವೆ ಯಾವದೊಂದು ದುಸ್ವಪ್ನ ವನ್ನೂ ಕಾಣದಂತೆ ಸುಗಮವಾಗಿ ಸಾಗಲಿ. ಈ ನಿನ್ನ ನಿರ್ಭಾಗ್ಯ ಸಹೋದರಿಯ ನೆನಪು ಎಂದಿಗಾದರೂ, ಈ ಫೋಟೋವನ್ನು ನೋಡಿ ದಾಗ ಉಂಟಾಗಲಿ.

ಇತಿ ನಿನ್ನ ಹತಭಾಗ್ಯ ಸಹೋದರಿ
—ಸರೂ

ಸರೂವಿನ ಹೃದಯವೈಶಾಲ್ಯತೆಯನ್ನು ನೋಡಿ ಲೂಸೀ ಬೆರಗಾದಳು. ಆವಳ ನೀತಿಪರ, ಸಮಯೋಚಿತವಾದ ಮಾತುಗಳನ್ನು ನೋಡಿ ಲೂಸೀ ತಳಮಳಗೊಂಡಳು. ಇಂತಹ ಸದ್ಗುಣಿಯಾದ ಹೆಂಡತಿಯನ್ನು ಬಿಟ್ಟು, ತನ್ನ ನ್ನೇಕೆ ಮದುವೆಯಾಗುವ ಹುಚ್ಚು ಬಂದಿತು ಈ ಮಾಧವನಿಗೆ ಎಂದು ದುಃಖ ಪಟ್ಟಳು. ಅಂತಹ ಸರಳ ಸುಂದರಳಾದ ಹೆಂಗಸಿಗೆ ತಾನು ಅನ್ಯಾಯ ಮಾಡು ತ್ತಿರುವೆನಲ್ಲಾ ಎಂದು ಪೇಚಾಡಿದಳು. ಆದರೆ ಕಾಲ ಮಿಂಚಿ ಹೋಗಿತ್ತು. ಫಿಲೋಮಿನಾಳಂತೂ, ಸರೂವನ್ನೂ ಅವಳ ಆ 'ಕನ್‌ಗ್ರ್ಯಾಚ್ಯುಲೇಷನ್' ಓದಿ ನೋಡಿ ಅತ್ತೇಬಿಟ್ಟಳು.

ಸರೂ ತನ್ನ ಕೆಲಸ ಮುಗಿದೊಡನೇ ಹೊರಗೆ ಬಂದುಬಿಟ್ಟಳು. ಮದುವೆಯ ರೀತಿಯನ್ನು ನೋಡುತ್ತಾ ಕೂತಿರುವುದು ಅವಳಿಂದ ಸಾಧ್ಯ ವಾಗಲಿಲ್ಲ. ಮನಸ್ಸನ್ನು ಎಷ್ಟೇ ಬಿಗಿಹಿಡಿದರೂ ಕಣ್ಣೀರು ಧಾರಾಕಾರವಾಗಿ ಉಕ್ಕಿ ಬರುತ್ತಿತ್ತು. ವಿಜಯ ಅಮ್ಮನ ಅಳುವನ್ನು ನೋಡಿ ತಾನೂ ರಗಳೆ ಶುರುಮಾಡಿದ.

ಬಿಷಪ್‌ರವರೇ ಬಂದು ವಿವಾಹದಲ್ಲಿ ಭಾಗವಹಿಸಿದರು. ಮಾಧವನ ಹೆಸರು ಅಳಿಸಲ್ಪಟ್ಟು 'ಫಿಲಿಪ್' ಎಂದಾಯಿತು. ಪಾದ್ರಿಗಳು ಮಂತ್ರಪಠನ ಮಾಡಿದರು. ಅವರ ರೀತಿಯ ಶಾಸ್ತ್ರಗಳೆಲ್ಲವೂ ಮುಗಿದ ಮೇಲೆ, ಫಿಲಿಪ್-ಲೂಸಿಯರ ಉಂಗುರಗಳ ಬದಲಾವಣೆಯೂ, ಪರಸ್ಪರ ಹಾರ ಹಾಕುವಿಕೆಯೂ ನಡೆಯಿತು. ಬಿಷಪ್ ಬಂದು ಫಿಲಿಪ್-ಲೂಸಿಯರ ಕೈಗಳನ್ನು ಜೋಡಿಸಿ 'ಮಗಳೇ, ಇಂದಿನಿಂದ ನೀನು ಇವನೊಡನೆ ಬಾಳ್ವೆ ಮಾಡಬೇಕು. ನಮ್ಮ ಸಂಗಡಕ್ಕೆ ಹೊಸಬನನ್ನು ಸೇರಿಸಿ ನಮ್ಮ ಮತಪ್ರಚಾರದ ಕಾರ್ಯದಲ್ಲಿ ಸಹಾಯ ಮಾಡಿರುವೆ. ಈ ನಿನ್ನ ಧರ್ಮಕಾರ್ಯಕ್ಕಾಗಿ, ದೇವರಿಂದ ನಿನ್ನ ಸಕಲ ಪಾಪ ಗಳೂ ಕ್ಷಮಿಸಲ್ಪಟ್ಟಿವೆ. ದೇವರ ಪ್ರತಿನಿಧಿಯಾದ ಬಿಷಪ್‌ರವರ ಮೂಲಕ

ಅವರ ಮದುವೆ ನಡೆಯಿತು. ಅಲ್ಲಿಯೇ ಆ ದಂಪತಿಗಳು ಮಂಡಿಯೂರಿ ಕುಳಿತು ದೇವರಲ್ಲಿ ಪ್ರಾರ್ಥನೆಯನ್ನು ಸಲ್ಲಿಸಿದರು.

"ಓ ಸ್ವರ್ಗದಲ್ಲಿರುವ ನನ್ನ ತಂದೆಯೇ...." ಎಂಬುದಾಗಿ ವಿಧಿಪೂರ್ವಕ ವಾಗಿ ಹೇಳಿಕೊಟ್ಟ ಪ್ರಾರ್ಥನೆಯನ್ನು ಮಾಧವ ಸಲ್ಲಿಸಿದ. ಅಲ್ಲಿನ ಕಾರ್ಯ ಕಲಾಪಗಳೆಲ್ಲಾ ಮುಗಿದ ಮೇಲೆ ಎಲ್ಲರೂ ಹೊರಗೆ ಬಂದರು. ಮಾಧವ-ಲೂಸಿ ಯರು ಕೈಗೆ ಕೈ ಹಿಡಿದು ಬರುತ್ತಿದ್ದರು. ಸರೂ ದೂರದಿಂದಲೇ ಮಾಧವ-ಲೂಸಿ, ನಗುತ್ತಾ ಕೆಲೆಯುತ್ತಾ, ಪುಷ್ಪಾಹಾರಗಳಿಂದ ಅಲಂಕೃತರಾಗಿ ಮೆಟ್ಟಿ ಲಿಳಿದು ಬರುತ್ತಿರುವುದನ್ನು ನೋಡಿದಳು. ಆ ದೃಶ್ಯ ಅವಳ ಮನದಲ್ಲಿ ಅಚ್ಚಳಿ ಯದಂತೆ ಮೂಡಿತು. ವಿಜಯ ಗುಂಪಿನಲ್ಲಿ ಬರುತ್ತಿರುವ ತಂದೆಯನ್ನು ನೋಡಿ 'ಅಣ್ಣಾ!" ಎಂದು ಅಲ್ಲಿಂದಲೇ ಕೂಗಿದ. ಮಾಧವ ಕೂಗಿದವರಾರೆಂದು ಸುತ್ತಲೂ ನೋಡಿದ. ಸರೂವಿನ ಕೈ ಹಿಡಿದುಕೊಂಡು ನಿಂತ ವಿಜಯ ಕಾಣಿಸಿ ಕೊಂಡ. ಮಾಧವನಿಗೆ ಆಗ ನೆನಪಾಯಿತು ಸರೂ ಬಂದಿದ್ದು. ತನ್ನ ಮರೆವಿಗಾಗಿ ಪಶ್ಚಾತ್ತಾಪ ಪಡುತ್ತಾ ಮಾಧವ ಸರೂವಿನ ಬಳಿಗೆ ಧಾವಿಸಿ ಬಂದ. ಲೂಸಿಯೂ ಅವನ ಹಿಂದೆಯೇ ಬಂದಳು.

"ಓ ಸರೂ, ನೀನು ಇಲ್ಲಿಯೇ ಬಿಸಿಲಿನಲ್ಲಿ ಬೇಯುತ್ತಾ ನಿಂತಿರುವೆಯಾ? ಒಳಗೆ ಬರಬಾರದಾಗಿತ್ತೇ? ನೀನೂ ಲೂಸಿಯ ಮನೆಗೆ ಬರುವಿಯಾ? ಈ ದಿನ ಸಂಜೆ ನಮ್ಮ ಕಂಪನಿಯವರಿಗೆಲ್ಲಾ 'ಟೀ-ಪಾರ್ಟಿ' ಮತ್ತೆ ರಾತ್ರಿ ಎಲ್ಲರಿಗೂ ಡಿನ್ನರ್. ಲೂಸಿಯ ಆಂಟೀ ಎಲ್ಲಾ ವ್ಯವಸ್ಥೆ ಮಾಡಿದ್ದಾರೆ." ಎಂದು ಎಳೆಯ ಮಗುವಿನಂತೆ ಎಲ್ಲವನ್ನೂ ಹೇಳಿದ ಮಾಧವ.

ಲೂಸಿ ಸರೂವಿಗೆ ನಮಸ್ಕರಿಸಿ "ನಿಮ್ಮ ಆಶೀರ್ವಾದ ಯಾವಾಗಲೂ ನಮ್ಮ ಮೇಲೆ ಇರಲಿ ಸಿಸ್ಟರ್. ನನ್ನನ್ನು ಮರೆಯಬೇಡಿ" ಎಂದಳು.

ಲೂಸಿಯ ಅಂಕಲ್ ಹಿಂದಿನಿಂದ ಬಂದು "ಹಲ್ಲೋ ಫಿಲಿಪ್, ಏನು ಮಾಡುತ್ತಾ ಇರುವಿರಿ ಇಲ್ಲಿ? ನಡೆಯಿರಿ ಮನೆಗೆ ಹೋಗುವಾ" ಎಂದು ಹೇಳುತಾ ಮಾಧವನ ಕೈ ಹಿಡಿದು ಎಳೆದ. ಸರೂ ಯಾರು ಎಂಬುದೂ ಅವನಿಗೆ ಗೊತ್ತು ಇರಲಿಲ್ಲ.

"ನೀನು ಬರುವುದಾದರೆ ಬಾ ಸರೂ. ಇಲ್ಲವಾದರೆ ಮನೆಗೇ ಹೋಗು. ಬಸ್‌ಗಾಗಿ ಕಾಯುತ್ತಾ ಕೂಡಬೇಡ. ರೈಲಿನಲ್ಲಿಯೇ ಹೋಗು, ಅದೇ ಅನು ಕೂಲ. ವಿಜಯಾ, ನಿನಗೆ ಸಾಯಂಕಾಲ ಪೆಪ್ಪಿಂಟು ತರುವೆ, ಅಮ್ಮನ

ಜೊತೆ ಹೋಗು." ಎಂದು ಮನಸ್ಸಿಲ್ಲದ ಮನಸಿನಿಂದ ನುಡಿದವನೇ ಮಾಧವ ಟಿಂಕಲ್‌ನೊಡನೆ ಹೊರಟುಹೋದ. ಬಂದಿದ್ದವರೆಲ್ಲರೂ ಹೊರಟುಹೋದರು. ಸರೂ ತಲೆ ಭಾರವೆನಿಸಿ ಅಲ್ಲಿಯೇ ಮೆಟ್ಟಿಲ ಮೇಲೆ ಸ್ವಲ್ಪ ಕುಳಿತಳು. ಸ್ವಲ್ಪ ಹೊತ್ತಿನಲ್ಲಿಯೇ ಪ್ರಜ್ಞೆಯೇ ಹೋಗಿತ್ತು. ಹಿಂದಿನಿಂದ ಬರುತ್ತಿದ್ದ ಫಿಲೋಮಿನಾ ನೋಡಿದಳು. ಹತ್ತಿರ ಬಂದು ಮಾತನಾಡಿಸಿದಳು. ಉತ್ತರ ಬಾರದ್ದನ್ನು ನೋಡಿ ಮೈ ಕೈ ಮುಟ್ಟಿದಳು. ಸರೂವಿಗೆ ಎಚ್ಚರ ತಪ್ಪಿದ್ದು ಗೊತ್ತಾಯಿತು. ಕೂಡಲೆ ಅಲ್ಲಿಂದಲೇ ನೀರು ತಂದು ಹಣೆಗೆ ಹಾಕಿ, ತನ್ನ ತೊಡೆಯ ಮೇಲೇ ಮಲಗಿಸಿಕೊಂಡು ಗಾಳಿ ಹಾಕಿದಳು. ವಿಜಯ ಇದನ್ನು ನೋಡಿ ಗಾಬರಿ ಗೊಂಡು ಅಳಲು ಪ್ರಾರಂಭಿಸಿದ. 'ಅಮ್ಮ ಮಲಗಿಕೊಂಡಿದ್ದಾರೆ. ಅಳಬೇಡಾ ಮಗೂ, ಸುಮ್ಮನಿರು' ಎಂದು ಅವನನ್ನು ಸಮಾಧಾನ ಪಡಿಸಿ, ಸರೂವಿನ ಹಣೆಯನ್ನು ನೇವರಿಸುತ್ತಾ ಕೂತಳು. ಕೆಲಹೊತ್ತಾದ ಮೇಲೆ ಸರೂ ಕಣ್ತೆರೆ ದಳು. "ಧೈರ್ಯವಾಗಿರಿ ಅಮ್ಮ, ನೀವೇನೂ ಯೋಚಿಸಬೇಡಿ" ಎಂದು ಫಿಲೋ ಮಿನಾ ಅವಳ ಸೆರಗು ಸರಿಪಡಿಸಿ ಹೇಳಿದಳು. ಸರೂ ಸಾವರಿಸಿಕೊಂಡು ಎದ್ದು ಕೂತಳು. ಫಿಲೋಮಿನಾ ತಾನೇ ಅವಳ ಕೈ ಹಿಡಿದುಕೊಂಡು ಎಬ್ಬಿಸಿ, ರಿಕ್ಷಾ ಗೊತ್ತುಮಾಡಿ ಅದರಲ್ಲಿ ಕೂಡಿಸಿದಳು. ಅವಳನ್ನು ಸ್ಟೇಷನ್‌ಗೆ ಕರೆದೊಯ್ಯು ವಂತೆ ರಿಕ್ಷಾವಾಲನಿಗೆ ತಿಳಿಸಿ, ಮುಂಗಡವಾಗಿಯೇ ಅವನಿಗೆ ಹಣ ಕೊಟ್ಟಳು. "ನೀವಾಗಿಯೇ ನೀವು ಈ ವಿವಾಹಕ್ಕೆ ಅನುಮತಿಯನ್ನು ಕೊಟ್ಟದ್ದು ಬಹಳ ಆಶ್ಚರ್ಯದ ಸಂಗತಿಯಮ್ಮಾ! ಏನೋ ಬರಿಯ ಕಥೆ-ಕಾದಂಬರಿ, ನಾಟಕ ಸಿನೇಮಾಗಳಲ್ಲಿ ನಾವು ಈ ರೀತಿಯ ನಿಮ್ಮ ಗುಣವನ್ನು ಕಾಣಬಹುದು. ಆದರೆ ನಿಜವಾಗಿಯೂ ಈ ನಮ್ಮ ಜೀವಮಾನದಲ್ಲಿ ಹೆಂಡತಿ ಸಂತೋಷದಿಂದಲೇ ಗಂಡನಿಗೆ ಇನ್ನೊಂದು ಮದುವೆಯಾಗಲು, ಅದೂ ಬೇರೆಯ ಜಾತಿಯ ಹೆಂಗ ಸನ್ನು ಮದುವೆಯಾಗಲು, ಅನುಮತಿ ಕೊಟ್ಟಿದ್ದು ಅತ್ಯಂತ ಸೋಜಿಗದ ಸಂಗತಿ. ಸದ್ಯ ಲೂಸಿ ಅವನಿಗೆ, ಪ್ರಾಮಾಣಿಕಳಾಗಿದ್ದರೆ ಸಾಕು, ಇಲ್ಲವಾದರೆ ನೀವು ಮಾಡಿದ ಶ್ರಮವೆಲ್ಲಾ ವ್ಯರ್ಥವಾಗುತ್ತೆ." ಫಿಲೋಮಿನಾ ಬಿಚ್ಚುಮಾತಿನಿಂದ ತನ್ನ ಮೆಚ್ಚಿಕೆ ತಿಳಿಸಿದಳು.

"ನನಗೆ ನನ್ನ ತಾಯಿಯು ಹೇಳಿದ ಮಾತುಗಳನ್ನು ಮನಃಪೂರ್ವಕ ವಾಗಿ ನಡೆಸಲೇಬೇಕೆಂಬ ಒಂದು ಹೆಬ್ಬಯಕೆ ನನ್ನನ್ನು ಬಾಲ್ಯದಿಂದಲೂ ಆವರಿ ಸಿದೆ. ನನ್ನ ತಾಯಿ ಹೇಳುತ್ತಿದ್ದರು: 'ಹೆಂಗಸಿಗೆ ಗಂಡನೇ ದೇವರು. ಅವನಲ್ಲಿಯೇ

ಅವಳ ಪ್ರಪಂಚವೆಲ್ಲಾ ಅಡಗಿದೆ. ಅವನೊಬ್ಬನನ್ನು ಸುಖ-ಸಂತೋಷದಲ್ಲಿ ಇಟ್ಟರೆ, ಅವಳು ಇಡೀ ಪ್ರಪಂಚವನ್ನೇ ತೃಪ್ತಿಪಡಿಸಿದಂತಾಗುತ್ತೆ. ನಿನಗೆ ಎಂತ ಹದೇ ಕಷ್ಟ ಬರಲೀ, ನಿನ್ನ ಪತಿಯು ಸುಖದಿಂದಿರುವನಾದರೆ ನೀನು ನಿನ ಪ್ರಾಣವನ್ನೂ ಅವನಿಗರ್ಪಿಸಲು ಹಿಂದೆಗೆಯಬೇಡಾ' ಎಂದು. ನನ್ನ ಗತಿಸಿದ ಆ ತಾಯಿಯ ಮಾತನ್ನು ತಪ್ಪದೆ ನಡೆಸುವುದೇ ನನ್ನ ಕೆಲಸ. ಅದರಿಂದ ಏನೇ ಪರಿಣಾಮ ಉಂಟಾಗಲಿ, ನನ್ನ ಕರ್ತವ್ಯ ನಾನು ಮಾಡುವೆ."

"ಅಯ್ಯೋ ತಾಯಿ, ಏನು ಮುತ್ತಿನಂತಹ ಮಾತಾಡಿದಿರಿ! ದೇವರು ನಿಮಗೆ ಕಲ್ಯಾಣ ಮಾಡಲಿ, ಸುಖ ಕೊಡಲಿ. ನಾನು ಹೋಗಲೇ?" ಫಿಲೋಮಿನಾ ನಮ್ರಳಾಗಿ ಕೇಳಿದಳು.

"ನಿಮ್ಮ ಉಪಕಾರ ದೊಡ್ಡದು. ನಾನು ನಿಮ್ಮನ್ನು ಎಂದೆಂದಿಗೂ ಮರೆಯ ಲಾರೆ." ಸರೂವಿನ ಮಾತು ಮುಗಿಯುವುದರೊಳಗೇ ರಿಕ್ಷಾ ಮುಂದಕ್ಕೆ ಹೋಯಿತು. ಫಿಲೋಮಿನಾ ಕಣ್ಣೊರಸಿಕೊಳ್ಳುತ್ತಾ ತನ್ನ ಮನೆಯ ಕಡೆಗೆ ಹೆಜ್ಜೆ ಹಾಕಿದಳು.

ಸಂಜೆ ನಾಲ್ಕರ 'ಟೀ-ಪಾರ್ಟಿ'ಗೆ ಕಂಪನಿಯ ನೌಕರರೆಲ್ಲಾ ಬಂದಿದ್ದರು. ಯಜಮಾನ ಅನಂತಸಿಂಗ್ ಕೂಡಾ ಬಂದಿದ್ದು, ಬೆಳ್ಳಿಯ ತಟ್ಟೆಯನ್ನೊಂದನ್ನು 'ಪ್ರೆಜೆಂಟ್' ಮಾಡಿದರು. ಅನಂತಸಿಂಗ್ ಮಾಧವನೊಡನೆ "ನೀವು ಹೊಸ ದಾರಿಯಲ್ಲಿ ನಡೆದುದಕ್ಕಾಗಿ ಬಹಳ ವಂದನೆಗಳು. ಆದರೆ ಆ ರೀತಿ ಮಾಡುವ ಮೊದಲು ನಿಮ್ಮ ಕೈ ಹಿಡಿದವರ ಗತಿ ಏನಾಗುತ್ತೆ ಎಂಬುದನ್ನು ಚೆನ್ನಾಗಿ ಯೋಚಿಸಿದ್ದರೆ ಚೆನ್ನಾಗಿತ್ತು. ಏನಾದರಾಗಲೀ ಇನ್ನು ಮುಂದೆ, ನಿಮ್ಮ ಬಾಳ್ವೆ ಸುಗಮವಾಗಿರಲಿ" ಎಂದು 'ಕನ್‌ಗ್ರಾಚ್ಯುಲೇಷನ್' ಕೊಡುವಾಗಲೂ ಯಥಾ ಸ್ಥಿತವನ್ನು ಮರೆಮಾಚಿರಲಿಲ್ಲ. ಎಲ್ಲರಿಗೂ ಭರ್ಜರಿಯಾದ ಉಪಹಾರ, ಪಾನೀಯ ಗಳಾದುವು. ಅಲ್ಲಿಯ ಓಡಾಟವೆಲ್ಲಾ ಮುಗಿಯುವ ವೇಳೆಗೆ ಕತ್ತಲೇ ಆಗುತ್ತಾ ಬಂತು.

ರಾತ್ರಿ ಲೂಸಿಯ ಕಡೆಯವರಿಗೆಲ್ಲಾ ಮೇಜುವಾನಿ. ಅವರ ಅಭಿರುಚಿಗೆ ತಕ್ಕಂತೆ 'ಡಿನ್ನರ್' ಏರ್ಪಡಿಸಲಾಗಿತ್ತು. ಮಾಧವನನ್ನು ಫಿಲಿಪ್ ಎಂದು

ಯಾರಾದರೂ ಕರೆದರೆ, ಮಾಧವ ತನ್ನನ್ನೇ ಕರೆಯುತ್ತಿರುವರೆಂದು ತಿಳಿದು-
ಕೊಳ್ಳಲೂ ಸಮರ್ಥನಿರಲಿಲ್ಲ. ಮಾಧವರಾವ್ ಎಂದು ಕರೆದರೇ ಅವನು ಓಗೊಡು
ತ್ತಿದ್ದ. ಅವರೆಲ್ಲರ ಸಹಪಂಕ್ತಿಯಲ್ಲಿ ಅವನು ಕುಳಿತಿದ್ದರೂ ಊಟವನ್ನೇನೂ
ಮಾಡಲಿಲ್ಲ. ಅವನಿಗೆ ಆ ಮಾಂಸಾಹಾರದ ವಾಸನೆಯನ್ನು ಸಹಿಸಲಾರದೇ
ಓಕರಿಕೆ ಬರುತ್ತಿತ್ತು. ಆದರೂ ತಾನು ಇನ್ನು ಮೇಲೆ ಅವರ ಮತದವನೇ ಆದ
ಮೇಲೆ ಇದೆಲ್ಲಾ ಸಹಿಸದೆ ಗತಿಯಿಲ್ಲ ಎಂದುಕೊಂಡು ಮನವನ್ನು ಬಿಗಿಯಾಗಿ
ಹಿಡಿದುಕೊಂಡು, ಕೂತಿದ್ದ. ಊಟ ಮುಗಿದ ನಂತರ ಎಲ್ಲರಿಗೂ 'ಡ್ರಿಂಕ್ಸ್'
ಕೊಟ್ಟಳು ಫಿಲೋಮಿನಾ. ಅಂಕಲ್ ಕುರ್ಚಿಯಿಂದೆದ್ದು 'ಡ್ರಿಂಕ್ ಟು ದಿ ಹೆಲ್ತ್
ಆಫ್ ಫಿಲಿಪ್ ಆ್ಯಂಡ್ ಲೂಸಿ" ಎಂದು ಹೇಳಿ ತನಗಾಗಿ ಇರಿಸಲ್ಪಟ್ಟಿದ್ದ 'ವೈನ್'
(ಮದ್ಯ) ಕುಡಿದ. ಎಲ್ಲರೂ ಕುಡಿದರು. ಆದರೆ ಮಾಧವ ನಿರಾಕರಿಸಿದಾಗ ಲೂಸೀ
ತಾನೇ ಸ್ವತಃ ತನ್ನ ಕೈಯಿಂದಲೇ, ಅವನು ಎಷ್ಟು ಅಡ್ಡಿ ಮಾಡಿದರೂ ಕೇಳದೆ,
ಕುಡಿಸಿಯೇ ಬಿಟ್ಟಳು. ಅದನ್ನು ನೋಡಿ ಎಲ್ಲರೂ 'ಬ್ರೆವೋ ಲೂಸಿ, ಬ್ರೇವೋ!'
ಎಂದು ಚಪ್ಪಾಳೆ ತಟ್ಟಿದರು. ಆದರೆ ಮಾಧವನ ಮುಖ ಮಾತ್ರ ಹರಳೆಣ್ಣೆ
ಕುಡಿದವರಂತೆ ಹುಳ್ಳಗೆ ಆಗಿದ್ದಿತು. ರಾತ್ರಿಯೆಲ್ಲಾ ಬರಿಯ ಪಿಯಾನೋ,
ಡ್ಯಾನ್ಸ್, ಹಾಡುಗಾರಿಕೆ ಇವುಗಳ ಕೋಲಾಹಲದಲ್ಲಿಯೇ ಕಳೆದುಹೋಯಿತು.
ಮಾರನೆಯ ದಿನ, ಬಂದಿದ್ದ ಅತಿಥಿಗಳೆಲ್ಲಾ ಹೊರಟುಹೋದರು. ಅಲ್ಲಿ ಉಳಿದ
ಹೊರಗಿನವರೆಂದರೆ ಮಾಧವನೊಬ್ಬನೇ. ಆ ದಿನವೆಲ್ಲಾ ಅವನು ಪೂರಾ
ನಿದ್ದೆಯಲ್ಲಿಯೇ ಕಳೆದ. ಮಾರನೆಯ ದಿನವೇ ಅವನಿಗೆ ಸರೂವಿನ ನೆನಪು
ಬಂದುದು. ಲೂಸಿ, ಆಗಲೂ ಕೂಡಾ ಮಾಧವನನ್ನು ಬಿಟ್ಟು ಕೊಡಲಾರ
ದವಳಾಗಿದ್ದಳು. "ಮನೆಯ ಕಡೆ ಒಂದು ಸಲ ಹೋಗಿ ನೋಡಿಕೊಂಡು ಬರುವೆ.
ಖಂಡಿತವಾಗಿಯೂ ಸಾಯಂಕಾಲಕ್ಕೆ ಇಲ್ಲಿಗೇ ಬರುತ್ತೇನೆ." ಎಂದು ಹೇಳಿ
ಲೂಸಿಯ ಅಪ್ಪಣೆ ಪಡೆದು ಬರಬೇಕಾದರೆ ಮಾಧವನಿಗೆ ಸಾಕುಬೇಕಾಯ್ತು.

ಮಾಧವ ಮನೆಗೆ ಬಂದಾಗ ಸರೂ ಯಾವ ಮಾತನ್ನೂ ಆಡಲಿಲ್ಲ.
ಅವನು ತನ್ನ ಮದುವೆಯ ವೈಭವವನ್ನೆಲ್ಲಾ ವಿವರಿಸಿ ತಿಳಿಸಿದ. "ನೋಡು ಸರೂ,

ಆ ಲೂಸಿ ಎಂತಹ ಚತುರಳಿರಬಹುದು! ನಾನು ಎಷ್ಟೇ ಬೇಡವೆಂದರೂ ಕೇಳದೆ, ತಾನೇ 'ಡ್ರಿಂಕ್ಸ್'ನ್ನು ಕುಡಿಸಿಯೇ ಬಿಟ್ಟಳಲ್ಲಾ! ಅದು ಹೇಗೆ ಕುಡಿಸಿ ಎನ್ನುವುದೇ ನನಗೆ ತಿಳಿಯುತ್ತಿರಲಿಲ್ಲ. ಅವಳೊಬ್ಬ ನಿಜವಾಗಿಯೂ ಪವಾಡ ಸ್ತ್ರೀಯಾಗಿರಬೇಕು. ಇಲ್ಲವಾದರೆ ಅವಳು ನನಗೆ ಅದನ್ನು ಕುಡಿಸಲಾಗುತ್ತಿತ್ತೆ?" ತಾನು ಏನು ಹೇಳುತ್ತಿದುವೆ, ಯಾರೆದುರಿಗೆ ಹೇಳುತ್ತಿರುವೆ ಎಂಬರಿವಿಲ್ಲದೆಯೇ ಮಾಧವ ಪ್ರತಿಯೊಂದನ್ನೂ ವಿವರಿಸಿ ಹೇಳಿದ. ಸರೂ ಮೌನವಾಗಿಯೇ ಕೇಳುತ್ತಿದ್ದಳು. ಅವನು ಹೇಳುವುದೆಲ್ಲಾ ಮುಗಿಯಿತೆಂದು ತೋರಿದ ಮೇಲೆ ಸರೂ ಹೇಳಿದಳು: "ನಾನೊಂದು ಮಾತು ಹೇಳುವೆ, ನೀವೇನೂ ತಪ್ಪು ತಿಳಿಯಬೇಡಿ. ನೀವು ಜಾತಿ ಬಿಟ್ಟಿರಿ ನಿಜ. ಆದರೆ ನೀತಿಯನ್ನು ಬಿಡಬೇಡಿ. ಯಾವುದೋ ಋಣಾನುಬಂಧ ನಿಮಗೆ ಲೂಸಿಯ ಪರಿಚಯ ಮಾಡಿಕೊಟ್ಟಿತು. ಅದೇ ಪೂರ್ವ ಸಂಚಯ ಮದುವೆಯನ್ನೂ ಮಾಡಿತು. ನಿಮ್ಮ ಸಕಲ ಬಯಕೆಗಳೂ ಈಗ ನೆರವೇರಿದುವು ಇನ್ನಾದರೂ ನೀವು ನಿಮ್ಮ ಲೂಸಿಯೊಡನೆ ಸರಿಯಾಗಿ ಸಂಸಾರ ಮಾಡಿಕೊಂಡಿರಿ. ಮತ್ತೆ ಇನ್ನಾರನ್ನಾದರೂ ನೋಡಿ ದುರ್ಬಲವಾಗಬೇಡಿ. ಅದು ಮೃಗಜಲ ಬೆನ್ನುಹತ್ತಿದಂತೆ; ಸುಮ್ಮನೆ ದಾಹವನ್ನೇ ಹೆಚ್ಚಿಸುವುದು. ನನ್ನ ಒಂದು ಮಾತು ನಡೆಸಿಕೊಡಿ: ಸುರಾಪಾನಕ್ಕೆ ಬಲಿಯಾಗಬೇಡಿ." ಎಂದು ಸಿ ಮಿ ತಕ್ಕೆಬಂದ ಉನ್ನತ ಮನಸ್ಸಿನ ಅಂತಃಸತ್ವವಾಗಿ, ಅಂತರ್ವಾಣಿಯಾಗಿ ನುಡಿದಳು.

"ಛೆ, ಹಾಗೆಲ್ಲಾದರೂ ಮಾಡುವೆನೇ ಸರೂ? ನಾನು ಲೂಸಿಯನ್ನು ತೊರೆದರೆ ಅವಳು ಹೇಗೆ ಜೀವದಿಂದಿರಬಲ್ಲಳು?" ಎಂದು ಮರ್ಮವರಿಯದೆ ಮಾಧವ ಲೂಸಿಯ ಬಗ್ಗೆ ಕನಿಕರಗೊಂಡು ನುಡಿದ. ಆದರೆ ಅದೇ ಮಾತು ಸರೂವಿಗೂ ಅನ್ವಯಿಸುತ್ತದೆ ಎಂಬುದನ್ನು ಮಾತ್ರ ಗ್ರಹಿಸಲಾರದವನಾಗಿದ್ದ. ಅವನು ಲೂಸಿಯ ಬಗ್ಗೆ ಪ್ರೇಮಾಂಧನಾಗಿದ್ದ. ಅವನಿಗೆ ಲೂಸಿಯೇ ಪ್ರಪಂಚ, ಪ್ರಪಂಚವೇ ಲೂಸಿ ಎನ್ನುವಷ್ಟರ ವರೆಗೂ ಅವನ ಭಾವನೆ ತೀವ್ರವಾಗಿತ್ತು. "ಇಲ್ಲಿ ನೋಡು ಸರೂ, ಮಧು-ಚಂದ್ರಕ್ಕೆ (ಹನಿ-ಮೂನ್) ನಾನು, ಲೂಸಿ ಇಬ್ಬರೂ ಬೊಂಬಾಯಿಗೆ ಹೋಗಿ ಬರುತ್ತೇವೆ. ಎಂಟು ದಿನ ಆಗುತ್ತೆ; ಮನೆಯ ಕಡೆ ಜೋಪಾನವಾಗಿ ನೋಡಿಕೋ. ತೆಗೆದುಕೋ ಈ ದುಡ್ಡನ್ನು, ಖರ್ಚಿಗೆ ಇರಲಿ." ಎಂದು ಐವತ್ತು ರೂಪಾಯಿಗಳನ್ನು ಕೊಟ್ಟು, 'ಲೂಸಿಯ ಮನೆಗೆ ಹೋಗಿ ಬರುವೆ" ಎಂದು ಹೇಳಿ ಹೊರಟೇಬಿಟ್ಟ.

ಮಾಧವನಿಗೆ ಲೂಸಿಯ ಪರಿಚಯವಾಗಿ ಆಗಲೇ ಒಂದು ವರ್ಷ ವಾಗುತ್ತಾ ಬಂದಿದೆ. ಈಗ ತಾನೇ ಮದುವೆ ಬೇರೆ ಆಗಿದೆ. ಮದುವೆಯಾದ ಹೊಸಬರಲ್ಲಿ ಮಧುಚಂದ್ರಕ್ಕೆ ಹೋಗುವುದೂ ಒಂದು ಅವರಲ್ಲಿ ವಾಡಿಕೆ. ಅವರ ಜೀವನಪಾತ್ರೆಯನ್ನು ಮಧುವಿನಿಂದ ತುಂಬಿದ ಚಂದ್ರನೇ, ಸರೂವಿನ ಪ್ರೇಮ ಪೂರ್ಣ ಜೀವನಪಾತ್ರೆಯಲ್ಲಿ ರಾಹುಗ್ರಸ್ತನಾಗಿ ವಿಷ ಬೆರೆಸುತ್ತಿದ್ದಾನೆ. ಇದೇ ದೈವಲೀಲೆ! ಈ ಒಂದು ವರ್ಷದಿಂದ ಮಾಧವ ಸರೂವನ್ನು ಸರಿಯಾಗಿ ಮಾತು ಕೂಡಾ ಆಡಿಸಿಲ್ಲ. ಮಾತು ಎತ್ತಿದರೆ ಬರಿಯ ಲೂಸಿಯ ಪುರಾಣ. ಅವಳ ಗುಣ, ಅವಳ ರೂಪು, ಅವಳ ಉಡಿಗೆ-ತೊಡಿಗೆ, ಬರೀ ಇವೇ ವರ್ಣನೆಗಳು. ಪ್ರತಿ ದಿನ ಲೂಸಿ ಹಾಗೆ ಮಾಡಿದಳು, ಈ ದಿನ ಇದನ್ನು ತಿನ್ನಿಸಿದಳು, ಅದನ್ನು ತಿನ್ನಿಸಿದಳು, ಅದನ್ನು ಕುಡಿಸಿದಳು ಎಂಬುದೇ ಮಾತು. ಅವನ ಕಣ್ಣಿಗೆ ಲೂಸಿಯ ವಿನಹ ಬೇರೆ ಯಾರೂ ಕಾಣುತ್ತಲೇ ಇರಲಿಲ್ಲ.

ತನ್ನ ಈ ವರ್ತನೆಯಿಂದ ಸರೂವಿಗೆ ಎಷ್ಟು ಖೇದವಾಗಬಹುದು, ಅವಳ ಎದುರಿಗೆ ಯಾವುದು ಹೇಳಬೇಕು, ಯಾವುದನ್ನು ಹೇಳಬಾರದು ಎಂಬುದರ ಪರಿಜ್ಞಾನವೇ ಅವನಿಗಿರಲಿಲ್ಲ. ಸರೂ ಒಳ್ಳೆಯವಳಾಗಿ ತನ್ನ ಮದುವೆಗೆ ಸಮ್ಮತಿ ಕೊಟ್ಟಿದ್ದರಿಂದ ಇಷ್ಟೆಲ್ಲಾ ಆಯಿತು. ಅದೇ ಅವಳು ಕೂಡದು ಎಂದು ಹಟ ತೊಟ್ಟು, ಎದುರು ವಾದಿಸಿದ್ದರೆ ತನ್ನ ಗತಿ ಏನಾಗುತ್ತಿತ್ತು? ಅವಳ ಔದಾರ್ಯ ದಿಂದಲ್ಲವೇ ತಾನು ಲೂಸಿಯನ್ನು ಪಡೆದುದು? ಇಲ್ಲದೇ ಹೋದರೆ ತನಗೆ ಸಿಗು ತ್ತಿದ್ದುದೇನು? ಲೂಸಿಯ ಬಗ್ಗೆ ಬರಿಯ ಹುಸಿ ಕನಸುಗಳು. ಹೀಗೆ ಮಾಧವ ಎಂದೂ ಯೋಚಿಸಿದವನೇ ಅಲ್ಲ. ಸರೂವಿನ ಪತಿ ತಾನು; ತಾನು ಹೇಳಿದ ಹಾಗೆ ಕೇಳಿಕೊಂಡಿರುವುದು ಅವಳ ಧರ್ಮ; ಅದರಂತೆ ಅವಳು ಇದ್ದಾಳೆ ಎಂಬುದೇ ಮಾಧವನ ತೀರ್ಮಾನ. ಅವಳ ಉದಾರತೆ ಎಂತಹ ಮಟ್ಟದ್ದು ಎಂಬುದನ್ನೂ ಮಾಧವ ತಿಳಿಯಲಾರದೇ ಹೋದ.

ಸಂಜೆ ಬರುವೆನೆಂದು ಹೇಳಿ ಹೋದ ಮಾಧವ ರಾತ್ರಿಯಾದರೂ ಮನೆಗೆ ಬರಲಿಲ್ಲ. ಅಲ್ಲಿಯೇ ಇರುತ್ತಾರೇನೋ ಎಂದುಕೊಂಡು ರಾತ್ರಿ ಹತ್ತರ ವರೆಗೆ ಕಾದಿದ್ದು ಅಲ್ಲಿಂದ ಊಟಮಾಡಿ, ಸರೂ ಮಲಗಿದಳು.

ಬೆಳಿಗ್ಗೆ ಆಫೀಸಿನ ವೇಳೆಯಾದರೂ ಮಾಧವ ಬರಲಿಲ್ಲ. ಯಾಕೆ ಬರ ಲಿಲ್ಲ? ಏನು ಕಾರಣ ಎಂದು ಯೋಚಿಸುವಷ್ಟರಲ್ಲಿಯೇ ಅಂಚೆಯವನು ಕಾಗದ ತಂದು ಕೊಟ್ಟ. ಸರೂ ಆತುರದಿಂದ ಒಡೆದು ನೋಡಿದಳು. ಮಾಧವ ಬರೆದಿದ್ದ:

"ನಾನು ಬೊಂಬಾಯಿಗೆ ಹೋಗಿರುವೆ. ಇನ್ನು ಎಂಟು ದಿನಕ್ಕೆ ಹಿಂದಿರುಗಿ ಬರುತ್ತೇನೆ." ಎಂದು ಕೇವಲ ಎರಡೇ ಪಂಕ್ತಿಗಳಲ್ಲಿ ಮುಗಿಸಿದ್ದ. ಸರೂ ನಿರಾಶೆಗೊಂಡು ಮನೆಯ ಕೆಲಸಗಳಿಗೆ ತೊಡಗಿದಳು. ವಿಜಯನೊಬ್ಬ ಅವಳ ಪಾಲಿಗೆ ಇಲ್ಲದಿದ್ದರೆ ಸರೂ ಇದು ವರೆಗೂ ಜೀವ ಹಿಡಿದುಕೊಂಡು ಇರುವುದೇ ಅನುಮಾನವಾಗಿತ್ತು.

ಫಿಲಿಪ್ (ಮಾಧವ) ಲೂಸಿಯರು ಬೊಂಬಾಯಿನಲ್ಲಿಯ ಹೆಸರಾಂತ ಹೋಟಲಿನಲ್ಲಿಯೇ ಇಳಿದುಕೊಂಡರು. ಬೆಳಿಗ್ಗೆ ಸ್ನಾನ, ಟಿಫಿನ್ ಎಲ್ಲಾ ಮುಗಿಸಿ ಒಂದು ರೌಂಡ್ ಹೋಗಿಬರುವುದು; ಮಧ್ಯಾಹ್ನ ಊಟವಾದ ಮೇಲೆ ನಿದ್ರೆ, ಮತ್ತೆ ಸಂಜೆ ತಿರುಗಾಟ, ರಾತ್ರಿ ನಿದ್ದೆ. ಇದೇ ಅವರ ಕೆಲಸವಾಯಿತು. ಎಂಟು ದಿನ ಪೂರ್ತಿಯಾಗಿ ಟ್ಯಾಕ್ಸಿಯನ್ನೊಂದು ಗೊತ್ತುಮಾಡಿದ್ದಾಯಿತು. ಜುಹು, ಚೌಪಾಟಿ, ಮಲಬಾರ ಹಿಲ್ಸ್, ಮೆಟ್ರೋ, ಹಾರ್ಬರ್, ಎಲ್ಲಾ ನೋಡಿದ್ದಾಯ್ತು. ತಾಜ್ ಹೊಟೆಲಿಗೂ ಹೋಗಿ ಒಂದು ಕಪ್ ಕಾಫಿ ಕುಡಿದು ಬಂದರು. ಅಲ್ಲಿಯ ಕೆಲವು ಹತ್ತಿಯ ಗಿರಣಿಯನ್ನು ನೋಡಿ ಬಂದರು. ಎಂಟು ದಿನ ಪೂರ್ತಿಯಾಗಿ ಸುತ್ತಿ ಬೊಂಬಾಯಿನಲ್ಲಿ ನೋಡಬೇಕಾದ ಸ್ಥಳಗಳನ್ನೆಲ್ಲಾ ನೋಡಿಯಾದ ಮೇಲೆ ಮುಂಬೈ ಸುತ್ತಲೂ ಇರುವ ಕೆಲ ಸ್ಪೃಹಣೀಯ ಸುಂದರ ಸ್ಥಳಗಳಿಗೂ ಹೋಗಿ ಬಂದರು. ಸಮುದ್ರವಿಹಾರವನ್ನೂ ಮುಗಿಸಿದರು. ನಿಸರ್ಗದ ರಮ್ಯತೆಯನ್ನು ನೋಡುವುದಕ್ಕಾಗಿ ತಡಸಲಿಗೂ ಹೋಗುವುದೆಂದು ಗೊತ್ತುಮಾಡಿ, ಮುಂಬೈಯಿಂದ ಹೊರಟು ಗೆರಸೊಪ್ಪಿಗೆ ಹೋಗಿ ಧರೆಗಿಳಿಯುತ್ತಿರುವ ಧವಳಗಂಗೆಯಂತೆ ಕಾಣುತ್ತಿದ್ದ ಜಲಪಾತವನ್ನು ಇಬ್ಬರೂ ಮೈದಣಿಯೆ ಮನದಣಿಯೆ ನೋಡಿ ತನ್ನೂರಿಗೆ ಹೊರಟ. ಹೊರಡುವಾಗ ತಮ್ಮ ಆ ರಮ್ಯಜೀವನದ ಸ್ಮೃತಿ ಉಳಿಯುವುದಕ್ಕಾಗಿ ಜಲಪಾತದೆದುರು ನಿಂತು ತೆಗೆಸಿದ ಫೋಟೋದ ಪ್ರತಿಯೊಂದನ್ನು ಸರೂವಿಗೆ 'ನಿನ್ನನ್ನೂ ನಾನು ಮರೆತಿಲ್ಲ' ಎನ್ನುವುದು ತೋರಿಸುವುದಕ್ಕಾಗಿ ಪೋಸ್ಟಿನಿಂದ ಕಳಿಸಿದ. ಹೀಗೆ ಎಂಟು ದಿನ ಅನ್ನುವುದು ಅವರಿಗೆ ಎಂಟು ಗಳಿಗೆಗಳಂತೆ ತೋರಿದುವು. ಹೊರಡುವಾಗ

ಒಯ್ದು ಎಂಟು ನೂರು ರೂಪಾಯಿಗಳಲ್ಲಿ ಕೊನೆಯ ರೂಪಾಯಿ ಮದ್ರಾಸ ವನ್ನೇನು ಕಾಣಲಿಲ್ಲ.

ಮಾಧವ ಕೆಲಸಕ್ಕೆ ಬರುವ ವೇಳೆಗೆ, ಅವನಿಗೆ ಸಂತೋಷದ ಸುದ್ದಿ ಯೊಂದು ಕಾದಿತ್ತು. ಜನರಲ್ ಮ್ಯಾನೇಜರ್ ಈಗ ಎರಡು ತಿಂಗಳ ಕೆಳಗೆ ರಜಾದ ಮೇಲೆ ಹೋಗಿದ್ದರು. ಆದರೆ ಅವರು ಕಾರಣಾಂತರದಿಂದ ಕೆಲಸಕ್ಕೆ ಪುನಃ ಹಿಂತುರುಗಲಾರರೆಂದೂ, ಆದರಿಂದ ಆ ಎರಡು ತಿಂಗಳಲ್ಲಿ ಮ್ಯಾನೇಜರ್ ಕೆಲಸವನ್ನು ನೋಡಿಕೊಂಡಿದ್ದ ಅಸಿಸ್ಟಂಟ್-ಮ್ಯಾನೇಜರೇ ಈಗ ಜನರಲ್ ಮ್ಯಾನೇಜರಾಗಬೇಕಾಗಿದೆ ಎಂದೂ ತಿಳಿದಾಗ, ಮಾಧವನ ಮನಸ್ಸು ಹಾಲು ಉಕ್ಕಿದಂತೆ ಉಕ್ಕಿ, ತನ್ನ ಎಲ್ಲೆಯನ್ನು ಮೀರಿ ಹರಿಯಿತು.

ಲೂಸಿ ಎಂದಿನಂತೆ ಟೈಪಿಸ್ಟ್ ಆಗಿ ಆಫೀಸಿಗೆ ಬಂದಳು. ಹಿಂದಿನಂತೆ ಸ್ವಾಗತಿಸಲು ಮಾಧವ ನಿಂತೇ ಇದ್ದ; ಮುಖ ಹುಸಿನಗುವನ್ನು ಬೀರುತ್ತಿತ್ತು.

"ಗುಡ್‌ನ್ಯೂಜ್ ಲೂಸೀ !"

"ಏನು ಸಮಾಚಾರ ?"

"ಇನ್ನು ಮೇಲೆ ನಾನೇ ಜನರಲ್‌ಮ್ಯಾನೇಜರ್ ತಿಳಿಯಿತೆ ?"

"ವ್ಹೆರಿ ಗುಡ್, ಕನ್‌ಗ್ರಾಚ್ಯುಲೇಷನ್ಸ್!" ಲೂಸಿ, ಮುಂದೆ ಬಂದು ಮಾಧವನ ಕೈ ಕುಲುಕಿದಳು.

ಇನ್ನು ಮೇಲೆ ಲೂಸಿಯು ಕೆಲಸಕ್ಕೆ ಬರಕೂಡದೆಂದೂ, ಅದು ತನ್ನ ಗೌರವಕ್ಕೆ ಕಡಿಮೆಯಾಗುತ್ತದೆಂದೂ ಹೇಳಿದ ಮಾಧವನ ಮಾತನ್ನು ಮನ್ನಿಸಿ ಲೂಸೀ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಬರೆದು ಕೊಟ್ಟಳು. ಅವಳ ಜಾಗಕ್ಕೆ ಯಾವನೋ ಒಬ್ಬ ಹುಡುಗ ಬಂದ. ಅಂತೂ ಲೂಸಿ ಮನೆಯಲ್ಲಿಯೇ ಇರಬೇಕಾಯಿತು.

ಮಾಧವನೀಗ 'ದಿ ಎವರೆಸ್ಟ್ ಪ್ರಾಡಕ್ಟ್ಸ' ಕಂಪನಿಯ ಜನರಲ್ ಮ್ಯಾನೇಜರ್. ಅವನಿಗೆ ಕೈತುಂಬಾ ಸಂಬಳ ಬರುತ್ತದೆ. ಅವನ ಉಪಯೋಗ ಕ್ಕಾಗಿ ಕಂಪನಿಯಿಂದಲೇ ಒಂದು ಕಾರು ದೊರೆತಿದೆ. ಅವನೀಗ ದೊಡ್ಡ ಮನುಷ್ಯ ನಾಗಿದ್ದಾನೆ. ಅವನಿಗೆ ಈಗ ಯಾವುದರ ಯೋಚನೆ ಕಾಮಧೇನು ಕರುಣಿಸಿರು ವಾಗ? ಅವನು ಅತ್ಯಂತ ಸುಖಿಯಾಗಿದ್ದಾನೆ. ಅಂತೆಯೇ ಈಗ ಕೆಲಸದಲ್ಲೂ ಅಪರಿ ಮಿತವಾದಉತ್ಸಾಹ ಮತ್ತು ಶ್ರದ್ಧೆಯಿಂದ ದುಡಿಯುತ್ತಾನೆ. ಅವನ 'ಮ್ಯಾನೇಜ್ ಮೆಂಟ್'ನಲ್ಲಿ ಕಂಪನಿ ಬಹಳ ಮುಂದು ಬಂದಿದೆ. ಇದನ್ನು ಅನಂತಸಿಂಗ್

ಕಂಡುಕೊಂಡಿದ್ದಾನೆ. ಅದಕ್ಕೇ ಅವನಿಗೆ ಮಾಧವನ ಬಗ್ಗೆ ಇನ್ನೂ ಹೆಚ್ಚು ಆದರ, ಗೌರವ ಉಂಟಾಗಿದೆ.

ಕೆಲಸವಿಲ್ಲದೆಯೇ ಮನೆಯಲ್ಲಿ ಕೂತುಕೊಂಡ, ಲೂಸಿಗೆ ಕಾಲವೇ ಕಳೆಯುತ್ತಲಿರಲಿಲ್ಲ. ಆಂಟೀಗೆ ಮನೆಗೆಲಸದಲ್ಲಿ ಸಹಾಯ ಮಾಡಬಹುದಾಗಿತ್ತು. ಆದರೆ ಮೊದಲಿಂದಲೂ ಅಂತಹ ಕೆಲಸವನ್ನೇ ಮಾಡದೆ ಕೊಬ್ಬಿ ಬೆಳೆದ ಮೈ, ಈಗ ಕೆಲಸಕ್ಕೆ ಬಗ್ಗುವ ಮಾತಂತೂ ದೂರವಾಯಿತು. ಹೊರಗಡೆ ಸುತ್ತುವುದು, ಆಫೀಸಿಗೆ ಹೋಗುವುದು, ಬರುವುದು, ಮನೆಗೆ ಬಂದು ಮಲಗುವುದು ಹೀಗೆ ಗಂಡಸಿನಂತೆ ತಿರುಗಾಡಿದ ಕಾಲುಗಳು ಮನೆಯೊಳಗಡೆ ಇರಲಾರದವುಗಳಾಗಿದ್ದುವು. ಬೆಳಗ್ಗೆ ಹೊರಟು ಹೋದ ಮಾಧವ, ಮನೆಗೆ ಹಿಂದಿರುಗುವುದು ಸಂಜೆ ಆರು ಗಂಟೆಗೆ. ಒಂದೊಂದು ದಿನ ಅಲ್ಲಿಯ ಮನೆಗೆ ಹೋಗಿ ರಾತ್ರಿಯ ಹೊತ್ತಿಗೆ ಇಲ್ಲಿ ಬರುತ್ತಿದ್ದ. ಅಲ್ಲಿಯವರೆಗೆ ಕಾಲಕಳೆಯುವುದು ಹೇಗೆ ಎನ್ನುವುದೇ ಒಂದು ದೊಡ್ಡ ಸಮಸ್ಯೆಯಾಯಿತು ಲೂಸಿಗೆ. ಹಳೆಯ ಸ್ನೇಹಿತರನ್ನು ಕಾಣುವ ಚಪಲ ಬೆಳೆಯಹತ್ತಿತು ಅವಳಲ್ಲಿ.

'ಸರಸೂ ಸಿಸ್ಟರ್‌ರನ್ನು ನೋಡಿಕೊಂಡು ಬರುವೆ ಆಂಟೀ' ಎಂದು ಲೂಸೀ ಅನೇಕ ಬಾರಿ ಮನೆಯಿಂದ ಹೊರಬೀಳುತ್ತಿದ್ದಳು. ಆದರೆ ಅವಳು ಹೋಗುತ್ತಿದ್ದುದು ಸರೂವಿನ ಮನೆಗಲ್ಲ, ತನ್ನ ಹಳೆಯ ಪ್ರೇಮಿ, ಡೇವಿಡ್, ಇಲ್ಲವೇ ಜಾನ್ ಯಾರಾದರೂ ಒಬ್ಬರ ಮನೆಗೆ. ತಿರುಗಿ ಬಂದೊಡನೆಯೇ "ಸರಸಮ್ಮ ಹೇಗಿದ್ದಾರೆ? ವಿಜಯ ಏನನ್ನುತ್ತಾನೆ?" ಎಂದು ಕೇಳುವ ಫಿಲೋಮಿನಾಳ ಪ್ರಶ್ನೆಗಳಿಗೆ ಲೂಸಿ ದೊಡ್ಡದೊಂದು ಸಂಭಾಷಣೆಯನ್ನೇ ಅವಳ ಮುಂದೆ ಹೇಳುತ್ತಾಳೆ. ವಿಜಯ ಬಹಳ ತುಂಟ. ಅವನು ಹಾಗೆ ಮಾಡಿದ ಹೀಗೆ ಮಾಡಿದ ಎಂದೆಲ್ಲಾ ಸುಳ್ಳಿನ ಕಂತೆಯನ್ನೇ ಹೇಳುತ್ತಾಳೆ. ಹೀಗೆ ಲೂಸಿ, ಆಂಟೀಯ ಕಣ್ಣಿಗೆ ಮಣ್ಣು ಹಾಕುತ್ತಲೇ ಇದ್ದಳು.

ಮಾಧವ ಅದೇ ತಾನೇ ಆಫೀಸಿಗೆ ಹೊರಟು ಹೋದನೋ ಇಲ್ಲವೋ, ಜಾನ್ ಒಳಗೆ ಬಂದ. ಆಂಟೀ ಮನೆಯಲ್ಲಿದ್ದ ಸಮಯದಲ್ಲಿ ಅವನು ಬಂದುದ ಕಪ್ಪಾಗಿ ಲೂಸೀ ಹೆದರಿದಳು. ಆದರೂ ಅವನು ಬಂದುದಾಗಿದೆ. ಅವನನ್ನು ಹೇಗಾದರೂ ಮಾಡಿ ಕಳಿಸಬೇಕಷ್ಟೇ? ಲೂಸೀ ಅವನೊಡನೆ ಸ್ವಲ್ಪಹೊತ್ತು ಮಾತನಾಡುತ್ತಿದ್ದು ಅವನನ್ನು ಸಾಗುಹಾಕಿ, 'ಉಸ್ಸಪ್ಪಾ!' ಎಂದು ಉಸಿರು ಬಿಡುವ ವೇಳೆಗೆ, ಫಿಲೋಮಿನಾ ರೂಮಿಗೇ ಬಂದಳು. ಅವಳ ಮುಖವನ್ನು

ನೋಡಿ ನಡುಗಿದಳು ಲೂಸೀ.

"ಇನ್ನೂ ಈ ನಿನ್ನ ದುರ್ನಡತೆಯನ್ನು ಬಿಡಲಿಲ್ಲವೆ? ನಿನನ್ನೇ ನಂಬಿ ಕೊಂಡಿರುವ ಆತನಿಗೆ ದ್ರೋಹವಮಾಡುವೆಯಾ? ದೇವರ ಎದುರಿನಲ್ಲಿ, ದೇವರ ಸಾಕ್ಷಿಯಾಗಿ ನೀನು ಅವನ ಹೆಂಡತಿಯಾದುದನ್ನು ಮರೆತೆಯಾ? ಅವನು ನಿನಗೆ ಯಾವುದರಲ್ಲಿ ಕೊರೆಮಾಡಿದ್ದಾನೆ? ರೂಪಿನಲ್ಲೇ, ಗುಣದಲ್ಲೇ, ವಯಸ್ಸಿನಲ್ಲಿಯೇ, ಹಣದಲ್ಲಿಯೇ ಯಾವುದರಲ್ಲಿ ಅವನು ತೆಗೆದು ಹಾಕುವ ಹಾಗಿದ್ದಾನೆ ಹೇಳು? ಅಂತಹ ಪತಿಯನ್ನೂ ಹೊಂದಿ, ಈ ಕೊಳಚೆಯನ್ನು ಬಯಸುವೆಯಲ್ಲಾ ಲೂಸೀ! ನಮ್ಮ ಕುಲದಲ್ಲಿಯೇ ಯಾರೂ ನಿನ್ನ ಹಾಗೆ ಹುಟ್ಟಿರಲಿಲ್ಲ ಲೂಸೀ! ನಿನ್ನಿಂದ ನಮ್ಮ ವಂಶಕ್ಕೇ ಕಳಂಕ ಬಂದಿದೆ. ಅದೆಂತಹ ಹೀನ ಬಾಳು ನಿನ್ನದು? ಹೀಗೆ ಕೀಳುದರ್ಜೆಯವಳಾಗಿ ಈ ಪಾಪದ ಕೂಪದಲ್ಲಿಯೇ ನರಳುವುದು ನಿನಗೆ ಹಿತವೆನಿಸಿದ್ದರೆ ಹಾಗೆಯೇ ಇರಬೇಕಿತ್ತು. ಆ ಸುಶೀಲೆಯಾದ ಸರಸಮ್ಮನ ಬಾಳ್ವೆಯನ್ನೂ ನಾಶಮಾಡಿ, ಆ ಬ್ರಾಹ್ಮಣನನ್ನು ಏಕೆ ಮದುವೆಯಾದೆ? ನಿನಗೆ ಹೇಳುವುದು ನನ್ನ ಕೈಲಿ ಸಾಗದ ಮಾತು. ನಾಯಿಯ ಬಾಲ ಡೊಂಕೇ. ನೀನು ಕಲಿತ ಬುದ್ಧಿಯನ್ನು ಬಿಡುವುದಿಲ್ಲ. ನೀನು ನನ್ನ ಮನೆಯಲ್ಲಿದ್ದುಕೊಂಡು ಈ ಹೊಲಸು ಕೆಲಸಮಾಡಬೇಡ. ನೀನು ನಿನ್ನ ಗಂಡನ ಜೊತೆಗೇ ಹೋಗು. ಇನ್ನೊಂದು ಕ್ಷಣವೂ ನಾನು ನಿನ್ನನ್ನಿಲ್ಲಿರಗೊಡಲಾರೆ. ನನಗೂ ಒಂದು ಹುಚ್ಚು ಆಸೆ ಇತ್ತು, ಮದುವೆಯಾದರೆ ನೀನು ದಾರಿಗೆ ಬರುತ್ತೀಯೆ ಎಂದು. ಆದರೆ ಅದಾವುದೂ ಈಗ ಫಲಿಸಲಿಲ್ಲ. ತಾಯಿ ಇಲ್ಲದ ಮಗು ಎಂದು ನಿನ್ನನ್ನು ನಾನು ಪ್ರೀತಿಯಿಂದ ಸಾಕಿದೆ. ಆದರೆ ಈ ನಿನ್ನ ನಡತೆಯನ್ನು ನೋಡಿ, ನಿನ್ನ ಬಗ್ಗೆ ನನ್ನ ಮನಸ್ಸೆ ಹೇಸಿಕೊಂಡಿದೆ. ನಿನ್ನನ್ನು ಅಷ್ಟು ಮುದ್ದಿನಿಂದ ಸಾಕಲೇಬಾರದಾಗಿತ್ತೆಂದು ಕಾಣುತ್ತೆ. ಇನ್ನು ಎರಡು ಮೂರು ದಿನಗಳ ಅವಧಿಯನ್ನು ಕೊಡುವೆ. ನೀನು ನನ್ನ ಮನೆಯನ್ನು ಬಿಡಬೇಕು. ಬೇಕಾದರೆ ನಿನ್ನ ಕೈಹಿಡಿದ ಗಂಡನೊಡನೆಯಾದರೂ ಹೋಗು. ಇಲ್ಲವೆ ನಿನ್ನ ಡೇವಿಡ್ ಜೊತೆಗೇ ಹೋಗು, ನಾನು ಬೇಡಾ ಎನ್ನುವುದಿಲ್ಲ. ನಿನ್ನನ್ನು ಎಚ್ಚರಿಸುವುದು ನನ್ನ ಕರ್ತವ್ಯ, ಅದನ್ನು ನಾನು ಮಾಡಿದ್ದೇನೆ. ಇನ್ನು ನಿನ್ನ ಇಷ್ಟ ಬಂದಂತೆ ಮಾಡು." ಎಂದು ಒಂದೇ ಸಮನೆ ಮಳೆಗರೆದಂತೆ ಮಾತಾಡಿ ಫಿಲೋಮಿನಾ ರೂಮಿನೊಳಗಿಂದ ಬಿರಬಿರನೆ ಹೊರಟುಹೋದಳು.

ಲೂಸಿ ತಟಸ್ಥಳಾದಳು. ಆಂಟೀಯ ವಾಗ್ಬಾಣಗಳಿಂದ ಚೇತರಿಸಿ

ಕೊಳ್ಳಲು ಸ್ವಲ್ಪ ಅವಕಾಶ ಬೇಕಾಯಿತು.

ಲೂಸಿ, ತಾನಾಗಿಯೇ ಮಾಧವನ ಮನೆಗೆ ಬರುವುದಾಗಿ ತಿಳಿಸಿದಾಗ, ಅವನು ಅತ್ಯಾದರದಿಂದಲೇ ಕರೆದೊಯ್ದ. ಲೂಸಿ ತನ್ನ ಎಲ್ಲಾ ಸಾಮಾನು ಗಳನ್ನೂ ತೆಗೆದುಕೊಂಡು, ಗಂಡನ ಮನೆಯನ್ನು ಸೇರಿದಳು. ಮಾಧವನ ರೂಮು ಅವಳದ್ದಾಯಿತು. ಅಲ್ಲಿಯೇ ಇದ್ದ ಜಾಗದಲ್ಲಿ ಲೂಸಿಗಾಗಿ ಡ್ರೆಸ್ಸಿಂಗ್ ರೂಮೊಂದನ್ನು ಏರ್ಪಡಿಸಲಾಯ್ತು. ಅವಳೇ ತಂದಿದ್ದ ನಿಲುವುಗನ್ನಡಿಯನ್ನು ಟೇಬಲ್ ಮೇಲೆ ಇಟ್ಟು, ಅದರ ಮುಂದೆ 'ಟಾಯ್‌ಲೆಟ್'ಸೆಟ್ ಸಿದ್ಧಪಡಿಸಿದ. ಮಾಧವ ತಾನೇ ನಿಂತುಕೊಂಡು ಲೂಸಿಗೆ ಬೇಕಾದ ಸಕಲ ಸಿದ್ಧತೆಯನ್ನೂ ಮಾಡಿಕೊಟ್ಟ. ಅವಳ ಬಾಯಲ್ಲಿ ಬಂದುದನ್ನು ನಡೆಸಲು ಮಾಧವ ಕಂಕಣ ಬದ್ಧನಾಗಿದ್ದ.

ಯಾವುದಾದರೂ ಪದಾರ್ಥ ಅಥವಾ ಬಟ್ಟೆಬರೆ ಚೆನ್ನಾಗಿದೆ ಎಂದು ಲೂಸಿಯ ಬಾಯಲ್ಲಿ ಬರುವುದೇ ತಡ, ಅದು ಲೂಸಿಯ ಹಸ್ತಗತವಾಗುತ್ತಿತ್ತು. ಲೂಸಿಯ ಅನೇಕ ಅಭಿರುಚಿಗಳಲ್ಲಿ ಈಜುವುದು ಒಂದು. ಪ್ರತಿ ಭಾನುವಾರ ಮಾಧವ ಅವಳನ್ನು 'ಸ್ವಿಮ್ಮಿಂಗ್‌ಪೂಲ್'ಗೆ ಕರೆದೊಯ್ಯುತ್ತಿದ್ದ. ಲೂಸಿಗಾಗಿ ಏನು ಮಾಡಲೂ ಸಿದ್ಧನಾಗಿದ್ದ ಮಾಧವ. ಜನಮನವನ್ನೂ ಲೆಕ್ಕಿಸದೆ, ತನ್ನ ಮನ ವನ್ನೂ ಲೆಕ್ಕಿಸದೆ ಸ್ವೈರವಾಗಿ ನಡೆಯುತ್ತಿದ್ದ.

ಲೂಸಿಯು ಮನೆಗೆ ಬಂದಾರಭ್ಯ ಸರೂವಿಗೆ ಅನೇಕ ಬಗೆಯಲ್ಲಿ ಕೆಲಸ ಗಳು ಹೆಚ್ಚಿದುವು. ಅವಳ ಬರುವಿಕೆಯಿಂದ ಸರೂ ನಿತ್ಯ ಸಂಗ್ರಾಮವನ್ನೇ ಎದುರಿಸಬೇಕಾಗಿ ಬಂದಿತು. ಪ್ರತಿದಿನ ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ಸ್ನಾನಕ್ಕೆ ನೀರು ಕಾಯಿಸಿ, ತಾನು ಮಡಿಯುಟ್ಟು ಕಾಫಿಮಾಡುತ್ತಾಳೆ ಸರೂ. ನಂತರ ಎಂಟು ಗಂಟೆಯ ವೇಳೆಗೆ ಲೂಸೀಗೆ ಬೆಳಗಾಗುತ್ತೆ. ಮಾಧವ ಅಲ್ಲಿಂದಲೇ ಕೂಗುತ್ತಾನೆ "ಸರೂ, ಕಾಫಿ ತೆಗೆದುಕೊಂಡು ಬಾ." ಎಂದು. ಅಲ್ಲಿಂದ ಕರೆ ಬಂದೊಡನೆ ಸರೂ ಕಾಫಿಯನ್ನು ತೆಗೆದುಕೊಂಡು ಹೋಗಿ ಅವ ರಿಬ್ಬರಿಗೂ ಕೊಟ್ಟು ಬರಬೇಕು. ಲೂಸಿ ಇನ್ನೂ ಜೂಗರಿಸುತ್ತಾ ಮಲಗಿಯೇ ಇರುತ್ತಾಳೆ. ಸರೂ ಅವಳು ಮಲಗಿರುವುದನ್ನೂ ಕಂಡೂ ಕಾಣದೆ ಹಾಗೆ ಹೋಗಿ ಕಾಫಿಯ ಲೋಟಾಗಳನ್ನು ಮಾಧವನ ಕೈಗೇ ಕೊಟ್ಟು ಬರುತ್ತಾಳೆ. 'ಬೆಡ್-ಕಾಫಿ' ಕುಡಿದ ಮೇಲೆ, ನಿಧಾನವಾಗಿ ಮೈಮುರಿಯುತ್ತಾ ಆಕಳಿ ಸುತ್ತಾ ಲೂಸಿ ಸ್ನಾನಕ್ಕೆ ಬರುವ ವೇಳೆಗೆ, ನೀರು ಸಿದ್ಧಪಡಿಸಿ ಟವಲ್,

ಸೋಪು, ಟೂತ್-ಬ್ರಷ್ ಎಲ್ಲಾ ಅಲ್ಲಿ ಸಿದ್ಧಪಡಿಸಿರಬೇಕು. ನಂತರ ಅವಳು ಸ್ನಾನ ಮುಗಿಸಿ, ಡ್ರೆಸ್ ಮಾಡಿಕೊಳ್ಳುವವರೆಗೆ, ಮಾಧವನ ಸ್ನಾನವೂ ಮುಗಿಯುತ್ತದೆ. ನಂತರ ಪುನಃ ಅವರಿಗೆ ಕಾಫಿ ಕೊಡಬೇಕು. ಲೂಸೀ ಬೆಳಿಗ್ಗೆಯ ತಿಂಡಿ ತಿಂದು ಅಭ್ಯಾಸವಾಗಿದೆ ಎಂದಾಗಲಿನಿಂದ, ಪ್ರತಿ ದಿನಾ ಬ್ರೆಡ್‌ಟೋಸ್ಟ್ ಮಾಡಿ ಅವರಿಬ್ಬರಿಗೂ ಒಟ್ಟಿಗೇ ಉಣಬಡಿಸಬೇಕು.

ಮುಂಚೆ ಮುಂಚೆ ಸರೂ ಲೂಸಿಯ ಕೆಲಸಗಳಿಗೆ ತಾನು ಪ್ರವೇಶಿಸುತ್ತಿರಲಿಲ್ಲ. ಆದರೆ ಮಾಧವ ಲೂಸಿಯನ್ನು ಯಾವುದೊಂದು ಚಿಕ್ಕ ಕೆಲಸಕ್ಕೂ ಬಿಡದೆ, ತಾನೇ ಅವಳ ಕೆಲಸವನ್ನೆಲ್ಲಾ ಮಾಡುತ್ತಿದ್ದ. ಪತಿಯು ಕೆಲಸ ಮಾಡುವುದನ್ನು ನೋಡಲಾರದೇ ಸರೂ ದಿನೇ ದಿನೇ ಅವನ ಕೆಲಸದ ಜವಾಬ್ದಾರಿಯನ್ನು ಹೊತ್ತುಕೊಂಡಳು. ಅವಳ ಬಟ್ಟೆ ಒಗೆಯಬೇಕು, ರೂಮು ಕ್ಲೀನ್ ಮಾಡಬೇಕು, ಅವಳು ಕೇಳಿದಾಗ ಕಾಫಿಯನ್ನೊದಗಿಸಬೇಕು !

ಮನೆಯಲ್ಲಿ ಸರೂವಿನ ಸ್ಥಾನವನ್ನು ಈಗ ಲೂಸಿ ಆವರಿಸಿಕೊಂಡಿದ್ದಾಳೆ. ಸರೂ ಈಗ ಕೇವಲ ಅವಳ ಮನೆಯಲ್ಲಿ ಕೆಲಸಕ್ಕಿರುವ ಜೀತದಾಳು. ಅವರಿಬ್ಬರೂ ರಾತ್ರಿ ಊಟಮಾಡಿ ಮಲಗಲು ಹೋದನಂತರ, ಸರೂ ತಾನು ಊಟಮಾಡಿ, ಕೆಲಸವೆಲ್ಲಾ ಮುಗಿಸಿ, ಅಡುಗೆಯ ಮನೆಯಲ್ಲಿಯೇ ವಿಜಯನೊಡನೆ ಮಲಗಬೇಕು. ರೂಮಿನಿಂದ ಅವರ ನಗು, ಮಾತುಕತೆ, ಚೆಲ್ಲಾಟ ಎಲ್ಲಾ ಅವಳ ಕಿವಿಯ ವರೆಗೂ ಬಂದು ಮುಟ್ಟುತ್ತದೆ. ಆದರಿಂದ ತನ್ನ ಹೃದಯದಲ್ಲೇಳುವ ಕಲಮಲ ತಳಮಳವನ್ನೆಲ್ಲಾ ಅದುಮಿ, ಯಾವುದೂ ತನಗೆ ಕೇಳುವುದಿಲ್ಲಾ ಎಂದುಕೊಂಡು ಮನಸ್ಸು ಗಟ್ಟಿಮಾಡಿ ಮಲಗಬೇಕು. ಲೂಸಿಯು ಬಂದ ಹೊಸದರಲ್ಲಿ ಸರೂವಿಗೆ ಮನಃಕ್ಷೋಭೆಯಿಂದ ಜಾಗರಣೆಯೇ ಆಗುತ್ತಿತ್ತು. ಆದರೆ ದಿನಕ್ರಮೇಣ ಆ ಮನಸ್ಸೇ ಒಂದು ಸ್ಥಿಮಿತಕ್ಕೆ ಬಂದ ನಂತರ ಅಲ್ಲಿ ಮಲಗುವುದು ರೂಢಿಯಾಗಿ, ಸರೂ ಯಾವ ಯೋಚನೆಯನ್ನೂ ಮಾಡದೆ ಮಲಗತೊಡಗಿದಳು.

ಮಾಧವ, ಸರೂ ತನಗೆ ಏನಾಗಬೇಕು, ಅವಳನ್ನು ತಾನು ಎಷ್ಟರ ಮಟ್ಟಿಗೆ ನೋಡಿಕೊಳ್ಳಬೇಕು, ವಿಜಯನ ಬಗ್ಗೆ ತನ್ನ ಜವಾಬ್ದಾರಿ ಎಂತಹದು ಎಂಬುದನ್ನು ಯೋಚಿಸುತ್ತಲೇ ಇರಲಿಲ್ಲ. ತಾನು ಮದುವೆಯಾದದ್ದು ಲೂಸಿಯನ್ನೇ ವಿನಹ ಸರೂವನ್ನಲ್ಲ, ತಾನು ಫಿಲಿಪ್, ಮಾಧವನಲ್ಲ; ತಾನು ಹುಟ್ಟುವಾಗಲೇ ಕ್ರಿಶ್ಚಿಯನ್ ಆಗಿದ್ದೆ ಎನ್ನುವಷ್ಟು ಮಟ್ಟಿಗೆ ಮಾಧವ, ಲೂಸಿ ಅವಳ

ಮತ್ತ, ಅವಳ ನಡೆನುಡಿಯಲ್ಲಿಯೇ ಐಕ್ಯವಾದ. 'ಸರೂವನ್ನು ಕೇವಲ ಧರ್ಮಕ್ಕಾಗಿ ನಾನು ಮನೆಯಲ್ಲಿಟ್ಟುಕೊಂಡಿರುವೆ' ಎಂಬ ಮನೋಭಾವನೆಯೂ ಅವನಲ್ಲಿ ಉಂಟಾಗಿತ್ತು. ತಾಯಿ-ತಂದೆಗಳು, ತಮ್ಮಂದಿರು ಇವರ ನೆನಪೇ ಅವನಿಗಿರಲಿಲ್ಲ ಅವನಿಗೆ ಈ ಪ್ರಪಂಚದಲ್ಲಿ ಬೇಕಾದ ವಸ್ತುವೆಂದರೆ ಅದು ಲೂಸಿಯೊಬ್ಬಳೇ. ಲೂಸಿಯ ಬಗ್ಗೆ ಅವನಿಗೆ ಅಚಲವಾದ ಪ್ರೇಮವಿದ್ದಿತು. ಅದಕ್ಕೆ ತಕ್ಕಂತೆ ಲೂಸಿಯೂ ಅವನನ್ನು ಪ್ರೀತಿಸಿದ್ದರೆ ಮಾಧವನ ಜೀವನಪಥ ಸುಗಮವಾಗಬಹುದಾಗಿತ್ತು. ಹಾಗೆ ವಿಧಿ ಸಂಕಲ್ಪಿಸಿರಲಿಲ್ಲವೆಂದೇ ವಿಷಮಜೀವನ ಅವರ ಪಾಲಿಗೆ ಸುಖದ ಮೈ ತೋರಿ ಕಹಿಯನುಣಿಸಿತ್ತು.

ಲೂಸಿ ವಿಜಯನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದಳು. ತಾಯಿಯ ಮಡಿಯಚ್ಚಿನಂತಿದ್ದ ಅವನು ಬಣ್ಣದಲ್ಲಿ ತಂದೆಯನ್ನು ಹೋಲುತ್ತಿದ್ದನು. ನೋಡಿದರೆ ಮುದ್ದು ಬರುವಂತಹ ಹುಡುಗ. ಬುದ್ಧಿ ಬಲು ಚುರುಕು. ಕೇವಲ ಮೂರು ವರ್ಷಗಳೊಳಗಾಗಿಯೇ ಎಂಟು, ಹತ್ತು ಅಕ್ಷರಗಳನ್ನು ಬರೆಯಲು ಕಲಿತಿದ್ದ. ಹೇಳಿಕೊಟ್ಟ ಬಾಯಿಪಾಠವನ್ನು ಒಂದೊಂದೇ ದಿನದಲ್ಲಿ ಕಲಿಯುತ್ತಿದ್ದ. ಲೂಸಿ ವಿಜಯನನ್ನು ಎಷ್ಟು ಪ್ರೀತಿಸುತ್ತಿದ್ದಳೋ ಅಷ್ಟೇ ವಿಜಯ ಅವಳನ್ನು ದ್ವೇಷಿಸುತ್ತಿದ್ದ. ಅವಳು ಬಂದಾಗಿನಿಂದ ಅಮ್ಮ ರೂಮಿನಲ್ಲಿ ಹಾಸಿಗೆಯ ಮೇಲೆ ಮಲಗುವುದಿಲ್ಲ. ಬರಿಯ ಚಾಪೆಯ ಮೇಲೆಯೇ ತನ್ನನ್ನೂ ಮಲಗಿಸುತ್ತಾಳೆ. ಅಮ್ಮ ಹೊರಗಡೆ ಬರುವುದೇ ಇಲ್ಲ. ಯಾವಾಗಲೂ ನಗುತ್ತಿದ್ದವಳು ಈಗ ಸುಮ್ಮನಿರುತ್ತಾಳೆ ಎಂಬುದೆಲ್ಲಾ ಅವನ ಆ ಮುಗ್ಧ ಹೃದಯಕ್ಕೆ ನಾಟಿದ್ದವು. ಇದಕ್ಕೆಲ್ಲಾ ಈ ಲೂಸಿಯೇ ಕಾರಣ ಇರಬೇಕು ಎಂದು ಗ್ರಹಿಸಿದ. ಅಂತೇ ಲೂಸಿಯ ಹೆಸರೆತ್ತಿದರೆ ಸಾಕು ವಿಜಯ ಸಿಡಿದು ಬೀಳುತ್ತಿದ್ದ.

ಲೂಸಿಯ ಮೇಲಿನ ಹಗೆ ತೀರಿಸುವುದಕ್ಕಾಗಿ, ಅವಳು ಮನೆಯಲ್ಲಿಲ್ಲದ ಸಮಯವನ್ನು ಸಾಧಿಸಿ ಅವಳ ರೂಮಿಗೆ ಹೋಗಿ ಸ್ನೋಬಾಟಲಿಯನ್ನು ಒಡೆದು ಹಾಕುವುದೋ ಇಲ್ಲವೇ ಅವಳ ಸೀರೆಯ ಮೇಲೆ ಶಾಯಿಯನ್ನು ಸುರಿಯುವುದೋ ಮಾಡಿಬರುತ್ತಿದ್ದ. ಸರೂ ಎಷ್ಟು ವಿಧದಲ್ಲಿ ಅವನನ್ನು ತಡೆದರೂ ಅವಳ ಕಣ್ಣು ತಪ್ಪಿಸಿ ಏನಾದರೊಂದು ಮಾಡುತ್ತಿದ್ದ.

ಒಂದು ದಿನ ಲೂಸಿ, ಮಾಧವನೊಡನೆ ಆದೇ ತಾನೇ ಹೊರಗೆ ಹೋಗಿದ್ದಳು. ಸರೂ ಅಡುಗೆಯ ಮನೆಯಲ್ಲಿ ಏನೋ ಕೆಲಸ ಮಾಡುತ್ತಿದ್ದಳು. ಆಗ ತಾನೇ ಹೊರಗಿನಿಂದ ಬಂದ ವಿಜಯ ಯಾರೂ ಇಲ್ಲದುದನ್ನು ನೋಡಿ ಸಮಯ

ಸಾಧಿಸಿ, ಕಳ್ಳನಂತೆ ರೂಮಿನೊಳಕ್ಕೆ ನುಸುಳಿ ಅದೇ ತಾನೇ ಲಾಂಡ್ರಿಯಿಂದ ಬಂದ ಬಟ್ಟೆಗಳನ್ನು ಅಲ್ಲಿಯೇ ಮಂಚದ ಮೇಲಿಟ್ಟಿದ್ದಳು ಲೂಸೀ. ಶುಭ್ರವಾದ ಶ್ವೇತವರ್ಣದ ಸ್ಯಾಟೀನ್ ಫ್ರಾಕ್ ಮೇಲೆಯೇ ಇದ್ದಿತು. ವಿಜಯನ ದೃಷ್ಟಿ ಟೇಬಲ್ಲಿನ ಮೇಲಿದ್ದ ಕ್ಯೂಟಿಕ್ಸ್. ಉಗುರು ಬಣ್ಣದ ಬಾಟಲಿಯ ಮೇಲೆ ಹೋಯಿತು. 'ಇರಲಿ, ಈ ಲೂಸೀ-ಗೀಸೀ-ಪಾಸೀ, ಗೆ ಮಾಡುವೆ' ಎಂದುಕೊಂಡು, ಬಾಟಲಿಯನ್ನು ತೆಗೆದು ಆ ಫ್ರಾಕ್‌ನ ಮೇಲೆಲ್ಲಾ ಸುರುವಿದ. ಆಮೇಲೆ ಅದನ್ನು ಕೆಳಕ್ಕೆ ಎಸೆದು ಅದು ಚೂರಾಗುವಂತೆ ಮಾಡಿ, ಆ ಫ್ರಾಕನ್ನು ಅದರ ಮೇಲೆ ಎಸೆದು, ಯಾವುದೋ ಒಂದು ಸಾಹಸದ ಕೆಲಸ ಮಾಡಿದವನಂತೆ ಹರ್ಷದಿಂದ ತಾಯಿಯ ಬಳಿಗೋಡಿದ. ಅವನ ಕೈ ಎಲ್ಲಾ ಬಣ್ಣವಾಗಿತ್ತು. ಅವನ ಕೈಯ ರಕ್ತವರ್ಣವನ್ನು ನೋಡಿ ಸರೂ ಗಾಬರಿಗೊಂಡು ಕೇಳಿದಳು. "ಇದೇನು ವಿಜಯ ಎಲ್ಲಿ ಗಾಯ ಮಾಡಿಕೊಂಡೆ? ಇದೇನು ರಕ್ತ?" ಎಂದು ಅವನನ್ನೆತ್ತಿಕೊಂಡಳು. 'ಇಲ್ಲಿ ಬಾಮ್ಮಾ ತೋರಿಸುವೆ' ವಿಜಯ ಹೆಮ್ಮೆಯಿಂದ ರೂಮಿಗೆ ತಾಯಿಯನ್ನು ಕರೆದೊಯ್ದು ತಾನು ಮಾಡಿರುವ ಕೆಲಸ ತೋರಿಸಿದ. ಸರೂ ಅದನ್ನು ನೋಡಿದವಳೇ ಚಿಟ್ಟನೇ ಚೀರಿದಳು. ಇನ್ನು ಮುಂದೆ ಏನೆಲ್ಲಾ ಅನರ್ಥವಾಗಬಹುದೆಂದು ಯೋಚಿಸಿದಂತೆಯೇ ದೇಹ ಕಂಪಿಸಿತು.

"ಥೂ ಹೀಗೆಲ್ಲಾ ಮಾಡುತ್ತಾರೇನೋ ವಿಜಯ? ಏನಿದು ಕೆಟ್ಟ ಬುದ್ಧಿ?" ಸರೂ ವಿಜಯನಿಗೆ ಬೆನ್ನ ಮೇಲೆ ಎರಡೇಟು ಹಾಕಿದಳು. ವಿಜಯ ಪೆಚ್ಚುಮುಖ ಮಾಡಿಕೊಂಡು ನಿಂತ. ಸರೂ ಅಲ್ಲಿಯೇ ಬಿದ್ದಿದ್ದ ಗಾಜಿನ ಚೂರುಗಳನ್ನೂ ನೆಲದ ಮೇಲೆ ಚೆಲ್ಲಿದ್ದ ಬಣ್ಣವನ್ನೂ ಎಲ್ಲಾ ಬಳಿದು ಹೊರಗೆಸೆದು ಬಂದಳು. ಬಣ್ಣವಾಗಿದ್ದ ಆ ಫ್ರಾಕನ್ನು ಸೋಪು ಹಾಕಿ ತಿಕ್ಕಿ ಚೆನ್ನಾಗಿ ತೊಳೆದಳು. ಆದರೂ ಪೂರ್ತಿಯಾಗಿ ಹೋಗದೆ ಬಟ್ಟೆಯ ಮೇಲೆ ಕಲೆ ನಿಂತಿತು. ಅದನ್ನು ಅಲ್ಲಿಯೇ ಹರವಿ ಹಾಕಿದಳು.

ಲೂಸಿ ರೂಮಿಗೆ ಬಂದೊಡನೆಯೇ ಅವಳಿಗೆ ಕಾಣಿಸಿದ್ದು ಸ್ಟ್ಯಾಂಡಿನ ಮೇಲೆ ಹರವಿದ್ದ ಲಂಗ. ಕ್ಷಣಮಾತ್ರದಲ್ಲಿ ಅದು ಯಾರ ಕೆಲಸ ಎಂಬುದೂ ತಿಳಿಯಿತು. ಲೂಸಿ ಕೋಪಗೊಂಡು ದುಗುಡದಿಂದ ಕೂತಳು. ಕೈಕಾಲು ತೊಳೆದುಕೊಂಡು ಬರಲು ಹೋಗಿದ್ದ ಮಾಧವ ಲೂಸಿಯು ಮೌನವಾಗಿ ಕೂತಿರುವುದನ್ನು ನೋಡಿ "ಏಕೆ ಲೂಸೀ, ಹೀಗೆ ಕೂತಿರುವೆ?" ಎಂದು ಅವಳ

ಬಳಿಯಲ್ಲಿಯೇ ಕೂತ.

"ನೋಡಿ, ನಿಮ್ಮ ಮಗ ಮಾಡಿರುವ ಕೆಲಸವನ್ನು?" ಸರೂ ಲಂಗವನ್ನು ತೋರಿಸಿದಳು. ಮಾಧವ ಅವನ್ನು ನೋಡಿದ ಕೂಡಲೇ ಉರಿದು ಬಿದ್ದ. ಹಿಂದೆ ಅನೇಕ ಬಾರಿ ಈ ರೀತಿಯ ತುಂಟತನ ಮಾಡಿದ್ದಕ್ಕೆ ವಿಜಯನನ್ನು ಹೊಡೆದಿದ್ದರೂ ಅವನು ಇನ್ನೂ ತನ್ನ ಬುದ್ಧಿಯನ್ನು ತಿದ್ದಿಕೊಳ್ಳದ್ದಕ್ಕಾಗಿ ಮಾಧವನಿಗೆ ಕೋಪವೇ ಬಂದಿತು.

ತಾನು ಮಾಡಿದ ಕೆಲಸ ತಪ್ಪು ಎಂಬುದನ್ನು ತಿಳಿದ ವಿಜಯ ತಾಯಿಗೇ ಅಂಟಿಕೊಂಡಿದ್ದ. ತಂದೆ ಹೊಡೆಯುವರೆಂಬ ಭಯ ಅವನನ್ನಾವರಿಸಿತ್ತು.

"ವಿಜಯಾ....ವಿಜಯಾ...." ಮಾಧವ ರೇಗುತ್ತಲೇ ಬಂದ.

ತಂದೆಯ ಧ್ವನಿ ಕೇಳಿ ವಿಜಯ ಬೆದರಿ ತಾಯಿಯ ಮಡಲಿನಲ್ಲಿಯೇ ಹುಗಿದುಕೊಂಡ.

"ಎಲ್ಲಿ ಅವನು? ಎಲ್ಲಿ ತೋರಿಸು. ಅವನಿಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆ." ಮಾಧವ ಕೋಪದಿಂದ ಕೆಂಗಣ್ಣನಾಗಿದ್ದ.

"ಏನೋ ಮಗು ತಿಳಿಯದೇ ಮಾಡಿತು. ಅದಕ್ಕೆ ಇಷ್ಟೇಕೆ ರೇಗುವಿರಿ?" ಸರೂ ವಿಜಯನನ್ನಪ್ಪಿಕೊಂಡು ಹೇಳಿದಳು.

"ನಿನ್ನ ಮುದ್ದಿನಿಂದಲೇ ಅವನು ಹಾಳಾದ್ದು." ಎಂದು ಕೂಗಾಡಿ, ಸರೂವಿನ ಕೈಯಿಂದ ವಿಜಯನನ್ನು ಹೊರಗೆಳೆದು ಚೆನ್ನಾಗಿ ಹೊಡೆದ. ತಾನು ಹೊಡೆಯುತ್ತಿರುವುದು ಕೇವಲ ಮೂರು ವರ್ಷದ ಮಗುವನ್ನು ಎಂಬುದೇ ಮರೆತು ಮಾಧವ ಅವನನ್ನು ಎಲ್ಲಿ ಬಂತು ಅಲ್ಲಿ ಥಳಿಸಿದ. ಸರೂ ಆ ಹೊಡೆತವನ್ನು ನೋಡಲಾರದೇ ಅಡ್ಡ ಬಂದಳು. ಕೋಪದ ರಭಸದಲ್ಲಿ ಮಾಧವ ಅವಳಿಗೂ ಹೊಡೆದ. ವಿಜಯನ ಅಳುವನ್ನು ಕೇಳಲಾರದೇ ಲೂಸೀ ತಾನೇ ಓಡಿ ಬಂದು ಮಾಧವನನ್ನು ಕೈಹಿಡಿದು ಎಳೆದುಕೊಂಡು ಹೋಗುವವರೆಗೂ ಅವನು ಹೊಡೆಯುತ್ತಲೇ ಇದ್ದ. ವಿಜಯನ ಮೈಮೇಲೆಲ್ಲಾ ಬಾಸುಂಡೆಗಳು ಮೂಡಿದ್ದುವು. ಅಳಲು ಶಕ್ತಿ ಇರದೆ ವಿಜಯ ಸುಸ್ತಾಗಿ ಅಲ್ಲಿಯೇ ಉರುಳಿದ. ಮೈಯೆಲ್ಲಾ ನೀಲಿಯ ಬಣ್ಣಕ್ಕೆ ತಿರುಗಿದ್ದಿತು. ಸರೂ ಅವನ ಮೈಯನ್ನು ನೋಡಲಾರದೇ ಕಣ್ಮುಚ್ಚಿಕೊಂಡಳು. ಅವಳ ಎದೆಯಲ್ಲಿ ಬೆಂಕಿ ಸುರಿದಂತಾಯಿತು. 'ವಿಜಯಾ, ಮಗೂ, ನನ್ನ ಚಿನ್ನಾ ಅಳಬೇಡ, ಸುಮ್ಮನಿರು ಮಗೂ....' ಎಂದು ಅವನನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡಳು. ಅವನು ಪ್ರಜ್ಞಾಹೀನನಾಗುವ ಸ್ಥಿತಿ

ಯಲ್ಲಿದ್ದ. ಮಗುವಿನ ಕೋಮಲವಾದ ಶರೀರ ತತ್ತರಿಸಿಹೋಗಿತ್ತು. ಅವನ ಗಂಟಲೊಣಗಿ ಬರುತ್ತಿತ್ತು; ಅವನು ಮೇಲುಸಿರು ಬಿಡುತ್ತಿದ್ದ. ಅವನನ್ನು ಎತ್ತಿಕೊಂಡೇ ಹೋಗಿ ಸರೂ, ಒಲೆಯ ಮೇಲೆ ಹಾಲು ಕಾಯಿಸಿ, ಸಕ್ಕರೆ ಹಾಕಿ ತೊಡೆಯ ಮೇಲೆ ಮಲಗಿಸಿಕೊಂಡು, ಚಮಚದಲ್ಲಿ ಸ್ವಲ್ಪ ಹಾಲು ಕುಡಿಸಿದಳು. ಒಂದೆರಡು ಗುಟುಕು ಕುಡಿದ ಮೇಲೆ ವಿಜಯ ಮೆಲ್ಲನೆ ಕಣ್ತೆರೆದು 'ಅಮ್ಮಾ!' ಎಂದು ನೋವಿನಿಂದ ನರಳಿದ. 'ಹಾಲು ಕುಡೀ ಮಗೂ,' ಎನ್ನುವಾಗ ಅವಳ ಕಣ್ಣೀರು ಅವನ ಕೆನ್ನೆಯ ಮೇಲುರುಳಿದುವು. ವಿಜಯ ನೋವಿನಿಂದ ಅಳು ತ್ತಲೇ ಇದ್ದ. ಅವನ ಮೈಯೆಲ್ಲಾ ಊದಿಕೊಂಡಿತ್ತು. ಸರೂ ಅದಕ್ಕೆ ಚೆನ್ನಾಗಿ ಬಿಸಿನೀರಿನ ಶಾಖ ಕೊಟ್ಟು, ಮೈಗೆಲ್ಲಾ ಸಿಬಿಜಾಲ್ ಮುಲಾಮನ್ನು ಸವರಿ, ಹಾಸಿಗೆ ಹಾಸಿ ಅವನನ್ನು ಮಲಗಿಸಿದಳು. ವಿಜಯ ಹಾಸಿಗೆಯಲ್ಲಿ ಮಲಗಲೇ ಇಲ್ಲ. ತಾಯಿಯ ಮಡಿಲನ್ನು ಬಿಟ್ಟು ಕೆಳಗಿಳಿಯಲೂ ಅವನಿಗೆ ಭಯ. ತಾಯಿಯ ಆಸರೆಯಲ್ಲೇ ಅವನು ನಿದ್ರೆಹೋದ. ಅವನಿಗೆ ನಿದ್ರೆ ಬಂದ ನಂತರ ಹಾಸಿಗೆಯಲ್ಲಿ ಮಲಗಿಸಿ ಸರೂ ನಿಟ್ಟುಸಿರು ಬಿಟ್ಟಳು. ಪತಿಯನ್ನು ಎಂದಿಗೂ ಸರೂ ಅಲಕ್ಷಿಸಿದವಳಲ್ಲ. ಪತಿಯೇ ದೇವರು ಎಂದು ನಂಬಿ ನಡೆಯುವ ಅವಳಿಗೂ ಇಂದು ಈ ಪ್ರಕರಣ ನೋಡಿ ಎಲ್ಲಿಲ್ಲದ ಸಂತಾಪವಾಯಿತು. 'ಈ ಮುದ್ದು ಮಗುವನ್ನು ಹೀಗೆ, ವಿವೇಕವೇ ಇಲ್ಲದಂತೆ ಈ ರೀತಿ ಹೊಡೆಯಲು ಅವರಿಗೆ ಕೈ ತಾನೇ ಹೇಗೆ ಬಂತೋ? ಅವರು ನಿಜವಾಗಿಯೂ ಮನುಷ್ಯರಾಗಿದ್ದರೆ ಈ ರೀತಿ ಹೊಡೆಯುತ್ತಿದ್ದರೇ? ಇಲ್ಲಾ.' ಎಂದು ಸರೂ ವಿಲಪಿಸಿದಳು. ತನ್ನ ಜನ್ಮದ ಲ್ಲಿಯೇ ಎಂದೂ ಪತಿಯನ್ನು ಬಯ್ಯದ ಸರೂ ಇಂದು ಈ ಮಗುವಿನ ಯಾತನೆ ಯನ್ನು ನೋಡಲಾರದೇ ನಿಷ್ಠುರವಾಗಿ ಒಂದೆರಡು ಮಾತುಗಳನ್ನು ತನ್ನಲ್ಲಿಯೇ ಆಡಿಕೊಂಡಳು. ಆ ಲೂಸಿಯಿಂದಾಗಿಯಲ್ಲವೇ ಇಷ್ಟೆಲ್ಲಾ ದುಃಖ ಹುಟ್ಟಿದ್ದು! ಅವಳನ್ನು ಮನೆಯಿಂದ ಹೊರಗೆ ದೂಡಿಬಿಡಲೇ ಅನ್ನುವಷ್ಟು ಕ್ರೋಧ ಉಂಟಾಯಿತು ಅವಳಿಗೆ ಪಾಪ. ಹೀಗೆ ಕ್ರೋಧತಪ್ತಳಾದ ಸರೂ ಯಾವ ಕೆಲಸವನ್ನೂ ಮಾಡದೆ ಮೌನವಾಗಿ ವಿಜಯನ ಮಗ್ಗುಲಲ್ಲಿಯೇ ಹೊದ್ದು ಕೊಂಡು ಮಲಗಿದಳು. ನಿದ್ರೆಯಲ್ಲೂ ವಿಜಯ ಆಗಾಗ್ಗೆ ಬೆಚ್ಚಿಬಿದ್ದು 'ಅಮ್ಮಾ.. ಅಯ್ಯೋ.... ಬಿಡಿಸೇ ಅಮ್ಮಾ....' ಎಂದು ಚೀರಿ ಮತ್ತೆ ಬಿಕ್ಕಳಿಸುತ್ತಿದ್ದ. ಸರೂ ತಲೆಯ ಮೇಲೆ ಕೈಯಾಡಿಸಿ ಸಮಾಧಾನ ಮಾಡುತ್ತಿದ್ದಳು. ಈ ಹೊತ್ತಿಗೇ ಮಾಧವ ಬಂದು 'ಊಟಕ್ಕೆ ಬಡಿಸು ಸರೂ' ಎಂದು ಕೂಗಿದರೂ ಸರೂ

ಅಳ್ಳಾಡದೇ ಮಲಗಿದ್ದಳು. ಮಾಧವ ಮೂರು-ನಾಲ್ಕು ಬಾರಿ ಕೂಗಿದ. ಆದರೂ ಸದೂ ಕಮಕ್ಕಿಮಕ್ಕೆನ್ನಲಿಲ್ಲ. ಬೇಸತ್ತ ಮಾಧವ ಹಾಗೆಯೇ ಹೊರಟು ಹೋದ. ಲೂಸಿಯೂ ಹಾಗೆಯೇ ಮಲಗಿದಳು. ಮಾಡಿದ ಅಡುಗೆ ಮಾಡಿದಲ್ಲಿಯೇ ಉಳಿದಿತ್ತು. ನೋವಿನಿಂದ ವಿಜಯನಿಗೆ ರಾತ್ರಿ ಜ್ವರವೂ ಬಂದಿತು ಸದೂ ರಾತ್ರಿಯೆಲ್ಲಾ ಎಚ್ಚರಳಾಗಿಯೇ ಕುಳಿತು ಅವನ ಮೈ ತಡವರಿಸುತ್ತಾ ಗಾಳಿ ಹಾಕುತ್ತಾ ಕೂತಿದ್ದಳು.

ಅಂದಿನಿಂದ ವಿಜಯ ತಂದೆಯನ್ನು ಕಂಡರೇ ನಡುಗುತ್ತಿದ್ದ. ಆದರೂ ಅವನು ತನ್ನ ಲೂಸಿಯ ಮೇಲಿನ ಹಗೆತನವನ್ನು ಬಿಡಲಿಲ್ಲ. ಬದಲಾಗಿ ದಿನ ಕಳೆದಂತೆ ಅದು ಹೆಚ್ಚುತ್ತಲೇ ಹೋಯಿತು. ಹೊಸದಾಗಿ ಹೊಲಿಸಿದ ಲೂಸಿಯ ಬಟ್ಟೆಗಳೆಲ್ಲಾ ಬ್ಲೇಡಿನಿಂದಲೋ, ಕತ್ತರಿಯಿಂದಲೋ ಕತ್ತರಿಸಲ್ಪಡುತ್ತಿದ್ದುವು. ಅವಳು ಓದುತ್ತಿದ್ದ ಪುಸ್ತಕದ ಹಾಳೆಗಳೇ ಮಾಯವಾಗುತ್ತಿದ್ದುವು. ಹೀಗೆ ಒಂದಲ್ಲ ಒಂದು ಬಗೆಯಲ್ಲಿ ವಿಜಯ ತನ್ನ ಹಟ ಸಾಧಿಸುತ್ತಲೇ ಇದ್ದ ಎಷ್ಟು ಹೊಡೆಯಲೀ, ಎಷ್ಟು ಬೈಯಲೀ, ಅವನು ತನ್ನ ಕೆಲಸ ತಾನು ಮಾಡಿಯೇ ತೀರುತ್ತಿದ್ದ. ಅದರಿಂದ ಲೂಸಿ ಹೊರಗೆ ಹೋಗುವಾಗ ತನ್ನದೆಲ್ಲವನ್ನೂ ರೂಮಿನಲ್ಲಿಟ್ಟು ಬೀಗ ಹಾಕಿಕೊಂಡು ಹೋಗುತ್ತಿದ್ದಳು.

ಲೂಸಿ, ಮಾಧವನ ಮನೆಗೆ ಬಂದಾಗಿನಿಂದ ತನ್ನ ಹೊರಗಿನ ಸಂಚಾರವನ್ನು ನಿಲ್ಲಿಸಿದ್ದಳು, ತಾನು ಹಾಗೆ ತಿರುಗಾಡಿದರೆ ಮನೆಯಲ್ಲಿಯೇ ಇರುವ ಸದೂವಿಗೆ ಅನುಮಾನ ಬರಬಹುದೆಂದು. ಆದರೆ ಅದು ಅವಳ ಹುಟ್ಟುಗುಣವಾಗಿತ್ತು. ಎಷ್ಟು ದಿನಾ ಅಂತ ಸುಮ್ಮನಿರುವುದಕ್ಕಾಗುತ್ತೆ? ಮನೆಯಲ್ಲಿ ಕೂತುಕೊಂಡು ಹೊತ್ತು ಹೋಗುವುದಿಲ್ಲ; ಹೊರಗೆ ಹೋದರೆ ಸದೂ ಏನಾದರೂ ತಿಳಿದುಕೊಳ್ಳುವಳೆಂಬ ಭಯ; ಹೀಗೆ ಇತ್ತ ದರಿ, ಅತ್ತ ಪುಲಿ ಎನ್ನುವಂತಾಯ್ತು ಲೂಸಿಗೆ. ಏನು ಮಾಡುವುದಕ್ಕೂ ತೋಚದೆ ಒದ್ದಾಡುತ್ತಿರುವಾಗಲೇ, ಅವಳಿಗೆ ಸುಸಂಧಿಯೊಂದು ದೊರೆಯಿತು. ಅವಳು ಮಧ್ಯಾಹ್ನದ ಕಾಫಿಯನ್ನು ಕುಡಿದು ಆದೇ ತಾನೇ ಬೀದಿಯ ಬಾಗಿಲಿಗೆ ಬರುವುದಕ್ಕೂ, ನೆರೆಮನೆಯ ರೂಪಾಳ ಗಂಡ ಹೀರಾಲಾಲ ಬರುವುದಕ್ಕೂ ಸರಿಹೋಯಿತು. ಅವನನ್ನು ನೋಡಿದ ಕೂಡಲೇ ಲೂಸಿ ಅಭ್ಯಾಸಬಲದಿಂದ, ಅವನನ್ನು ತೀಕ್ಷ್ಣ ನೋಟದಿಂದ ನೋಡಿದಳು. ಅವನೂ ನೋಡಿದ. ಈರ್ವರ ಕಣ್ಣುಗಳೂ ಕೂಡಿದುವು. ಸರಿ, ಹೀರಾಲಾಲ ಲೂಸಿಯ ಬಲೆಗೆ ಬಿದ್ದ. ಇಂಗ್ಲೀಷಿನಲ್ಲಿಯೇ

ಅವನು ಲೂಸಿಯ ಹೆಸರು, ಮತ-ಗಿತ ಎಲ್ಲಾ ಕೇಳಿ ತಿಳಿದುಕೊಂಡ. ಲೂಸೀ ಮುಗುಳ್ನಗೆಯ ಸ್ವಾಗತವನ್ನು ಬಯಸಿದಳು. ಅಂದಿನಿಂದ ಲಾಲ ಲೂಸಿಯ ಸೇವಕನಾದ. ಲೂಸಿ ಇಲ್ಲದ ನೆವಮಾಡಿಕೊಂಡು ಪಕ್ಕದ ಮನೆಗೆ ಹೋಗಿ ಗಂಟೆ ಎರಡು ಗಂಟೆಗಳ ಕಾಲ ಕೂತು ಬರುತ್ತಿದ್ದಳು. ದಿನ ಕಳೆದಂತೆ ಹೀರಾಲಾಲನೇ ಲೂಸಿಯ ಮನೆಗೆ ಬರತೊಡಗಿದ ಸರೂ ಹೀರಾಲಾಲನ ನಡತೆಯನ್ನು ರೂಪಾಳ ಬಾಯಿಂದಲೇ ಕೇಳಿ ತಿಳಿದಿದ್ದಳು. ಅವನೆಂತಹನೆಂಬು ದನ್ನು ಹೊಸದಾಗಿ ಏನೂ ತಿಳಿಯಬೇಕಾಗಿರಲಿಲ್ಲ. ಅವನ ಮಾತು, ನಡೆ-ನುಡಿ ಅಸಹ್ಯವಾಗಿದ್ದುವು. 'ಆ ಚೆಲುವೆ ರೂಪಾಳಿಗೆ ಇವನೇ ಪತಿ?' ಎಂದು ಕೊಂಡು ಸರೂ ಬೇಸರಿಸುತ್ತಿದ್ದಳು.

ಲೂಸಿಯು ಇಂಥವಳು, ಅವಳ ನಡತೆ ಸರಿಯಾಗಿಲ್ಲ ಎಂದು ತಿಳಿಯಲು ಹೆಚ್ಚಿಗೆ ದಿನವೇನೂ ಬೇಕಾಗಲಿಲ್ಲ ಸರೂವಿಗೆ. ಮೊದಲಿನಿಂದಲೂ ಅವಳ ಆಂಟೀ ಫಿಲೋಮಿನಾ ಮದುವೆಯ ದಿನ ಹೇಳಿದ ಮಾತುಗಳಿಂದ ಲೂಸಿಯ ಬಗ್ಗೆ ಅನುಮಾನ ಉಂಟಾಗಿತ್ತು. ಆದರೆ ಈಗ ಹೀರಾಲಾಲನೊಡನೆ ಅವಳ ಸಲುಗೆಯನ್ನು ನೋಡಿ, ಅವಳ ಅನುಮಾನ ನಿಜವೇ ಎಂದಾಯಿತು. ತನ್ನ ಪತಿ ಇಂತಹ ಕುಲಟೆಗಾಗಿ, ಜಾತಿಯನ್ನೂ ನೀತಿಯನ್ನೂ ತೊರೆದನಲ್ಲಾ, ನನ್ನನ್ನು ಅನಾಥಳನ್ನಾಗಿ ಮಾಡಿದನಲ್ಲಾ ಎಂದು ಸರೂ ಖೇದಗೊಂಡಳು. ಇದನ್ನು ಮಾಧವನಿಗೆ ತಿಳಿಸುವ ಬಗೆ ಹೇಗೆ? ತಿಳಿಸಿದರೂ ಅವನು ನಂಬುತ್ತಾನೆಯೇ? ಯಾವ ರೀತಿ ತಿಳಿಸುವುದು? ಎಂದು ಸರೂ ಯೋಚಿಸುತ್ತಿರುವಾಗಲೇ ಅವಳಿಗೆ ಅನುಕೂಲವಾಗುವ ಪ್ರಸಂಗವೊಂದು ಒದಗಿತು.

ಮಾಧವ ಊಟ ಮಾಡಿಕೊಂಡು ಆಫೀಸಿಗೆ ಹೊರಟುಹೋಗಿದ್ದ. ಸರೂ ಕೆಲಸವೆಲ್ಲ ಮುಗಿಸಿ, ವಿಜಯನ ಷರಟು ಹರಿದುಹೋಗಿದ್ದನ್ನು ಹೊಲಿಯುತ್ತಾ ಕೂತಿದ್ದಳು. ಫಿಲೋಮಿನಾಳ ಹಿರಿಯ ಮಗ ಫ್ರಾನ್ಸಿಸ್ ಲೂಸಿಯನ್ನು ಕರೆಯಲು ಬಂದ. 'ಅಮ್ಮ ನಿನ್ನನ್ನು ಕರೆದುಕೊಂಡು ಬಾ ಎಂದು ಹೇಳಿದ್ದಾಳೆ. ಈಗಲೇ ಬರಬೇಕಂತೆ' ಎಂದು ಹೇಳಿದ. 'ಯಾಕೆ? ಏನು?' ಎಂದು ಕೇಳಿದ್ದಕ್ಕೆ ಅವನು ಕಾರಣವನ್ನೇನೂ ಹೇಳಲಿಲ್ಲ.

"ಸಿಸ್ಟರ್, ನಮ್ಮ ಆಂಟೀ ಹೇಳಿಕಳಿಸಿದ್ದಾರೆ. ನಾನು ಹೋಗಿಬರುತ್ತೇನೆ. ಆವರು ಬಂದರೆ ಅಲ್ಲಿಗೇ ಬರುವಂತೆ ಹೇಳಿ. ನಾನು ಹೋಗಿಬರುವೆ." ಎಂದು ಸರೂಗೆ ಹೇಳಿ ಲೂಸಿ ಹೊರಡಲನುವಾದಳು.

"ನಿಮ್ಮ ಆಂಟೀಗೆ ನನ್ನ ನಮಸ್ಕಾರಗಳನ್ನು ತಿಳಿಸು, ಅವರನ್ನು ನಾನು ಕೇಳಿದೆನೆಂದು ಹೇಳು ಲೂಸೀ." ಸರೂ ಸ್ನೇಹಪೂರ್ವಕವಾಗಿ ನುಡಿದಳು.

"ಹಾಗೆಯೇ ಆಗಲೀ, ಹೇಳುವೆ' ಎಂದು ಲೂಸಿ, ಬಂದಿದ್ದ ಹುಡುಗ ನೊಡನೆ ಹೊರಟುಹೋದಳು.

ಮಾಧವ ಆಫೀಸಿನಿಂದ ಮನೆಗೆ ಬರುತ್ತಲೇ 'ಲೂಸೀ....'ಎಂದು ಕೂಗ ಬೇಕು; 'ಹಲ್ಲೋ ಡಿಯರ್' ಎಂದು ಲೂಸಿ ಮುಗುಳ್ನಗೆಯನ್ನು ಬೀರುತ್ತಾ ಬಾಗಿಲಿಗೆ ಬಂದು ಮಾಧವನನ್ನು ಎದುರುಗೊಳ್ಳಬೇಕು. ಇದು ನಿತ್ಯದ ನಡೆ ವಳಿಕೆ. ಆದರೆ ಇಂದು ಮಾಧವ ಕೂಗಿದ್ದಕ್ಕೆ ಯಾರೂ ಓಗೊಡಲಿಲ್ಲ. ಬದ ಲಾಗಿ ಸರೂ ಬಂದು ಮಾತನಾಡದೆ ಬಾಗಿಲು ತೆರೆದಳು. ಲೂಸಿಯನ್ನು ಕಾಣದೆ ಮಾಧವ ಗಾಬರಿಯಾಗಿ 'ಲೂಸೀ ಎಲ್ಲಿ ಸರೂ?' ಎಂದು ಕೇಳಿದ.

"ಅವಳ ಆಂಟೀ ಹೇಳಿ ಕಳಿಸಿದ್ದರು, ಅವರ ಮನೆಗೆ ಹೋಗಿದ್ದಾಳೆ. ನೀವೂ ಅಲ್ಲಿಗೇ ಹೋಗಬೇಕಂತೆ." ಸರೂ ಕೆಲವೇ ಮಾತುಗಳಲ್ಲಿ ಎಲ್ಲವನ್ನೂ ತಿಳಿಸಿದಳು.

ಪ್ರತಿದಿನವೂ ಲೂಸಿಯ ಜೊತೆ ನಗುತ್ತಾ ಕೆಲೆಯುತ್ತಾ ತಿಂಡಿ ತಿಂದು ಅಭ್ಯಾಸವಾಗಿರುವ ಮಾಧವ ಇಂದು ಒಬ್ಬನೇ ತಿಂಡಿ ತಿನ್ನಲಾರದೇ ಹೋದ. ಮೆತ್ತಗೆ ಇದ್ದ ರವೆಯ ಉಪ್ಪಿಟ್ಟೂ ಇವನ ಗಂಟಲೊಳಗೆ ಹೋಗಲಾರದಾಯಿತು.

ಸರೂ ಅವನ ಸಮೀಪದಲ್ಲಿಯೇ ನಿಂತು ಹೇಳಿದಳು: "ನಾನು ನಿಮಗೆ ಕೆಲವು ಮಾತುಗಳನ್ನು ಹೇಳಬೇಕೆಂದಿರುವೆ. ನೀವೇನೂ ಕೋಪಿಸುವುದಿಲ್ಲ ವಷ್ಟೆ?"

"ನೀನು ಮಾತನಾಡಿದರೆ ಕೋಪವೇಕೆ? ಏನು ಹೇಳು?"

"ನೀವು ಲೂಸಿಯ ಪೂರ್ವೋತ್ತರಗಳನ್ನು ವಿಚಾರಿಸದೆ ಮದುವೆ ಆದುದು ಸರಿಯಾಗಲಿಲ್ಲ ಎಂದು ಕಾಣುತ್ತದೆ."

"ಯಾಕೆ ? ಈಗ ಏನಾಯಿತು ಅಂತಹದು?" ಎಂದು ಯಾವ ಬಗೆಯ ಕುಹಕವೂ ಇಲ್ಲದೆ ಕೇಳಿದ ಮಾಧವ.

"ನೀವು ಲೂಸಿಯನ್ನು ಅವಳು ಪರಿಶುದ್ಧಳು ಎಂದು ತಿಳಿದಿದ್ದೀರಿ. ಆದರೆ ನಿಜವಾಗಿಯೂ ಅವಳು ನಿಮಗೆ ಪ್ರಾಮಾಣಿಕಳಾಗಿಲ್ಲವೆಂದು ತೋರುತ್ತದೆ. ಅವಳ ನಡೆ-ನುಡಿ, ಮಾತು-ಕತೆ, ಅವಳ ಆ ಓರೆಗಣ್ಣಿನ ನೋಟ, ಇತರ ಗಂಡಸರೊಡನೆ ಇರುವ ಸಲುಗೆ ಇವೆಲ್ಲವೂ ಸಭ್ಯಳಾಗಿ ಬಾಳುವ ಗರತಿಯ

ಲಕ್ಷಣವೇ? ನೀವು ಅವಳನ್ನು ಸ್ವಲ್ಪ ಎಚ್ಚರದಿಂದ ನೋಡಿಕೊಳ್ಳಬೇಕು. ಇಲ್ಲ ವಾದರೆ ಅವಳು ನಿಮ್ಮ ಕೈಲಿ ಇರುವುದೇ ಇಲ್ಲ. ಈಗಲೇ ಮುಂಜಾಗ್ರತೆ ವಹಿಸಿರಿ. ಅನಂತರ ಏನಾದರೂ ಹೆಚ್ಚುಕಡಿಮೆಯಾದರೆ ಪರಿತಾಪ ಪಡಬೇಡಿರಿ. ನಾನು ಈಗಲೇ ಹೇಳಿರುವೆ."

ಸರೂವಿನ ಮಾತಿನ ಸರಣಿಯನ್ನು ಕೇಳಿ ಮಾಧವ ಅಪ್ರತಿಭನಾದ. ತನ್ನ ಪ್ರೀತ್ಯಾಸ್ಪದಳಾದ ಲೂಸಿಯ ಮೇಲೆ ಸಂಶಯ! ಅವನಿಗೆ ಅದೊಂದು ಬಗೆಯ ಉತ್ಪ್ರೇಕ್ಷೆಯಂತೆ ತೋರಿತು. ಪ್ರಪಂಚವೇ ತಲೆಕೆಳಗಾಗಬಹುದು, ಆದರೆ ತನ್ನ ಲೂಸೀ ದಾರಿ ತಪ್ಪಲಾರಳು ಎಂಬ ದೃಢ ನಂಬಿಕೆ ಮಾಧವನಿಗಿದ್ದಿತು. ಆದರಿಂದ ಸರೂವಿನ ಸಂಶಯವನ್ನು ಕೇಳಿ ಅವನಿಗೆ ನಗು ಬಂದಿತು. ಮಾಧವ ನಕ್ಕು ನುಡಿದ: "ನಿನಗೆಲ್ಲೋ ಭ್ರಮೆ ಇರಬೇಕು ಸರೂ. ಇಲ್ಲವಾದರೆ ನೀನು ಈ ರೀತಿ ಹೇಳುತ್ತಿರಲಿಲ್ಲ. ಲೂಸಿ ಯಾವಾಗಲೂ ಹಾಸ್ಯಪ್ರಿಯೆ, ಮಂದಹಾಸಿನೀ ವಿಲಾಸಿನೀ, ಸುಭಾಷಿಣೀ ಅವಳ ಸ್ವಭಾವವೇ ಅಂತಹದು, ಎಲ್ಲರೊಡನೆಯೂ ಸಲುಗೆಯಿಂದ ಇರುವುದು. ಅವಳು ಕಾಲೇಜು ಓದಿದ ಹುಡುಗಿ; ಮೇಲಾಗಿ ಕೆಲಸಕ್ಕೆ ಸೇರಿ ಗಂಡಸರೊಡನೆ ಓಡಾಡಿದ ಹುಡುಗಿ. ನಿನ್ನಂತೆ ಹೊಸ್ತಿಲವನ್ನೇ ದಾಟದ ಹೆಂಗುಸಲ್ಲ ಅವಳು. ಏನೋ ಪರಿಚಯವಿರುವವರೊಂದಿಗೆ ಅವಳು ಸಲಿಗೆಯಿಂದ ಮಾತನಾಡಿದ್ದಕ್ಕೇ ನೀನು ಅವಳನ್ನು ಸಂಶಯದೃಷ್ಟಿಯಿಂದ ನೋಡುವುದು ಸರಿಯಲ್ಲ ಸರೂ. ನನ್ನ ಲೂಸಿ ಎಂದಿಗೂ ನನಗೆ ಎರಡು ಬಗೆಯು ಲಾರಳು."

ಸರೂ ಅವನ ಮಾತು ಕೇಳಿ ಮೌನ ತಾಳಿದಳು. ತನ್ನ ಕರ್ತವ್ಯ ತಾನು ಮಾಡುವೆನೆಂದುಕೊಂಡು ನೆರೆಮನೆಯ ಹೀರಾಲಾಲನೊಂದಿಗೆ ಅವಳು ನಡೆದು ಕೊಳ್ಳುವ ರೀತಿ, ಆ ಹೀರಾಲನ ಗುಣ ಎಂತಹದು, ಎಂಬುದನ್ನೆಲ್ಲಾ ತಾನೇ ಕಣ್ಣಾರೆ ನೋಡಿರುವದಾಗಿ ಹೇಳಿದರೂ ಮಾಧವನಿಗೆ ನಂಬಿಕೆ ಹುಟ್ಟಲಿಲ್ಲ. "ಇಲ್ಲದ ಸಂಶಯವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಡ ಸರೂ. ನನ್ನ ಲೂಸೀ ಅದೊಂದು ರತ್ನ. 'ಷಿ ಈಜ್ ಎ ಜೆಮ್ ಸರೂ, ಜೆಮ್' ಎಂದು ಹೇಳುತ್ತಾ ಮಾಧವ, ಆಫೀಸಿನಿಂದ ಹೇಗೆ ಬಂದಿದ್ದನೋ ಹಾಗೆಯೇ, ಬಟ್ಟೆಯನ್ನು ಬದಲಿಸದೆ, ಫಿಲೋಮಿನಾಳ ಮನೆಯ ಕಡೆ ಹೊರಟುಹೋದ.

ಎಷ್ಟು ರೀತಿಯಲ್ಲಿ ಬಿಡಿಸಿ ಬಿಡಿಸಿ ಹೇಳಿದರೂ ಮಾಧವ ತನ್ನ ಮಾತನ್ನು ನಂಬಲಿಲ್ಲವಲ್ಲಾ ಎಂದು ದುಃಖಿಸಿದಳು ಸರೂ. ಯಾವುದೋ ಜನ್ಮದ ಪಾಪ

ಶೇಷ ಈ ಜನ್ಮದಲ್ಲಿ ಅವರನ್ನು ಲೂಸಿಯ ಮೂಲಕ ಕಾಡುತ್ತಿದೆ. ಯಾರೇನು ಮಾಡುವುದು? ಎಚ್ಚರಿಕೆ ಹೇಳುವುದು ನನ್ನ ಕರ್ತವ್ಯ. ಅದನ್ನು ನಾನು ಮಾಡಿಯಾಯಿತು. ಇನ್ನು ಏನಾದರೂ ಆಗಲೀ." ಎಂದುಕೊಂಡು ಸರೂ ಸಮಾಧಾನಗೊಂಡಳು.

ಬರಬರುತ್ತಾ ಲೂಸಿಯ ಗೆಳೆಯರು ಹೆಚ್ಚಾಗತೊಡಗಿದರು. ಮಾಧವ ಏನೇ ಆಗಲೀ ತನ್ನನ್ನು ಸಂಶಯಿಸಲಾರ ಎಂಬುದನ್ನು ಅವನ ಮಾತಿನಿಂದ, ಅವನ ನಡತೆಯಿಂದ ಅವನಿಗೆ ತನ್ನಲ್ಲಿರುವ ಅಪಾರವಾದ ನಂಬಿಕೆಯಿಂದ ತಿಳಿದ ಲೂಸೀ, ಈಗ ಧೈರ್ಯವಾಗಿಯೇ ಕುಣಿಯತೊಡಗಿದಳು. ಅವಳ ಹಳೆಯ ಡೇವಿಡ್, ಜಾನ್, ಎಲ್ಲರೂ ಇಲ್ಲಿಗೇ ಬರತೊಡಗಿದರು. ಮಾಧವ ಆಫೀಸಿಗೆ ಹೋದ ಎಂದರೆ, ಅವನು ಹಿಂದಿರುಗಿ ಮನೆಗೆ ಬರುವ ತನಕ ಲೂಸಿ ಕುಣಿದದ್ದೇ ಕುಣಿದಿದ್ದು, ಮೆರೆದದ್ದೇ ಮೆರೆದಿದ್ದು. ಅವಳು ಈಗ ಯಾರಿಗೂ ಹೆದರಬೇಕಾಗಿರಲಿಲ್ಲ. ಅವರ ಇಷ್ಟ ಬಂದಂತೆ ಸ್ವೇಚ್ಛೆಯಾಗಿರಬಹುದು, ಮನ ಬಂದಂತೆ ವರ್ತಿಸಬಹುದು. ಅವಳನ್ನು ಕೇಳುವವರೇ ಇಲ್ಲ. ಬಂದವರು ಸುಮ್ಮನೆಯೇ ಹಿಂತಿರುಗುತ್ತಲಿರಲಿಲ್ಲ. ಲೂಸಿಯೇ ಅವರಿಗೆಲ್ಲಾ ಡ್ರಿಂಕ್, ಕೊಟ್ಟು ತಾನೂ ಕುಡಿದು ಮತ್ತಳಾಗಿ ಮನಬಂದಂತೆ ಮಾತನಾಡುತ್ತಾ ಹಾಡು ಕೇಳುತ್ತಾ ಓಡಾಡುತ್ತಿದ್ದಳು.

ಸರೂಗೆ ಇದನ್ನೆಲ್ಲಾ ನೋಡಿ ನೋಡಿ ಅತ್ಯಂತ ಬೇಸರವೆನಿಸಿತು. ತನ್ನ ಮನೆಗೆಲಸ ಮುಗಿದ ಮೇಲೆ ಬೇಸರ ಕಳೆಯಲು ಮೊದಲು ಬೀದಿಯ ಬಾಗಿಲಿಗಾದರೂ ಬಂದು ನಿಂತುಕೊಳ್ಳುತ್ತಿದ್ದಳು. ಈಗ ಅದೂ ತಪ್ಪಿಹೋಯಿತು. ಅಡುಗೆ ಮನೆಯನ್ನು ಬಿಟ್ಟು ಕದಲುವುದು ಸಾಧ್ಯವೇ ಆಗುತ್ತಿರಲಿಲ್ಲ. ಅವರ ಆ ಕೀಳುದರ್ಜೆಯ ಲಲ್ಲೆ-ಮಾತುಗಳು, ಅವರ ಹಾಸ್ಯ, ಅವರ ನಗು ಇವನ್ನೆಲ್ಲಾ ನೋಡಲಾರದೇ ಸರೂ ಅಡುಗೆ ಮನೆಯ ಬಾಗಿಲನ್ನು ಹಾಕಿಕೊಂಡೇ ಕೂಡುತ್ತಿದ್ದಳು.

ವಿಜಯನ ಉಪಟಳ ದಿನೇ ದಿನೇ ಹೆಚ್ಚುತ್ತಾ ಹೋಯಿತು. ಪ್ರತಿ ದಿನ ಮಾಧವ ವಿಜಯನನ್ನು ಹೊಡೆಯುತ್ತಿದ್ದ. ಸರೂವಿಗೆ ಇದೇ ಯೋಚನೆಗಿಟ್ಟುಕೊಂಡಿತು. ವಿಜಯ ಏನೇ ಮಾಡಲಿ ತನ್ನ ಕೆಲಸವನ್ನು ಬಿಡುತ್ತಿರಲಿಲ್ಲ. ಮಾಧವ ಸಿಟ್ಟಿನ ಭರದಲ್ಲಿ ಎಂದಾದರೂ ಒಂದು ದಿನ ವಿಜಯನನ್ನು ಹೊಡೆದೇ ಸಾಯಿಸಿಬಿಡಬಹುದೆಂದೂ ಅನಿಸಿತು ಸರೂಗೆ. ಆಮೇಲೆ ತನ್ನ ಗತಿ ಏನು?

ಅವರ ಕಲ್ಪನೆಯನ್ನೂ ನೆನೆದು ಸರೂ ನಡುಗಿದಳು. ಅವಳಿಗೆ ದಿಗ್‌ಭ್ರಮೆ ಯಾಯಿತು. ಲೂಸಿಯ ಆ ದಿನಕ್ಕೊಂದು ವೇಷದ, ದಿನಕ್ಕೊಂದು ಚೇಟದ, ಕಾಮ ಚೆಕ್ಕಿನಾಟವನ್ನು ನೋಡಿ ನೋಡಿ,ಅವಳ ಜೀವ ಕತಕತ ಕುದಿದರೂ, ವಿಜಯನಿ ಗಾಗಿ ಅವಳು ಅದೆಲ್ಲವನ್ನೂ ಸಹಿಸಬೇಕಾಗಿತ್ತು. ತನ್ನ ದುಃಖದ ತೆರೆಗಳಲ್ಲಿ ಅವಿಚಲ ಬಂಡೆಯಾಗಿ ಕಂಡನು ವಿಜಯ, ಸರೂಳ ಹೃದಯಸಮುದ್ರದಲ್ಲಿ. ಏನಾದರಾಗಲೀ ಇದನ್ನು ಕೊನೆಗಾಣಿಸಲೇಬೇಕೆಂದು ಸಂಕಲ್ಪಿಸಿದಳು ಸರೂ.

ಲೂಸಿಯ ಯೋಚನೆಯೂ ಒಂದಲ್ಲ ಒಂದು ರೀತಿಯಲ್ಲಿ, ಸರೂವನ್ನು ಮನೆಯಿಂದ ಹೊರಗೆ ಕಳಿಸಬೇಕು, ಇಲ್ಲ ತಾನೇ ಬೇರೆ ಹೋಗಬೇಕು, ಎಂಬುದೇ ಇತ್ತು. ಸರೂ ಇದ್ದರೆ ಎಷ್ಟಾದರೂ ತಾನು ಸ್ವಚ್ಛಂದವಾಗಿರಲು ಸಾಧ್ಯವಿಲ್ಲ, ಅವಳ ಹೇಳಿಕೆಯನ್ನು ಮಾಧವ ಎಂದಾದರೂ ನಂಬಬಹುದು, ಆಗ ತನ್ನ ಗತಿ ಏನಾದೀತು, ಎಂದೆಲ್ಲಾ ಮುಂದಾಲೋಚಿಸಿ ಲೂಸಿಯೂ ಅನೇಕ ಬಗೆಯಲ್ಲಿ ಮಾಧವನಿಗೆ ಈ ವಿಚಾರವಾಗಿ ಹೇಳಿದಳು.

ಮಾಧವ ವೆರಂಡಾದಲ್ಲಿ ಪೇಪರನ್ನೋದುತ್ತಾ ಕೂತಿದ್ದ. ಸರೂ ಅವನ ಬಳಿಗೆ ಬಂದು ಹೇಳಿದಳು: "ನನಗೆ ಹೊರಡಲು ಅಪ್ಪಣೆ ಕೊಡಬೇಕು. ನಾನು ಹೋಗುವೆ."

"ಎಲ್ಲಿಗೆ ಹೋಗುತ್ತೀ ಸರೂ?" ಮಾಧವ ಚಕಿತನಾಗಿ ಕೇಳಿದ.

"ಎಲ್ಲಿಗಾದರೂ. ವಿಜಯನಿಗೆ ಹೇಳಿದರೆ ಬುದ್ಧಿ ಬರುವುದಿಲ್ಲ. ನೀವು ಹೊಡೆಯುವುದನ್ನು ಬಿಡುವುದಿಲ್ಲ. ಹೇಗಿದ್ದರೂ ನಿಮಗೆ ಲೂಸಿ ಇದ್ದಾಳೆ, ನೀವು ಅವಳ ಜೊತೆ ಸುಖವಾಗಿದ್ದೀರಿ. ನಿಮ್ಮ ಯೋಚನೆ ಏನೂ ಇಲ್ಲ. ನಾನು ಎಲ್ಲಿಗಾದರೂ ಹೋಗುವೆ, ಅನುಮತಿ ಕೊಡಿರಿ."

ರೂಮಿನಿಂದ ಹೊರಬಂದ ಲೂಸಿ ಹೇಳಿದಳು: "ನಮ್ಮಿಂದಾಗಿ ಅವರಿಗೆ ಏಕೆ ತೊಂದರೆ? ಅವರು ಸ್ವತಂತ್ರರಾಗಿ ಸುಖವಾಗಿರಲಿ ಬಿಡಿರಿ. ನಮಗಾಗಿ ಅವರು ಇಲ್ಲೇಕೆ ಕಷ್ಟ ಪಡಬೇಕು?" ಲೂಸಿಯ ಬಾಯಿಂದ ಆ ಮಾತು ಬಂದುದೇ ತಡ ಮಾಧವ "ನಿನಗೆ ಇಷ್ಟ ಬಂದಲ್ಲಿ ಹೋಗು ಸರೂ, ನಾನೇನು ಅಡ್ಡಿ ಬರುವುದಿಲ್ಲ." ಎಂದು ಅವಳಿಗೆ ಒಪ್ಪಿಗೆ ಕೊಟ್ಟ. ಎಲ್ಲಿಗೆ? ಯಾರ ಮನೆಗೆ? ಯಾವ ಊರಿಗೆ ಹೋಗುವೆ? ಎಂದೇನೂ ಕೇಳಲೇ ಇಲ್ಲ. ಅವನಿಗೆ ಅವರ ಯೋಚನೆಯೇ ಬರಲಿಲ್ಲ. ಲೂಸಿ ಹೇಳಿದಳು, ಅದರಂತೆ ಸರೂ ಹೊರಟು ಹೋಗಲಿ, ಅಷ್ಟೇ. ಲೂಸಿಯ ಮಾತನ್ನು ನಡೆಸುವುದೇ ಅವನ ಕೆಲಸ. ಅದರ

ಪರಿಣಾಮವೇನಾದರೂ ಆಗಲಿ ಎಂಬುದೇ ಅವನ ಸಿದ್ಧಾಂತ.

ಸರೂ ಬೆಳಿಗ್ಗೆ ಬೇಗನೇ ಎದ್ದು ಸ್ನಾನ ಪೂಜೆಗಳನ್ನು ಮುಗಿಸಿ, ಅಡು ಗೆಯ ತಯಾರಿ ನಡೆಸಿದ್ದಳು. ಮಾಧವನಿಗೆ ಕಾಫಿಯನ್ನು ಕೊಡುತ್ತಾ ಹೇಳಿ ದಳು ಸರೂ, "ನನ್ನದೊಂದು ಕೋರಿಕೆಯನ್ನು ನಡೆಸಿ ಕೊಡುವಿರಾ?"

"ಏನು, ನಡೆಸಬೇಕು?" ಕಾಫಿ ಕುಡಿಯುತ್ತಾ ಮಾಧವ ಕೇಳಿದ.

"ನೀವು ಊಟಕ್ಕೆ ಬರುವ ಮುಂಚೆ, ಅರ್ಧಗಂಟೆ ಮುಂಚಿತವಾಗಿ ಬರ ಬೇಕು. ದಯವಿಟ್ಟು ನೀವೊಬ್ಬರೇ ಬನ್ನಿರಿ; ಆ ನಿಮ್ಮ ಲೂಸಿಯ ಜೊತೆಗೆ ಬರಬೇಡಿರಿ."

"ಅದೇಕೆ? ಲೂಸಿಯು ಜೊತೆಗೆ ಬಂದರೆ ಆಗುವುದಾದರೂ ಏನು?"

"ದಯವಿಟ್ಟು ಆ ಪ್ರಶ್ನೆಯನ್ನು ಕೇಳಬೇಡಿ. ನಿಮಗೆ ತಾನಾಗಿಯೇ ಬಂದನಿಂದ ತಿಳಿಯುತ್ತೆ."

ಸರೂ ಬೇಗಬೇಗನೇ ಅಡುಗೆ ಮಾಡಿ ಮುಗಿಸಿದ್ದಳು. ತಟ್ಟೆಯಲ್ಲಿ ಹೂ ಕಾಯಿ, ಎಲ್ಲಾ ದೇವರ ಪೂಜೆಗೆ ಸಿದ್ಧಪಡಿಸುವಂತೆ, ಮಾಡಿಟ್ಟಳು. ಮಾಧವ ಕುತೂಹಲದಿಂದ ಹತ್ತು ಗಂಟೆಗೇ ಅಡುಗೆಮನೆಗೆ ಬಂದು ಕೂಗಿದ: "ಸರೂ, ಏನು ಕರೆದೆಯಲ್ಲ?"

"ಬನ್ನೀ, ಇಲ್ಲಿಯೇ ಕೂಡಿ." ಎಂದು ಸರೂ ಮಣೆಯನ್ನು ಹಾಕುತ್ತಲೇ ಹೇಳಿದಳು. ಅಲ್ಲಿ ಸಾರಿಸಿ ರಂಗವಲ್ಲಿ ಇಟ್ಟು ದೀಪ ಹಚ್ಚಿ ಇಟ್ಟಿದ್ದಳು. ಮಾಧವ ಮೌನವಾಗಿ ಬಂದು ಕುಳಿತ.

"ಎಲ್ಲಿ ನಿಮ್ಮ ಪಾದಗಳನ್ನು ತೋರಿಸಿರಿ." ಸರೂ ಹೇಳಿದಳು. ಮಾಧವ ಕಾಲುಗಳನ್ನು ನೀಡಿದ. ಸರೂ ಅವನ ಪಾದಗಳನ್ನು ನೀರಿನಲ್ಲಿ ತೊಳೆದು, ವಸ್ತ್ರದಿಂದ ಒರಸಿದಳು. ಆ ನೀರನ್ನು ತಲೆಯ ಮೇಲೆ ಹಾಕಿಕೊಂಡಳು. ದೇವ ರಿಗೆ ಪೂಜೆ ಮಾಡುವಂತೆ ಅರಿಶಿಣ-ಕುಂಕುಮ ಧೂಪಾರತಿಗಳಿಂದ ಅವನ ಪಾದಗಳಿಗೆ ಪೂಜೆ ಮಾಡಿದಳು. ಆರತಿ ಮಾಡಿದಳು. ವಿಜಯನನ್ನು ಕರೆದು ಕೊಂಡು ಬಂದು "ವಿಜಯ, ನಮಸ್ಕಾರ ಮಾಡು ಮಗು." ಎಂದು ಅವನ ಕೈಲಿ ನಮಸ್ಕಾರ ಮಾಡಿಸಿದಳು. ಸರೂ ಅವನ ಪಾದಗಳಲ್ಲಿ ತಲೆಯಿಟ್ಟು ಬಿಕ್ಕಿ, ಬಿಕ್ಕಿ ಅತ್ತಳು. ಅವಳ ಕಣ್ಣೀರಿನಿಂದ ಅವನ ಕಾಲುಗಳೆಲ್ಲಾ ಹಸಿಯಾದುವು. ಗದ್ಗದಿತ ಕಂಠದಿಂದ ಹೇಳಿದಳು ಸರೂ: "ಎಂದೆಂದಿಗೂ ಈ ಸರೂ ನಿಮ್ಮ ಸೇವಕಳು ಸ್ವಾಮೀ! ಅವಳು ಸದಾ ಕಾಲವೂ ನಿಮ್ಮ ಸೇವೆಗಾಗಿಯೇ ಕಾದಿರು

ತ್ತಾಳೆ. ಈಗ ಅನಿವಾರ್ಯಕ್ಕಾಗಿ ನಾನು ನಿಮ್ಮನ್ನು ಬಿಟ್ಟು ಹೋಗುತ್ತಿರುವೆ. ಆದರೂ ಎಂದಾದರೂ ನಿಮಗೆ ಈ ನಿರ್ಭಾಗ್ಯಳ ನೆನಪು ಬಂದರೆ, ಈ ಸೇವಕಿ ನಿಮ್ಮ ಬಳಿಗೇ ಓಡಿ ಬರುತ್ತಾಳೆ. ನೀವು ಎಂದು ನನ್ನನ್ನು ನೋಡಬಯಸು ವಿರೋ ಅಂದು ನಾನಾಗಿಯೇ ನಿಮ್ಮ ಪಾದಗಳಲ್ಲಿ ಬಂದು ಬೀಳುವೆ. ನಿಮ್ಮ ಸೇವೆ ಮಾಡುವ ಭಾಗ್ಯ ಪುನಃ ನನಗೆ ಲಭಿಸಲಿ ಎಂದು ಆಶೀರ್ವದಿಸಿರಿ ಸ್ವಾಮೀ! ಈ ಹತಭಾಗ್ಯಳನ್ನು ಆಶೀರ್ವದಿಸಿರಿ." .ಹೇಳುತ್ತಾ ಹೇಳುತ್ತಾ ಸರೂವಿನ ಗಂಟಲೇ ಕಟ್ಟಿಹೋಯಿತು. ಬಾಯಿಂದ ಮಾತುಗಳೇ ಬಾರದಾ ದುವು. ದುಃಖಾತಿರೇಕದಿಂದ ನೈಮೆರೆತ ಸರೂ ಅಲ್ಲಿಯೇ ಪ್ರಜ್ಞೆ ತಪ್ಪಿ ಕೆಳಕ್ಕೆ ಕುಸಿದಳು.

ಮಾಧವ ಕಣ್ಣು ಮುಚ್ಚಿ ಕುಳಿತಿದ್ದ. ಅವನ ಕಣ್ಣುಗಳಿಂದಲೂ ಧಾರೆ ಧಾರೆಯಾಗಿ ಕಂಬನಿ ಹರಿದು, ಸರೂವಿನ ತಲೆಯ ಮೇಲೆ ಬೀಳುತ್ತಿತ್ತು. ಇಂತಹ ಸರೂವಿಗೆ ತಾನು ಎಂತಹ ಘೋರವಾದ ಅನ್ಯಾಯವನ್ನು ಮಾಡುತ್ತಿರುವೆ ಎಂದು ಅವನಿಗೆ ಆ ಕ್ಷಣದಲ್ಲಿ ಅರಿವಾಗಿ, ಅವನ ಹೃದಯವೇ ಒಡೆದುಹೋಗು ತ್ತದೆಯೋ ಎನ್ನುವಷ್ಟು ಸಹಿಸಲಶಕ್ಯವಾದ, ದಾರುಣವಾದ ವೇದನೆಯುಂಟಾ ಯಿತು. ಅವನ ಹೃದಯ ಏನನ್ನೋ ಹೇಳಲು ಕಾತರಿಸುತ್ತಿತ್ತು. ಮಾಧವ ಮಾತನಾಡಲು ಬಾಯಿ ತೆರೆದನು ಮಾತ್ರ, ಆದರೆ ಬಾಯಿಂದ ಶಬ್ದಗಳು ಹೊರ ಬೀಳಲಿಲ್ಲ. ಬರಿಯ ತುಟಿಗಳಲುಗಿದುವು ಅಷ್ಟೇ. ಅವನಿಗೆ ಮೇಲುಸಿರು ಬರು ತ್ತಿತ್ತು. ಅವನ ಶ್ವಾಸಕೋಶವೇ ಒಡೆದು ಹೋಗುವುದೋ ಎನ್ನುವಂತಾಯಿತು ಅವನಿಗೆ. "ಸರೂ.........ನನ್ನ........ಸರೂ....." ಎಂದು ಮಾಧವ ಸರೂವಿನ ತಲೆಯನ್ನು ಮೇಲಕ್ಕೆ ಎತ್ತಿದ. ಆದರೆ ಸರೂ ಮಾತನಾಡುವ ಸ್ಥಿತಿಯಲ್ಲಿಯೇ ಇರಲಿಲ್ಲ. ಸರೂವಿಗೆ ಎಚ್ಚರವಾಗಿ ಕಣ್ಣು ತೆರೆಯುವ ವೇಳೆಗೆ, ಮಾಧವ ಅಲ್ಲಿ ಇರಲೇ ಇಲ್ಲ. ಮಾಧವ ಊಟ ಮಾಡದೇ ಹಾಗೆಯೇ ಉಪವಾಸದಿಂದ ಆಫೀಸಿಗೆ ಹೊರಟುಹೋಗಿದ್ದ.

"ನೀನೂ ಬಾ ಲೂಸೀ ಊಟಕ್ಕೆ, ಇದೊಂದು ದಿನ ನಿನಗೆ ಬಡಿಸುವೆ. ನಾಳೆಯಿಂದ ನೀನೇ ಎಲ್ಲಾ ಕೆಲಸ ಮಾಡಬೇಕು." ಎಂದು ಸರೂ ಅವಳನ್ನು ಕರೆದುಕೊಂಡು ಬಂದು ಅವಳಿಗೆ ಬಡಿಸಿದಳು.

"ನೀವು ಊಟ ಮಾಡಿ ಸಿಸ್ಟರ್, ಬೆಳಗಿನಿಂದ ಉಪವಾಸವಿದ್ದೀರಲ್ಲಾ" ಲೂಸಿ ಸರೂಗೆ ಉಪಚಾರ ಹೇಳಿದಳು. ಅವಳ ಬಲವಂತಕ್ಕಾಗಿ ಸರೂ ಸ್ವಲ್ಪ

ಚಿತ್ರಾನ್ನವನ್ನೂ ಪಾಯಸವನ್ನೂ ತೆಗೆದುಕೊಂಡಳು.

"ಲೂಸಿ, ನಾನು ನಿನಗೆ ಬುದ್ಧಿವಾದ ಹೇಳಲು ಬರುತ್ತೇನೆಂದು ಏನೂ ತಿಳಿದುಕೊಳ್ಳಬೇಡ. ನನ್ನ ಪತಿ ಅತ್ಯಂತ ಒಳ್ಳೆಯವರು. ಅವರದು ಬಹಳ ಕೋಮಲಸ್ವಭಾವ. ಅವರು ಒಮ್ಮೆ ಯಾರನ್ನಾದರೂ ನಂಬಿದರೆ ಕಡೆಯ ತನಕ ಏನೇ ಆಗಲೀ ಶಂಕೆಪಡಲಾರರು. ಅವರ ಗುಣವೇ ಅಂತಹದು. ಅವರು ನಿನಗಾಗಿ ಮಾಡಬಾರದ್ದನ್ನೆಲ್ಲಾ ಮಾಡಿ ನಿನ್ನನ್ನು ಸೇರಿದ್ದಾರೆ. ನೀನು ಅವರಿಗೆ ಪ್ರಾಮಾಣಿಕಳಾಗಿರುವುದು ನಿನ್ನ ಕರ್ತವ್ಯ. ನೀತಿಯೇ ಈ ಪ್ರಪಂಚ ದಲ್ಲಿ ಅತ್ಯಂತ ಉನ್ನತವಾದ್ದು ಲೂಸೀ. ನೀತಿಗೆಟ್ಟ ಯಾವ ಮನುಷ್ಯನೇ ಆಗಲೀ ರಾಜ್ಯವೇ ಆಗಲೀ, ದೇಶವಾಗಲೀ ಎಂದಿಗೂ ಪ್ರಗತಿಯನ್ನು ಹೊಂದಲಾರದು. ಆದರಿಂದ ನೀನು ನೀತಿವಂತಳಾಗಿ ಬಾಳಬೇಕೆಂಬುದೇ ನನ್ನ ಬಯಕೆ. ಅದನ್ನು ನೆರವೇರಿಸುವೆಯಾ ಲೂಸೀ? ನನ್ನ ಮೇಲೆ ಆಣೆ ಇಟ್ಟು ಹೇಳು, ನಾನು ನುಡಿ ದಂತೆ ನಡೆಯುವೆಯಾ?"

ಲೂಸೀ ಸ್ತಬ್ಧಳಾದಳು. ಈ ನೇರವಾದ ಮಾತಿಗೆ ಏನೆಂದು ಉತ್ತರ ಕೊಡುವುದು? ಲೂಸಿ ಯಾವುದನ್ನೂ ಹೇಳದೆ ಮೌನವಾಗಿ ಊಟ ಮುಗಿಸಿ ಹೊರಟು ಹೋದಳು. ತನ್ನದು ವಿಜಯನದು ಬಟ್ಟೆಗಳನ್ನು, ಹೊದೆದು ಕೊಳ್ಳಲು ಒಂದೆರಡು ಬೆಡ್‌ಷೀಟ್, ಕಂಬಳಿ ಇದಿಷ್ಟೇ ಕಟ್ಟಿಕೊಂಡಳು. ವಿಜಯನಿಗೂ ಲಕ್ಷಣವಾಗಿ ಬಟ್ಟೆ ಹಾಕಿಕೊಂಡು, ತಾನೂ ಒಂದು ಒಗೆದ ಧರ್ಮಾವರದ ಸೀರೆಯುಟ್ಟು, ಬಟ್ಟೆಯ ಗಂಟನ್ನು ಹಿಡಿದು ಲೂಸಿಗೆ ತಾನು ಹೋಗುವುದಾಗಿ ತಿಳಿಸಿ ಸರೂ ಹೊರಟೇಬಿಟ್ಟಳು.

ಮಾಧವ ಮನೆಗೆ ಬಂದಾಗ, ಲೂಸಿಯೇ ಕಾಫಿ ತಂದು ಕೈಗೆ ಕೊಟ್ಟಳು. ಒಂದು ನಿಮಿಷದಲ್ಲಿ ಮಾಧವನಿಗೆ ಎಲ್ಲವೂ ತಿಳಿಯಿತು. ಹಾಗೆಯೇ ಕುರ್ಚಿಯ ಮೇಲೆ ಕುಸಿದು ಬಿದ್ದ.

ಸರೂ ಮನೆಯನ್ನು ಬಿಟ್ಟು ಹೊರಟಾಗ, ಎಲ್ಲಿಗೆ ಹೋಗುವುದು, ಏನು ಮಾಡುವುದು, ಎಂಬ ವಿಚಾರವೇ ಅವಳಿಗೆ ಬರಲಿಲ್ಲ. ಮುಂಚೆ ಮನೆಯನು

ಬಿಡುವುದು, ಆಮೇಲೆ ಈ ಊರನ್ನು ಬಿಡುವುದು ಅಷ್ಟೇ ಅವಳಿಗೆ ಗೊತ್ತಿದ್ದ ವಿಚಾರ. ಆಕೆ ಮನೆಯನ್ನು ಬಿಟ್ಟು ಹೊರಟಾಗ ಗಂಟೆ ಎರಡಾಗಿತ್ತು. ಬಿಸಿಲಿಗೆ ನೆಲವೆಲ್ಲಾ ಕಾದು ಕೆಂಡವಾಗಿತ್ತು. ಚಪ್ಪಲಿ ಇಲ್ಲದೆ ಬರಿಯ ಕಾಲಿನಲ್ಲಿ ನಡೆಯುವುದು ಸಾಹಸದ ಕೆಲಸವೇ ಆಗಿತ್ತು. ಮನೆಯಿಂದ ಹೊರಡುವಾಗ ನಡೆದೇ ಹೋಗಬೇಕೆಂಬ ಸಂಕಲ್ಪವಿದ್ದರೂ ಬಟ್ಟೆಯ ಗಂಟು, ಜೊತೆಗೆ ವಿಜಯ ಇವನನ್ನು ಎತ್ತಿಕೊಂಡು ಹೋಗುವುದು ಸಾಧ್ಯವೇ ಆಗಲಿಲ್ಲ. ರಿಕ್ಷಾ ಒಂದನ್ನು ಗೊತ್ತುಮಾಡಿಕೊಂಡು ಸ್ಟೇಷನ್ ಸೇರುವ ವೇಳೆಗೆ ಬಹಳ ಕಾಲವೇ ಬೇಕಾಯಿತು. ಆಕೆಯ ಕೈಲಿ ಬರಿಯ ಇಪ್ಪತ್ತು ರೂಪಾಯಿಗಳಿದ್ದುವು ಅಷ್ಟೆ. ಅವೂ ಕೂಡ ಮಾಧವ ಕೊಟ್ಟುದುವಲ್ಲ. ಎಷ್ಟೋ ಸಾಮಾನು ಎಲ್ಲವನ್ನೂ ಹಾಗೆಯೇ ಬಿಟ್ಟು, ಬರಿಯ ತನಗೆ ಬೇಕಾಗುವ ಬಟ್ಟೆಗಳನ್ನು ಮಾತ್ರವೇ ತೆಗೆದುಕೊಂಡು, ಮನೆಯಿಂದ ಹೊರಬಿದ್ದಿದ್ದಳು. ರೈಲುಖರ್ಚಿಗೆ ಎಂದು ತನ್ನ ಪೆಟ್ಟಿಗೆಯಿಂದ ಬರಿಯ ಇಪ್ಪತ್ತು ರೂಪಾಯಿ ತೆಗೆದುಕೊಂಡು ಬಂದಿದ್ದಳು. ಬೆಂಗಳೂರಿಗೆ ಹೊರಡುವ ರೈಲು ರಾತ್ರಿ ಎಂಟು ಗಂಟೆಗೆ ಎಂದು ತಿಳಿಯಿತು. ವಿಜಯ ಅಲ್ಲಿನ ಜನರ ಓಡಾಟ, ಮೋಟಾರುಕಾರುಗಳ ತಿರುಗಾಟ, ಎಲ್ಲಾ ನೋಡುತ್ತಾ ಆನಂದದಿಂದ ಕೂತಿದ್ದ. ಸರೂ ವೇಟಿಂಗ್‌ರೂಮಿಗೆ ಹೋಗಿ ಕುಳಿತಳು. ಹೋಗುವುದಾದರೂ ಎಲ್ಲಿಗೆ ಎಂಬುದನ್ನು ಯೋಚಿಸಿ, ಯೋಚಿಸಿ ಬಳಲಿದಳು. ಈ ಪಟ್ಟಣ-ವಾಸವಂತೂ ಸಾಕು; ಯಾವುದಾದರೂ ಒಂದು ಹಳ್ಳಿಗೆ ಹೋಗಿಬಿಡಬೇಕೆಂದು ಯೋಚಿಸಿದಳು. ಯಾವ ಊರಿಗೆ ಹೋಗೋಣಾ ಎಂದು ಯೋಚಿಸುವಾಗ ಅವಳಿಗೆ ತನ್ನ ತಾಯಿಯ ತಂದೆಯ ಊರು ನೆನಪಾಯಿತು. ಅಲ್ಲಿಗೇ ಹೋಗುವಾ, ಅಜ್ಜನ ಹುಟ್ಟಿದೂರನ್ನಾದರೂ ನೋಡುವಾ ಎಂದುಕೊಂಡಳು. ಆದರೆ ಹೆಸರೇ ಸರಿಯಾಗಿ ನೆನಪಾಗಲಿಲ್ಲ. ಏನಾದರಾಗಲೀ ಮುಂಚೆ ಬೆಂಗಳೂರನ್ನು ತಲುಪಿದ ಮೇಲೆ ಬೇರೆ ಯೋಚನೆ ಎಂದುಕೊಂಡು ಸುಮ್ಮನಾದಳು. ವಿಜಯ 'ಅದು ಏನು? ಅವರು ಯಾರು? ಇದು ಏನು?' ಎಂದು ಪ್ರತಿಯೊಂದಕ್ಕೂ ಕೇಳುತ್ತಿದ್ದ. ಸರೂ ಅವನ ಆ ಪ್ರಶ್ನೆಗಳಿಗೆ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಆದರೂ ಮಗುವಿನ ಉತ್ಸಾಹಭಂಗ ಪಡಿಸಬಾರದೆಂದು, ಅವನು ಕೇಳಿದ್ದಕ್ಕೆಲ್ಲಾ ತನಗೆ ತಿಳಿದಷ್ಟು ಸಮರ್ಪಕವಾದ ಉತ್ತರವನ್ನೇ ಕೊಡುತ್ತಾ ಬಂದಳು. ಅವನು ತನ್ನ ಆನಂದದಲ್ಲಿ ಹಸಿವು ಬಾಯಾರಿಕೆಯನ್ನು ಮರೆತಿದ್ದ. ಸಂಜೆಯ ವೇಳೆಗೆ ಅವನಿಗೆ ಕಾಫಿ ತಿಂಡಿಯನ್ನು ಹೋಟಲಿ

ನಿಂದಲೇ ತಂದುಕೊಟ್ಟಳು. ಮನದ ದುಗುಡಕ್ಕಾಗಿ, ಸರೂ ಏನನ್ನೂ ತೆಗೆದು ಕೊಳ್ಳದೆ ಬರಿಯ ಕಾಫಿಯನ್ನು ತೆಗೆದುಕೊಂಡಳು. ಅವಳ ದುಃಖದ ಭಾರ ವನ್ನು ನೋಡಲಾರದೆ ಕಣ್ಣುಮುಚ್ಚಿಕೊಂಡನೇನೋ ಎನ್ನುವಂತೆ ಸಂಧ್ಯಾ ಸೂರ್ಯ ಮರೆಯಾದ. ಕತ್ತಲೆಯಾಯಿತು. ಸರೂ ಹೋಗಿ ಟಿಕೆಟ್, ತೆಗೆದು ಕೊಂಡಳು. ವಿಜಯನಿಗೆ ಅಲ್ಲಿಯೇ ಊಟ ಮಾಡಿಸಿ ಅವನಿಗೆ ಬೆಚ್ಚಗೆ ಸ್ವೆಟರ್ ತೊಡಿಸಿದಳು. ಹೆಚ್ಚಿನ ಶ್ರಮವಿಲ್ಲದೆ ವಿಜಯನನ್ನು ಎತ್ತಿಕೊಂಡು, ಹೆಂಗಸರ ಗಾಡಿಯೊಳಗೇ ಹೋಗಿ ಕೂತಳು. ಅಲ್ಲಿ ವಿಶೇಷ ಗದ್ದಲವೇನೂ ಇರಲಿಲ್ಲ. ಆದರಿಂದ ಸರೂಗೆ ವಿಸ್ತಾರವಾಗಿ ಕೂತುಕೊಳ್ಳಲು ತೊಂದರೆ ಏನೂ ಆಗಲಿಲ್ಲ. ಮಧ್ಯಾಹ್ನದ ನಿದ್ದೆ ಆ ದಿನ ವಿಜಯನಿಗೆ ತಪ್ಪಿಹೋಗಿದ್ದರಿಂದ, ಗಾಡಿಯೊಳಗೆ ಕೂತ ಒಡನೆಯೇ ನಿದ್ರೆಹೋದ. ಸರೂ ಅವನನ್ನು ಇರುವ ಜಾಗದಲ್ಲಿಯೇ ಸಾವರಿಸಿ ಮಲಗಿಸಿ ಹೊದಿಸಿದಳು. ಗಾಡಿ ಬಿಡುವ ವೇಳೆಯು ಸಮೀಪವಾದ ಹಾಗೆಲ್ಲಾ ಜನ ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಬರತೊಡಗಿದರು. ಖಾಲಿ ಯಾಗಿದ್ದ ಗಾಡಿ ಕೆಲವೇ ನಿಮಿಷಗಳಲ್ಲಿ ತುಂಬಿಹೋಯಿತು. ರೈಲು ಚಲಿಸಿ ದಾಗ ಸರೂ ಮನದಲ್ಲಿಯೇ ವಂದಿಸಿದಳು: “ಇನ್ನು ಈ ಊರಿನ ಋಣ ಹರಿ ಯಿತು. ಪುನಃ ಯಾವಾಗಲೋ ಈ ಊರಿನ ಮುಖ ಕಾಣುವುದು?” ಎಂದು ಕೊಂಡಳು. ಮನ, ದೇಹ ಎರಡೂ ದಣಿದಿದ್ದರಿಂದ ಸರೂ ಅಲ್ಲಿಯೇ ಕೂತು ಕೊಂಡೇ ನಿದ್ದೆ ಹೋದಳು. ಅವಳಿಗೆ ಎಚ್ಚರವಾಗುವ ವೇಳೆಗೆ ಬೆಳಗಾಯ್ತು. ಬೆಂಗಳೂರು ಸಮೀಪವಾಗುತ್ತಲಿತ್ತು. ಸರೂ ಮದ್ರಾಸಿಗೆ ಹೋದುದೂ ರಾತ್ರಿಯ ಗಾಡಿಯಲ್ಲಿ, ಈಗ ಬಂದುದೂ ರಾತ್ರಿಯ ಗಾಡಿಯಲ್ಲಿ. ಹೀಗಾಗಿ ಸರೂ ನಡುಂತರದ ಯಾವ ಊರುಗಳ ಸ್ಟೇಷನ್‌ನನ್ನೂ ಸುತ್ತಲಿನ ಪ್ರಕೃತಿ ಸೌಂದರ್ಯವನ್ನೂ ನೋಡಲಿಲ್ಲ. ರೈಲು ಸಕಾಲದಲ್ಲಿ ಬೆಂಗಳೂರು ತಲುಪಿತು. ಬೆಂಗಳೂರಿನ ಸ್ಟೇಷನ್ ನೋಡಿದ ಮಾತ್ರದಿಂದಲೇ ಸರೂವಿನ ಹೃದಯ ಸಮಾಧಾನ ಹೊಂದಿತು. ವಿಜಯನನ್ನೂ ಸಾಮಾನನ್ನೂ ಇಳಿಸಿಕೊಂಡು ಕೆಳಗೆ ಇಳಿದಳು ಸರೂ.

ಯಾರಾದರೂ ತನ್ನನ್ನು ನೋಡಿದರೇನೋ ಎಂಬ ಭಯದಿಂದ ಸರೂ ಸುತ್ತಲೂ ನೋಡಿದಳು. ಆದರೆ ಅವಳ ಪರಿಚಯದವರು ಯಾರೂ ಇರಲಿಲ್ಲ. ಯಾರಾದರೂ ಕಂಡರೆ ಏನು ಗತಿ ಎಂಬ ಭಯದಿಂದ ಸರೂ ಕಂಗೆಟ್ಟಳು. ಅಷ್ಟ ರಲ್ಲಿ ವಿಜಯ ಎಚ್ಚರಗೊಂಡು ಹಸಿವಿನಿಂದ ಅಳಲಾರಂಭಿಸಿದನು. ಸಮೀಪ

ದಲ್ಲಿಯೇ ಮುಖ ತೊಳೆದುಕೊಂಡು, ಹೋಟೆಲಿನಿಂದ ಕಾಫಿ ತಂದು, ವಿಜಯ
ನಿಗೂ ಕುಡಿಸಿ, ತಾನೂ ಕುಡಿದಳು. ಎಲ್ಲಿಗೆ ಇನ್ನು ಮುಂದೆ ಹೋಗುವುದು?
ಎನ್ನುವ ಪ್ರಶ್ನೆ ಅವಳನ್ನು ಕಾಡತೊಡಗಿತು. ಅತ್ತೆಯ ಮನೆಗೆ ಹೋಗಲೇ?
ಎಂದು ಒಮ್ಮೆ ಯೋಚಿಸಿದಳು. ಅಲ್ಲಿ ಹೋಗಿ ಹೇಗೆ ಮುಖ ತೋರಿಸುವುದು?
ತಾನು ಯಾಕೆ ಬಂದೆ ಎಂದು ಹೇಳುವ ಬಗೆಯಾದರೂ ಹೇಗೆ? ಎಷ್ಟು
ಯೋಚಿಸಿದರೂ ಕಗ್ಗ ಬಿಡಿಸುವ ಬಗೆ ತೋಚಲಿಲ್ಲ ಸರೂಗೆ.

ಆಗಲೇ ಗಂಟೆ ಹತ್ತಾಗುತ್ತಾ ಬಂತು ವಿಜಯ ತಾನೆಲ್ಲಿಯೋ ದೂರ
ಬಂದಿದ್ದೇನೆ ಎಂಬುವನ್ನು ತಿಳಿದು, ಭಯದಿಂದ ಅಮ್ಮನಿಗೇ ಅಂಟಿಕೊಂಡಿದ್ದ.
ಸರೂ ವೇಟಿಂಗ್‌ರೂಮಿಗೆ ಹೋಗಿ ಸ್ವಲ್ಪ ಹೊತ್ತು ಕೂತುಕೊಂಡಳು. ನಂತರ
ಯಾವುದನ್ನೋ ನಿರ್ಧರಿಸಿದಂತೆ, ಕಿವಿಯ ಓಲೆ ಮತ್ತು ಮೂಗಿನಲ್ಲಿಯ ಮೂಗು
ಬೊಟ್ಟು ಕತ್ತಿನಲ್ಲಿಯ ತಾಳಿಯ ಸರ, ಇಷ್ಟನ್ನು ಬಿಟ್ಟು ಉಳಿದ ಎಲ್ಲಾ ಒಡವೆ
ಗಳನ್ನೂ ತೆಗೆದು ಒಂದು ಚಿಕ್ಕ ಗಂಟು ಕಟ್ಟಿ, ಗಾಳಿಗೆ ಹಾರಾಡುತ್ತಿದ್ದ ತನ್ನ
ಮುಂಗುರುಳನ್ನು ಕೈ ಬೆರಳುಗಳಿಂದ ಸರಿಪಡಿಸಿಕೊಂಡು, ವಿಜಯನಿಗೂ ಮುಖ
ತೊಳೆದು ಬೈತಲೆ ಸರಿ ಮಾಡಿದಳು. ಅದೇ ಹೊತ್ತಿಗೆ ಅಲ್ಲಿಗೆ ಬಂದ ಕೆಲಸದವ
ಳೊಬ್ಬಳೊಡನೆ ಮಾತು ನಡೆದು, ಪರಿಚಯ ಬೆಳೆದು ಅವಳಿಗೆ ವಿಜಯನನ್ನು
ಸ್ವಲ್ಪ ಹೊತ್ತು ನೋಡಿಕೊಳ್ಳುವಂತೆ ಹೇಳಿ, ತಾನು ಹೋಗಿ ಅವನಿಗೆ ಊಟ,
ತನಗೆ ಒಂದಿಷ್ಟು ತಿಂಡಿಯನ್ನು ಕೊಂಡು ತಂದಳು. ಆ ಕೆಲಸದವಳಿಗೂ
ಒಂದಿಷ್ಟು ಕೊಟ್ಟು ತಾನೂ ತಿಂದು, ವಿಜಯನಿಗೆ ಊಟ ಮಾಡಿಸಿ ಕೈತೊಳೆ
ಯಿಸಿ, ಹಾಸಿಗೆಯನ್ನೂ ತಾನೇ ಹೊತ್ತುಕೊಂಡು ಪ್ಲಾಟ್‌ಫಾರಂ ದಾಟಿ
ಸ್ಟೇಷನ್‌ನಿಂದ ಹೊರಗೆ ಬಂದು, ಒಂದು ಜಟಕಾ ಗೊತ್ತುಮಾಡಿ, ಯಾವು
ದಾದರೂ ಒಂದು ಸರಾಫಿಯ ಅಂಗಡಿಗೆ ಕರೆದೊಯ್ಯುವಂತೆ ಆ ಜಟಕಾದವ
ನಿಗೆ ಹೇಳಿ, ವಿಜಯನೊಡನೆ ಹತ್ತಿ ಕೂತಳು. ಜಟಕಾ ಸ್ವಲ್ಪ ಹೊತ್ತಿನೊಳ
ಗಾಗಿ ಬಂದು ಅಂಗಡಿಯ ಮುಂದೆ ನಿಂತಿತು. ಜಟಕಾದವನಿಗೆ ಸ್ವಲ್ಪ ಕಾಲ
ನಿಂತಿರುವಂತೆ ಹೇಳಿ ತಾನು ಇಳಿದು ವಿಜಯನೊಡನೆ ಅಂಗಡಿಯೊಳಕ್ಕೆ
ಹೋದಳು. ಅವಳ ಸುದೈವದಿಂದ ಆಗ ಅಂಗಡಿಯಲ್ಲಿ ಗಿರಾಕಿಗಳಾರೂ ಇರಲಿಲ್ಲ.
ಶೆಟ್ಟಿಯೊಬ್ಬ ಲೋಡಿಗೆ ಒರಗಿಕೊಂಡು, ಸಿಗರೇಟಿನ ಹೊಗೆ ಬಿಡುತ್ತಾ ಸುಮ್ಮನೇ
ಕೂತಿದ್ದ. ಅನ್ಯಮನಸ್ಕನಾಗಿ ಕೂತಿದ್ದ. ಅವನು ಸರೂವನ್ನು ನೋಡಿ
"ಬನ್ನೀಮ್ಮಾ ಕೂಡಿ, ಏನು ಬೇಕಾಗಿತ್ತು?" ಎಂದು ಅವಳನ್ನು ಆದರಿಸಿದ.

"ಏನಿಲ್ಲಾ, ಸ್ವಲ್ಪ ಈ ಒಡವೆಗಳನ್ನು ಮಾರಬೇಕಾಗಿತ್ತು" ಸಂಕೋಚ ದಿಂದ ನುಡಿದು ಒಡವೆಯ ಗಂಟನ್ನು ಅವನ ಮುಂದೆ ಇಟ್ಟಳು.

ಗಂಟನ್ನು ಬಿಚ್ಚಿ ನೋಡಿದ ಕೂಡಲೇ ಅವನ ಕಣ್ಣುಗಳರಳಿದುವು. ಕೇವಲ ನಾಲ್ಕೈದು ವರ್ಷಗಳು ಉಪಯೋಗಿಸಿದ ಆ ಒಡವೆಗಳು ಹೆಚ್ಚಿಗೆ ಏನೂ ಸವೆದಿರಲಿಲ್ಲ. ಸರೂ ಅಷ್ಟು ನಾಜೋಕಿನಿಂದ ಅವುಗಳನ್ನು ಉಪ ಯೋಗಿಸಿದ್ದಳು.

"ಇಂತಹ ಒಳ್ಳೆಯ ಒಡವೆಗಳನ್ನೇಕೆ ಮಾರುತ್ತೀರಮ್ಮಾ? ಇವು ಬಹಳ ಚೆನ್ನಾಗಿಯೇ ಇರುವವಲ್ಲ?" ಎಂದು ಶೆಟ್ಟರು ಸಹಜವಾಗಿ ಕೇಳಿದರು.

"ಈಗ ನನಗೆ ಅಂತಹ ಒಂದು ಸಮಯ ಬಂದಿದೆ. ಕೈಯಲ್ಲಿ ಕಾಸಿಲ್ಲ. ಅದಕ್ಕಾಗಿ ಮಾರುತ್ತೇನೆ. ಅವಕ್ಕೆ ಬೆಲೆ ಏನಾಗುತ್ತೆ ಹೇಳಿ? ನನಗೆ ಹೊತ್ತಾ ಗುತ್ತೆ; ಬೇಗ ಹೋಗಬೇಕಾಗಿದೆ." ಎಂದು ಸರೂ ಅವಸರಪಡಿಸಿದಳು.

ಅವಳ ಆತುರ, ಅವಸರ ಇದನ್ನು ನೋಡಿ ಶೆಟ್ಟರಿಗೆ ಅನುಮಾನ ಬಂದಿ ತೇನೋ ಸರೂವಿನ ಬಗ್ಗೆ. 'ಈ ಒಡವೆಗಳು ಕಳವಿನ ಮಾಲುಗಳಾಗಿದ್ದರೆ? ಎಂತಹ ಫಜೀತಿ!' ಎಂದುಕೊಂಡಿರಬೇಕು ಅವರು. ಆದರೆ ಸರೂವಿನ ಮೈ ಮೇಲೆ ಯಾವ ಒಡವೆ ಇರದಿದ್ದರೂ ನೋಡಲಿಕ್ಕೆ ಮಾತ್ರ ಅವಳು ಒಳ್ಳೆ ಮನೆ ತನಸ್ಥ ಹೆಣ್ಣುಮಗಳಂತೆ ಕಾಣುತ್ತಿದ್ದಳು. 'ಏನೇ ಆಗಲೀ ಕೇಳಿಬಿಡೋಣಾ; ಈಗಿನ ಕಾಲದಲ್ಲಿ ಯಾರನ್ನೂ ನಂಬುವುದು ಕಷ್ಟ.' ಎಂದುಕೊಂಡು ಶೆಟ್ಟರು "ಈ ಒಡವೆಗಳು ನಿಮ್ಮದೇನೇ....ಅಥವಾ ಯಾರಾದರೂ...."ಎಂದು ತಡವರಿಸಿ ತಡವರಿಸಿ ಕೇಳಿದರು.

ಸರೂ ಅವರ ಇಂಗಿತವನ್ನು ಕೂಡಲೆ ಗ್ರಹಿಸಿ ಹೇಳಿದಳು: "ನೀವೇನೂ ಅನ್ಯಥಾ ಯೋಚಿಸಬೇಡಿ. ಈ ಒಡವೆಗಳು ನನ್ನವೇ. ಆದರೆ ವಿಧಿಯಿಲ್ಲದ್ದ ಕ್ಕಾಗಿ ನಾನು ಇದನ್ನು ಬೆಲೆಗೆ ಕೊಡಬೇಕಾಗಿದೆ. ಇದರಲ್ಲಿ ಏನೂ ಅನುಮಾನ ಪಡಬೇಡಿರಿ. ಬೇಕಾದರೆ ನನ್ನ ವಿಳಾಸವನ್ನು ಬರೆದುಕೊಳ್ಳಿ." ಎಂದು ಹೇಳಿ ತಾನೇ ಮಾಧವನ ಹೆಸರು, ಕೆಲಸ, ಎಲ್ಲವನ್ನೂ ಚೀಟಿಯಲ್ಲಿ ಬರೆದುಕೊಟ್ಟಳು. ಆಮೇಲೆ ಶೆಟ್ಟರು ಸಮಾಧಾನ ಹೊಂದಿ, ತೂಕ, ಎಲ್ಲಾ ಮಾಡಿ, ಅದರ ಖರೀದಿ ಬೆಲೆ ಹೇಳಿ, ಅದರ ಮೇಲೆ ಚರ್ಚೆ ನಡೆದು, ಸರೂವಿಗೆ ಹಣ ಬರುವ ವೇಳೆಗೆ ಅರ್ಧಗಂಟೆಯೇ ಕಳೆದುಹೋಯಿತು. ಸರೂವಿಗೆ ಸಾವಿರದ ಚಿಲ್ಲರೆ ರೂಪಾಯಿ ಬಂದುವು. ಅದೇ ಗಾಡಿಯಲ್ಲಿ ಕುಳಿತು ಸರೂ ಬಸ್ ನಿಲ್ದಾಣಕ್ಕೆ

ಬಂದು ಸೇರಿದಳು. ಗಾಡಿಯವನಿಗೆ ಮಾತನಾಡಿದ ಬಾಡಿಗೆ ಒಂದೂವರೆ ರೂಪಾಯಿಯಾದರೂ ಎರಡು ರೂಪಾಯನ್ನೇ ಕೊಟ್ಟು ವಾಡಿಕೆಯ ಅವರ ಬಾಡಿಗೆ ಬಡಿದಾಟವನ್ನು ಸರೂ ನಿವಾರಿಸಿಕೊಂಡಳು.

ಇದ್ದ ತನ್ನ ಸಾಮಾನುಗಳನ್ನೆಲ್ಲಾ ತೆಗೆದುಕೊಂಡು ದೂರದ ಒಂದು ಸ್ಥಳದಲ್ಲಿ ಹೋಗಿ ಕುಳಿತುಕೊಂಡಳು ಸರೂ. ಬಸ್ಸು ಬರುವುದಕ್ಕೆ ಇನ್ನು ಅವ ಕಾಶವಿತ್ತು. ಸರೂ ಕಣ್ಣರಳಿಸಿ ಸುತ್ತಲೂ ನೋಡಿದಳು. ಅಲ್ಲಿ ಗುರುತಿನವರು ಯಾರೂ ಇರಲಿಲ್ಲ. ಸರೂವಿನ ಮನಸ್ಸಿಗೆ ಒಂದು ಬಗೆಯಿಂದ ಸಮಾಧಾನವೇ ಎನಿಸಿತು. ಆದರೆ ಸಮೀಪದಲ್ಲಿಯೇ ಕುಳಿತಿದ್ದ ಒಬ್ಬ ಮುದುಕನನ್ನು ನೋಡಿ ವಿಜಯ ಒಮ್ಮೆಲೆ "ಅಜ್ಜಾ.....!" ಎಂದು ಕೂಗಿದ. ಸರೂ ಅತ್ತ ನೋಡಿದಳು. ತಲೆಗೆ ಪೇಟಾ, ಕಣ್ಣಿಗೆ ಕನ್ನಡಕ, ಮೈಗೆ ಅಲ್ಲಲ್ಲಿ ಹರಿದುಹೋಗಿರುವ ಹಳೆಯ ದಾದ ಕೋಟೊಂದು, ಉಟ್ಟಿರುವ ಕಚ್ಚೆ ಪಂಚೆ ಇವನ್ನೆಲ್ಲಾ ಧರಿಸಿದ ಆ ವ್ಯಕ್ತಿ ಯನ್ನು ನೋಡಿದೊಡನೆಯೇ ಸರೂಗೆ ತನ್ನ ತಂದೆಯ ನೆನಪು ಬಂದಿತು. ಗೋವಿಂದರಾಯರು ಕನ್ನಡಕವನ್ನೇನೂ ಹಾಕುತ್ತಿರಲಿಲ್ಲವಾದರೂ, ಒಂದು ವೇಳೆ ಹಾಕಿದ್ದರೆ ಅವರು ಹೀಗೆಯೇ ಕಾಣುತ್ತಿದ್ದರೇನೋ ಎಂದುಕೊಂಡಳು. ಈ ಒಂದು ಸಾದೃಶ್ಯದಿಂದ ಹುಟ್ಟಿದ ನೆನಪು 'ರಾಕೆಟ್ಟಿ' ನಂತೆ ಅವಳನ್ನು ಒಂದು ನೆನಪಿನಿಂದ ಇನ್ನೊಂದಕ್ಕೆ ಹಾರಿಸಿಕೊಂಡು ಹೋಯಿತು. 'ಎವೆ ತೆರೆ ದಿಕ್ಕುವ ಹೊತ್ತಿನೊಳಗೆ ತನ್ನ ಗತಜೀವನ ದೃಶ್ಯಗಳೆಲ್ಲ ಸ್ಮೃತಿಪಟಲದ ಮೇಲೆ ಕಾಣಿಸಿಕೊಂಡವು. ಆಗ ಕಂಡ ತನ್ನ ತಂದೆಯ ಚಿತ್ರ, ತಾಯಿಯ ಚಿತ್ರ, ರಂಗಮ್ಮನ ಚಿತ್ರ ಅವಳ ದುಃಖವನ್ನೆಲ್ಲಾ ಕಣ್ಣೀರಾಗಿಸಿ ಹೊರಗೆಡಹಿದವು.

ತಾಯಿಯ ತೊಡೆಯ ಮೇಲೆ ಕೂತಿದ್ದ ವಿಜಯ, ಆ ವೃದ್ಧರನ್ನು ನೋಡಿದ ಕೂಡಲೇ ಅವನಿಗೆ ಅದೇನು ಜ್ಞಾಪಕ ಬಂದಿತೋ 'ಅಜ್ಜಾ!' ಎಂದು ಮತ್ತೆ ಕೂಗಿದ. ತಲೆ ಎತ್ತಿ ತನ್ನನ್ನು ಕರೆದವರಾರೆಂದು ಸುತ್ತಲೂ ನೋಡುವ ವೇಳೆಗೆ ವಿಜಯ ಇನ್ನೊಮ್ಮೆ ಕೂಗಿದ 'ಅಜ್ಜಾ!' ಎಂದು

"ಏನು ಮಗೂ ?" ಅವರು ಸ್ನೇಹಪೂರಿತವಾದ ಸ್ವರದಲ್ಲಿ ಕೇಳಿದರು.

"ಅಜ್ಜಾ ನೀನು ಎಲ್ಲಿಂದ ಬಂದೆ?" ಎನ್ನುತ್ತಾ ವಿಜಯ ಅವರ ಬಳಿಗೇ ಓಡಿದ. ವಿಜಯನ ಮುದ್ದು ಮುಖವನ್ನು ನೋಡಿ ಅವರಿಗೆ ಅತ್ಯಂತ ಪ್ರೀತಿ ಯುಂಟಾಯ್ತು. ಅವರು ಅವನನ್ನು ಎತ್ತಿ ತೊಡೆಯ ಮೇಲೆ ಕೂಡಿಸಿಕೊಂಡರು. ವಿಜಯ ಅವರನ್ನು ತನ್ನ ಅಜ್ಜ ಎಂದೇ ತಿಳಿದಿದ್ದನೋ ಏನೋ? ಅವರ

ವಾತ್ಸಲ್ಯದಿಂದ ವಿಜಯ ಹಿಗ್ಗಿಹೋದ. 'ನಂಗೆ ಕತೆ ಹೇಳು ಅಜ್ಜಾ, ಕತೆ ಹೇಳು' ಎಂದು ವಿಜಯ ಅವರನ್ನು ಪೀಡಿಸಲಾರಂಭಿಸಿದ.

ಸರೂ ದೂರದಿಂದಲೇ ಇದೆಲ್ಲವನ್ನೂ ನೋಡುತ್ತಲೇ ಇದ್ದಳು. 'ಇಲ್ಲಿ ಬಾ ವಿಜಯ, ಅವರನ್ನೇಕೆ ಗೋಳು ಹುಯ್ದುಕೊಳ್ಳುವೆ." ಸರೂ ವಿಜಯನ ಅತಿ ಸಲುಗೆಯನ್ನು ಖಂಡಿಸುತ್ತಾ ನುಡಿದಳು.

"ಇರಲಿ ಬಿಡೀಮ್ಮಾ, ಮಕ್ಕಳೆಂದರೇ ಹಾಗೆ. ಇವನು ನಿಮ್ಮ ಮಗನೋ?" ಮುದುಕರು ಕೇಳಿದರು.

"ಹೂಂ" ಎಂದು ಒಂದೇ ಮಾತಿನಲ್ಲಿ ಉತ್ತರವಿತ್ತಳು ಸರೂ. ಮಾತು ಬೆಳೆಸುವುದು ಅವಳಿಗೆ ಬೇಕಾಗಿರಲಿಲ್ಲ.

"ನೀವು ಎಲ್ಲಿಗೆ ಹೋಗಬೇಕಮ್ಮಾ?"

ಈ ಮಾತಿಗೆ ಸರೂ ಏನೆಂದು ಉತ್ತರ ಕೊಡಬೇಕು? ತಾನು ಹೋಗು ವುದು ಯಾವ ಊರಿಗೆ? ಅವಳಿಗೆ ಯಾವ ಗೊತ್ತು ಗುರಿಯೂ ಇರಲಿಲ್ಲ. ಆದರೂ ಸಾವರಿಸಿಕೊಂಡು ಹೇಳಿದಳು: "ನಮ್ಮ ನೆಂಟರೊಬ್ಬರ ಮನೆಗೆ ಹೋಗಬೇಕಾಗಿದೆ. ಅವರ ಮನೆ ಇರುವುದು ರಾಮನಾಥಪುರಕ್ಕೆ ಸಮೀಪದ ಹಳ್ಳಿಯಲ್ಲಿ. ಆದರೆ ನನಗೆ ಆ ಹೆಸರೇ ಮರೆತು ಹೋಗಿದೆ. ಯಾವ ಹಳ್ಳಿ ಎಂದು ಹೇಳಲು ತಿಳಿಯುವುದೇ ಇಲ್ಲವಲ್ಲಾ!"

"ರಾಮನಾಥಪುರದ ಸಮೀಪವೇ? ಹಾಗಾದರೆ ಕೊಣನೂರು, ಮಗ್ಗೆ, ಶಾಂತಿಗ್ರಾಮ ಇವುಗಳಲ್ಲಿ ಯಾವುದು?" ಎಂದೆಲ್ಲಾ ಹಳ್ಳಿಯ ಹೆಸರನ್ನೂ ಹೇಳ ತೊಡಗಿದರು ಅವರು.

ಶಾಂತಿಗ್ರಾಮದ ಹೆಸರು ಕೇಳುತ್ತಲೇ ಸರೂವಿಗೆ ನೆನಪಾಯಿತು,ಹೌದು ಅದೇ ಊರು ತನ್ನ ತಾತನ ಊರು. ಸದ್ಯ ಹೆಸರಾದರೂ ಗೊತ್ತಾಯಿತಲ್ಲಾ ಬದುಕಿದೆ ಎಂದುಕೊಂಡು "ಅದೇ ಶಾಂತಿಗ್ರಾಮ, ಅದೇನೆ ನಾನು ಹೋಗ ಬೇಕಾಗಿರುವ ಊರು" ಎಂದು ಆತುರದಿಂದ ನುಡಿದಳು.

"ಓ, ಹಾಗಾದರೆ ನಮ್ಮ ಊರಿಗೇ ಬರುವವರು ಎಂದಾಯ್ತು. ಅಲ್ಲಿ ನೀವು ಯಾರ ಮನೆಗೆ ಹೋಗಬೇಕು?" ಮುದುಕರು ಒಳ್ಳೇ ಹುರುಪಿನಿಂದ ನುಡಿದರು.

ಈ ಪ್ರಶ್ನೆ ಸರೂವನ್ನು ಮತ್ತೆ ಪೇಚಿನಲ್ಲಿ ಸಿಕ್ಕಿಸಿತು. ಅಲ್ಲಿ ತನಗೆ ಯಾರ ಮನೆ ಈದೆ? ತನ್ನವರು ಎನ್ನುವವರು ಅಲ್ಲಿ ಯಾರು ಇದ್ದಾರೆ? ಯಾರೂ ಇಲ್ಲ.

"ನಾನು ಊರಿಗೆ ಹೋಗುತ್ತಿರುವುದು ಇದೇ ಮೊದಲ ಬಾರಿ. ಅಲ್ಲಿ ನನಗೆ ಯಾರ ನೆಂಟರ ಮನೆಯೂ ಇಲ್ಲ. ಕಾರಣಾಂತರದಿಂದ ನಾನು ನನ್ನ ಊರು ಬಿಟ್ಟು ಬಂದಿರುವೆ. ಈಗ ಅಲ್ಲಿಯೇ ಇರಬೇಕೆಂಬ ಸಂಕಲ್ಪದಿಂದ ಬಂದಿದ್ದೇನೆ. ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ........"ಎನ್ನುವ ವೇಳೆಗೆ ಅವಳಿಗೆ ಕಣ್ಣೀರೇ ಬಂದಿತು.

"ನೀವೇನೂ ಯೋಚನೆ ಮಾಡಬೇಡೀ ಅಮ್ಮಾ. ನಾನು ನಿಮ್ಮ ತಂದೆ ಯೆಂದೇ ತಿಳಿಯಿರಿ. ನಿಮಗೆ ಬೇಕಾದ ಅನುಕೂಲ ನಾನು ಮಾಡಿಕೊಡುವೆ. ನಿಮ್ಮ ಮನಸ್ಸು ನೋಯುವ ಹಾಗಿದ್ದರೆ ಹಿಂದಿನ ಕತೆಯನ್ನೇನೂ ನೆನಸ ಬೇಡಿ. ಏನೂ ದಿಗಿಲುಪಡಬೇಡಿ." ಎಂದು ಧೈರ್ಯ ಹೇಳಿದರು ಆ ಮುದುಕರು.

ವಿಜಯ ಅವರ ತೊಡೆ ಬಿಟ್ಟು ಕೆಳಗೆ ಇಳಿಯಲೇ ಇಲ್ಲ. ಅವರ ಮುಂದೆ ತನಗೆ ಗೊತ್ತಿರುವ ಮದ್ರಾಸು, ಸಮುದ್ರ, ಲೂಸಿ, ಮಾಧವ ಎಲ್ಲರ ಬಗ್ಗೆಯೂ ತನಗೆ ತಿಳಿದಿರುವಷ್ಟು ಅಲ್ಲಿ ಇಲ್ಲಿ ಹೇಳಿದ. ಅವನ ಮಾತಿನಿಂದ ಅವರ ಊರು ಯಾವುದೋ ಸಮುದ್ರತೀರವನ್ನು ಹೊಂದಿರುವುದೆಂದು ಅವರು ತಿಳಿದರು. ಅವರನ್ನು ಯಾವುದಕ್ಕೂ ಬಿಡದೆ ವಿಜಯ ಅವರಿಗೆ ಪ್ರಶ್ನೆಗಳ ಮಳೆಯನ್ನೇ ಸುರಿ ಸುತ್ತಿದ್ದ. ಅವನ ಮಾತು ಕೇಳಿ ಅವರು ದಂಗಾದರು. ಕೇವಲ ಚಿಕ್ಕ ವಯಸ್ಸಿ ನಲ್ಲಿಯೇ ಎಷ್ಟೊಂದು ತಿಳಿದುಕೊಳ್ಳಬೇಕೆನ್ನುವ ಆಸೆ? ಅವನ ಬುದ್ಧಿ ಎಂತ ಹದು ಎಂದು ಅವರು ಬೆರಗಾದರು.

ಅವರ ಹೆಸರೇನು ಎಂದು ಕೇಳುವ ಚಪಲ ಸರೂವಿಗೆ ಆದರೂ ಕೇಳು ವುದು ಹೇಗೆಂದು ಅವಳು ಸುಮ್ಮನಾಗಿದ್ದಳು. ಆದರೆ ವಿಜಯ ಅವಳ ಕಷ್ಟ ವನ್ನು ನಿವಾರಣೆ ಮಾಡಿದ. ಅವರನ್ನು ಕೇಳಿದ ವಿಜಯ "ಅಜ್ಜಾ, ನಿನ್ನ ಹೆಸರೇನು?" ಎಂದು.

"ನನ್ನ ಹೆಸರೇ ಮಗು? ಸುಬ್ಬರಾಯ ಅಂತ. ನಿನ್ನ ಹೆಸರು ಏನು, ಹೇಳು ನೋಡೋಣಾ?"

"ನನ್ನ ಹೆಸರು ಬಿ. ಯಮ್. ವಿಜಯಕುಮಾರ್." ಅಂತ ತಾಯಿ ಹೇಳಿ ಕೊಟ್ಟಿದ್ದನ್ನು ಸರಿಯಾಗಿಯೇ ಹೇಳಿದ.

"ನಿನ್ನನ್ನು ವಿಜಯ ಎಂದು ಕೂಗಲೇ ಮಗೂ?" ಸುಬ್ಬರಾಯರು ಕೇಳಿದರು.

"ಹೂಂ. ನಾನು ನಿನ್ನನ್ನು ಅಜ್ಜಾ ಎಂದೇ ಕೂಗುತ್ತೇನೆ."

ವಿಜಯನ ಹರಟೆ ನಿರಾತಂಕವಾಗಿ ಸಾಗಿಯೇ ಇತ್ತು. ಸರೂ ಮೌನ ವಾಗಿ ಕೂತು ಅವನ ಮಾತುಗಳನ್ನು ಕೇಳಿ ಒಳಗೊಳಗೇ ನಗುತ್ತಿದ್ದಳು. ಹಿಂದೆ ವಿಜಯ ವರ್ಷದ ಮಗುವಾಗಿದ್ದಾಗ ಅವರ ಅಜ್ಜನ ತೊಡೆಯ ಮೇಲೆ ಹೇಗೆ ಕೂತುಕೊಳ್ಳುತ್ತಿದ್ದನೋ ಇಂದೂ ಹಾಗೆಯೇ ಯಾರದೋ ತೊಡೆಯ ಮೇಲೆ ಕೂತು ಅಜ್ಜಾ ಎನ್ನುತ್ತಿದ್ದಾನೆ. ಮಾವನವರು ನೋಡಿದ್ದರೆ ಎಷ್ಟು ಸಂತೋಷ ಪಡುತ್ತಿದ್ದರೋ ಎಂದುಕೊಂಡಳು ಸರೂ.

ಸುಬ್ಬರಾಯರು ವಿಜಯನನ್ನು ಕೆಳಗಿಳಿಸಿ ಎದ್ದು ಹೇಳಿದರು: "ವಿಜಯಾ ನಮ್ಮ ಊರಿನ ಬಸ್ ಬಂತು, ನಡೀ ಹೋಗೋಣಾ."

ಸರೂ ಬಸ್ ಬಂದುದನ್ನು ನೋಡಿ ಸಾವರಿಸಿಕೊಂಡು ನಿಂತಳು. ದುಡ್ಡಿನ ಗಂಟನ್ನು ಭದ್ರವಾಗಿ ಕಟ್ಟಿ ಅದನ್ನು ತನ್ನ ಸೊಂಟಕ್ಕೇ ಸೇರಿಸಿದ್ದಳು. ಅದು ಬರಿಯ ನೋಟಿನ ಕಂತೆಗಳೇ ಆದ್ದರಿಂದ ಅದನ್ನು ಸೊಂಟದಲ್ಲಿ ಸೇರಿಸುವುದೂ ಹೆಚ್ಚಿಗೆ ಕಷ್ಟವಾಗಲಿಲ್ಲ. ವಿಜಯ ಅಜ್ಜನ ಜೊತೆಯಲ್ಲಿಯೇ ಹೋಗಿ ಬಸ್ಸಿ ನೊಳಗೆ ಕೂತುಕೊಂಡ. ಸರೂ ಬಸ್ ಹತ್ತಿದ್ದಳು. ನೇರವಾಗಿ ಬಸ್ಸು ರಾಮ ನಾಥಪುರಕ್ಕೆ ಹೋಗುವ ರಸ್ತೆಯನ್ನು ಹಿಡಿಯಿತು. ದಾರಿಯುದ್ದಕ್ಕೂ ವಿಜಯ ಅಜ್ಜನ ತೊಡೆಯನ್ನೇ ನಂಬಿ ಕೆಳಗಿಳಿಯಲಿಲ್ಲ. ಅಜ್ಜ ಮೊಮ್ಮಗ ಇಬ್ಬರೂ ಮಾತಾಡಿಯೇ ಆಡಿದರು. ದಾರಿ ಮುಗಿದರೂ ಅವರ ಮಾತು ಮುಗಿಯಲಿಲ್ಲ. ಸರೂ ಮೌನವಾಗಿಯೇ ಉಳಿದಳು.

ಬಸ್ ರಾಮನಾಥಪುರವನ್ನು ಸೇರಿದಾಗ ಕತ್ತಲೆಯೇ ಆಗಿತ್ತು. ಶಾಂತಿ ಗ್ರಾಮ ಅಲ್ಲಿಂದ ಐದಾರು ಮೈಲಿಗಳ ದೂರ. ಅಲ್ಲಿಗೆ ಹೇಗೆ ಹೋಗುವುದು ? ಸುಬ್ಬರಾಯರು ತಮ್ಮ ಪರಿಚಯದವರ ಮನೆಗೇ ಸರುವನ್ನೂ ಕರೆದೊಯ್ದರು. ಅಪರಿಚಿತರ ಮನೆಯಲ್ಲಿ ರಾತ್ರಿಯನ್ನು ಕಳೆಯಬೇಕಾಯಿತಲ್ಲಾ ಎಂದು ಅವಳಿಗೆ ಸಂಕೋಚವೆನಿಸಿತು. ತನ್ನ ತಂದೆಯ ಹುಟ್ಟಿನೂರನ್ನು ನೋಡಿ ಸರೂ ವಂದಿಸಿ ದಳು. ಇಲ್ಲಿ ತನ್ನ ತಂದೆ ಎಷ್ಟು ದರ್ಪದಿಂದ ಎಷ್ಟು ಐಶ್ವರ್ಯದಿಂದ ಬಾಳುತ್ತಿ ದ್ದರು, ಈಗ ಅವರಿಗೆ ಬಂದಿರುವ ಸ್ಥಿತಿ ಎಂತಹದು! ಪಾಪ, ಕಮಲ ಚಿಕ್ಕಮ್ಮನ ಗತಿ ಏನಾಗಿದೆಯೋ ಏನೋ ಎಂದುಕೊಂಡು ದುಃಖಿಸಿದಳು. ಮನೆಯವರು ಸಾಧಾರಣ ದರ್ಜೆಯ ಮನುಷ್ಯರು. ಹೆಚ್ಚಿಗೆ ಹೇಳಿಕೊಳ್ಳುವಂತಹ ಆಸ್ತಿಪಾಸ್ತಿ ಇಲ್ಲದಿದ್ದರೂ, ಊಟಕ್ಕೆ ಏನೂ ಕೊರತೆ ಇರಲಿಲ್ಲ. ಇದ್ದುದರಲ್ಲಿಯೇ ಸವರಿಸಿ ಕೊಂಡು ಬಂದವರಿಗೂ ಆತಿಥ್ಯವನ್ನು ಮಾಡುತ್ತಿದ್ದರು. ಸರೂ ಪೂರ್ತಿಯಾಗಿ

ಎರಡು ದಿನಗಳಿಂದ ಊಟದ ಮುಖವನ್ನೇ ನೋಡಿರಲಿಲ್ಲ. ಬರಿಯ ಕಾಫಿ, ಯಾವುದಾದರೂ ತಿಂಡಿಯಲ್ಲೇ ತನ್ನ ಹಸಿವೆಯನ್ನೆಲ್ಲಾ ಅಡಗಿಸಿಕೊಂಡಿದ್ದಳು.

ಗಂಡಸರು ಹುಡುಗರಿಗೆ ಎಲ್ಲರಿಗೂ ನಡುಮನೆಯಲ್ಲಿಯೇ ಎಲೆ ಹಾಕಿ ಬಡಿಸಲಾಗಿತ್ತು. ಮಾತಿಗೆ ಮಾತು ಬಂದು ಹೇಳಿದರು ಸುಬ್ಬರಾಯರು: "ನೀವು ಏನೇ ಅನ್ನಿ, ನಮ್ಮ ಧೊರೆ, ಚಂದ್ರಶೇಖರಯ್ಯನವರು ಇದ್ದಾಗಿನ ಕಾಲದಲ್ಲಿ ಈ ಊರಿನ ಕಳೆ, ಈಗ ಏನು ಮಾಡಿದರೂ ಬರುವುದಿಲ್ಲಾ ಸ್ವಾಮಿ! ಅವರು ಹೋಗೇ ಹೋದರು ಊರಿನ ಭಾಗ್ಯಲಕ್ಷ್ಮಿಯೂ ಅವರ ಹಿಂದೆಯೇ ಹೋಯಿತು.'' ಎಂದರು ಚಟ್ನಿ ಅನ್ನವನ್ನು ಕಲಿಸುತ್ತಾ.

ಸರೂ ತನ್ನ ಅಜ್ಜನ ವಿಚಾರವಾಗಿ ಅವರು ಅಷ್ಟು ಗೌರವ ಕೊಡುವುದು, ಅವಳಿಗೆ ಅತಿಶಯವೆನಿಸಿತು. ಸರೂ ಹೇಳಿದಳು : "ಈ ಊರಿನಲ್ಲಿದ್ದ ಚಂದ್ರ ಶೇಖರಯ್ಯನವರನ್ನೇ ನೀವು ಹೇಳುವುದು ? ಅವರು ನಮ್ಮ ತಂದೆಯನ್ನು ಹಡೆದವರು. "

"ಅಂ! ಚಂದ್ರಶೇಖರಯ್ಯನವರ ಮೊಮ್ಮಗಳೇ ನೀವು! ನಿಮ್ಮ ತಂದೆಯ ವರ ಹೆಸರು?'' ಆಶ್ಚರ್ಯ ಹೊಂದಿ ಕೇಳಿದರು ಸುಬ್ಬರಾಯರು.

" ಗೋವಿಂದರಾಯರ ಮಗಳು ನಾನು. "

"ಅಯ್ಯೋ! ಅವರನ್ನು ಎಂತಹ ಸ್ಥಿತಿಗೆ ತಂದಿಟ್ಟನಮ್ಮಾ ನಿಮ್ಮ ಚಿಕ್ಕಪ್ಪ! ನೀವು ನಮ್ಮ ಮನೆಯ ಧಣಿಗಳು ತಾಯಿ! ನಿಮ್ಮ ಅಜ್ಜಂದಿರವರ ಉಪಕಾರ ದಿಂದಲೇ ನಾವು ಈ ವರೆಗೂ ಬಾಳುತ್ತಿರುವುದು. ಅವರ ಹೆಸರು ಹೇಳಿಯೇ ನಾವು ಮನೆಗೆ ದೀಪ ಹಚ್ಚುತ್ತೇವೆ." ಎಂದರು ಮನೆಯ ಯಜಮಾನ ಶಾಮರಾಯರು. ಅವರ ವಿಷಯವಾಗಿ ಬಹಳ ಹೊತ್ತು ಮಾತುಕತೆ ಯಾಯಿತು. ಶಾಮರಾಯರ ಪತ್ನಿ ಅನ್ನಪೂರ್ಣಮ್ಮ. ಅವರು ಹೆಸರಿಗೆ ತಕ್ಕ ಹಾಗೆ, ಊಟ ಬಡಿಸುವುದರಲ್ಲಿ ಧಾರಾಳವಾಗಿಯೇ ಇದ್ದರು. ಅವರ ಅಕ್ಕರೆಯ ಮಾತುಗಳಿಂದ ಸಮಾಧಾನ ಹೊಂದಿದ ಸರೂ ಹೊಟ್ಟೆ ತುಂಬಾ ಊಟಮಾಡಿ ದಳು. ಆ ಕ್ಷಣಕ್ಕೆ ಅವಳಿಗೆ ಯಾವ ಯೋಚನೆಯೂ ಬರಲಿಲ್ಲ. ವಿಜಯನಂತೂ ಅಜ್ಜನನ್ನು ಬಿಟ್ಟು ಕದಲಲೇ ಇಲ್ಲ. ಅವನು ಅವರ ಮಗ್ಗುಲಲ್ಲಿಯೇ ಮಲಗಿ ನಿದ್ರೆಹೋದ.

. ಸರೂ ಮನೆಯನ್ನು ತ್ಯಜಿಸಿ ಹೋದುದು ಮಾಧವನ ಮೇಲೆ ದೊಡ್ಡ ಪರಿಣಾಮವನ್ನೇ ಮಾಡಿತು. ಸರೂ ಮನೆಯಲ್ಲಿದ್ದಾಗ ಅವಳನ್ನು ಅನಾದರಿಸು ತ್ತಿದ್ದ. ಅವಳ ಕಷ್ಟವೇನು ಎಂಬುದನ್ನು ಕೂಡಾ ಕೇಳುತ್ತಿರಲಿಲ್ಲ. ಈಗ ಅವಳ ಗುಣ ಒಂದಕ್ಕೆ ಹತ್ತರಷ್ಟು ಅವನಿಗೆ ಕಾಣುತ್ತಿತ್ತು. ಸರೂ ಹೋದಾಗಿ ನಿಂದ ಲೂಸಿಯ ಮೇಲೆಯೇ ಮನೆಯ ಎಲ್ಲಾ ಕೆಲಸ-ಕಾರ್ಯಗಳೂ ಬಿದ್ದುವು. ಯಾವಾಗಲೂ ಗಂಡಸಿನಂತೆ ತಿರುಗುತ್ತಾ ಕಾಲ ಕಳೆದ ಲೂಸಿಗೆ ಈಗ ಕೆಲಸ ದಲ್ಲಿ ಮೈ ಒಗ್ಗುವುದಾದರೂ ಹೇಗೆ? ಒಂದು ಅಡುಗೆಯನ್ನೂ ನೆಟ್ಟಗೆ ಮಾಡಲು ಕಲಿತಿರಲಿಲ್ಲ ಅವಳು. ಈಗ ವಿಧಿಯಿಲ್ಲದ್ದಕ್ಕಾಗಿ ಏನೋ ಒಂದು ಮಾಡಿ ಬಡಿಯುತ್ತಿದ್ದಳು. ಒಂದೊಂದು ದಿನ ಅನ್ನವೇ ಸೀದುಹೋಗುತ್ತಿತ್ತು; ಇನ್ನೊಂದು ದಿನ ಸಾರಿಗೆ ಉಪ್ಪು ಹೆಚ್ಚಾಗುತ್ತಿತ್ತು; ತರಕಾರಿ ಸರಿಯಾಗಿ ಬೇಯುತ್ತಲೇ ಇರಲಿಲ್ಲ, ಹೀಗೆ ದಿನವೂ ಯಾವುದಾದರೊಂದು ಬಗೆಯ ಅಡುಗೆಯಾಗುತ್ತಿತ್ತು. ಸರೂವಿನ ಕೈಯಿಂದ ನಳಪಾಕವನ್ನು ಊಟಮಾಡಿ ಅಭ್ಯಾಸವಾಗಿರುವ ಮಾಧವನಿಗೆ ಲೂಸಿಯ ಅಡುಗೆ ಸ್ವಲ್ಪವೂ ಸೇರುತ್ತಲೇ ಇರಲಿಲ್ಲ.

ಕನ್ನಡಿಯಂತೆ ಇದ್ದ ಮನೆ ಈಗ ಬರಿಯ ಕಸದ ತಿಪ್ಪೆಯಾಯಿತು. ಎಲ್ಲಿ ನೋಡಿದರೂ ಅಲ್ಲಿ ಕಸ, ಸಿಗರೇಟಿನ ತುಂಡುಗಳು, ಬ್ರೆಡ್ಡಿನ ಚೂರು ಗಳು ಇವೆಲ್ಲಾ ಬಿದ್ದು, ನೋಡುವುದಕ್ಕೆ ಅಸಹ್ಯ ಬರುವಂತಿದ್ದಿತು. ಲೂಸಿಯ ಕೈಯಿನ ಅಡುಗೆಯನ್ನು ಊಟ ಮಾಡಲಾರದೇ ಮಾಧವ ಅಡುಗೆಯವನನ್ನು ಗೊತ್ತುಮಾಡಿದ. ಮನೆಯ ಇತರ ಕೆಲಸಗಳಿಗೆ ಒಬ್ಬ ಆಳನ್ನೂ ನೇಮಿಸಿದ. ಅದರಿಂದ ಮನೆ ಈಗ ಸ್ವಲ್ಪ ನೋಡುವ ಹಾಗಾಯಿತು.

ಅಡುಗೆಯವ, ಆಳು, ಲಾಂಡ್ರಿ, ಪೇಪರ್, ಮಾ ್ಯೈನ್ ಎಂದು ಇವು ಗಳಿಗೇ ನೂರು, ನೂರಿಪ್ಪತ್ತು ರೂಪಾಯಿಗಳು ಖರ್ಚಾಗುತ್ತಿದ್ದುವು. ಲೂಸಿಯ ಬರಿಯ ಡ್ರಿಂಕ್ಸ್, ಸಿನೇಮಾ ಎಂದು ಅವುಗಳಿಗೇ ಸುಮಾರು ಹಣ ಖರ್ಚಾ ಗುತ್ತಿತ್ತು. ಹೀಗಾಗಿ ಮಾಧವನಿಗೆ ಬರುವ ಸಂಬಳವೂ ಸಾಲದೇ ಹೋಗುತ್ತಿತ್ತು.

ಮಾಧವ ದಿನಕ್ಕೆ ಹತ್ತುಬಾರಿಯಾದರೂ ಸರೂವನ್ನು ಜ್ಞಾಪಿಸಿಕೊಳ್ಳು ತ್ತಿದ್ದ. ಪ್ರತಿಯೊಂದು ಕೆಲಸದಲ್ಲೂ ಅವಳ ಕುಶಲತೆ ಎದ್ದುಕಾಣುತ್ತಿತ್ತು. ಅವಳೊಬ್ಬಳಿಂದ ಮನೆ

ಅವೆಲ್ಲಾ ಅಳಿಸಿ ಹೋಗಿ ಮನೆ ಕಳೆಗೆಟ್ಟಿದ್ದಿತು. ಮಾಧವ ಎಷ್ಟೇ ಬಗೆಯಲ್ಲಿ ಸರೂವನ್ನು ಮೆಚ್ಚಿಕೊಂಡು, ಅವಳನ್ನು ಬಯಸುತ್ತಿದ್ದರೂ, ಲೂಸಿ ಎದುರಿಗೆ ಬಂದಳೆಂದರೆ ತೀರಿತು; ಅವನ ಯೋಚನೆ ಎಲ್ಲಾ ಗಾಳಿಯ ಪಾಲಾಗುತ್ತಿದ್ದುವು. ಆಗ ಅವನಿಗೆ ಪ್ರಪಂಚವೆಲ್ಲವೂ ಲೂಸಿಮಯವಾಗಿಯೇ ಕಾಣುತ್ತಿತ್ತು. ಮಾಧವ ಎಂದಿಗೂ ಅವಳನ್ನು ನಿರ್ಲಕ್ಷಿಸಲಿಲ್ಲ; ಮೊದಲ ದಿನ ಲೂಸಿಯನ್ನು ಕಂಡಾಗ ಯಾವ ರೀತಿ ಅವಳನ್ನು ಕಂಡಿದ್ದನೋ ಅದೇ ರೀತಿಯಲ್ಲಿ ಇಂದಿಗೂ ಅವಳು ಅವನ ಪ್ರಾಣವಾಗಿದ್ದಳು. ಪ್ರಪಂಚವೇ ತಲೆಕೆಳಗಾಗಬಹುದು, ಮಾಧವನಿಗೆ ಲೂಸಿಯ ಮೇಲೆ ಇರುವ ಮೋಹ ತಪ್ಪದು.

ಲೂಸಿ ಈಗ ಸರ್ವಸ್ವತಂತ್ರಳು. ಮನೆಯಲ್ಲಿ ತನ್ನದೇ ರಾಜ್ಯಭಾರ. ಅವಳು ಮನಸ್ವೀ ವರ್ತಿಸಬಹುದು. ಮನೆಯವಳಾಗಿ ಇದ್ದ ಸರೂ ಈಗ ಹೊರಟು ಹೋಗಿಯಾಯಿತು ಇನ್ನು ಅವಳನ್ನು ಕೇಳುವವರಾರು ? ಮನೆಗೆ ಬರುವ ಅವಳ ಗೆಳೆಯರ ತಂಡವೂ ಹೆಚ್ಚುತ್ತಾ ಹೋಯಿತು. ಇನ್ನು ಲೂಸಿಯ ಸಹವಾಸದಿಂದ ಮಾಧವ ತಾನೂ ಅವಳ ಜೊತೆಗೇ ಕುಡಿಯಲು ಶುರು ಮಾಡಿದ್ದ. ಮೊದಮೊದಲು ಲೂಸಿಯ ಬಲವಂತದಿಂದ ಕುಡಿಯುತ್ತಿದ್ದರೂ, ದಿನಕ್ರಮೇಣ ಅವನಿಗೆ ಅದೇ ರೂಢಿಯಾಗಿಹೋಯಿತು. ಆದರ ವೇಳೆಯಾಯಿತೆಂದರೆ ಅಂತರ್ದಾಹ ಉಂಟಾಗುತ್ತಿತ್ತು. ತುಟಿ ಎಲ್ಲಾ ಒಣಗಿ ಬರುತ್ತಿತ್ತು. ಅದನ್ನು ಸೇವಿಸಿದ ಮೇಲೆ ಅವನಿಗೆ ಎಲ್ಲಾ ನೋವು, ನರಳುವಿಕೆ ಎಲ್ಲಾ ಮರೆತು ಹೋಗಿ, ಆನಂದದಿಂದ ಮಲಗಿದ ಮಾಧವನಿಗೆ ಎಚ್ಚರವಾಗುವುದು ಬೆಳಗಾದ ಮೇಲೆಯೇ.

ಹಿರಾಲಾಲನೂ ಲೂಸಿಯ ಪ್ರಬಲವಾದ ಗೆಳೆಯನೇ ಆಗಿದ್ದ. ಆಗಾಗ ಅವನು ತನ್ನ ಅಂಗಡಿಯಿಂದ, ಹೊಸದಾಗಿ ಬಂದಿರುವ ಸೀರೆ, ಬ್ಲೌಸ್‌ಪೀಸ್ ಎಲ್ಲವನ್ನೂ ತಂದು ತನ್ನ ಪ್ರೇಯಸಿಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದ. ಲೂಸಿ ಹೊಸ ಸೀರೆಯನ್ನು ಉಟ್ಟಿದುದು ಎಂದಾದರೂ ಮಾಧವನ ಗಮನಕ್ಕೆ ಬಂದು "ಇದು ಯಾವುದು ಲೂಸಿ ? ಹೊಸ ಸೀರೆಯಂತೆ ಕಾಣುತ್ತೆ?"ಎಂದಾಗ "ಓ, ಅದೇ, ಆ ದಿನ ನಾವೇ ಬಜಾರಿನಲ್ಲಿ ತೆಗೆದುಕೊಂಡೆವಲ್ಲಾ. ಇದೇನು ಇಷ್ಟು ಬೇಗ ಮರೆತುಬಿಟ್ಟಿರಾ ?" ಎಂದು ಮಾತು ಹಾರಿಸುವಳು. ಅವನಿಗೆ ಲೂಸಿಯ ಮಾತು ವೇದವಾಕ್ಯ ತಾನೇ? ಮಾಧವ ಅವಳ ಮಾತನ್ನು ನಂಬಿ ಸುಮ್ಮನಾಗುತ್ತಿದ್ದ.

ಲೂಸಿ ಸಂಪೂರ್ಣವಾಗಿಯೂ ಕೆಟ್ಟು ಹೋಗಿದ್ದಳು. ಅವಳ ಅಂಟೀ ಎಷ್ಟು ಎಚ್ಚರಿಸಿದರೂ ಏನೂ ಪರಿಣಾಮವೇ ಆಗಲಿಲ್ಲ. ಅವಳ ಈ ಇಬ್ಬಗೆಯ ಜೀವನ ಎಂದಿನಂತೆ ನಿರಾತಂಕವಾಗಿ ಸಾಗಿಯೇ ಇತ್ತು. ನಾಥನ ಅವಳಲ್ಲಿ ಸಂಶಯ ಹೊಂದಲೇ ಇಲ್ಲ.

ಸರೂ ನೇರವಾಗಿ ಸುಬ್ಬರಾಯರ ಮನೆಗೇ ಬಂದಳು. ಸುಬ್ಬರಾಯರು ಶಾಂತಿಗ್ರಾಮದ ಶ್ಯಾನುಭೋಗರು. ಸುತ್ತುಮುತ್ತಲಿನ ಹಳ್ಳಿಗಳೂ ಅವರ ಅಧೀನದಲ್ಲಿಯೇ ಇದ್ದುವು. ಸುಬ್ಬರಾಯರು ವೈದಿಕಬ್ರಾಹ್ಮಣರು. ಅವರ ನಡೆ-ನುಡಿ ಆಚಾರವ್ಯವಹಾರ ಎಲ್ಲದರಲ್ಲಿಯೂ ಅವರು ವೈದಿಕರಂತೆಯೇ ಇದ್ದರು. ಸ್ವಭಾವತಃ ಅವರು ಉದಾರಿಗಳು, ನ್ಯಾಯಪರರು. ಅವರು ನ್ಯಾಯವನ್ನು ಎಂದಿಗೂ ಮೀರಿ ನಡೆದಿರಲಿಲ್ಲ. ರೈತರೆಲ್ಲರೂ ಅವರನ್ನು ಗೌರವಿಸುತ್ತಿದ್ದರು. ಮನೆಯಲ್ಲಿ ವಯಸ್ಸಾದ ತಾಯಿ, ಹೆಂಡತಿ, ನಾಲ್ಕು ಜನ ಮಕ್ಕಳು. ಇಷ್ಟು ಜನರ ಸಂಸಾರ ನಡೆಯಬೇಕಾಗಿತ್ತು. ಬರಿಯ ಶ್ಯಾನುಭೋಗ್ಯವೇ ಅಲ್ಲದೆ, ಪಿತ್ರಾರ್ಜಿತವಾದ ಆಸ್ತಿಯೂ ಸ್ವಲ್ಪಮಟ್ಟಿಗೆ ಇದ್ದಿತು. ಹಿರಿಯ ಹುಡುಗ ಮೈಸೂರಿನಲ್ಲಿ ಬಿ. ಎ. ಓದುತ್ತಿದ್ದ. ಇದೊಂದು ವರ್ಷ ಮುಗಿದರೆ ಅವನ ಓದೂ ಮುಗಿದಂತೆ ಆಗಿತ್ತು. ಅವನ ಹಿಂದೆಯೇ ಇಬ್ಬರು ಹೆಣ್ಣು ಮಕ್ಕಳು. ದೊಡ್ಡವಳಿಗೆ ಮದುವೆಯಾಗಿ ಗಂಡನ ಮನೆಯಲ್ಲಿ ಸಾಕಷ್ಟು ನೆಮ್ಮದಿಯಿಂದಲೇ ಇದ್ದಳು. ಅವಳ ತಂಗಿಗೆ ಮದುವೆಯಾಗಬೇಕು. ಹುಡುಗಿ ಬೆಳೆದು ನಿಂತಿದ್ದಾಳೆ. ಅವಳ ತಮ್ಮನೇ ಕಡೆಯವನು. ಅವನು ರಾಮನಾಥಪುರದ ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದ. ಕಷ್ಟವೂ ಇಲ್ಲ, ಸುಖವೂ ಇಲ್ಲ ಎನ್ನುವಂತೆ ಅವರ ಸಂಸಾರ ನಡೆದಿದ್ದಿತು.

ಸರೂ ಒಂದೇ ದಿನದಲ್ಲಿ ಸುಬ್ಬರಾಯರ ಸ್ವಭಾವವನ್ನು ಅರಿತಳು; ಅವರನ್ನು ತನ್ನ ತಂದೆ ಎಂದೇ ಭಾವಿಸಿದಳು. ಅವರ ಪತ್ನಿ ಸುಭದ್ರಮ್ಮ ಅವರಿಗೆ ಅನುಕೂಲಳಾದ ಪತ್ನಿ. ಗಂಡನನ್ನು ಪ್ರತ್ಯಕ್ಷ ದೇವರು ಎಂದು ತಿಳಿಯುವ ಪತಿವ್ರತೆ. ಅವರಿಬ್ಬರ ಜೋಡಿಯೂ ಹಾಲು ಸಕ್ಕರೆ ಬೆರೆತಂತೆ, ಅನ್ಯೋನ್ಯ

ವಾಗಿದ್ದಿತು.

ಸರೂ ತನ್ನ ಪತಿಯ ವಿಷಯವಾಗಿ ಏನೂ ಹೇಳಲಿಲ್ಲ. ಎಲ್ಲರಿಗೂ ಹೇಳಿ ಎಲ್ಲರ ಕೈಯಲ್ಲಿಯೂ, ತನ್ನ ಪತಿಗೆ ಅವರು ಏನಾದರೊಂದು ಚಿಕ್ಕಮಾತು ಆಡುವಂತೆ ಏಕೆ ಮಾಡಬೇಕು ? ಕನಸು ಮನಸಿನಲ್ಲಿಯೂ ಸಹ, ಸರೂ ಪತಿಯನ್ನು ಎಂದಿಗೂ ನಿಂದಿಸುತ್ತಲಿರಲಿಲ್ಲ. ಇತರರಿಂದ ತನ್ನ ಪತಿಯ ಬಗ್ಗೆ ಸಣ್ಣ ಮಾತುಗಳನ್ನು ಕೇಳುವುದು ಕೂಡಾ ಅವಳಿಗೆ ಸಹಿಸುತ್ತಲಿರಲಿಲ್ಲ.

ವಿಜಯ ಅಜ್ಜನ ಮನೆಯಲ್ಲಿ ಎಲ್ಲರನ್ನೂ ಬಹಳ ಬೇಗನೆ ಹೊಂದಿಕೊಂಡುಬಿಟ್ಟ. ಯಾವಾಗಲೂ ಹೊರಗೇ ಆಡಿಕೊಂಡಿರುತ್ತಿದ್ದ. ಸರೂಗೆ ಸ್ವಲ್ಪವೂ ತೊಂದರೆಯನ್ನು ಕೊಡುತ್ತಲಿರಲಿಲ್ಲ. ಒಂದು ಮೂರು-ನಾಲ್ಕು ದಿನ ಹಾಗೆಯೇ ಪರಸ್ಪರರ ವಿಚಾರಗಳನ್ನು ಕೇಳಿತಿಳಿದುಕೊಳ್ಳುವುದೇ ಆಯಿತು. ಸರೂ ಸುಭದ್ರಮ್ಮನವರಿಗೆ ಹಿರಿಯ ಮಗಳಂತಾದಳು. ಪ್ರತಿಯೊಂದು ಕೆಲಸವನ್ನು ತಾನೇ ತಿಳಿದುಕೊಂಡು, ಮನೆಯವರಿಗಿಂತಾ ಹೆಚ್ಚು ಮುತವರ್ಜಿ ಇಟ್ಟು ಮಾಡುತ್ತಿದ್ದುದನ್ನು ನೋಡಿ ಸುಭದ್ರಮ್ಮ ಅವಳನ್ನು ಬಹಳವಾಗಿ ಮೆಚ್ಚಿಕೊಂಡರು. ಸರೂ ಸುಬ್ಬರಾಯರನ್ನು ಮಾವ ಎಂದೇ ಕರೆಯಲಾರಂಭಿಸಿದಳು.

ಒಂದು ದಿನ ಸಂಜೆ ಸುಬ್ಬರಾಯರು, ವಿಜಯನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಬಾಯಿಪಾಠ ಹೇಳಿಕೊಡುತ್ತಿದ್ದರು. ಸರೂ ಮೆಲ್ಲನೆ ಅವರ ಬಳಿ ಬಂದು ಹೇಳಿದಳು : "ಮಾವ, ನಿಮ್ಮಲ್ಲಿ ಒಂದು ಮಾತು ಕೇಳುವುದು ಇದೆ, ಕೇಳಲೇ ?" ಸರೂ ಸಂಕೋಚದಿಂದ ನುಡಿದಳು.

"ಕೇಳು ಮಗು, ಅದಕ್ಕೇಕೆ ಸಂಕೋಚ ?" ಸುಬ್ಬರಾಯರು ಪ್ರೀತಿಯಿಂದ ನುಡಿದರು.

"ಮಾವ, ನಾನು ನನ್ನ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳುತ್ತೇನೆ. ಇವು ನಿಮ್ಮ ಹೃದಯದಲ್ಲಿಯೇ ಇರಲಿ. ಬೇರಾರಿಗೂ ತಿಳಿಯುವುದು ಬೇಡ...." ಸರೂ ಅಲ್ಲಿಗೇ ತಡೆದಳು.

"ಈ ಮುದುಕನಲ್ಲಿ ನಿನಗೆ ಅನುಮಾನವೇ ಮಗು? ನಾನು ನಿನ್ನ ತಂದೆಗೆ ಸಮಾನನೆಂದು ತಿಳಿ. ನನ್ನಲ್ಲಿ ಮುಚ್ಚುಮರೆ ಏನೂ ಮಾಡಬೇಡ. ನಾನು ಯಾರ ಎದುರಿಗೂ ನಿನ್ನ ವಿಚಾರವಾಗಿ ಚಕಾರವನ್ನೂ ನುಡಿಯುವುದಿಲ್ಲ. ತಿಳಿಯಿತೆ? ನೀನು ಧೈರ್ಯವಾಗಿರು ಮಗೂ."

ಸುಬ್ಬರಾಯರು ಅಭಯ ನೀಡಿದ ಮೇಲೆ ಸರೂ ಹೇಳತೊಡಗಿದಳು: "ಮಾವ, ನಾನು ಬೆಂಗಳೂರಿನಲ್ಲಿರುವ ಶ್ರೀಕಂಠಯ್ಯನವರ ಹಿರಿಯ ಸೊಸೆ. ನಾನು ಇಷ್ಟು ಮದ್ರಾಸಿನಲ್ಲಿ. ಅಲ್ಲಿಯ ಕಂಪನಿಯೊಂದರಲ್ಲಿ ನಮ್ಮವರಿಗೆ ಮ್ಯಾನೇಜರ್ ಕೆಲಸವಿದೆ. ಯಾವುದೋ ಹಿಂದಿನ ಜನ್ಮದ ಪಾಪಶೇಷ ನನ್ನನ್ನು ಅವರಿಂದ ಅಗಲಿಸಿದೆ. ಹೀಗೆ ನಾನು ಅಜ್ಞಾತವಾಸದಲ್ಲಿ ಎಷ್ಟು ದಿನಗಳಿರಬೇಕೋ ಗೊತ್ತಿಲ್ಲ. ಎಂದಿಗೆ ನನ್ನ ಕರ್ಮ ಸವೆಯುತ್ತದೆಯೋ ಅಂದು ನಾನು ಅವರ ಬಳಿಗೆ ಹೋಗುವೆ. ಅವರು ನನ್ನನ್ನು ಯಾವ ನಿಮಿಷದಲ್ಲಿ ಕರೆದರೂ ನಾನು ಹೋಗಲು ಸಿದ್ಧಳಾಗಿದ್ದೇನೆ. ಅಲ್ಲಿಯ ವರೆಗೆ ನಾನು ಇಲ್ಲಿಯೇ, ಈ ಊರಿನಲ್ಲಿಯೇ ಇರಬೇಕೆಂದು ಆಶಿಸುವೆ. ನನಗೆ ನನ್ನ ನೆಂಟರಿಷ್ಟರ ಮನೆಗೆ ಹೋಗಿ ಅವರಿಗೆಲ್ಲಾ ನನ್ನಿಂದ ತೊಂದರೆಯನ್ನೂ ಮತ್ತು ನನಗೆ ಈ ಸಂಗತಿ ಉಂಟಾದುದಕ್ಕೆ ಕ್ಲೇಶವನ್ನೂ ಉಂಟುಮಾಡಲು ಮನಸ್ಸಿಲ್ಲ.

"ಈ ವಿಜಯನದೇ ನನಗೆ ಯೋಚನೆ. ಅಲ್ಲಿಯೇ ಇದ್ದರೆ ಮಗುವಿನ ಮನಸ್ಸಿನ ಮೇಲೆ ಅವರ ನಡತೆ ಬಹಳ ಕೆಟ್ಟ ಪರಿಣಾಮವನ್ನುಂಟುಮಾಡುವು ದೆಂಬ ದಿಗಿಲಿನಿಂದ ನಾನಾಗಿ ಅವರಿಂದ ಅಗಲಿ ಬಂದಿದ್ದೇನೆ. ಈ ಮಗುವೂ ತಂದೆಯ ದಾರಿ ಹಿಡಿಯಬಾರದಷ್ಟೇ? ಅವನು ಬೆಳೆದು ಒಳ್ಳೆಯ ಹುಡುಗ ನಾಗಿ, ಸಭ್ಯನಾದರೆ ಸಾಕು. ನನಗೆ ಇನ್ನೇನೂ ಬೇಕಿಲ್ಲ. ಇವನೊಬ್ಬ ಇಲ್ಲದೇ ಇದ್ದಿದ್ದರೆ ನಾನು ಅವರ ಪಾದಗಳಲ್ಲಿಯೇ ಪ್ರಾಣವನ್ನು ಬಿಡುತ್ತಿದ್ದೆ. ಆದರೆ ಈಗ ಅದಕ್ಕೆ ಅವಕಾಶವಿಲ್ಲ. ಇವನನ್ನು ಯೋಗ್ಯ ಹುಡುಗನನ್ನಾಗಿ ಮಾಡ ಬೇಕೆಂಬ ಬಯಕೆಯಿಂದಲೇ ನಾನು ಇಲ್ಲಿಗೆ, ಯಾವದೊಂದು ಹವ್ಯಾಸವೂ ಇಲ್ಲದ, ಶಾಂತಿಯ ಬೀಡಾದ ಈ ಹಳ್ಳಿಗೆ ಬಂದಿದ್ದೇನೆ. ನಾನು ಇಲ್ಲಿ ವಾಸಿಸಲು ನೀವು ಅನುಕೂಲ ಮಾಡಿಕೊಡಿರಿ. ಇದೋ ನನ್ನಲ್ಲಿರುವ ಸರ್ವ ಹಣವೂ ಇದರಲ್ಲಿ ಇದೆ. ಇದನ್ನು ಬಿಟ್ಟು ಬೇರೆಯ ಒಂದು ಚಿಕ್ಕ ಕವಡೆಯೂ ನನ್ನ ಬಳಿಯಲ್ಲಿಲ್ಲ. ಇದರಿಂದ ನನಗೆ ಏನಾದರೂ ಜೀವನೋಪಾಯ ಕಲ್ಪಿಸಿರಿ ಮಾವ. ನಾನು ಮಾನವಾಗಿ ಬಾಳಲು ಯಾವುದಾದರೂ ದಾರಿಯನ್ನು ತೋರಿಸಿ." ಸರೂ ಯಾವಾಗಲೂ ತನ್ನ ಸೊಂಟದಲ್ಲಿಯೇ ಇಟ್ಟಿದ್ದ ಹಣದ ಗಂಟನ್ನು ತೆಗೆದು ಸುಬ್ಬರಾಯರ ಪಾದಗಳ ಬಳಿ ಇಟ್ಟಳು. ತನ್ನಲ್ಲಿ ಅವಳು ಇಟ್ಟಿರುವ ಅಪಾರವಾದ ನಂಬಿಕೆ ಮತ್ತು ಪ್ರೀತಿಯನ್ನು ನೋಡಿ ಅವರ ಹೃದಯ ತುಂಬಿ ಬಂತು. ಸರೂ ಅಲ್ಲಿ ಯಾವ ಪರಿಸ್ಥಿತಿಯಲ್ಲಿ ಗಂಡನ ಮನೆ

ಬಿಟ್ಟು ಬಂದಳು ಎಂಬುದನ್ನು ತಿಳಿಯಲಾರದೇ ಅವರು ಅವಳಿಗೆ ಎಷ್ಟೋ ವಿಧದಲ್ಲಿ ಪುನಃ ಗಂಡನ ಬಳಿಗೇ ಹಿಂತಿರುಗಿ ಹೋಗಲು ಅನೇಕ ಉದಾಹರಣೆಗಳನ್ನು ಕೊಟ್ಟು, ಅಲ್ಲಿಗೆ ಹೋಗೆಂದು ಉಪದೇಶಿಸಿದರು. ಸರೂ ಯಾವುದಕ್ಕೂ ಬಗ್ಗಲಿಲ್ಲ. ಕಡೆಗೆ ಸುಬ್ಬರಾಯರು ಹೇಳಿದರು: "ನೀನು ತಿಳಿದುಕೊಂಡಿರುವಂತೆ ಈ ಶಾಂತಿಗ್ರಾಮ ಶಾಂತಿಯ ಬೀಡೇ ಆಗಿಲ್ಲ ಮಗೂ. ನೀನು ತಪ್ಪು ಭಾವನೆ ಹೊಂದಿರುವೆ. ಇದು ಹಳ್ಳಿ. ಇಲ್ಲಿಯ ಜನ ಪಟ್ಟಣದವರಂತೆ ನಾಗರೀಕರಲ್ಲ. ಇವರ ರೀತಿ, ನೀತಿಯೇ ಬೇರೆ. ಇವರ ಗುಣದೋಷಗಳೇ ಬೇರೆ. ಇವರಲ್ಲಿ ಅನೇಕ ಮೂಢಭಾವನೆಗಳಿವೆ. ಅಂತೆಯೇ ಇವರಿಗೆ ದ್ವೇಷಾಸೂಯೆಗಳೂ ತುಂಬಿವೆ. ನಾವು ಏನು ಹೇಳಿದರೂ ಇವರು ತಿಳಿಯಲಾರರು. ಇವರು ತಮಗೆ ತೋಚಿದಂತೆ ಮಾಡುವರೇ ಹೊರತು ನಾವು ಹೇಳಿದಂತೆ ಮಾಡುವವರಲ್ಲ! ಇಲ್ಲಿಯ ಜನ ಬಹಳ ಹಟಗಾರರು ಮಗೂ. ಅವರ ಮನಸ್ಸಿಗೆ ಬಂದದ್ದು ಮಾಡಿಯೆ ತೀರುತ್ತಾರೆ. ಇಂತಹ ಜನದ ಮಧ್ಯೆ, ನೀನು ಇನ್ನೂ ಹುಡುಗಿ, ಒಬ್ಬಂಟಿಗಳಾಗಿ ಬಾಳುವೆಯಾ ಮಗು? ಆದರೆ ಇನ್ನೊಂದು ಮಾತು. ಇಲ್ಲಿಯವರಲ್ಲಿ ಒಂದು ಗುಣವಿದೆ. ಅವರು ಯಾರನ್ನಾದರೂ ನಂಬಿದರೆ ಕಡೆಯವರೆಗೂ ಅವರನ್ನೇ ನಂಬಿ, ಅವರಿಗೆ ಕಷ್ಟ ಬಂದರೆ ತಮ್ಮ ಪ್ರಾಣವನ್ನೂ ಕೊಟ್ಟು ಕಾಪಾಡಲು ಅವರು ಹಿಂದುಮುಂದೆ ನೋಡುವುದಿಲ್ಲ. ಆದರೆ ಯಾರಾದರೂ ಅವರ ಹಗೆತನವನ್ನು ಸಂಪಾದಿಸಿದರಾಯಿತು. ಅದು ಅವರಿಗೆ ಅಂತ್ಯವೇ ಆಗುತ್ತೆ. ಇಲ್ಲಿಯ ವಿಷಯಗಳನ್ನೆಲ್ಲಾ ಹೇಳಿರುವೆ. ನಂತರ ತಿಳಿಯದೆ ನೀನು ಪೇಚಾಡಬಾರದು ಮತ್ತೆ. ಇದರ ಮೇಲೆ ನಿನ್ನ ಇಷ್ಟ."

"ಆತ್ಮವಿಶ್ವಾಸವಿಲ್ಲದ ಮನುಷ್ಯ ಎಲ್ಲಿಯೂ ಬಾಳಲಾರ ಮಾವ. ಪರಿಶುದ್ಧಳಾದ ಹೆಂಗಸೇ ಆಗಲೀ, ಗಂಡಸೇ ಆಗಲೀ, ಎಲ್ಲಿ ಬೇಕಾದರೂ, ಎಂತಹ ಜನರ ನಡುವೆಯೂ ಆ ಒಂದು ಆತ್ಮವಿಶ್ವಾಸದಿಂದ ಬದುಕಿ ಬಾಳಬಲ್ಲರು. ನೀವು ನನಗೆ ವಾಸಕ್ಕೆ ಒಂದು ಮನೆಯನ್ನು ಮಾಡಿಕೊಡಿರಿ. ನಾನು ಮುಂದೆ ನನ್ನ ಜೀವನ ನಡೆಸುವೆ. ನೀವು ಯಾವ ಯೋಚನೆಯನ್ನೂ ಪಡಬೇಡಿರಿ. ನಾನು ಯಾರ ಹಂಗೂ ಇಲ್ಲದಂತೆ ಸ್ವತಂತ್ರವಾಗಿ ಬಾಳುವಂತೆ ನನಗೆ ಮನೆಯೊಂದನ್ನು ಮಾಡಿಕೊಡಿರಿ. ಈ ವರೆಗೆ ನೀವು ನನಗೆ ಮಾಡಿರುವ ಉಪಕಾರದ ಹೊರೆಯನ್ನು ನಾನು ಎಂದೆಂದಿಗೂ ಇಳಿಸಲಾರೆ ಮಾವ. ಈ ಮಗಳು ಎಂದಿಗೂ ನಿಮ್ಮವಳೇ ಆಗಿದ್ದಾಳೆ." ಎಂದಳು ಸರೂ.

ಸರೂ ತಾನು ಬೇರೆ ಮನೆಗೆ ಹೋಗುತ್ತೇನೆಂದಾಗ ಮನೆಯಲ್ಲಿ ಯಾರೂ ಅದನ್ನು ಒಪ್ಪಲಿಲ್ಲ. ಅವಳನ್ನು ಬಿಟ್ಟುಗೊಡಲು ಯಾರಿಗೂ ಮನಸ್ಸಿರಲಿಲ್ಲ. ಸುಬ್ಬರಾಯರು ಎಷ್ಟೋ ಹೇಳಿದರು: "ನೀನು ಇಲ್ಲಿಯೇ ಇದ್ದುಬಿಡು. ನೀನೂ ನನ್ನ ಮಗಳಂತೆ. ನಿನ್ನೊಬ್ಬಳನ್ನು ಸಾಕುವುದು ನನಗೇನೂ ಕಷ್ಟವಲ್ಲ. ದೇವರು ಹೇಗೋ ನಡೆಸಿ ಕೊಡುತ್ತಾನೆ" ಎಂದು. ಆದರೂ ಸರೂ ಹಿಡಿದ ಹಟ ಬಿಡಲೇ ಇಲ್ಲ

ಕಡೆಗೆ ನಿರುಪಾಯರಾಗಿ ಸುಬ್ಬರಾಯರು ಮನೆಯನ್ನು ನೋಡುವ ಯತ್ನ ಮಾಡಿದರು. ಆ ಊರಿನಲ್ಲಿ ಇದ್ದ ಬ್ರಾಹ್ಮಣರ ಮನೆ ಎಂದರೆ ಕೇವಲ ನಾಲ್ಕು ಅಥವಾ ಐದು. ಅವರಾರು ಮನೆಯನ್ನು ಮಾರುವುದಕ್ಕಾಗಲೀ, ಬಾಡಿಗೆ ಕೊಡುವುದಕ್ಕಾಗಲೀ ಸಿದ್ಧರಾಗಿರಲಿಲ್ಲ. ಆದರಿಂದ ಒಕ್ಕಲಿಗರ ಮನೆಗಳಲ್ಲಿಯೇ ವಿಚಾರಿಸಬೇಕಾಯಿತು. ಹಾಗೆ ವಿಚಾರಿಸಿದಲ್ಲಿ ಕೊನೇ ಬೀದಿಯಲ್ಲಿಯ ಅಗ್ಸರ ತಿಮ್ಮ ಮನೆಯನ್ನು ಯಾರಿಗಾದರೂ ಭೋಗ್ಯಕ್ಕೋ ಅಡವಿಗೋ ಮಾಡಿ ಕೊಟ್ಟು ಅದರಿಂದ ತನ್ನ ಮಗಳ ಮದುವೆಯನ್ನು ಮಾಡುವುದಾಗಿ ಅನೇಕ ದಿನ ಗಳಿಂದ ಹೇಳುತ್ತಲಿದ್ದ. ಆ ಕೊಂಪೆಯಲ್ಲಿ ಮನೆಯನ್ನು ಯಾರು ತಾನೆ ಕೊಳ್ಳು ತ್ತಾರೆ? ಹೀಗಾಗಿ ಅವನು ಮಗಳ ಮದುವೆಯನ್ನು ಎರಡು ವರ್ಷದಿಂದಲೂ ತಪ್ಪುತ್ತಲೇ ಬಂದಿದ್ದ

ಸುಬ್ಬರಾಯರು ಮನೆಯನ್ನು ಕೇಳಿದಾಗ ಅವನು ಕೂಡಲೇ ಸಂತೋಷ ದಿಂದ ಒಪ್ಪಿಕೊಂಡಿದ್ದ. ಎಷ್ಟು ಬೆಲೆಗಾದರೂ ಸರಿ ಅವನು ಅದನ್ನು ಮಾರ ಲಿಕ್ಕೂ ತಯಾರಿದ್ದ. ಬೆಳೆದು ನಿಂತ ಮಗಳ ಮದುವೆ ಮಾಡದೆ ಇದ್ದುದಕ್ಕಾಗಿ ಅವನು ಅನೇಕರಿಂದ ನಿಂದೆಯ ಮಾತುಗಳನ್ನೂ ಕೇಳಬೇಕಾಗಿ ಬಂದಿತ್ತು. ಸುಬ್ಬರಾಯರ ಮಾತಿನಲ್ಲಿ ಎಲ್ಲರಿಗೂ ಒಂದು ಬಗೆಯ ಗೌರವವಿದ್ದಿತು. ಕಡೆಗೆ ಇನ್ನೂರು ರೂಪಾಯಿಗಳಿಗೆ ಆ ಮನೆಯನ್ನು ಸರೂವಿಗೆ ಭೋಗ್ಯಕ್ಕೆ ಮಾಡಿಸಿ ಕೊಟ್ಟರು. ಮನೆ ಸಾಕಷ್ಟು ದೊಡ್ಡದಾಗಿಯೇ ಇತ್ತು. ಒಂದು ದಿನ ಒಳ್ಳೆ ಗಳಿಗೆಯಲ್ಲಿ ಸರೂ ತನ್ನ ಮನೆಗೆ ಬಂದಳು. ಅವಳಿಗೆ ಬೇಕಾದ ಪಾತ್ರೆ ಗಳು ಸಾಮಾನು ಇಡಲು ಡಬ್ಬಾ, ಒಲೆ, ಇತ್ಯಾದಿ ಸಂಸಾರಕ್ಕೆ ಬೇಕಾಗುವ ಎಲ್ಲಾ ಸಾಮಾನುಗಳನ್ನೂ ಸುಭದ್ರಮ್ಮ, ಮಗಳ ಮನೆಗೆ ಕೊಡುವಂತೆ ಹೋಗಿ ಅವಳಿಗೆ ಕೊಟ್ಟು ಬಂದರು. ಒಂದು ತಿಂಗಳಿಗೆ ಸಾಕಾಗುವಷ್ಟು ಅಕ್ಕಿ ಬೇಳೆ ಎಲ್ಲಾ ಸಾಮಾನುಗಳನ್ನು ತುಂಬಿ, ಡಬ್ಬಾಗಳ ಸಮೇತವಾಗಿಯೇ ಕೊಟ್ಟರು

ಅಲ್ಲಿಗೆ ಹೋದ ಮಾರನೆಯ ದಿನ ಸರೂ ತಾನೇ ಔತನದ ಅಡುಗೆಯನ್ನು ಮಾಡಿ ಸುಬ್ಬರಾಯರು, ಸುಭದ್ರಮ್ಮ ಎಲ್ಲರನ್ನೂ ಊಟಕ್ಕೆ ಕರೆದಿದ್ದಳು. ಸರೂವಿನ ಕೈ ಊಟದ ರುಚಿ ನೋಡಿ ಸುಬ್ಬರಾಯರು ಮನಸಾರೇ ಅವಳನ್ನು ಹೊಗಳಿದರು.

ಸುಬ್ಬರಾಯರೇ ಖುದ್ದಾಗಿ ನಿಂತುಕೊಂಡು ಮನೆಗೆ ಸುಣ್ಣ ಹಾಕಿಸಿ, ಹೆಂಚು ಕೈಯಾಡಿಸಿ, ಸಣ್ಣ ಪುಟ್ಟ ರಿಪೇರಿಗಳನ್ನು ಮಾಡಿಸಿದ್ದರು. ಸರೂ ಮನೆಗೆ ಕಾಲಿಟ್ಟು ಮಾಡಿದ ಮೊದಲ ಕೆಲಸವೆಂದರೆ, ಮಾಧವನ ದೊಡ್ಡದಾದ ಫೋಟೋ ಒಂದನ್ನು ಅಡುಗೆ ಮನೆಯಲ್ಲಿ ಮೊಳೆ ಹೊಡೆದು ತಗಲುಹಾಕಿದ್ದು. ಅವಳು ಬೇರೆ ಯಾವ ದೇವರ ವಿಗ್ರಹಗಳನ್ನು ತಂದಿರಲಿಲ್ಲ. ಅವಳ ಪಾಲಿನ ದೇವರು ಮಾಧವನ ಫೋಟೋ ಆಗಿತ್ತು. ಸರೂವಿನ ಒಂಟಿ ಜೀವನ ಅಂದಿನಿಂದ ಶುರು ಆಗಿತ್ತು.

ಮುರಲಿ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ಪಾಸಾಗಿದ್ದ. ಮೊದಲಿನಿಂದಲೂ ಮೆಕ್ಯಾನಿಸಮಿನಲ್ಲಿ ಆಸಕ್ತಿ ಹೊಂದಿದ್ದ ಅವನು, ತನ್ನ ಪಾಲಿನ ಹಣ ಬರುತ್ತಲೂ "ರಾಮಕೃಷ್ಣ ಆಟೋಮೊಬಯಿಲ್ಸ್" ಎಂಬ ಹೆಸರಿನಲ್ಲಿ ಗ್ಯಾರೇಜು ತೆರೆದ. ವಿಶ್ವೇಶ್ವರಪುರದ ಸರ್ಕಲ್ ಬಳಿಯಲ್ಲಿಯೇ ಅವನು ಬಾಡಿಗೆಗೆ ದೊಡ್ಡ ಬಂಗಲೆಯನ್ನೇ ತೆಗೆದುಕೊಂಡು ತನ್ನ ವ್ಯಾಪಾರಕ್ಕೆ ತೊಡಗಿದ.

ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಜೀವಮಾನದಲ್ಲಿ ಶುಕ್ರಮಹಾದೆಸೆ, ಶನಿದೆಶೆ, ಬಂದೇ ಬರುತ್ತದೆ ಶುಕ್ರಮಹಾದೆಶೆ ಇದ್ದಾಗ ಅವನು ಮುಟ್ಟಿದ್ದೆಲ್ಲಾ ಪ್ರಗತಿಯನ್ನೇ ಹೊಂದುತ್ತದೆ; ಆದರೆ ಅದು ತಪ್ಪಿ ಶನಿದೆಶೆ ಪ್ರಾರಂಭವಾದಾಗ ಯಾವ ಕೆಲಸವನ್ನೇ ಹಿಡಿದರೂ ಅದು ದುರ್ದೆಶೆಯನ್ನೇ ಹೊಂದುತ್ತದೆ. ಈಗ ಮುರಲಿಗೆ ಬಂದುದೂ ಶುಕ್ರದೆಶೆ. ಅವನು ಯಾವಾಗಲೂ ಧರ್ಮದ ಮೇಲೆಯೇ ದೃಷ್ಟಿ ಇಟ್ಟು ಕೆಲಸ ಮಾಡುತ್ತಿದ್ದ. ಅನ್ಯಾಯವಾಗಿ ಯಾರ ಬಳಿಯಲ್ಲಿಯೂ ಒಂದು ಕಾಸು ಕೂಡಾ ಹೆಚ್ಚಿಗೆ ಗೆದುಕೊಳ್ಳುತ್ತಲಿರಲಿಲ್ಲ.

ತಾನೇ ಸ್ವತಃ ಎಲ್ಲ ಕೆಲಸವನ್ನೂ ಮಾಡುತ್ತಿದ್ದ. ಒಬ್ಬ ಮೆಕ್ಯಾನಿಕ್, ಕ್ಲೀನರ್, ಇನ್ನೊಬ್ಬ ಹುಡುಗ ಇಷ್ಟೇ ಜನರನ್ನು ಕೆಲಸಕ್ಕೆ ಇಟ್ಟುಕೊಂಡು ಮುರಲಿ ತನ್ನ 'ಬಿಜಿನೆಸ್' ಶುರುಮಾಡಿದ. ತಾನೇ ಮೇಲ್ವಿಚಾರಣೆಯನ್ನೂ ನೋಡಿ ಕೊಂಡು, ಪ್ರತಿಯೊಂದು ರಿಪೇರಿ, ಓವ್ಹರಾ:ಲ್' ಎಲ್ಲಾ ಕೆಲಸದಲ್ಲಿಯೂ ತಾನೇ ಭಾಗ ವಹಿಸಿ ಕೆಲಸದ ಸೂಕ್ಷ್ಮಗಳೆಲ್ಲಾ ತಿಳಿದುಕೊಂಡ. ಅವನು ಮಾಡಿದ ಕೆಲಸ ಬಹಳ ಅಚ್ಚುಕಟ್ಟಾಗಿಯೂ ಬಾಳಿಕೆಯುಳ್ಳದ್ದಾಗಿಯೂ ಇರುತ್ತಿದ್ದುವು. ಅದರಿಂದ ಅವನಿಗೆ ಗಿರಾಕಿಗಳು ಬರುವುದು ಹೆಚ್ಚಾಯಿತು.

ಮುಕುಂದನೂ ತನ್ನ ಇಂಟರ್ ಮುಗಿಸಿ, ಅಣ್ಣನ ಜೊತೆಗೇ ಪಾರ್ಟ್‌ನರ್ ಆಗಿ, ಅವನ ವ್ಯಾಪಾರದಲ್ಲಿಯೇ ಭಾಗ ವಹಿಸಿದ. ಅವನ ಪಾಲಿನ ಹಣವೂ ಗ್ಯಾರೇಜಿಗೇ ಹಾಕಲ್ಪಟ್ಟಿತು. ಮುಕುಂದನ ಹಣವು ಬಂದ ಮೇಲೆ ತಾವು ಗ್ಯಾರೇಜು ಇಟ್ಟಿದ್ದ ಮನೆಯನ್ನೇ ಖರೀದಿಗೆ ಕೊಂಡುಕೊಂಡರು. ಅದ ರಿಂದ ಪ್ರತಿ ತಿಂಗಳೂ ಕೊಡುವ ಬಾಡಿಗೆ ಹಣ ನೂರಐವತ್ತು ರೂಪಾಯಿಗಳೂ ಉಳಿತಾಯವಾಯಿತು. ಮುಕುಂದ ಅಣ್ಣನೊಡನೆ ಶ್ರಮಿಸಿ ತಾನೂ ಕೆಲಸ ಕಲಿತುಕೊಂಡ. ಮುರಲಿಗೆ ಈಗ ಶುಕ್ರದೆಶೆ ಪ್ರಾರಂಭವಾಗಿತ್ತೆಂದು ತೋರುತ್ತಿ. ಅವನು ಮುಟ್ಟಿದ್ದೆಲ್ಲಾ ಚಿನ್ನವೆನ್ನುವಷ್ಟು ಮಟ್ಟಿಗೆ ಅವನ ವ್ಯಾಪಾರ ಕುದು ರುತ್ತಾ ಹೋಯಿತು.

ಯಾರ ಬಾಯಲ್ಲಿ ನೋಡಿದರೂ ರಾಮಕೃಷ್ಣ ಗ್ಯಾರೇಜ್ ಮಾತೇ ಮಾತು. ಅಲ್ಲಿಯ ಅಚ್ಚುಕಟ್ಟಾದ ಕೆಲಸಕ್ಕಾಗಿ ಜನ ಕಿಕ್ಕಿರಿದು ಬರುತ್ತಿದ್ದರು. ಗಾರೇಜ್ ಯಾವಾಗಲೂ ಮೋಟಾರು, ಮೋಟಾರ್-ಬೈಸಿಕಲ್‌ಗಳಿಂದ ತುಂಬಿರುತ್ತಿತ್ತು. ಬಂದ ಲಾಭದಲ್ಲಿ ಮನೆಯ ಖರ್ಚಿಗೆ ಸಾಕಾಗುವಷ್ಟು ಹಣ ಮಾತ್ರ ಇಟ್ಟುಕೊಂಡು ಉಳಿದುದನ್ನೆಲ್ಲಾ ಅದಕ್ಕೇ ಉಪಯೋಗಿಸುತ್ತಿದ್ದ. ಮುರಲಿಯ ಗ್ಯಾರೇಜು ರಿಪೇರಿಗೆ ಬೇಕಾಗುವ ಎಲ್ಲ ತರಹದ ಸಾಮಾನು ಗಳಿಂದಲೂ ತುಂಬಿಹೋಗಿತ್ತು. ಎಲ್ಲಾ ಕೆಲಸವೂ, ಎಷ್ಟು ಸಾಧ್ಯವೋ ಅಷ್ಟೂ ಕೆಲಸವೂ ವಿದ್ಯುತ್ತಿನ ಸಹಾಯದಿಂದಲೇ ಆಗುತ್ತಿತ್ತು. ಪ್ರತಿಯೊಂದು ವಿದ್ಯುತ್ತಿನ ಯಂತ್ರೋಪಕರಣಗಳೂ ಗ್ಯಾರೇಜಿನಲ್ಲಿದ್ದುವು.

ಜಾನಕೀಬಾಯಿ ಮಕ್ಕಳಿಬ್ಬರ ಪ್ರಗತಿಯನ್ನು ನೋಡಿ ಸಂತೋಷಿಸಿ ದರು. 'ನಾನು ಸರಿಯಾಗಿ ನನ್ನ ಉದ್ಯಮದಲ್ಲಿ ಪ್ರಗತಿಯನ್ನು ಹೊಂದದೇ ಇದ್ದರೂ ನನ್ನ ಮಕ್ಕಳು ಮುಂದಕ್ಕೆ ಬಂದರಲ್ಲಾ' ಎಂದು ಶ್ರೀಕಂಠಯ್ಯ

ಸಮಾಧಾನ ಹೊಂದಿದರು. ಈಗ ಮನೆಯ ಖರ್ಚುವೆಚ್ಚವನ್ನೆಲ್ಲಾ ಮುರಲಿ ವಹಿಸುತ್ತಿದ್ದ. ಅದೇ ವರುಷ ಮುಕುಂದನಿಗೂ ತೇರ್ಗಡೆಯಾಯಿತು. ಕೇವಲ ಒಂದೆರಡು ವರ್ಷಗಳ ಅವಧಿಯಲ್ಲಿ ಮುರಲಿ ಮುಕುಂದರಿಗೆ ಅಪಾರವಾದ ಲಾಭ ಬಂದಿತ್ತು.

ಮೋಹನ-ಅಶೋಕರಿಂದ ಕಾಗದಗಳು ಸಕಾಲದಲ್ಲಿ ಬರುತ್ತಿದ್ದುವು. ಅಶೋಕನ ಹೆಂಡತಿಯನ್ನು ತೌರುಮನೆಗೆ ಬಾಣಂತನಕ್ಕಾಗಿ ಕರೆದುಕೊಂಡು ಹೋಗುವಾಗ ಅವಳೊಡನೆ ಬೆಂಗಳೂರಿನಲ್ಲಿಯೂ ನಾಲ್ಕು ದಿನವಿದ್ದು ನಂತರ ತಮ್ಮ ಊರಿಗೆ ಕರೆದುಕೊಂಡು ಹೋಗಿದ್ದರು, ಅಶೋಕನ ಮಾವ. ಜಾನಕೀ ಬಾಯಿ ಸೊಸೆಗೆ ಆರತಿ ಮಾಡಿ, ಸೀರೆಯನ್ನು ಉಡಿಸಿ ತಾಯ ಮನೆಗೆ ಕಳಿಸಿದ್ದರು. ಅಶೋಕ ತನ್ನ ಪಾಲಿನ ಹಣದಲ್ಲಿ ಪುಟ್ಟದಾದ ಮನೆಯನ್ನು ಅಲ್ಲಿಯೇ ಕೊಂಡುಕೊಳ್ಳುವೆ ಎಂದು ಬರೆದಿದ್ದ. ಮೋಹನನೇನೂ ಸಂಸಾರಿಯಾಗಿರಲಿಲ್ಲವಾದ್ದರಿಂದ ಅವನ ಹಣ ಬ್ಯಾಂಕಿನಲ್ಲಿಯೇ ಇದ್ದಿತು. ಸುಂದರಾ ಗದ್ದೆಯನ್ನು ತೆಗೆದುಕೊಂಡಿದ್ದಳು. ಆನಂದ ಇನ್ನೂ ಸಣ್ಣವ. ಎಲ್ಲರದೂ ಸರಿಹೋಯಿತು, ಆದರೆ ಮಾಧವನ ವಿಷಯವೇ ತಿಳಿಯಲಿಲ್ಲವಲ್ಲಾ ಎಂದು ಜಾನಕೀಬಾಯಿ ಪೇಚಾಡುತ್ತಿದ್ದರು. ಅವನ ಕಾಗದಗಳೂ ವಿರಳವಾಗುತ್ತಾ ಬಂದುವು.

ಮುರಲಿ ಸಂಜೆ ಗ್ಯಾರೇಜಿನಲ್ಲಿ ಮುಕುಂದನನ್ನು ಬಿಟ್ಟು ಮನೆಗೆ ಬಂದಿದ್ದ. ತಾಯಿ ಕೊಟ್ಟ ಕಾಫಿಯನ್ನು ಕುಡಿಯುತ್ತಾ ಅಲ್ಲಿಯೇ ಕೂತಿದ್ದ ಮುರಲಿ. ಆಗ ಜಾನಕೀಬಾಯಿ ಹೇಳಿದರು: "ಮಾಧವನ ಸಮಾಚಾರವೇ ತಿಳಿಯುತ್ತಿಲ್ಲಾ ಮುರಲಿ! ಅವನೂ ಊರಿಗೆ ಹೋಗಿ ಮೂರು ವರ್ಷದ ಮೇಲೆಯೇ ಆಯಿತು. ಆದರೆ ಬರೆದಿರುವ ಕಾಗದ ಬೆರಳು ಎಣಿಸುವಷ್ಟು. ಅಲ್ಲಿ ಏನು ಮಾಡಿಕೊಂಡಿದ್ದಾನೋ ಏನೋ, ನೀನಾದರೂ ಹೋಗಿ ನೋಡಿಕೊಂಡು ಬರಬಾರದೇ? ಅವರಂತೂ ಕಿವಿ ಮೇಲೇ ಹಾಕಿಕೊಳ್ಳುವುದಿಲ್ಲ. ನನ್ನನ್ನು ಯಾರಪ್ಪಾ ಕೇಳುವವರು?"

"ಮೊದಲಿನಿಂದಲೂ ಅವನದು ಕಾಗದ ಬರೆಯುವ ಸ್ವಭಾವವಲ್ಲ. ಅದಕ್ಕೇಕೆ ಇಷ್ಟು ಒದ್ದಾಡುತ್ತೀಯಮ್ಮಾ?" ಮುರಲಿ ಶಾಂತನಾಗಿ ಕೇಳಿದ.

"ಹೆತ್ತ ಕರುಳಿನ ಸಂಕಟ ನಿನಗೆ ಹೇಗೆ ತಿಳಿಯಬೇಕು ಮಗು? ನನಗೆ ಏನೋ ಜೀವ ಒಂದೇ ಸಮನೆ ಹೊಡೆದುಕೊಳ್ಳುತ್ತಿದೆ, ಅದೇನೋ ಗೊತ್ತಾಗೋದಿಲ್ಲ. ನೂರೆಂಟು ಬಾರಿ ಅಲ್ಲಿಗೆ ಕೆಲಸಕ್ಕಾಗಿ ನಿನ್ನ ಆ ವಾಸುದೇವನನ್ನು

ಕಳಿಸುತ್ತೀ. ನೀನೇ ಹೋಗಿ ನೋಡಿಕೊಂಡು ಬಂದರೆ ಏನು ಕಷ್ಟವಪ್ಪಾ?" ಜಾನಕೀಬಾಯಿಯವರು ಅತ್ತೇಬಿಟ್ಟರು. ತಾಯಿಯ ಅಳುವನ್ನು ನೋಡಿ ಮುರಲಿ ವ್ಯಸನಪಟ್ಟ. "ನಾಳೆಯೇ ಹೋಗಿ ಬರುತ್ತೇನಮ್ಮಾ. ಏನೂ ಯೋಚಿಸ ಬೇಡ'' ಎಂದು ಮಾತು ಕೊಟ್ಟು ಹೊರಟುಹೋದ.

ಮುರಲಿ ಬೆಂಗಳೂರನ್ನು ಬಿಟ್ಟು ಹೊರಗೆ ಹೋದುದೇ ಅಪರೂಪ. ಇದೇ ಮೊದಲ ಬಾರಿ ಅವನು ಮದ್ರಾಸಿಗೆ ಬಂದುದು. ಅಲ್ಲಿಗೆ ಬರಬೇಕಾದ ಪ್ರಸಂಗ ಬಂದರೆ ತನ್ನ ನಂಬಿಕೆಯ ಮೆಕ್ಯಾನಿಕ್ ವಾಸುದೇವನನ್ನೇ ಕಳಿಸಿ ಅವನ ಮೂಲಕ ವ್ಯವಹಾರ ನಡೆಸುತ್ತಿದ್ದ.

ಬೆಳಗ್ಗೆ ಮದ್ರಾಸನ್ನು ತಲುಪಿದ ಮುರಲಿ, ಬಳಿಯಲ್ಲಿಯ ಹೋಟೆಲೊಂದ ರಲ್ಲಿ ಉಪಹಾರ ಮುಗಿಸಿ 'ದಿ ಎವರೆಸ್ಟ್ ಕಂಪನಿ'ಯನ್ನು ಹುಡುಕಲು ತೊಡ ಗಿದ. ಅಲ್ಲಿ ಯಾರೆಂದು ಕೇಳುವುದು ? ಅದು ಇರುವ ಸ್ಥಳ ಮೊದಲಾದುವೂ ಅವನಿಗೆ ಗೊತ್ತಿರಲಿಲ್ಲ. ಮಾಧವನ ಮನೆಗೇ ಹೋಗೋಣ ಎಂದುಕೊಂಡರೆ, ಮನೆಯ ವಿಳಾಸವನ್ನು ತರುವುದೇ ಮರೆತಿದ್ದ. ಏನೇ ಆಗಲೀ ಆಫೀಸಿನಲ್ಲಿಯೇ ಮಾಧವನನ್ನು ಕಾಣಬೇಕಾಗಿತ್ತು. ಹಾಗೂ ಹೀಗೂ ವಿಚಾರ್‍ಸಿಕೊಂಡು ಕಂಪನಿ 'ಕೋಡಂಬಾಕುಂ'ನಲ್ಲಿ ಇದೆಯೆಂದು ತಿಳಿದುಕೊಂಡ. ಮುರಲಿಗೆ ಹಣದ ಕೊರತೆ ಏನೂ ಇರಲಿಲ್ಲ. ಟ್ಯಾಕ್ಸಿಯನ್ನು ಮಾಡಿಕೊಂಡೇ ಅಲ್ಲಿಗೆ ಬಂದು ತಲು ಪಿದ. ದಪ್ಪದಪ್ಪವಾದ ಅಕ್ಷರಗಳಲ್ಲಿ ಕಂಪನಿಯ ಹೆಸರು ಬರೆದಿದ್ದ ಬೋರ್ಡು ಗೇಟಿನ ಮೇಲುಗಡೆ ತೂಗು ಹಾಕಲ್ಪಟ್ಟಿದ್ದಿತು. ಅಲ್ಲಿಯೇ ಬಾಗಿಲಲ್ಲಿ ನಿಂತಿದ್ದ ಜವಾನನನ್ನು ಕೇಳಿದ: "ಮ್ಯಾನೇಜರು ಬರುವುದು ಎಷ್ಟು ಹೊತ್ತಿಗೆ?"

"ಹನ್ನೊಂದರ ವೇಳೆಗೆ ಬರುತ್ತಾರೆ ಸ್ವಾಮಿ. ಬೇಕಾದರೆ ಯಜಮಾನರು ಇಲ್ಲಿಯೇ ಮನೆಯಲ್ಲಿದ್ದಾರೆ, ನೋಡಬಹುದು." ಮುರಲಿಯ ವೇಷಭೂಷಣ ವನ್ನು ನೋಡಿ ಅವನು ಯಾವನೋ ಒಬ್ಬ ಆಫೀಸರಾಗಿರಬೇಕೆಂದು ತಿಳಿದು ಜವಾನ ಹೇಳಿದ.

ಮುರಲಿ ತನ್ನ ಪರಿಚಯದ ಕಾರ್ಡು ಕೊಟ್ಟು "ಇದನ್ನು ನಿಮ್ಮ ಯಜ ಮಾನರಿಗೆ ತೋರಿಸು, ಏನು ಹೇಳುತ್ತಾರೆ ಕೇಳಿಕೊಂಡು ಬಾ." ಎಂದ. ಜವಾನ ಒಳಗೆ ಹೋದ. ಸ್ವಲ್ಪೇ ಹೊತ್ತಿನೊಳಗೆ ಹಿಂತಿರುಗಿ ಬಂದು "ಬುದ್ಧಿಯವರು ನಿಮ್ಮನ್ನು ಕರೆಯುತ್ತಾರೆ ಸ್ವಾಮೀ" ಎಂದು ಹೇಳಿದ. ಮುರಲೀ ಒಳಗೆ ಪ್ರವೇಶ ಮಾಡಿದ.

ಕಾಂಪೌಂಡಿನ ಬಳಗೇ ಒಂದು ಕಡೆ ಮನೆ. ಇನ್ನೊಂದು ಕಡೆಗೆ ಕಾರ್ಖಾನೆ ಇದ್ದಿತು. ಸುಸಜ್ಜಿತವಾದ ಕೋಣೆಯೊಂದರಲ್ಲಿ ಅನಂತಸಿಂಗ್ ಕೂತಿದ್ದರು. ಮುರಲಿ ಬಂದೊಡನೆಯೇ ಆದರದಿಂದ ಬರಮಾಡಿಕೊಂಡರು.

"ನಾನು ಮ್ಯಾನೇಜರ್ ಮಾಧವರಾಯರನ್ನು ನೋಡಲು ಬಂದಿರುವೆ" ಮುರಲಿ ನುಡಿದ.

"ನೀವು ಅವರಿಗೆ ಏನಾದರೂ ಬಳಗವೇ?" ಮಾಧವನ ಮುಖದ ಹೋಲಿಕೆಯನ್ನೇ ಮುರಲಿಯಲ್ಲೂ ಅವರು ನೋಡಿದವರಾದ್ದರಿಂದ ಕೇಳಿದರು.

"ನಾನು ಅವರ ತಮ್ಮ ಮುರಲೀಧರ್."

"ಓ, ಹಾಗಾದರೆ ನೀವೂ ನಮ್ಮ ಶ್ರೀಕಂಠಯ್ಯನವರ ಮಕ್ಕಳೇ ಹಾಗಾದರೆ? ಬಹಳ ಸಂತೋಷ. ನಿಮ್ಮ ತಂದೆಯವರೂ ನಾನೂ ಬಾಲ್ಯಸ್ನೇಹಿತರು. ಆಗ ನಾವಿಬ್ಬರೂ ಒಂದೇ ಕಡೆಯಲ್ಲಿ ಆಡುತ್ತಿದ್ದೆವು! ಈಗ ಅವರನ್ನು ನೋಡಿ ಅನೇಕ ವರ್ಷಗಳೇ ಆದುವು. ಅವರು ಹುಷಾರಾಗಿದ್ದಾರೆಯೇ? ನೀವೂ ಕೂಡಾ ವ್ಯಾಪಾರಸ್ಥರೇನೇ. ನಿಮ್ಮ ಗ್ಯಾರೇಜಿನ ಹೆಸರು ಇಲ್ಲಿಯ ವರೆಗೂ ವ್ಯಾಪಿಸಿದೆ. ಅದೇನು ಮಾಯ ಮಂತ್ರ ಮಾಡಿದ್ದೀರಿ? ಇನ್ನೂ ಅದು ಸ್ಥಾಪನೆಯಾಗಿ ಎರಡು ವರ್ಷಗಳೂ ಆಯಿತೋ ಇಲ್ಲವೋ, ಇಷ್ಟರ ಮಟ್ಟಿಗೆ ಹೆಸರುವಾಸಿಯಾಗಿ ಬಿಟ್ಟಿದೆ! ನಿಮ್ಮ 'ಬಿಜಿನೆಸ್' ಚೆನ್ನಾಗಿ ನಡೆಯುತ್ತಿದೆಯೇ?" ಎಂದೆಲ್ಲಾ ಕೇಳಿದರು ಅನಂತಸಿಂಗ್. ಮುರಲಿ ಎಲ್ಲದಕ್ಕೂ ಸಮರ್ಪಕವಾದ ಉತ್ತರವನ್ನೇ ಕೊಟ್ಟ. ಅನಂತಸಿಂಗ್ ಕಾಫಿಯನ್ನು ತರಿಸಿ ಕೊಟ್ಟರು. ಮೊದಲು ಬೇಡವೆಂದರೂ ಕಡೆಗೆ ಅವರ ಬಲವಂತಕ್ಕಾಗಿ ಮುರಲಿ ಕಾಫಿಯನ್ನು ಕುಡಿಯಲೇ ಬೇಕಾಯಿತು. ಹಾಗೂ ಹೀಗೂ ಮಾತಿನಲ್ಲಿಯೇ ಕಾಲ ಕಳೆಯಿತು. ಗಂಟೆ ಹತ್ತಾಯಿತು. ಅನಂತಸಿಂಗ್ ಕೊನೆಗೆ ಆಳನ್ನು ಕೂಗಿ: "ಮ್ಯಾನೇಜರ್ ಫಿಲಿಪ್ ಡಿಸೋಜಾರವರು ಬಂದರೆ ನಾನು ಕರೆದೆ ಎಂದು ಹೇಳು" ಎಂದು ಹೇಳಿಕಳಿಸಿದರು.

"ಡಿಸೋಜಾ ಯಾರು?" ಮುರಲಿ ಕೇಳಿದ.

"ಅವರೇ ನಮ್ಮ ಮ್ಯಾನೇಜರು."

"ಹಾಗಾದರೆ ಮಾಧವರಾಯರು ಈಗ ಮ್ಯಾನೇಜರಲ್ಲವೇ?" ಮುರಲಿ ಕುತೂಹಲದಿಂದ ಕೇಳಿದ.

"ಅವರೇ ಅವರು. ನಿಮಗೆ ಗೊತ್ತಿಲ್ಲವೇ?"

"ಹಾಗೆಂದರೇನು? ನನಗೆ ನಿಮ್ಮ ಮಾತೇ ತಿಳಿಯುವುದಿಲ್ಲ. ನಮ್ಮ ಅಣ್ಣ ಮಾಧವರಾಯರಿಗೆ ಈಗ ಯಾವ ಕೆಲಸವಿದೆ ಹೇಳಿರಿ?" ಮುರಲಿ ಗಾಬರಿಯಾದ.

"ಹಾಗಾದರೆ ಇಲ್ಲಿಯ ವಿಷಯ ಯಾವುದೂ ನಿಮಗೆ ಗೊತ್ತಿಲ್ಲವೇ?" ಆಶ್ಚರ್ಯದಿಂದ ಕೇಳಿದರು ಅನಂತಸಿಂಗ್.

"ಯಾವ ವಿಷಯ? ನಡೆದಿದ್ದಾದರೂ ಏನು?" ಮುರಲಿ ತೀರಾ ಗಾಬರಿಯಾದ.

"ನಿಮ್ಮ ಅಣ್ಣಂದಿರು ಈಗ ವರ್ಷದ ಕೆಳಗೆ ಕ್ರಿಶ್ಚಿಯನ್ ಆಗಿ 'ಕನ್ವರ್ಟೆಡ್' ಆಗಿ ಫಿಲಿಪ್ ಡಿಸೋಜಾ ಆದರು. ಕಾರಣ ನಿಮಗೆ ಗೊತ್ತಿರಬಹುದಲ್ಲವೇ?"

"ಏನು ನನ್ನ ಅಣ್ಣ ಕ್ರಿಶ್ಚಿಯನ್ ಆದರೆ? ನಿಜವಾಗಿ? ನಿಜವಾಗಿ! ಯಾತಕ್ಕೆ ಎಲ್ಲವನ್ನೂ ನನಗೆ ತಿಳಿಸಿರಿ. ಯಾವುದೊಂದು ಸಮಾಚಾರವೂ ನನಗೆ ಗೊತ್ತಿಲ್ಲ. ಬೇಗ ಹೇಳಿರಿ." ಮುರಲಿ ಗಡಬಡಿಸಿದ.

"ನಿಮ್ಮ ಅಣ್ಣ ಲೂಸಿ ಲೀ ಡಿಸೋಜಾ ಎನ್ನುವ ಕನ್ಯೆಯನ್ನು ಮದುವೆಯಾದರು. ಇದಕ್ಕೆ ನಿಮ್ಮ ಅತ್ತಿಗೆಯೇ ಒಪ್ಪಿಗೆ ಕೊಟ್ಟಿದ್ದರಂತೆ. ಈಗ ಆಕೆ ಮನೆಬಿಟ್ಟು ಹೊರಟುಹೋದರೆಂದು ಕೇಳಿದೆ. ನಿಜವೋ ಸುಳ್ಳೋ ಗೊತ್ತಿಲ್ಲ." ಅನಂತಸಿಂಗ್ ನಡೆದುದೆಲ್ಲವನ್ನೂ ವಿವರಿಸಿ ಹೇಳಿದರು. ಮುರಲಿ ತನ್ನ ಕಿವಿಗಳನ್ನೇ ನಂಬಲಾರದವನಾಗಿದ್ದ. ಅವನಿಗೆ ತಲೆ ತಿರುಗಿ, ಕಣ್ಣಿಗೆ ಕತ್ತಲು ಕವಿಯಿತು. ಪ್ರಶ್ನೆಯೇ ತಪ್ಪುವುದರಲ್ಲಿತ್ತು. ಮಾತನಾಡಲು ಅವನಿಗೆ ಶಕ್ತಿ ಇರಲಿಲ್ಲ. ಅನಂತಸಿಂಗ್ ಅವನ ಮನೋವೇದನೆಯನ್ನು ಗ್ರಹಿಸಿದರು. ಅನೇಕ ಬಗೆಯಲ್ಲಿ ಸಮಾಧಾನ ಹೇಳಿದರು. ತಾಯಿ-ತಂದೆಗಳಿಗೆ ತಿಳಿಯದೇ ಮಾಧವ ಇಂತಹ ಕೆಲಸವನ್ನು ಮಾಡಿರಬಹುದೆಂದು ಎಂದೆಂದಿಗೂ ಅವರು ತಿಳಿದಿರಲಿಲ್ಲ. ಮಾಧವನ ನಡತೆಯ ಬಗ್ಗೆ ಅವರಿಗೆ ವಿಷಾದವಾಯಿತು.

ಮುರಲಿ ಬೇಡಿಕೊಳ್ಳುವ ಧ್ವನಿಯಲ್ಲಿ ಹೇಳಿದ: "ದಯವಿಟ್ಟು ಅವರ ಮನೆಗೆ ನನ್ನನ್ನು ತಲುಪಿಸುವಿರಾದರೆ ನಾನು ನಿಮಗೆ ಅತ್ಯಂತ ಕೃತಜ್ಞನಾಗಿರುತ್ತೇನೆ. ದಯವಿಟ್ಟು ಅಲ್ಲಿಗೆ ಕಳಿಸಿಕೊಡಿರಿ. ಮನೆಯ ವಿಳಾಸ ನನಗೆ ಗೊತ್ತಿಲ್ಲ. ಅದಷ್ಟು ಜಾಗ್ರತೆ ಕಳಿಸಿರಿ." ಮುರಲಿ ಎಳೆಯ ಮಗುವಿನಂತೆ ಗೋಗರೆದ. ಅವನ ಪರಿತಾಪವನ್ನು ನೋಡಲಾರದೇ ಅನಂತಸಿಂಗ್ ತಮ್ಮ ಕಾರಿನಲ್ಲಿಯೇ ಅವನನ್ನು ಮಾಧವನ ಮನೆಗೆ ಕಳಿಸಿದರು. ಮಾಧವ ಎಂತಹ ಅನ್ಯಾಯ

ಮಾಡಿದ ಎಂದು ಅವರು ಮನದಲ್ಲಿಯೇ ಪೇಚಾಡಿದರು.

ಆಫೀಸಿಗೆಂದು ಹೊರಟು ನಿಂತ ಮಾಧವ ಬಾಗಿಲಲ್ಲಿ ಕಾರಿನಿಂದ ಬಂದಿಳಿದ ಮುರಲಿಯನ್ನು ನೋಡಿ ಅವಾಕ್ಕಾದ. "ಇದೇನು ಮುರಲೀ, ಹೀಗೆ ಒಮ್ಮೆಲೇ ಯಾವ ಸುದ್ದಿಯನ್ನೂ ಕೊಡದೆ ಬಂದುಬಿಟ್ಟಿಯೆಲ್ಲಾ, ಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೆ?" ಮಾಧವ ಕೇಳಿದ.

"ನಿನ್ನ ಹೊಸ ಸಂಸಾರವನ್ನು ನೋಡಿಕೊಂಡು ಹೋಗಲು ಬಂದೆ" ಮುರಲಿ ಕೊಂಕು ನುಡಿದ.

ಮಾಧವನಿಗೆ ತಲೆಯ ಮೇಲೆ ಹೊಡೆದಂತೆ ಆಯಿತು. ಮುರಲಿಯ ಮುಖವನ್ನು ಕೂಡ ಅವನಿಂದ ನೋಡಲಾಗಲಿಲ್ಲ.

"ಇಂತಹ ಪಾಪಕರವಾದ ಕೆಲಸವನ್ನು ಮಾಡಲು ನಿನಗೆ ಮನಸ್ಸಾದರೂ ಹೇಗೆ ಬಂದಿತು ಅಣ್ಣ? ಅತ್ತಿಗೆಯ ಗತಿ ಏನು? ಅವಳಿಗೆ ನೀನು ದ್ರೋಹ ಮಾಡಬಹುದೇ? ನಮಗೆಲ್ಲಾ ನೀನು ಯಾಕೆ ತಿಳಿಸಲಿಲ್ಲ?" ಮುರಲಿ ಇನ್ನೂ ಹೇಳುತ್ತಲೇ ಹೋಗುತ್ತಿದ್ದ. ಆದರೆ ಮಾಧವ ಅವನನ್ನು ನಡುವೆಯೇ ತಡೆದು ಹೇಳಿದ: "ನಿಮಗೆ ತಿಳಿಸದೆಯೇ ನಾನು ಮದುವೆಯಾದೆ ನಿಜ. ಆದರೆ ಸರೂವಿನ ಒಪ್ಪಿಗೆಯನ್ನು ಪಡೆಯದೇ ಏನೂ ಮಾಡಿಕೊಳ್ಳಲಿಲ್ಲ. ನನ್ನ ಲೂಸಿಯನ್ನು ನೀನು ನೋಡಿಲ್ಲ ಮುರಲೀ, ನೋಡಿದ್ದರೆ ನಾನು ಮಾಡಿದುದು ತಪ್ಪು ಎಂದು ನೀನು ಹೇಳುತ್ತಿರಲಿಲ್ಲ."

"ನೀನು ಮಾಡಿದುದು ಶುದ್ಧ ಅನ್ಯಾಯ ಅಣ್ಣ! ನಾನು ನಿನಗೆ ತಮ್ಮನಾದರೂ ನನಗೆ ಇರುವಷ್ಟು ವಿವೇಕ ನಿನಗೆ ಬರಬಾರದೇ? ಅಮ್ಮ ನಿನಗಾಗಿ ಎಷ್ಟು ರೀತಿಯಲ್ಲಿ ಪೇಚಾಡುತ್ತಾಳೆ, ನಿನ್ನಿಂದ ಕಾಗದ ಸರಿಯಾಗಿ ಬರುತ್ತಿಲ್ಲವೆಂದು ಅಂಥಾ ತಂದೆಯ ಮಗನಾಗಿ, ಅದರಲ್ಲೂ ಹಿರಿಯ ಮಗನಾಗಿ ಹುಟ್ಟಿ ನೀನು ಇಂಥಾ ಕೆಲಸ ಮಾಡಬುಹುದೇ? ತನ್ನ ಪ್ರಾಣಕ್ಕಿಂತ ಸ್ವದೇಶ ಹೆಚ್ಚು, ಸ್ವದೇಶಕ್ಕಿಂತ ಸ್ವಮತ ಹೆಚ್ಚು ಎಂದು ಎಲ್ಲರೂ ತಿಳಿದಿರುವಾಗ, ನೀನು ಅಂತಹ ಅಮೌಲ್ಯವಾದ ಮತವನ್ನೂ ತ್ಯಜಿಸಿದ್ದಲ್ಲದೆ, ನಿರಪರಾಧಿಯಾದ ಅತ್ತಿಗೆ, ಯಾವ ಪಾಪವನ್ನೂ ಅರಿಯದ ವಿಜಯ ಇವರಿಗೆ ದ್ರೋಹಮಾಡಬಹುದೆ? ನೀನು ಏನೇ ಹೇಳು ಅಣ್ಣಾ, ಸ್ವರ್ಗದಲ್ಲಿಯ ಅಪ್ಸರೆಯೇ ತಾನಾಗಿ ಇಳಿದು ಬಂದರೂ, ಕೈಹಿಡಿದ ಹೆಂಡತಿ ಎಂಥವಳೇ ಇರಲಿ ಅವಳನ್ನು ತ್ಯಜಿಸಿ, ಅಪ್ಸರೆಯನ್ನು ಬಯಸಬಾರದು. ಅತ್ತಿಗೆಯ ಒಳ್ಳೆಯತನವನ್ನೇ ನೀನು

ದುರುಪಯೋಗ ಪಡಿಸಿಕೊಂಡಿರುವೆಯಲ್ಲಾ, ಇದರಿಂದ ನಿನಗೆ ಎಂದಿಗೂ ಶಾಂತಿ ದೊರೆಯಲಾರದು." ಮುರಲಿ ಆವೇಶಗೊಂಡು ಅಣ್ಣನನ್ನೂ ಮನಸ್ವೀ ಬೈದ, ಕೂಗಾಡಿದ, ಕಿರುಚಾಡಿದ. ತಲೆಯೇ ಸಿಡಿದು ಬೀಳುವುದೇನೋ ಎನ್ನುವಷ್ಟು ಮಟ್ಟಿಗೆ ಅವನ ತಲೆ ಕಾದು ಹೋಗಿತ್ತು. ಕಣ್ಣುಗಳಲ್ಲಿ ಬೆಂಕಿಯ ಹೊಗೆಯೇ ಆಡುತ್ತಿದೆಯೇನೋ ಅನ್ನುವಂತಿತ್ತು.

ಆ ಕ್ಷಣದಲ್ಲಿ ಮಾಧವನಿಗೂ ತಾನು ಮಾಡಿದುದು ತಪ್ಪು ಎನಿಸಿತು. ಅವನೂ ನಡೆದು ಹೋದ ಕಾರ್ಯಕ್ಕಾಗಿ ದುಃಖಿಸಿದ. ತಮ್ಮನಿಗೆ ಉತ್ತರಿಸಲು ಅವನಿಗೆ ಆಗಲೇ ಇಲ್ಲ. ಆದರೆ ಅವನ ದುಃಖ, ಪಶ್ಚಾತ್ತಾಪವೆಲ್ಲಾ ಎಷ್ಟು ಹೊತ್ತು? ಲೂಸಿಯ ಮುಖ ಎದುರಿಗೆ ಬರುವವರೆಗೆ ಮಾತ್ರ. ಮುರಲಿಯ ಕೂಗಾಟವನ್ನು ಕೇಳಿ ಒಳಗಿದ್ದ ಲೂಸಿ ಹೊರಗೆ ಬಂದಳು. ಸ್ವಭಾವಸಿದ್ಧ ವಾಗಿದ್ದ ಗುಣದ ಮೇರೆಗೆ ಅವಳು ಮುರಲಿಯನ್ನು ನೋಡಿದೊಡನೆಯೇ ಬಳುಕುತ್ತಾ, ಕತ್ತು ಕೊಂಕಿಸುತ್ತಾ, ಓರೆಗಣ್ಣಿನ ನೋಟದಿಂದ ಮುರಲಿ ಯನ್ನು ನೋಡಿದಳು. ಅವಳು ಬಂದುದನ್ನು ನೋಡಿ ಮುರಲಿಯೂ ಅವಳನ್ನೇ ನೋಡಿದ. ಅವಳ ಮುಖದಲ್ಲಿ ಎದ್ದು ಕಾಣುತ್ತಿರುವ ಚಪಲ, ಚಂಚಲತೆ, ಆ ಬಗೆಯ ನೋಟ ಇವುಗಳು ಅವನಿಗೆ ಅಸಹ್ಯವನ್ನೇ ಹುಟ್ಟಿಸಿದುವು. ಅವಳೊಬ್ಬ ಕುಲಟೆ, ಜಾರಿಣಿ ಎಂದುಕೊಂಡ. ಅವಳ ಬಗೆಯಲ್ಲಿಯೇ ತಿರಸ್ಕಾರ ಹೊಂದಿದ ಮುರಲಿಗೆ ಲೂಸಿ ತೀರಾ ಕುರುಪಿಯಾಗಿಯೇ ಅವನ ಕಣ್ಣುಗಳಿಗೆ ಕಾಣಬಂದಳು. ಅವಳ ನಗೆ, ನೋಟ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಬದಲಾಗಿ ಮುರಲಿ ಬೇರೆ ಕಡೆ ಮುಖ ತಿರುಗಿಸಿ ಕೂತ. ಲೂಸಿ ಅದನ್ನು ಗಮನಿಸದಿರಲಿಲ್ಲ.

ಸಾವರಿಸಿಕೊಂಡು ಮಾಧವ ಹೇಳಿದ: "ಇವನು ನನ್ನ ತಮ್ಮ ಮುರಲೀ ಲೂಸೀ." ಎಂದು ಕಾಫಿಯನ್ನು ತರುವಂತೆ ಸಂಜ್ಞೆಯಿಂದಲೇ ತಿಳಿಸಿದ. ಲೂಸಿ ಪುನಃ ಮುರಲಿಯನ್ನೊಮ್ಮೆ ನೋಡಿ ಅಡುಗೆಮನೆಗೆ ತೆರಳಿದಳು.

"ಅತ್ತಿಗೆ ಎಲ್ಲಿಗೆ ಹೋಗಿದ್ದಾರೆ, ಅದಾದರೂ ತಿಳಿದಿದೆಯೇ ಅಣ್ಣಾ?" ಮುರಲಿ ಕೇಳಿದ.

"ತಾನು ಎಲ್ಲಿಗಾದರೂ ಈ ಮನೆ ಬಿಟ್ಟು ಹೋಗುವೆ ಎಂದು ಮಾತ್ರವೇ ತಿಳಿಸಿದಳು ಅಷ್ಟೇ. ಎಲ್ಲಿಗೆ ಹೋಗುವೆ ಎಂದು ತಿಳಿಸಲೇ ಇಲ್ಲ." ಮಾಧವ ಯೋಚಿಸುತ್ತಾ ನುಡಿದ.

"ಹೋದರೆ ಎಲ್ಲಿಗೆ ಹೋಗಿರಬಹುದು ಎಂಬುದಾದರೂ ಊಹಿಸು ವೆಯಾ ?"

"ಅನೇಕ ಬಾರಿ ಹೇಳುತ್ತಿದ್ದಳು, ತನ್ನ ತಾಯಿಯ ಕಡೆಯ ಹಳ್ಳಿಗೆ ಹೋಗಬೇಕೆಂದು. ಅವಳು ಎಲ್ಲಿದ್ದಾಳೆಯೋ ಅದೇ ನನಗೆ ಗೊತ್ತಿಲ್ಲ. ನಾನು ಎಂದು ಕರೆದರೂ ಬರುವೆ ಎಂದು ಹೇಳಿದ್ದರಿಂದ ಅವಳು ಜೀವ ಸಹಿತ ಎಲ್ಲಿಯೋ ಇದ್ದಾಳೆ ಎಂದು ಎನ್ನಿಸುತ್ತದೆ."

ಈ ತೆರನಾದ ಮಾಧವನ ಉತ್ತರಗಳು ಮುರಲಿಯ ಮನಸ್ಸಿನ ಮೇಲೆ ಶೂಲದಿಂದ ತಿವಿದಂತೆ ಗಾಯಮಾಡುತ್ತಿದ್ದವು.

ಈ ಹೊತ್ತಿಗೆ ಲೂಸಿ ಎರಡು ಲೋಟಾ ಕಾಫಿಯನ್ನು ತಂದು ಮೇಜಿನ ಮೇಲಿಟ್ಟಳು.

"ಕೂತುಕೋ ಮುರಲೀ, ಬಂದಾಗಿನಿಂದ ನಿಂತೇ ಇದ್ದೀಯಲ್ಲಾ? ಕಾಫಿ ತೆಗೆದುಕೋ." ಮಾಧವ ಕುರ್ಚಿಯ ಮೇಲೆ ಕೂತು ಹೇಳಿದ. ಮುರಲಿ ನಿಂತೇ ಇದ್ದ. ಯಾವ ಮಾತನ್ನೂ ಆಡಲಿಲ್ಲ. ಮಾಧವ ಇನ್ನೊಮ್ಮೆ ಹೇಳಿದ "ಕಾಫಿ ತೆಗೆದುಕೋ ಮುರಲೀ, ಆರಿ ಹೋಗುತ್ತದೆ" ಎಂದು.

"ಮನೆಯ ಹಿರಿಯ ಮಗನಾಗಿ ಜಾತಿಭ್ರಷ್ಟನಾದುದೂ ಸಾಲದೆ, ನನ್ನನ್ನೂ ನಿನ್ನ ಮನೆಯಲ್ಲಿ ಕಾಫಿ ಕುಡಿದು ಜಾತಿಗೆಡಿಸಿಕೋ ಎಂದು ಹೇಳುವೆಯಾ? ನೀನು ಮಾಡಿದ ಉಪಕಾರ ಇಷ್ಟೇ ಸಾಕು. ಅದೇ ಜನ್ಮ ಜನ್ಮಾಂತರಕ್ಕೂ ಇದೆ. ಹೊಸದಾಗಿ ಏನೂ ಬೇಡ. ಅಮ್ಮಾ ಈ ಸುದ್ದಿಯನ್ನು ಕೇಳಿದರೆ ಏನಾಗುತ್ತದೋ ಏನೋ, ಅದೇ ನನಗೆ ದಿಗಿಲು. ಇನ್ನು ಈ ಮನೆಯ ನೆರಳಿನಲ್ಲಿ ಒಂದು ಕ್ಷಣವೂ ನಿಲ್ಲಲಾರೆ. ನಾನು ಬರುತ್ತೇನೆ ಅಣ್ಣಾ. ಅತ್ತಿಗೆಯು ಪುನಃ ಬಂದಾಗ ನಿನ್ನ ಮನೆಗೆ ಕಾಲಿರಿಸುವೆ." ಎಂದವನೇ ಮುರಲಿ ತಪ್ಪನಾಗಿ ಮೆಟ್ಟಿಲಿಳಿದು ಹೊರಟು ನಡೆದ. ಮಾಧವ ಕೂಗಿದರೂ ತಿರುಗಿ ಕೂಡಾ ನೋಡದೆ ನಡದೇ ಬಿಟ್ಟ. ಗಂಟೆ ಹನ್ನೆರಡರ ಸಮೀಪಕ್ಕೆ ಬಂದಿತ್ತು. ಮಾತಿನ ಭರದಲ್ಲಿ ಮಾಧವ ಆಫೀಸಿನ ವಿಷಯವನ್ನೂ ಮರೆತಿದ್ದ. ತನ್ನ ಅಜಾಗರೂಕತೆಯಿಂದಾಗಿ ಎಷ್ಟು ಕೆಲಸಗೇಡು ಎಂದುಕೊಂಡು, ತನಗೆ ತಲೆ ನೋವೆಂದೂ ಆ ದಿನ ಕೆಲಸಕ್ಕೆ ಬರಲಾರೆನೆಂದೂ ಫೋನಿನಲ್ಲಿಯೇ ಮಾತನಾಡಿ ಅನಂತಸಿಂಗ್‌ರವರಿಗೆ ತಿಳಿಸಿದ. ಮುರಲಿ ಹೇಳಿದ ಪ್ರತಿಯೊಂದು ಮಾತನ್ನೂ ಕೇಳಿದ ಲೂಸಿ ಯಾವ ಮಾತನ್ನೂ ಆಡದೇ ಸುಮ್ಮನೇ ಕುಳಿತಳು. ಕಾಫಿ ಆರಿಹೋಗಿ ತಣ್ಣಗಾಗಿತ್ತು.

ಪ್ರಾಸದ ನೆಪ್ಪನೆ ಹಾಸಿಗೆಯ ಮೇಲೆ ಬಿದ್ದುಕೊಂಡ.

ಸರೂ ಮನೆಗೆ ಬಂದ ಮೂರು ನಾಲ್ಕು ದಿನಗಳು ಮನೆಯನ್ನು ಸರಿಪಡಿಸಿ ಕೊಂಡು ಸಾಮಾನುಗಳನ್ನೆಲ್ಲಾ ಓರಣವಾಗಿ ತೆಗೆದಿಡುವುದರಲ್ಲಿಯೇ ಕಳೆ ಯಿತು. ತಾನು ಇಲ್ಲಿಗೆ ಕಾರಣಾಂತರದಿಂದ ಬಂದಿರುವುದಾಗಿಯೂ, ಅಲ್ಲಿಯ ವಿಳಾಸಕ್ಕೇ ಕಾಗದ ಬರೆಯಬೇಕೆಂದೂ ತಂದೆಗೆ ಬರೆದಳು. ಆ ಊರಿನಲ್ಲಿ 'ಪೋಸ್ಟು-ಆಫೀಸು' ಇರಲೇ ಇಲ್ಲ. ಬರಿಯ ಅಂಚೆಯ ಡಬ್ಬಿ ಒಂದು ಶ್ಯಾನು ಭೋಗರ ಮನೆಯ ಮುಂದಿನ ಕಂಬಕ್ಕೆ ಬಿಗಿದು ಕಟ್ಟಲ್ಪಟ್ಟಿದ್ದಿತು. ಎರಡು ಮೂರು ದಿನಗಳಿಗೊಮ್ಮೆ ರನ್ನರ್ ಬಂದು ಅಲ್ಲಿಯವರಿಗೆ ಬಂದಿದ್ದ ಕಾಗದ ಗಳನ್ನು ಅವರವರಿಗೆ ತಲುಪಿಸಿ, ಅಲ್ಲಿಯ ಕಾಗದಗಳನ್ನು ತೆಗೆದುಕೊಂಡು ಹೋಗುತ್ತಿದ್ದ. ಅಲ್ಲಿಯ ಕಾಗದ ತಂದೆಯವರನ್ನು ಸೇರಬೇಕಾದರೆ ಮೂರು ನಾಲ್ಕು ದಿನಗಳಾದರೂ ಬೇಕು ಎಂದುಕೊಂಡಳು ಸರೂ.

ಬೆಳಗ್ಗೆ ಆರು ಗಂಟೆಗೇ ಎದ್ದು ಸ್ನಾನಕ್ಕೆ ನೀರ ಕಾಯಿಸಿ, ಉಡಿಯುಟ್ಟು ದೇವರ ಪೂಜೆ ಮಾಡುವಳು. ಪೂಜೆ ಅಂದರೆ ಮಾಧವನ ಫೋಟೋಗೆ. ಫೋಟೋಗೆ ಕೆಳಗಡೆಯಲ್ಲಿಯೇ ಒಂದು ಹಲಗೆಯನ್ನು ಹಾಕಿ ಅದರ ಮೇಲೆ ದೀಪಹಚ್ಚಿ, ಹೂವು ಮಂತ್ರಾಕ್ಷತೆಗಳಿಂದ ಪೂಜೆಮಾಡಿ, ನಮಸ್ಕಾರ ಮಾಡು ವಳು. 'ವಿಜಯ ಬೆಳೆದು ದೊಡ್ಡವನಾಗಿ, ಮುಂದಕ್ಕೆ ಬರಲಿ. ನಂತರ ನಾನು ಅವರನ್ನು ಸೇರುವಂತೆ ಮಾಡು ಸ್ವಾಮೀ!' ಎಂದು ಅವಳ ಪ್ರಾರ್ಥನೆ ಅವ್ಯಾಹತವಾಗಿ ನಡದೇ ಇರುತ್ತಿತ್ತು.

ಶಾಂತಿಗ್ರಾಮ ಅರವತ್ತು ಎಪ್ಪತ್ತು ಮನೆಯಿರುವ ಒಂದು ಹಳ್ಳಿ. ನಾಲ್ಕೈದು ಬ್ರಾಹ್ಮಣರ ಮನೆಯನ್ನು ಬಿಟ್ಟರೆ ಮಿಕ್ಕಿದ್ದೆಲ್ಲಾ ಬರಿಯ ರೈತರ, ಒಕ್ಕಲಿಗರ ಮನೆಗಳು. ವಿದ್ಯುಚ್ಛಕ್ತಿ ಇನ್ನೂ ಅವರ ಹಳ್ಳಿಯನ್ನು ತಲುಪಿರಲಿಲ್ಲ. ಊರಿಗೆ ಇದ್ದುದು ಒಂದೇ ಕೆರೆ. ಅದರ ನೀರೇ ಸಮಸ್ತರಿಗೂ, ಬಟ್ಟೆ ಒಗೆಯು ಲಿಕ್ಕೆ, ಕುಡಿಯಲಿಕ್ಕೆ, ಸ್ನಾನಕ್ಕೆ ಪ್ರತಿಯೊಂದು ಕೆಲಸಕ್ಕೂ ಆಗಬೇಕು. ಒಂದೆ ರಡು ಬಾವಿಗಳಿದ್ದರೂ, ಅವನ್ನು ಯಾರೂ ಉಪಯೋಗಿಸುತ್ತಿರಲಿಲ್ಲ.

ವಿದ್ಯಾಭ್ಯಾಸಕ್ಕೆ ಊರಿನಲ್ಲಿ ಯಾವುದೊಂದು ಪಾಠಶಾಲೆಯೂ ಇರಲಿಲ್ಲ. ವಿದ್ಯಾರ್ಥಿಗಳು ಅದಕ್ಕಾಗಿ ರಾಮನಾಥಪುರಕ್ಕೇ ಹೋಗಿ ಬರಬೇಕಾಗಿತ್ತು. ರೋಗಚಿಕಿತ್ಸೆಗೆ ಯಾವುದೊಂದು ಆಸ್ಪತ್ರೆಯೂ ಅಲ್ಲಿ ಇರಲಿಲ್ಲ. ಪ್ರತಿಯೊಂದಕ್ಕೂ ರಾಮನಾಥಪುರಕ್ಕೇ ಹೋಗಬೇಕಾಗಿತ್ತು. ಅಂಗಡಿಯಿಂದ ಸಾಮಾನುಗಳನ್ನು ಅಲ್ಲಿಂದಲೇ ತರಬೇಕಾಗಿತ್ತು. ಊರು ಜಾಗು ಪ್ರದೇಶವಾದ್ದರಿಂದ ಸೊಳ್ಳೆಗಳಿಗೆ ತೌರುಮನೆಯಾಗಿತ್ತು. ಯಾರನ್ನು ನೋಡಿದರೂ ಹೊಟ್ಟೆ ದಪ್ಪನಾಗಿ, ಮುಖವೆಲ್ಲಾ ಕಾಯಿಗಟ್ಟೆ ಹೋಗಿ, ಮುಖದ ಮೇಲೆ ಜೀವದ ಕಳೆಯೇ ಇರಲಿಲ್ಲ. ಛಳಿ ಬಂದಾಗ ಮಲಗುವುದು, ಅದು ಬಿಟ್ಟ ಮೇಲೆ ಕೆಲಸ ಮಾಡುವುದು ಇಷ್ಟೇ ಅವರಿಗೆ ಗೊತ್ತು. ಈ ಪರಿಸ್ಥಿತಿಯನ್ನು ನಿವಾರಿಸಿಕೊಳ್ಳುವ ಉಪಾಯ ಅಲ್ಲಿಯವರಿಗೆ ಹೊಳೆದಿರಲಿಕ್ಕೇ ಇಲ್ಲ. ಅವರು, ಬದುಕುವುದು ಎಂದರೇ ಹೀಗಿರಬೇಕು ಎಂದು ತಿಳಿದುಕೊಂಡಿರಬೇಕು. ಅವರಿಗೆ ರೋಗವೂ ಸಹ, ಜೀವನದ ಸಂಗಾತಿಯಂತೆ ಅವರ ಜೀವನದಲ್ಲಿಯೆ ಬೆರೆತು ಹೋಗಿತ್ತು;ರೋಗಗಳ ಜೊತೆಗೇ ಅವರು'ಸಹಜೀವನ'ನಡೆಸಿದಂತಿತ್ತು.

ಸರೂ ಸೂಕ್ಷ್ಮವಾಗಿ ಅಲ್ಲಿಯ ವಾತಾವರಣವನ್ನೆಲ್ಲಾ ನಿರೀಕ್ಷಿಸಿದಳು. ಜನಗಳೂ ಕೂಡಾ, ಸುಮ್ಮನೆ ಕ್ರಿಮಿಕೀಟಗಳಂತೆ, ಹುಟ್ಟಿ ಸಾಯುತ್ತಾರಲ್ಲಾ, ಜೀವನದ ಸವಿ ಏನೆಂಬುವನ್ನೇ ಕಾಣದೆ, ಅದನ್ನು ತಿಳಿಯಲೂ ಕೂಡಾ ಶಕ್ತಿ ಇಲ್ಲದೆ, ಹಾಗೆಯೇ ಪಶುಪ್ರಾಣಿಗಳಂತೆ ಜೀವನ ನಡೆಸುತ್ತಾರಲ್ಲಾ, ಇದಕ್ಕೆ ಏನಾದರೂ ಒಂದು ಶ್ರಮ ಕೈಕೊಳ್ಳಬೇಕು ಎಂದುಕೊಂಡು ಸರೂ ಯೋಚಿಸ ಹತ್ತಿದಳು.

ಸರೂವಿನ ಮನೆ ಸಾಕಷ್ಟು ದೊಡ್ಡದಾಗಿಯೇ ಇತ್ತು. ಪಡಸಾಲೆ ಬಹಳ ದೊಡ್ಡದಿದ್ದು ಅದರಲ್ಲಿ ನಾಲ್ವತ್ತು ಐವತ್ತು ಜನರು ಧಾರಾಳವಾಗಿ ಕೂಡಬಹುದಾಗಿತ್ತು. ಹೇಗೂ ವಿಜಯನ ವಿದ್ಯಾಭ್ಯಾಸ ಸರೂವಿನ ಕೈಲೇ ಸಾಗುತ್ತಿತ್ತು. ಅವನೂ ಬಹಳ ಚುರುಕು. ಹೇಳಿ ಕೊಟ್ಟಿದ್ದನ್ನು ಕೆಲವೇ ದಿನಗಳಲ್ಲಿ ಕಲಿತು ಬಿಡುತ್ತಿದ್ದ. ಕೇವಲ ಮೂರುವರೆ ವರ್ಷದ ವಿಜಯ ಆಗಲೇ ಕನ್ನಡ ಅಕ್ಷರಗಳನ್ನೆಲ್ಲಾ ಕಲಿತಿದ್ದ. ಅಕ್ಷರ ತಿದ್ದುವುದು ಅಂದರೆ ಅವನಿಗೆ ಬಹಳ ಖುಷಿ. ತಾನೇ ಸ್ಲೇಟು ಬಳಪ ಹಿಡಿದು 'ಅಮ್ಮಾ ಅಕ್ಷರ ಬರೆದುಕೊಡು' ಎಂದು ತಾಯಿಯನ್ನು ಕೇಳುತ್ತಿದ್ದ. ಕಲಿಯಬೇಕೆನ್ನುವ ಆಸಕ್ತಿ ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವನಲ್ಲಿ ಉಂಟಾದುದಕ್ಕೆ ಸರೂ ಹಿಗ್ಗಿದ್ದಳು. ಈ ಹಿಗ್ಗಿನ ಹಿಂದೆಯೇ ದುಃಖವೂ

ಅವಳಿಗೆ ಬರುತ್ತಿತ್ತು: ಇಂತಹ ಮಗುವನ್ನು ಅವರು ಇಟ್ಟುಕೊಂಡು ಕಾಪಾಡ ಲಿಲ್ಲವಲ್ಲಾ, ಅಂತಹ ಮನೆಯಲ್ಲಿ ಹುಟ್ಟಿಯೂ ಈ ಸ್ಥಿತಿಗೆ ಬರಬೇಕಾಯಿತಲ್ಲಾ ಎಂದು. ಅವಳ ಒಳಜೀವ ಯಾವಾಗಲೂ ಮಾಧವನಿಗಾಗಿ ಕಾತರಿಸುತ್ತಿತ್ತು.

ಪ್ರತಿದಿನವೂ ಸಾಯಂಕಾಲ ಕೆಲಸ ಮುಗಿಸಿ, ವಿಜಯನೊಡನೆ ಸುಬ್ಬ ರಾಯರ ಮನೆಗೆ ಹೋಗಿ, ಕತ್ತಲಾಗುವವರೆಗೆ ಕೂತಿದ್ದು ನಂತರ ಮನೆಗೆ ಬರುವುದು ಸರೂಳ ದಿನಚರಿಯಲ್ಲೊಂದಾಗಿತ್ತು. ಒಂದು ದಿನ ಸರೂ ಸುಬ್ಬ ರಾಯರಿಗೆ ಹೇಳಿ ಹಲವು ಸ್ಲೇಟುಗಳನ್ನೂ, ಮೂರು-ನಾಲ್ಕು ಬಳಪದ ಪೆಟ್ಟಿಗೆ ಗಳನ್ನೂ ತರಿಸಿದಳು. ಅವರು ಯಾಕೆ ಏನು ಎಂದು ಕೇಳಿದ್ದಕ್ಕೆ ಅವಳು ಯಾವ ಉತ್ತರವನ್ನೂ ಕೊಡಲಿಲ್ಲ.

ಸರೂ, ತಾನೇ ಒಲೆಯ ಮುಂದೆ ಕೂತು ಬರ್ಫಿಯನ್ನು ತಯಾರಿಸಿದಳು. ಎರಡು ಮೂರು ತೆಂಗಿನಕಾಯಿಗಳಿಗೆ ಮೂವತ್ತು ನಾಲ್ವತ್ತು ಬರ್ಫಿಗಳಾಗಿತ್ತು. ಎಲ್ಲವನ್ನೂ ಬಿಲ್ಲೆ ಮಾಡಿ ಒಂದು ಡಬ್ಬಾದಲ್ಲಿ ಹಾಕಿಟ್ಟಳು. ಮಾರನೇ ದಿನ ಬೆಳಿಗ್ಗೆ ಬೇಗನೇ ಎದ್ದು ಮನೆಯ ಅಲ್ಪ ಸ್ವಲ್ಪ ಕೆಲಸ ಮುಗಿಸಿ ಬೀದಿಯ ಬಾಗಿಲಿಗೆ ಬಂದು ನಿಂತಳು. ರಸ್ತೆಯಲ್ಲಿ ಮೂರು-ನಾಲ್ಕು ಹುಡುಗರು ಇನ್ನೂ ಚಿಕ್ಕ ವಯಸ್ಸಿನವರು ಗೋಲಿಯಾಟವಾಡುತ್ತಿದ್ದರು. ಸರೂ ಗಟ್ಟಿಯಾಗಿ ಕೂಗಿ ಕರೆದಳು: "ಏ ಮಕ್ಕಳಿರಾ ಇಲ್ಲಿ ಬನ್ನಿ" ಎಂದು. ಆಡುತ್ತಿದ್ದ ಹುಡುಗರು, ಅದನ್ನು ಅಲ್ಲಿಗೇ ಬಿಟ್ಟು ಎಲ್ಲರೂ ಅವಳನ್ನು ನೋಡಿದರು. ಮುಂದಕ್ಕೆ ಒಬ್ಬ ನಾದರೂ ಬರಲಿಲ್ಲ. ಸರೂ ಮನೆಗೆ ಬಂದ ಎಂಟು-ಹತ್ತು ದಿನಗಳಿಂದ ಅವರು ಅವಳನ್ನು ನೋಡುತ್ತಿದ್ದಾರೆ, ಆದರೆ ಒಂದು ದಿನವೂ ಅವಳ ಕೈಲಿ ಮಾತ ನಾಡಿಯೇ ಇರಲಿಲ್ಲ. ಒಬ್ಬರಿಗೊಬ್ಬರು ಪರಸ್ಪರ ಮುಖ ನೋಡಿಕೊಂಡು ಅಲ್ಲಿಯೇ ನಿಂತರು. ಸರೂ ಅವರ ಮನಸ್ಸನ್ನು ತಿಳಿದು "ಇಲ್ಲಿ ಬಂದರೆ ನಿಮಗೆ ತಮಾಷೆ ತೋರಿಸುತ್ತೇನೆ.ಯಾರು ಮೊದಲು ಬಂದರೆ ಅವರಿಗೇ ಹೆಚ್ಚು ತಿಂಡಿ. ಬೇಗ ಬನ್ನಿ ಮತ್ತೇ." ಸರೂ ಹೇಳಿದಳು. ತಿಂಡಿಯ ಆಸೆಗಾಗಿ ಹುಡುಗರೆಲ್ಲಾ ನಾನು ಮುಂದು, ತಾನು ಮುಂದೆಂದು ಓಡಿ ಬಂದರು. ಹಾಗೆ ಬಂದವರು ನಾಲ್ಕುಜನ ಹುಡುಗರು ಒಬ್ಬ ಹುಡುಗಿ. ಅವರೆಲ್ಲರನ್ನೂ ಕರೆತಂದು ಪಡಸಾಲೆ ಯಲ್ಲಿ ಸಾಲಾಗಿ ಕೂರಿಸಿದಳು. ಒಂದು ತಟ್ಟೆಯಲ್ಲಿ ಬರ್ಫಿಯ ಬಿಲ್ಲೆಗಳನ್ನೂ ತಂದು ಸಮೀಪದಲ್ಲಿಯೇ ಇಟ್ಟಳು. ಎಲ್ಲರಿಗೂ ಒಂದೊಂದು ಸ್ಲೇಟು, ಬಳಪ ಕೊಟ್ಟು, "ನಾನು ಅಕ್ಷರ ಬರೆದುಕೊಟ್ಟರೆ ನೀವು ಅದನ್ನು ತಿದ್ದುವಿರಾ?"

ಎಂದು ಆ ಹುಡುಗರನ್ನು ಕೇಳಿದಳು. ತಿದ್ದುವುದು ಎಂದರೇ ಏನು ಎಂದು ಗೊತ್ತಿಲ್ಲದ ಆ ಮಕ್ಕಳು ಸುಮ್ಮನೇ ಕೂತರು. ಸರೂ ಪ್ರತಿಯೊಬ್ಬರನ್ನೂ, ಕೈಹಿಡಿದು ತಾನೇ ಅಕ್ಷರವನ್ನು ತಿದ್ದಿಸಿದಳು. ಹೀಗೆ ಅನೇಕ ಬಾರಿ ತೋರಿಸಿ ಕೊಟ್ಟ ಮೇಲೆ, ಅವರಾಗಿ ಅವರೇ ತಿದ್ದುವುದನ್ನು ಕಲಿತರು. ಅವರಿಗೆ ಇದೊಂದು ಬಗೆಯ ತಮಾಷೆಯೆನಿಸಿತು. ಒಬ್ಬರನ್ನು ನೋಡಿಕೊಂಡು ಒಬ್ಬರು ತಿದ್ದುತ್ತಿದ್ದರು. ವಿಜಯ ಅವರು ಬರೆಯುವುದನ್ನೇ ನೋಡುತ್ತಾ ಕೂತಿದ್ದ. ಹಾಗೆಯೇ ಅರ್ಧ ಗಂಟೆಗಳಕಾಲ ಅವರು ಉತ್ಸಾಹದಿಂದ ತಿದ್ದುತ್ತಲೇ ಕೂತಿದ್ದರು. "ಇವತ್ತಿಗೆ ಇಷ್ಟು ಸಾಕು, ಇನ್ನು ನೀವು ಮನೆಗೆ ಹೋಗಿ, ನಾಳೆ ನಿಮ್ಮ ಜೊತೆಯ ಹುಡುಗರನ್ನೆಲ್ಲಾ ಕರೆದುಕೊಂಡು ಬರಬೇಕು. ಹೀಗೆ ದಿನಾ ಒಂದು ಅಕ್ಷರ ಕಲಿತರೆ ನಿಮಗೆ ದಿನಾ ನಾನು ತಿಂಡಿಯನ್ನು ಕೊಡುತ್ತೇನೆ. ದಿನಾ ಬರುತ್ತೀರಾ?" ಸರೂ ಒಂದೊಂದು ಬರ್ಫಿಯ ಬಿಲ್ಲೆಯನ್ನು ಎಲ್ಲರಿಗೂ ಕೊಟ್ಟಳು. 'ದಿನಾ ಬರುತ್ತೇವೆ' ಎಂದು ಹೇಳಿ ತಿಂಡಿಯನ್ನು ಬಾಯಿಗೆ ಹಾಕಿಕೊಂಡು ಎಲ್ಲರೂ ಓಡಿಹೋದರು. ಅವರಿಗೆ ಆ ಮಿಠಾಯಿ ಅಮೃತವೇ ಆಯಿತು. ಸರೂ ತನ್ನ ಪ್ರಯತ್ನ ಸಫಲವಾದುದನ್ನು ಕಂಡು ಸಮಾಧಾನ ಪಟ್ಟುಕೊಂಡಳು.

ಮಾರನೆಯ ದಿನ, ಸರೂ ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚಾಗಿಯೇ ಹುಡುಗರು ಬಂದಿದ್ದರು. ಸರೂವಿನ ಕೈಯ ತಿಂಡಿಯ ಪ್ರಭಾವ ಅಷ್ಟರ ಮಟ್ಟಿಗಾಗಿತ್ತು. ಅಲ್ಲಿ ಬಂದಿದ್ದವರು ಮೂವತ್ತು ಜನರು, ಸ್ಲೇಟುಗಳು ಕೇವಲ ಐದಾರು. ಸರೂ ಪಂಕ್ತಿಯ ಮೇಲೆ ಎಲ್ಲರನ್ನೂ ಕೂಡಿಸಿದಳು. ಆರು ಹುಡುಗರಿಗೆ ಒಂದು ಸಾಲು. ಹೀಗೆ ಐದು-ಆರು ಸಾಲುಗಳಲ್ಲಿ ಹುಡುಗರು ಕೂತರು. ವಿಜಯನಿಗೆ ಅಷ್ಟು ಜನರನ್ನೂ ನೋಡುವುದೇ ಆನಂದ. ಪ್ರತಿಯೊಬ್ಬರ ಬಳಿಗೂ ಹೋಗಿ ಬರುತ್ತಿದ್ದನು. ಪ್ರತಿಯೊಬ್ಬರೂ ಕಾಲುಗಂಟೆಯ ಕಾಲ ತಿದ್ದಬೇಕು. ನಂತರ ಇನ್ನೊಂದು ಗುಂಪಿನವರಿಗೆ ಸ್ಲೇಟು ಬಳಪ ಕೊಡಬೇಕು. ಹೀಗೆಯೇ ಎಲ್ಲರಿಗೂ ಅಕ್ಷರ ತಿದ್ದಿಸಲಾರಂಭಿಸಿದಳು. ಹೀಗೆ ಅರ್ಧ ಗಂಟೆ ಕಳೆದಿರಬಹುದು. ಹೊರಗೆ 'ಏ ಮಾದಾ! ತಿಮ್ಮಾ! ಮಲ್ಲೀ!' ಎಂದು ಅಕ್ಕಪಕ್ಕದ ಮನೆಯವರು ಕೂಗಾಡುತ್ತಿದ್ದುದು ಕೇಳಿ ಬಂತು. ತಮ್ಮ ತಮ್ಮ ಮನೆಯವರು ಕೂಗಿದ್ದನ್ನು ಕೇಳಿ ಹುಡುಗರು ಎದ್ದು ಹೋಗಲಾರಂಭಿಸಿದರು. ಸರೂ ಹೇಳಿದ ಮಾತು ಅವರ ಕಿವಿಗೆ ಬೀಳಲೇ ಇಲ್ಲ. ಸರೂ ತಾನೇ ಬಾಗಿಲಿಗೆ ಹೋಗಿ ಹೋಗುತ್ತಿ

ರುವ ಹುಡುಗರನ್ನು ತಡೆದು, 'ಏಕೆ ಹೀಗೆ ಓಡುತ್ತಿರುವಿರಿ. ಕಲಿಯುವದಿಲ್ಲವೆ?" ಎಂದು ಕೇಳಿದಳು. ಬೀದಿಯಲ್ಲಿದ್ದ ಕೆಲವು ಹೆಂಗಸರು ಮನೆಯ ಒಳಗೆ ಬಂದರು. ಎಲ್ಲಾ ಹುಡುಗರೂ ಸಾಲಾಗಿ ಕೂತು ಸ್ಲೇಟಿನ ಮೇಲೆ ಬರೆಯುತ್ತಿದ್ದಾರೆ. ಸರೂ ಒಳಗೆ ಬಂದು ಹೇಳಿದಳು: "ಮಕ್ಕಳು ಕಲಿತುಕೊಳ್ಳಲಿ ಬಿಡರಿ ಅವರನ್ನು ಏಕೆ ಕೂಗುವಿರಿ ?" ಎಂದು.

"ಹೊಲ ಉಳುವ ನಾವು ಅಕ್ಷರ ಕಲಿತು ಏನು ಮಾಡಬೇಕು ? ಅದೆಲ್ಲಾ ನಮಗೇಕೆ? ಏನಿದ್ದರೂ ಅದು ನಿಮ್ಮಂತವರಿಗೇ ಸರೀ ಕಾಣವ್ವಾ. ಬನ್ನಿರೋ ಮಕ್ಕಗಳಿರಾ, ಏನು ಗೀಚುತ್ತಾ ಕುಂತಿದ್ದೀರಿ, ದನ ಹೊಡಕೊಂಡು ಹೋಗ ಬೇಡವಾ ! ಲೋ ತಿಮ್ಮಾ, ಏಳೋ ಬುದ್ದೀರ ಮನೆಗೆ ಹೋಗಬೇಡವೇ ?" ಎಂದು ಒಬ್ಬಳು ಅವರಲ್ಲಿಯ ಹುಡುಗನನ್ನು ರಟ್ಟೆ ಹಿಡಿದು ಎಳೆದಳು. ತಾಯಿಯ ಭಯಕ್ಕಾಗಿ ಅವನು ಎದ್ದು ನಿಂತ. ಸರೂ ಅವಳ ವರ್ತನೆಯನ್ನು ನೋಡಿ ಖೇದಗೊಂಡಳು. "ಓದು ಅನ್ನೋದು ಐಶ್ವರ್ಯ ಇದ್ದ ಹಾಗೆ. ಅದು ಕಲಿತರೆ ಎಲ್ಲಿದ್ದರೂ ಮೂರುಕಾಸು ಸಂಪಾದಿಸಬಹುದು. ಅದನ್ನು ಕಲಿಯದೇ ಹೋದರೆ ಆಗುವ ಅನಾನುಕೂಲಗಳೂ, ಕೆಡಕುಗಳೂ ಎಷ್ಟರ ಮಟ್ಟಿಗೆ ಆಗುತ್ತವೆ." ಎಂಬುದನ್ನೆಲ್ಲಾ ಅನೇಕ-ಬಗೆಯಲ್ಲಿ, ಅವರ ಬುದ್ಧಿಗೆ ತಿಳಿಯುವಂತೆ ಸರೂ ವಿವರಿಸಿ ಹೇಳಿದಳು. ಮಕ್ಕಳು ಖಂಡಿತವಾಗಿಯೂ ವಿದ್ಯೆ ಕಲಿಯಬೇಕು, ವಿದ್ಯೆಯನ್ನು ಕಲಿಯದ ಹೊರತು ಬಡತನ ನೀಗುವದಿಲ್ಲ. ಎಂದೆಲ್ಲಾ ವಿವರಿಸಿ ಹೇಳಿದಳು. ಆದರೆ ಅದಾವುದೂ ಅವರಿಗೆ ಪಥ್ಯವಾಗಲಿಲ್ಲ. ಕೊನೆಗೆ ಸರೂ ಹೇಳಿದಳು: "ಹೋಗಲೀ ನಿಮ್ಮ ಮನೆಯ ಮಕ್ಕಳು ನಿಮಗೆ ಸಹಾಯ ಮಾಡಬಾರದು ಎಂದು ನನಗೆ ಇಷ್ಟವಿಲ್ಲ. ಬೆಳಿಗ್ಗೆ ಹತ್ತು ಗಂಟೆಯ ತನಕ ಮಕ್ಕಳನ್ನು ಇಲ್ಲಿಗೆ ಕಳಿಸುತ್ತೀರೆಂದರೆ ನನಗೆ ಬಹಳ ಸಂತೋಷ. ಮಕ್ಕಳು ವಿದ್ಯೆ ಕಲಿಯಲಿ. ಮುಂದಕ್ಕೆ ಬರಲಿ ಎಂದು ನಾನು ಆಶಿಸುತ್ತೇನೆ. ಇದಕ್ಕಾಗಿ ನಾನು ದುಡಿಯುತ್ತೇನೆ, ನೀವು ಯಾವ ದುಡ್ಡನ್ನೂ ನನಗೆ ಕೊಡಬೇಡಿರಿ. ಮಕ್ಕಳನ್ನು ವಿದ್ಯೆ ಕಲಿಯಲು ಇಲ್ಲಿಗೆ ಕಳಿಸಿರಿ. ಅದೇ ನನಗೆ ಬಹಳ ಉಪಕಾರವಾದಂತಾಗುತ್ತೆ." ಎಂದು. ಅವಳ ಉಪದೇಶ ಅವರಿಗೆ ಹಿಡಿಸಿತೋ ಇಲ್ಲವೋ, ಅಂತೂ ಅವರೆಲ್ಲಾ ಸುಮ್ಮನೇ ಹೊರಟು ಹೋದರು.

ಸರೂ ಎಲ್ಲರಿಗೂ ಮಿಠಾಯಿ ಹಂಚಿ ಹೇಳಿದಳು "ನಾಳೆಯಿಂದ ಬೆಳಿಗೆ ಬೇಗನೇ ಶಾಲೆಗೆ ಬರಬೇಕು. ಬೇಗ ಅಕ್ಷರ ಕಲಿತು, ನಿಮ್ಮ ಕೆಲಸಕ್ಕೆ ನೀವು

ಬರಿಯ ತಿಂಡಿಯ ಆಸೆಗಾಗಿ ಓಡಿ ಬರುತ್ತಿದ್ದ ಹುಡುಗರು, ಈಗ ನಿಜವಾಗಿಯೂ ಅಕ್ಷರ ಕಲಿಯುವ ಆಸೆಯಿಂದ ಬರುತ್ತಿದ್ದರು. ಅವಳ ಪ್ರೀತಿಯ ಮಾತುಗಳಿಗೆ ಅವರು ಮನಸೋತಿದ್ದರು. ಸರೂ ಶಾಲೆಗಾಗಿ ಐದಾರು ರೂಪಾಯಿಗಳನ್ನು ಕೊಟ್ಟು ಒಂದು ಕಂಚಿನ ಗಂಟೆಯನ್ನು ತರಿಸಿದ್ದಳು. ಬೆಳಗ್ಗೆ ತನ್ನ ಸ್ನಾನ, ಕಾಫಿ, ಎಲ್ಲಾ ಮುಗಿಸಿ ಗಂಟೆಯನ್ನು ಬಾರಿಸುವಳು. ಗಂಟೆಯ ಶಬ್ದವನ್ನು ಕೇಳಿದ ಕೂಡಲೇ ಹುಡುಗರೆಲ್ಲರೂ ಓಡಿಬರುವರು. ಅವರೆಲ್ಲಾ ಕುಳಿತುಕೊಳ್ಳಲು ದೊಡ್ಡದಾದ ಎರಡು-ಮೂರು ಈಚಲು-ಚಾಪೆಯನ್ನು ತರಿಸಿ ಪಡಸಾಲೆಯಲ್ಲಿ ಹಾಸಿದ್ದಳು. ಹುಡುಗರೆಲ್ಲಾ ಕ್ರಮವಾಗಿ ತಮ್ಮ ಲೈನಿನಲ್ಲಿ ಸಾಲಾಗಿ ಕೂಡುತ್ತಿದ್ದರು. ಅವರಿಗಾಗಿ ಹಾಜರಿಯ ಪುಸ್ತಕವನ್ನೂ ಇಟ್ಟಿದ್ದಳು. ತಮ್ಮ ತಮ್ಮ ಹೆಸರು ಕೂಗಲ್ಪಟ್ಟಾಗ 'ಪ್ರಜೆಂಟ್' ಹೇಳುವುದೇ ಅವರಿಗೆ ಒಂದು ಬಗೆಯ ತಮಾಷೆಯಾಗಿತ್ತು.

ಶಾಲೆಯು ನಡವೇ ಇತ್ತು. ಸರೂ ಒಬ್ಬೊಬ್ಬರಿಗಾಗಿ ಕೈಹಿಡಿದು ತಿದ್ದಿಸುತ್ತಿದ್ದಳು. ಇದ್ದಕ್ಕಿದ್ದಂತೆ ನಾಲ್ಕು-ಐದು ಜನ ಗಂಡಸರು ಒಳಬಂದರು. ಅವರು ಏಕೆ ಬಂದಿದ್ದಾರೆಂಬುದು ಸರೂಗೆ ತಿಳಿಯದೇ ಹೋಗಲಿಲ್ಲ. ಹುಡುಗರೆಲ್ಲಾ ಟಕಮುಕನೆ ಬಂದವರನ್ನು ನೋಡುತ್ತಾ ಕೂತರು.

ಬಂದಿದ್ದವರಲ್ಲಿ ಒಬ್ಬ ಹೇಳಿದ "ಇದೇನು ನೀವು ಮಾಡುವ ಕೆಲಸ ? ಹುಡುಗರನ್ನು ಸುಮ್ಮನೇ ನಿಮ್ಮ ಮುಂದೆ ಕೂಡಿಸಿಕೊಂಡು ಕೂತಿದ್ದೀರಿ? ಅವರೆಲ್ಲಾ ಈಗ ನಮ್ಮ ಮಾತು ಕೇಳುವುದೇ ಇಲ್ಲಾ. ಯಾವಾಗಲೂ ಸ್ಲೇಟು ಬಳಪ ಹಿಡಿದು ಕೂಡುತ್ತಾರೆ. ಕೆಲಸವೇ ಮಾಡುವುದಿಲ್ಲ. ನೀವು ಅವರಿಗೆ ಹೀಗೆ ಕೆಟ್ಟಬುದ್ಧಿ ಕಲಿಸುವುದು ಒಳ್ಳೆಯದಲ್ಲ."

"ನಾವು ಅಕ್ಷರ ಕಲಿತು ಮಾಡೋದೇನು ಉದ್ಧಾರ? ಈ ವಿದ್ಯಾ ಎಲ್ಲಾ ನಮಗೆ ಯಾಕೆ? ಮಕ್ಕಳನ್ನು ಮನೆಗೆ ಕಳಿಸಿರಿ. ಇಲ್ಲದಿದ್ದರೆ ಏನು ಮಾಡುತ್ತೇವೆ ನೋಡಿ" ಇನ್ನೊಬ್ಬ ಸ್ವಲ್ಪ ಬೆದರಿಸಿ ನುಡಿದ

. "ಅವರನ್ನೇನು ಕೇಳೋದು, ನಮ್ಮ ಹುಡುಗರನ್ನ ನಾವು ಕರೆದುಕೊಂಡು ಹೋಗೋದಕ್ಕೆ? ಏಳಿರೋ, ಹೋಗೋಣಾ. ಲೋ ತಿಮ್ಮಾ, ಮಲ್ಲೀ, ರಂಗಾ ಏಳಿರೋ ಮನೇ ಕಡೇಗೆ. ಇಲ್ಲೇನು ತಿಕ್ಕುತ್ತಾ ಕೂತಿದ್ದೀರಿ, ನಡೀರಿ ಹೊಲಕ್ಕೆ ಹೋಗುವಾ. ಮತ್ತೊಬ್ಬ, ಒಬ್ಬಿಬ್ಬರು ಹುಡುಗರ ಕೈ ಹಿಡಿದೆಳೆದ. ಸರೂ ಅವರು ಮಾತನಾಡಿಮುಗಿಸುವವರೆಗೂ ಸುಮ್ಮನಿದ್ದು ಹೇಳಿದಳು: "ನೀವೇಕೆ

ಹೇಗೆ ಕೋಪಗೊಳ್ಳುವಿರಿ? ಈಗ ಆಗಿದ್ದಾದರೂ ಏನು? ನೋಡಿ ಬೆಳಗ್ಗೆ ಬರಿಯ ಎರಡು ಗಂಟೆಯ ಕಾಲ ಮಕ್ಕಳನ್ನು ಇಲ್ಲಿ ಕಳಿಸಿ, ಅವರು ಕಲಿಯಲಿ. ನಿಮ್ಮ ಕೆಲಸ ಮಾಡಬಾರದೆಂದು ನಾನು ಹೇಳುವುದಿಲ್ಲ. ಬೆಳಿಗ್ಗೆ ಏಳರಿಂದ ಒಂಭತ್ತರವರೆಗೆ ಕಲಿಯಲಿ; ನಂತರ ನಿಮಗೆ ಏನು ಸಹಾಯ ಮಾಡುತ್ತಾರೆಯೋ, ಮಾಡುತ್ತಾರೆ. ಅದರಿಂದ ಎಷ್ಟು ಉಪಯೋಗವಿದೆ ನಿಮಗೆ ಗೊತ್ತೇ? ವಿದ್ಯೆ ಬಾರದಿದ್ದರೆ ಎಷ್ಟು ಒಗೆಯಲ್ಲಿ ತೊಂದರೆ, ಕೆಡಕು ಉಂಟಾಗುತ್ತವೆ ನಿಮಗೆ ತಿಳಿದಿದೆಯೇ? ಎಂದು ಸರೂ ಅನೇಕ ಬಗೆಯಲ್ಲಿ ಒಂದು ಗಂಟೆಯ ಕಾಲ ಅವರಿಗೆ ತಿಳಿಯ ಹೇಳಿದಳು. ಅವಳ ಮನಃಪೂರ್ವಕವಾದ ಬೇಡಿಕೆ ಅವರ ಮೇಲೆ ಪರಿಣಾಮವನ್ನುಂಟು ಮಾಡದಿರಲಿಲ್ಲ. "ನೋಡೋಣಾ, ಅದೇನು ಕಲಿಸುತ್ತೀರೋ ಕಲಿಸಿರಿ, ಆದರೆ ಹುಡುಗರನ್ನು ಹತ್ತು ಗಂಟೆಯೊಳಗಾಗಿ ಕಳಿಸಬೇಕು, ಅಂದರೆ ಸರಿ" ಎಂದುಕೊಂಡು ಬಂದಿದ್ದವರೆಲ್ಲಾ ಹೊರಟು ಹೋದರು. ಸರೂ ತನ್ನ ಈ ವಿಜಯಕ್ಕೆ ತಾನೇ ಹರ್ಷಗೊಂಡಳು.

ಮುರಲಿಯ ಬಾಯಿಂದಲೇ ಮಾಧವನ ಪೂರ್ವೋತ್ತರವನ್ನು ತಿಳಿದ ಶ್ರೀಕಂಠಯ್ಯನವರಿಗೆ ಪ್ರಜ್ಞೆಯೇ ತಪ್ಪುವಂತೆ ಆಯಿತು. ಕುರ್ಚಿಯ ಮೇಲೆ ಕುಳಿತಿದ್ದ ಅವರು ಹಾಗೆಯೇ ಕೆಳಕ್ಕುರುಳಿದರು. ಮುರಲಿ ಗಾಬರಿಯಿಂದ ಕೂಗಿಕೊಂಡ. ಒಳಗಿದ್ದ ಜಾನಕೀಬಾಯಿ ಅವನು ಕೂಗಿಕೊಂಡದ್ದನ್ನು ಕೇಳಿ ಓಡಿಯೇ ಬಂದರು. ಶ್ರೀಕಂಠಯ್ಯನವರಿಗೆ ಎಚ್ಚರ ತಪ್ಪಿತ್ತು. ಜಾನಕೀಬಾಯಿಯವರ ಶೈತ್ಯೋಪಚಾರದಿಂದ ಎಚ್ಚರಗೊಂಡ ಅವರು ಮೇಲಕ್ಕೆ ಏಳಲು ಪ್ರಯತ್ನಿಸಿದಾಗ ಅವರಿಗೆ ಏಳಲು ಆಗಲೇ ಇಲ್ಲ. ಬಲಭಾಗವೆಲ್ಲಾ ಪೂರ್ತಿಯಾಗಿ ಕಬ್ಬಿಣದಂತೆ ಭಾರವಾಗಿದ್ದಿತು. ಆ ಭಾಗದ ಒಂದು ಕೈಬೆರಳನ್ನೂ ಅಲುಗಿಸಲಾಗಲಿಲ್ಲ. ಮುರಲಿ ತಾಯಿಯ ಸಹಾಯದಿಂದ ಅವರನ್ನು ಎತ್ತಿ ಮಂಚದ ಮೇಲೆ ಮಲಗಿಸಿ, ಡಾಕ್ಟರನ್ನು ಕರೆತರಲು ಧಾವಿಸಿದ. ಡಾಕ್ಟರೂ ಬಂದರು. ಎಲ್ಲಾ ಪರೀಕ್ಷೆ ಮಾಡಿ ನೋಡಿ "ಇವರಿಗೆ ಪೆರಾಲಿಸಿಸ್ ಆಗಿದೆ. ಹೃದಯ ಬಹಳ ದುರ್ಬಲವಾಗಿದೆ. ಮನಸ್ಸಿಗೆ ಏನೂ ತಾಪತ್ರಯವಾಗದಂತೆ ನೋಡಿ

ಕೊಳ್ಳಬೇಕು. ಯಾವ ದುಃಖದ, ಅಥವಾ ಸಂತೋಷದ ಸಮಾಚಾರವನ್ನು ಒಮ್ಮೆಯೇ ಹೇಳಬೇಡಿರಿ. ಅವರು ಉದ್ವಿಗ್ನರಾಗದಂತೆ ಜಾಗ್ರತೆಯಿಂದ ನೋಡಿ ಕೊಳ್ಳಬೇಕು. ನಾನೇನೋ ಔಷಧಿ ಕೊಡುತ್ತೇನೆ. ಆದರೆ ಅದಕ್ಕಿಂತ ಮುಖ್ಯ ವಾದುದು ನೀವು ಅವರನ್ನು ನೋಡಿಕೊಳ್ಳುವ ಕ್ರಮ." ಎಂದು ಹೇಳಿ, ಔಷಧಿ ಗಾಗಿ ಸಂಜೆ ದವಾಖಾನೆಗೆ ಬರಬೇಕೆಂದು ಹೇಳಿ ಹೊರಟುಹೋದರು. ಜಾನಕೀ ಬಾಯಿ ಯಾವ ಮಾತನ್ನೂ ಆಡದೇ ಮಂಕಾಗಿ ಕೂತಿದ್ದರು. ತಂದೆಗೆ ಈ ಸ್ಥಿತಿ ಯನ್ನುಂಟುಮಾಡಿದ ಮಾಧವನನ್ನು ಮನದಾರೇ ಶಪಿಸಿ ಮುರಲಿ, ತಂದೆಯ ದಾರುಣವಾದ ಪರಿಸ್ಥಿತಿಯನ್ನು ನೋಡಿ ತಲೆಯ ಮೇಲೆ ಕೈಹೊತ್ತು ಕುಳಿತ. ಶ್ರೀಕಂಠಯ್ಯನವರ ನಾಲಿಗೆಯ ನರಗಳೂ ಕೂಡ ಎಳೆದು ಬಿಟ್ಟಿದ್ದವು. ಬಾಯಲ್ಲಿ ಸರಿಯಾಗಿ ಮಾತೇ ಹೊರಡುತ್ತಿರಲಿಲ್ಲ. ಅಸ್ಪಷ್ಟವಾಗಿ, ತೊದಲಿ ತೊದಲಿ ಮಾತುಗಳನ್ನು ಕಷ್ಟಪಟ್ಟು ಹೇಳುತ್ತಿದ್ದರು. ಅವರ ಮಾತನ್ನು ತಿಳಿದು ಕೊಳ್ಳುವುದು ಪ್ರಯಾಸವೇ ಆಗಿತ್ತು. ಯಾವಾಗ ನೋಡಿದರೂ 'ಸ.... ........ರೂ....!........ವಿಜಯ........!' ಎನ್ನುತ್ತಲೇ ಇದ್ದರು. ಊಟ ಕಾಫಿ ಪ್ರತಿಯೊಂದೂ ಹಾಸಿಗೆಯ ಮೇಲೆಯೇ ಆಗಬೇಕಿತ್ತು. ಅವರ ಮಲ ವಿಸರ್ಜನೆ ಪ್ರತಿಯೊಂದೂ ಮಲಗಿದ ಜಾಗದಲ್ಲಿಯೇ ನಡೆಯಬೇಕಿತ್ತು. ಹಿರಿಯ ಮಗನ ನಡತೆ, ಪತಿಯ ಕಾಹಿಲೆ ಇವುಗಳ ವೇದನೆಯಿಂದ ಜಾನಕೀ ಬಾಯಿ ಕೃಶಿಸಿಹೋದರು. ಡಾಕ್ಟರು ಔಷಧಿಯನ್ನು ಕೊಡುತ್ತಲೇ ಇದ್ದರು. ಜಾನಕೀಬಾಯಿಯವರ ದರ್ಪವೆಲ್ಲಾ ಅಡಗಿ ಹೋಗಿತ್ತು. ಅವರ ಹಿಂದಿನ ಮಾತು, ನಗು ಇವುಗಳನ್ನು ಕೇಳಿ ಎಷ್ಟೋ ದಿನಗಳಂತಾಗಿದ್ದುವು. ಅವರ ಮುಖ ಕೆಲವೇ ದಿನಗಳಲ್ಲಿ ಕಂದಿ ಹೋಗಿತ್ತು. ಸದಾ ಅವರ ಕಣ್ಣುಗಳು ಹನಿ ಯಾಡುತ್ತಿದ್ದುವು. ಹಗಲಿರುಳೆನ್ನದೆ ಪತಿಯ ಬಳಿ ಕೂತುಕೊಂಡು ಅವರ ಶುಶ್ರೂಷೆ ಮಾಡುವುದೇ ಅವರ ಕೆಲಸವಾಗಿತ್ತು. ಈ ಕಡೆ ಪತಿಯ ಸೇವೆ, ಆ ಕಡೆ ಅಡುಗೆ, ಕೆಲಸ, ಎರಡೂ ಮಾಡುವುದೆಂದರೆ ಅವರ ಕೈಲಿ ಸಾಗದ ಮಾತೇ ಆಗಿತ್ತು. ಮುರಲಿ ತಾಯಿಯ ಕಷ್ಟವನ್ನೂ ಅರಿತು ಜಾನಕೀಬಾಯಿ ಯವರನ್ನೊಪ್ಪಿಸಿ, ಅಡುಗೆಯವನನ್ನು ಗೊತ್ತುಮಾಡಿದ. ಅದರಿಂದ ಜಾನಕೀ ಬಾಯಿ ಸಂಪೂರ್ಣವಾಗಿ ತಮ್ಮ ಕಾಲವನ್ನೆಲ್ಲಾ ಪತಿಯ ಸೇವೆಯಲ್ಲಿಯೇ ಕಳೆ ಯಲು ಅನುಕೂಲವಾಯಿತು. ಮುರಲಿಯ ಸಂಪಾದನೆ ದಿನೇ ದಿನೇ ಹೆಚ್ಚು ತ್ತಲೇ ಇದ್ದಿತಾದ್ದರಿಂದ, ಹಣದ ಕೊರತೆ ಏನೂ ಇರಲಿಲ್ಲ. ತಂದೆ ಹುಷಾ

ರಾದರೆ ಸಾಕು, ಹಣ ಎಷ್ಟು ಖರ್ಚಾದರೂ ಪರವಾಗಿಲ್ಲ ಎನ್ನುತ್ತಿದ್ದ ಮುರಲಿ. ಡಾಕ್ಟರರ ಅವಿಶ್ರಾಂತ ಶ್ರಮದಿಂದ ಶ್ರೀಕಂಠಯ್ಯ ದಿನಕ್ರಮೇಣ ಗುಣಮುಖ ರಾದರು. ಸ್ವಲ್ಪ ಸ್ವಲ್ಪವಾಗಿ ಮಾತನಾಡಲೂ ಆಗುತ್ತಿತ್ತು.

"ಸರೂ ಎಲ್ಲಿದ್ದಾಳೆ? ಅವಳನ್ನು ಇಲ್ಲಿಗೆ ಕರೆಸು" ಎಂದರು ಶ್ರೀಕಂಠಯ್ಯ.

"ನಾನೂ ಪ್ರಯತ್ನ ಮಾಡುವೆ, ನೀನೇನೂ ಯೋಚಿಸಬೇಡಾ ಅಣ್ಣಾ!" ಮುರಲಿ ಮಾತು ಕೊಟ್ಟ. ತಂದೆಗೆ ವಚನವನ್ನೇನೋ ಕೊಟ್ಟ ನಿಜ. ಆದರೆ ಅತ್ತಿಗೆಯನ್ನು ಹುಡುಕುವುದಾದರೂ ಎಲ್ಲಿ? ರಾಮನಾಥಪುರದ ಸುತ್ತುಮುತ್ತ ಲಿನ ಹಳ್ಳಿಯ ಶ್ಯಾನುಭೋಗರು ಪಟೇಲ ಇಂತಹ ಮುಂದಾಳುಗಳಿಗೆ ಕಾಗದ ವನ್ನು ಬರೆದು ಸರೂವಿನ ವಿಷಯವನ್ನು ತಿಳಿಸಿದ. ಆ ಊರಿನಲ್ಲಿ ಅವರು ಇದ್ದರೆ ಕೂಡಲೇ ತನಗೆ ತಿಳಿಸಬೇಕೆಂದೂ ಎಲ್ಲರಿಗೂ ರಿಪ್ಲೈ ಕಾರ್ಡುಗಳನ್ನೇ ಬರೆದ. ಮುರಲಿ ತನ್ನ ಕೈಲಾದುದನ್ನೆಲ್ಲಾ ಮಾಡಿದ, ಸರೂವಿನ ಶೋಧನಕ್ಕೆ. ಯಾವುದೂ ಪರಿಣಾಮಕಾರಿಯಾಗಲು ಸ್ವಲ್ಪ ಕಾಲ ಬೇಕಷ್ಟೇ? ಶ್ರೀಕಂಠಯ್ಯ ಗುಣಮುಖರಾಗುತ್ತಾ ಬಂದರೂ, ಯಾವ ಗಳಿಗೆಯಲ್ಲಿ ಏನಾಗುತ್ತದೆಯೋ ಎಂಬ ಭಯ ಅವರನ್ನು ಆವರಿಸಿದ್ದಿತು.

ಅವನು ಕಾಗದ ಬರೆದಿದ್ದರಲ್ಲಿ ಕೆಲವಕ್ಕೆ ಉತ್ತರಗಳೂ ಬಂದಿದ್ದುವು. ಆದರೆ ಯಾವುದೊಂದರಲ್ಲಿಯೂ ಸರೂವಿನ ಸುದ್ದಿ ಸಮಾಚಾರವೇ ಇರಲಿಲ್ಲ. ಮುರಲಿ ವ್ಯಗ್ರನಾದ. ಸರೂವನ್ನು ಹುಡುಕುವ ಬಗೆ ಹೇಗೆ ಎಂಬುದೇ ಅವನಿಗೆ ಬಿಡಿಸಲಾರದ ಸಮಸ್ಯೆಯಂತೆ ಕಾಣುತ್ತಿತ್ತು. ಆದರೆ ಕಡೆಗೊಂದು ದಿನ ಕಾಗದ ಒಂದು ಬಂದಿತ್ತು: "ಸರಸಮ್ಮ ಎನ್ನುವರೊಬ್ಬರು ನಾಲ್ಕೈದು ವರ್ಷದ ಮಗು ವಿಜಯೇಂದ್ರನೊಂದಿಗೆ ಇಲ್ಲಿ ಇದ್ದಾರೆ. ಹೆಚ್ಚಿನ ವಿಷಯ ನಮಗೆ ತಿಳಿದಿಲ್ಲ" ಎಂದು. ಕಾಗದವನ್ನು ಸುಬ್ಬರಾಯರೇ ಸರೂವಿನ ಅನು ಮತಿಯನ್ನು ಪಡೆದು ಬರೆದಿದ್ದರು.

ಮುರಲಿ ಗೆಲುವಿನಿಂದ ಸಂತೋಷಗೊಂಡ. ಶ್ರೀಕಂಠಯ್ಯನವರಿಗೂ ಕಾಗದ ತೋರಿಸಿದ. ಸರಿ, ಮಾರನೇ ದಿನವೇ ಹೊರಡುವುದು ಎಂದಾಯಿತು. "ಏನೇ ಆಗಲೀ ಸರೂವನ್ನು ಒಂದು ಸಲ ಇಲ್ಲಿಗೆ ಕರೆದುಕೊಂಡು ಬಾ ಮುರಲೀ." ಎಂದರು ಶ್ರೀಕಂಠಯ್ಯ.

ಮುರಲಿ ಶಾಂತಿಗ್ರಾಮಕ್ಕೆ ಮಾರನೆಯ ದಿನವೇ ಹೊರಟು ಹೋದ. ಮನೆಯಲ್ಲಿ ಎಲ್ಲರೂ ಕುತೂಹಲದಿಂದ ಸರೂವಿನ ಪುನರಾಗಮನವನ್ನೇ

ನಿರೀಕ್ಷಿಸುತ್ತಿದ್ದರು.

ಸರೂ ಅಲ್ಲಿಗೆ ಬಂದು ನೆಲಸಿ ನಾಲ್ಕು ತಿಂಗಳ ಮೇಲೆಯೇ ಆಗಿದ್ದಿತು. ಅಷ್ಟು ಅಲ್ಪ ಕಾಲದಲ್ಲಿಯೇ, ಸರೂ ಆ ಊರಿನಲ್ಲಿ ಅನೇಕ ಬದಲಾವಣೆ ಗಳನ್ನುಂಟುಮಾಡಿದ್ದಳು.

ಈಗ ಸರೂವಿನ ಶಾಲೆ ಯಾವುದೊಂದು ಅಡಚಣೆಯೂ ಇಲ್ಲದೆ ಸಾಗು ತ್ತಿತ್ತು. ಪ್ರತಿಯೊಬ್ಬ ಹುಡುಗನೂ ತಪ್ಪದೆಯೇ ಶಾಲೆಗೆ ಬರುತ್ತಿದ್ದ. ಸರೂ ಈಗ ಹುಡುಗರಿಗಾಗಿ ತಿಂಡಿಯನ್ನೇನೂ ಮಾಡಬೇಕಾಗಿರಲಿಲ್ಲ. ಹುಡುಗರು ತಾವಾಗಿಯೇ ಕಲಿಯುವ ಆಸೆಯಿಂದ ಬರುತ್ತಿದ್ದರು. ಸರೂವಿನ ಆಸ್ಥೆಯ ಹೇಳಿಕೊಡುವ ರೀತಿಯಿಂದ ಹುಡುಗರು ಒಳ್ಳೇ ಹುರುಪಿನಿಂದ ಕಲಿಯುತ್ತಿ ದ್ದರು. ಹದಿನಾಲ್ಕು, ಹದಿನೈದು ವಯಸ್ಸಿನ ಹುಡುಗರೇ ಬಹಳ ಜನರಿದ್ದರು. ಇತರರಿಗಿಂತ ಅವರು ಬೇಗನೆ ಕಲಿಯುತ್ತಿದ್ದರು. ಹುಡುಗರೇನೋ ಶಾಲೆಗೆ ಬರುತ್ತಿದ್ದರು, ಕಲಿಯುತ್ತಿದ್ದರು; ಆದರೆ ಚೊಕ್ಕಟತನ, ಸ್ವಚ್ಛತನ ಎಂಬುದು ಮಾತ್ರ ಅವರ ತಿಳಿವಿಗೇ ನಿಲುಕದ ಬದುಕಾಗಿತ್ತು. ಅವರು ಸ್ನಾನವನ್ನು ಮಾಡಿ ಎಷ್ಟು ದಿನಗಳಾಗಿರುತ್ತಿದ್ದವೋ ಏನೋ! ಬಟ್ಟೆಗಳನ್ನು ನೀರು ಕಾಣಿಸಿ ಎಷ್ಟು ತಿಂಗಳಾಗಿತ್ತೋ! ತಲೆಯನ್ನು ಕೆದರಿಕೊಂಡು, ಮೂಗಿನಲ್ಲಿ ನೀರು ಸುರಿಸುತ್ತಾ ಕೂಡುತ್ತಿದ್ದರು. ಕೆಲವು ದಿನ ಸರೂ ಇದನ್ನು ನೋಡಿಯೂ ಸುಮ್ಮನಿದ್ದಳು, ಅವರು ಸರಿಯಾಗಿ ಶಾಲೆಗೆ ಬರುವುದೊಂದಾಗಲೀ ನಂತರ ಎಲ್ಲವನ್ನೂ ಸರಿ ಪಡಿಸೋಣಾ ಎಂದು.

ಒಂದು ದಿನ ಸರೂ ಹಾಜರಿಯನ್ನು ಹಾಕುತ್ತಿದ್ದಳು. ಅವಳ ವಿಶ್ವಾಸಕ್ಕೆ ಪಾತ್ರನಾದ ಕೃಷ್ಣ ಬಂದಿರಲೇ ಇಲ್ಲ. "ಕೃಷ್ಣ ಯಾಕೆ ಬರಲಿಲ್ಲ ಈವತ್ತು?" ಸರೂ ಹುಡುಗರನ್ನು ಕೇಳಿದಳು.

"ಅವನದು ಷರಟು ಹರಿದುಹೋಗಿದೆಯಂತೆ, ಹಾಗೆಯೇ ಬಂದರೆ ನೀವು ಬಯ್ಯುತ್ತೀರಿ ಅಂತ ಬರಲಿಲ್ಲ." ಅವರಲ್ಲಿಯ ದೊಡ್ಡ ಹುಡುಗನೊಬ್ಬ ಉತ್ತರಿಸಿದ.

"ಹಾಗಾದರೆ ರಾಮು, ನೀನು ಇವರನ್ನೆಲ್ಲಾ ನೋಡಿಕೊಂಡಿರು, ನಾನು ಅವನನ್ನು ಕರೆತರುತ್ತೇನೆ" ಎಂದು ಸರೂ ಹೊರಟು ಹೋದಳು.

ಸರೂ ಕೃಷ್ಣನ ಮನೆಗೆ ಹೋದಾಗ, ತೊಟ್ಟಿಯ ಮೂಲೆಯೊಂದರಲ್ಲಿ ಮುಖ ಮುಚ್ಚಿಕೊಂಡು ಅಳುತ್ತಾ ಕೃಷ್ಣ ಕೂತಿದ್ದ. "ಏ ಕೃಷ್ಣಾ, ಇಲ್ಲಿ ಬಾ. ಶಾಲೆಗೆ ಯಾಕೆ ಬರಲಿಲ್ಲ?" ಸರೂ ಬಾಗಿಲಲ್ಲಿಯೇ ನಿಂತು ಕೂಗಿದಳು.

ಹಸುವಿನ ಕೊಟ್ಟಿಗೆಯನ್ನು ಗುಡಿಸುತ್ತಾ ಇದ್ದ ಅವನ ತಾಯಿ ಅಲ್ಲಿಂದಲೇ ಹೇಳಿದಳು "ಅವನಿಗೆ ಬಟ್ಟೆ ಜೇರೆ ಹೊಸದು ಹೊಲಿಸಿಬೇಕಂತೆ, ಅವನ ಅಂಗಿ ಹರಿದು ಹೋಗಿದೆ ಎಂದು ಶಾಲೆಗೆ ಹೋಗುವುದಿಲ್ಲವೆಂದು ಹಟ ಮಾಡಿ ಕೂತಿದ್ದಾನೆ ನೋಡಿಯಮ್ಮಾ."

"ಷರಟು ಹರಿದು ಹೋದರೆ ನಾನು ಹೊಲಿದು ಕೊಡುತ್ತೇನೆ ಬಾ ಮಗೂ. ಶಾಲೆಗೆ ಬಾರದೇ ಇರಬೇಡ." ಎಂದು ಅವನ ಕೈಹಿಡಿದುಕೊಂಡು ಶಾಲೆಗೆ ಕರೆ ತಂದಳು. ಕೂಡಲೇ ಅವನ ಷರಟನ್ನು ಬಿಚ್ಚಿಸಿ, ತಾನೇ ಕೂತುಕೊಂಡು ಹರಿದುಹೋದುದನ್ನು ಹೊಲಿದು ಕೊಟ್ಟಳು. ಅದರಿಂದ ಅವನಿಗೆ ಉಂಟಾದ ಸಂತೋಷ ಅಷ್ಟಿಷ್ಟಲ್ಲ.

ಹಿರಿಯ ಹುಡುಗರಲ್ಲಿ ಒಬ್ಬನಾದ ರಾಮು ಅವರಿಗೆಲ್ಲಾ 'ಮಾನೀಟರ್' ಆದ. ಅವನೇ ಅವರಲ್ಲಿ ಕುಶಾಗ್ರ ಬುದ್ಧಿಯುಳ್ಳವ. ಹೇಳಿದುದನ್ನು ಕೂಡಲೇ ಕಲಿತುಕೊಳ್ಳುತ್ತಿದ್ದ. ಚಿಕ್ಕ ಪುಟ್ಟ ಹುಡುಗರಿಗೆ ಅಕ್ಷರ ತಿದ್ದಿಸುವುದು, ಗಲಾಟೆ ಮಾಡದಂತೆ ನೋಡಿಕೊಳ್ಳುವುದು ಅವನ ಕೆಲಸ.

ಸರೂ ತನ್ನ ಕಾರ್ಯದಲ್ಲಿ ಸಾಕಷ್ಟು ಸಫಲಳಾದ್ದನ್ನು ನೋಡಿ ಸುಬ್ಬ ರಾಯರು ಹಿಗ್ಗಿಹೋದರು. ಸರೂ ಪ್ರತಿ ದಿನಾ ಅವರ ಮನೆಗೆ ಹೋಗಿ ಬರು ವುದನ್ನು ತಪ್ಪಿಸುತ್ತಲಿರಲಿಲ್ಲ. ವಿಜಯನಿಗೆ ನಾಲ್ಕು ವರ್ಷವಾಗುತ್ತಾ ಬಂದಿತು. ಅವನೀಗ ಮೊದಲನೆಯ ಕನ್ನಡ ಪುಸ್ತಕವನ್ನೆಲ್ಲಾ ಓದಿ, ಬರೆದು, ಮಾಡುತ್ತಿದ್ದ. ಹೇಳಿಕೊಟ್ಟಿದ್ದನ್ನು ಒಂದು ದಿನದೊಳಗಾಗಿಯೇ ಕಲಿತು ಬಿಡುತ್ತಿದ್ದ. ಅವನ ತೀಕ್ಷ್ಣ ಬುದ್ಧಿಯನ್ನು ನೋಡಿ ಸರೂ ಹಿಗ್ಗುತ್ತಿದ್ದಳು.

ಹುಡುಗರು ತೊಡುತ್ತಿದ್ದ ಕೊಳಕು, ಹೊಲಸಾದ ಬಟ್ಟೆಗಳನ್ನು ನೋಡ ಲಾರದೇ ಸರೂ ಒಂದು ಹೊಸ ಏರ್ಪಾಡು ಮಾಡಿದಳು. ತನ್ನ ಬಳಿಯಲ್ಲಿಯ ಹಣವೆಲ್ಲಾ ಸುಬ್ಬರಾಯರ ಕೈಲಿಯೇ ಇದ್ದಿತು. ಮನೆಗೆ ಬೇಕಾದ ಅಕ್ಕಿ, ಸಾಮಾನು ಮೊದಲುಗೊಂಡು ಪ್ರತಿಯೊಂದನ್ನು ಅವರು ತಂದು ಕೊಡುತ್ತಿದ್ದರು.

ಸರೂವಿನ ಹಣವೂ ಖರ್ಚಾಗುತ್ತಾ ಬಂದಿತ್ತು. ಆದರೂ ಅವಳು ಇನ್ನೂ ಒಂದು ಹೆಜ್ಜೆ ಮುಂದುವರಿದಳು. ಸುಬ್ಬರಾಯರು ಮೈಸೂರಿಗೆ ಹೋದಾಗ ಅವರನ್ನು ಬಲವಂತವಾಗಿ ಒಪ್ಪಿಸಿ, ಎರಡು ಥಾನು ನೀಲಿಯ ಚಡ್ಡಿಬಟ್ಟೆ, ಎರಡು ಥಾನು ಬಿಳಿಯ ಬಟ್ಟೆ ಷರಟಿಗಾಗಿ ತರಿಸಿದಳು. ಬಟ್ಟೆಯೂ ಸಾಧಾರಣ ದರ್ಜೆಯದೇ ಆದಾಗ್ಯೂ ಸುಮಾರು ನೂರಮೂವತ್ತು ರೂಪಾಯಿಗಳೇ ಖರ್ಚಾದುವು.

"ನಿನಗೆಲ್ಲೋ ಹುಚ್ಚು ಹಿಡಿದಿದೆ ಮಗೂ, ಎಲ್ಲರಿಗೂ ತಿಂಡಿ-ತಿನಸು, ಬಟ್ಟೆ-ಬರೆ ಎಂದು ಕೈಲಿರುವ ನಾಲ್ಕು ಕಾಸೂ ಕೂಡಾ ಕಳೆದುಕೊಳ್ಳುತ್ತೀಯಲ್ಲಾ, ಇದಕ್ಕೆ ಏನೆನ್ನಬೇಕು? ನಿನಗೆ ಯಾಕೆ ಈ ರೀತಿ ಬುದ್ಧಿ ಹುಟ್ಟಿತೋ ದೇವರೇ ಬಲ್ಲ" ಎಂದು ವ್ಯಸನಗೊಳ್ಳುತ್ತಿದ್ದರು ಸುಬ್ಬರಾಯರು.

"ಆ ನನ್ನ ಹಣದಿಂದ, ಈ ಮಕ್ಕಳು ಪಡುವ ಸಂತೋಷವಾದರೂ ಎಷ್ಟು ಗೊತ್ತಿದೆಯೇ ಮಾಮ. ಅವರ ಆ ಒಂದು ಆನಂದಕ್ಕಾಗಿ ನನ್ನ ಸರ್ವಸ್ವವೂ ಹೋದರೂ ಪರವಾಗಿಲ್ಲ ಮಾಮ. ಮನುಷ್ಯನಿಗೆ ಎಷ್ಟು ಮಾಡಿದರೂ ತೃಪ್ತಿ ಎಂಬುದೇ ಇರುವುದಿಲ್ಲ. ಆದರೆ ಆ ನಿಷ್ಕಳಂಕ, ನಿರ್ಮಲವಾದ ಮಕ್ಕಳು, ಒಂದು ಚೂರು ಮಿಠಾಯಿಗಾಗಿ ಎಷ್ಟು ಆನಂದಪಡುತ್ತವೆ ಗೊತ್ತೇ? ನಾವು ಬಯಸಿದರೂ ಆ ಅವರ ಸಂತೋಷ ನೋಡಲಾರೆವು. ಅಂತಹ ಅಮೂಲ್ಯವಾದುದನ್ನು ನೋಡಲು ನನ್ನದೆನ್ನುವ ಎಲ್ಲಾ ವಸ್ತುಗಳು ಹೋದರೂ ನನಗೆ ಕೆಡಕು ಎನಿಸುವುದಿಲ್ಲ. ಆ ಮಕ್ಕಳು ಹರ್ಷಚಿತ್ತರಾಗಿದ್ದರೆ ಅದೇ ನನಗೆ ಒಂದು ದೊಡ್ಡ ನಿಧಿ" ಸರೂವಿನ ಈ ಬಗೆಯ ಮನೋಭಾವನೆಗೆ ಅವರು ಏನೆಂದು ತಾವೇ ಉತ್ತರ ಹೇಳುತ್ತಾರೆ?

ಅಂದಿನಿಂದ ಸರೂವಿಗೆ ಶಾಲೆಯ, ಮನೆಯ ಕೆಲಸ ಮುಗಿದೊಡನೆಯೇ ಬಟ್ಟೆ ಹೊಲೆಯುವುದೇ ಕೆಲಸವಾಯಿತು. ಅವರವರ ಅಳತೆಗೆ ತಕ್ಕಂತೆ ಬಟ್ಟೆ ಕತ್ತರಿಸಿ ಹೊಲಿಯುತ್ತಿದ್ದಳು. ಅವಳು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಕಲಿತಿದ್ದ ಹೊಲಿಗೆಯ ಕೆಲಸ ಬಹಳ ಉಪಯೋಗಕ್ಕೇ ಬಂದುವು. ಯಾವಾಗಲೂ ಹೊಲಿಯುವುದೇ ಅವಳ ಕೆಲಸವಾಯ್ತು. ಅವರಿಂದ ಸುಬ್ಬರಾಯರ ಮನೆಗೆ ದಿನಾ ಹೋಗುವುದನ್ನು ಕೂಡಾ ನಿಲ್ಲಿಸಿ ಬಿಟ್ಟಿದ್ದಳು. ಪ್ರತಿ ದಿನಾ ಎರಡು ಷರಟು, ಎರಡು ಚಡ್ಡಿ ಹೊಲಿದು ಸಿದ್ಧವಾಗುತ್ತಿದ್ದುವು.

ಅವಳು ತಮ್ಮ ಮನೆಯ ಕಡೆ ಬರುವುದನ್ನು ನಿಲ್ಲಿಸಿದಾಗಿನಿಂದ, ಸುಬ್ಬ

ರಾಯರೇ ತಮಗೆ ಬಿಡುವಾದಾಗ ಅವಳ ಮನೆಗೆ ಬರುತ್ತಿದ್ದರು. ಬರುವಾಗ ಬರಿಯ ಕೈಲಿ ಎಂದೂ ಬರುತ್ತಿರಲಿಲ್ಲ. ಮನೆಯಲ್ಲಿ ಮಾಡಿದ ತಿಂಡಿಯನು ವಿಜಯನಿಗೆ ತಂದೇ ತರುತ್ತಿದ್ದರು. ಕಡೆಗೆ ತಿಂಡಿ ಏನೂ ಇಲ್ಲ ಅಂದರೆ, ಮನೆ ಯಲ್ಲಿಯ ಒಂದು ಹಿಡಿ ಅವಲಕ್ಕಿ, ಕಾಯಿಚೂರು, ಬೆಲ್ಲ ಇವುಗಳನ್ನು ಗಂಟು ಕಟ್ಟಿಕೊಂಡು ತರುತ್ತಿದ್ದರು. ಸರೂ ತನ್ನ ಮನಸದ ಆಸೆ-ಆಕಾಂಕ್ಷೆಗಳೆಲ್ಲಾ ಅವರಿಗೆ ಹೇಳುತ್ತಿದ್ದಳು. ಅವಳ ಒಂಟಿ ಜೀವನದಲ್ಲಿ, ಅವರು ಒಂದು ವಿಶಿಷ್ಟ ವಾದ ಸ್ಥಾನವನ್ನು ಗಳಿಸಿದ್ದರು.

ಸರೂ ಮೇಲೆ ನೋಡುವವರಿಗೆ ಯಾವ ಯೋಚನೆಯೂ ಇಲ್ಲದೆ, ಸುಖ ವಾಗಿ ಇರುವವಳಂತೆ ಕಾಣಿಸಿದರೂ, ಅವಳ ಹೃದಯದ ಬಗೆ ಅಸಾಧ್ಯವಾಗಿ ದ್ದಿತು. ಮದುವೆಯಾದಂದಿನಿಂದ, ಅವಳು ಮಾಧವನನ್ನು ಅಗಲಿರುದೇ ಇಲ್ಲ. ಲೂಸಿಯ ಮದುವೆಯಾದ ನಂತರ, ಅವನು ಅವಳನ್ನು ಮಾತನಾಡಿಸದೇ ಇದ್ದರೂ, ಅವನು ತನ್ನ ಕಣ್ಣೆದುರಿಗಾದರೂ ಇರುತ್ತಿದ್ದ. ಅವನ ಮಂದಹಾಸ ಯುಕ್ತವಾದ ಮುಖವನ್ನು ನೋಡಿದರೇ ತನಗೆ ಆನಂದವಾಗುತ್ತಿತ್ತು. ಅವನ ಬೇಕು-ಬೇಡಗಳನ್ನು ನೋಡಿ ಮಾಡಬಹುದಾಗಿತ್ತು. ತನ್ನ ಪಾಲಿನ ದೇವರು ಅವಳ ಎದುರಿಗೇ ಇರುತ್ತಿದ್ದ. ಅವನ ಪಾದಸೇವೆಯನ್ನು ಮಾಡುವ ಭಾಗ್ಯ ಅವಳಿಗೆ ಇರುತ್ತಿತ್ತು. ಅವನನ್ನು ಅಗಲಿ, ಅವನಿಂದ ಬಹಳ ದೂರದೂರದಲ್ಲಿ ಇರುವುದು ಅವಳಿಗೆ ಕಷ್ಟವೇ ಆಯಿತು. ಆದರೆ ವಿಜಯನನ್ನು ಯೋಗ್ಯನನ್ನಾಗಿ ಬೆಳೆಸಲು, ಅಲ್ಲಿ ಎಂದೆಂದಿಗೂ ಸಾಧ್ಯವೇ ಇರಲಿಲ್ಲ, ತಂದೆಯ ಮತ್ತು ಲೂಸಿಯು ನಡತೆ ಮಗುವಿನ ಮೇಲೆ ಯಾವ ಕೆಟ್ಟ ಪರಿಣಾಮವನ್ನುಂಟುಮಾಡುತ್ತ ದೆಯೋ ಎಂಬ ಭಯದಿಂದ. ಏನಾದರೂ ಆಗಲೀ, ನನ್ನ ಮಗು, ನನ್ನ ಕಂದ, ವಿಜಯನನ್ನು ತಂದೆಯ ದಾರಿಗೇ ಬಿಡಬಾರದು ಕೆಡುವವರು ಅವರೊಬ್ಬರು ಕೆಟ್ಟರು ಎಂದರೆ ಏನೂ ಅರಿಯದ ಹಸುಳೆ, ಅವರ ದುರ್ನಡತೆಗೆ ಯಾಕೆ ಬಲಿ ಯಾಗಬೇಕು? ಎನ್ನುವ ನಿರ್ಧಾರದಿಂದ ಏನೇ ಆಗಲೀ ಅವರನ್ನು ಅಗಲದೇ ಅಲ್ಲಿ ಬಾಳುವುದು ಅವಳಿಗೆ ಸಾಧ್ಯವೇ ಇರಲಿಲ್ಲ.

ಬೆಳಗ್ಗೆ ಆರರಿಂದ ಹಿಡಿದು ರಾತ್ರಿ ಮಲಗುವ ವರೆಗೂ ಸರೂ ಉಸಿರಾಡಿ ಸಲೂ ಪುರಸೊತ್ತಿಲ್ಲದೆ ಕೆಲಸ ಮಾಡುತ್ತಿದ್ದಳು. ಅತ್ತೆಯ ಮನೆಯಲ್ಲಿಯೂ ಹೀಗೆಯೇ ಮೈಮುರಿಯುವಂತೆ ದುಡಿಯುತ್ತಿದ್ದಳು, ಇಲ್ಲೂ ದುಡಿಯುತ್ತಾಳೆ. ಆದರೆ ಎರಡರಲ್ಲಿಯೂ ಎಷ್ಟು ವ್ಯತ್ಯಾಸ? ಅತ್ತೆಯ ಮನೆ ಅವಳ ಪಾಲಿಗೆ ಸೆರೆ

ಮನೆಯಾಗಿತ್ತು; ಈಗ ಇದು ಸ್ವಾತಂತ್ರ್ಯದ ಸ್ವರ್ಗವೇ ಆಗಿದೆ. ಯಾವುದೊಂದು ಯೋಚನೆಯೂ ಮಾಡಲು ಅವಳಿಗೆ ಬಿಡುವು ಸಿಗುತ್ತಲೇ ಇರಲಿಲ್ಲ. ಅವಳೂ ಅವಳು ಮಾಧವನನ್ನು ನೆನೆದು ಕಣ್ಣೀರಿಡದ ದಿನವೇ ಇರಲಿಲ್ಲ. ಅವನು ಯಾವ ಗಳಿಗೆಯಲ್ಲಿ ಕೂಗಿದರೂ ಅಲ್ಲಿಗೆ ಹೋಗಲು ತಯಾರಿದ್ದಳು ಸರೂ. ಅವಳ ಮನಸ್ಸಿನಲ್ಲಿದ್ದುದ್ದು ಎರಡು ಕಾರ್ಯಗಳು. ಮೊದಲನೆಯದಾಗಿ ವಿಜಯನನ್ನು ಒಳ್ಳೆಯ ಯೋಗ್ಯ ಹುಡುಗನನ್ನಾಗಿ ಮಾಡಿ, ಈಗ ತಾನು ನಡೆಸುತ್ತಿರುವ ಕಾರ್ಯವನ್ನು ಸಂಪೂರ್ಣವಾಗಿ ಮಾಡಿ ಮುಗಿಸುವುದು. ನಂತರ ವಿಜಯನಿಗೆ ಮದುವೆ ಮಾಡಿ ಅವನು ಸುಖವಾಗಿರಲು ಅನುಕೂಲ ಮಾಡಿ ಕೊಟ್ಟು, ತಾನು ತನ್ನ ಪತಿಯ ಬಳಿಗೆ ಹೋಗಿ ತನ್ನ ಜೀವಮಾನದ ಕೊನೆಯ ದಿನಗಳನ್ನು ಅವನ ಪಾದಸೇವೆಯಲ್ಲಿಯೇ ಕಳೆಯುವದು. ವಿಜಯನ ವಿದ್ಯಾಭ್ಯಾಸ ಮುಗಿದು ಅವನಿಗೆ ಕೆಲಸ ದೊರಕುವ ವರೆಗೂ, ಅವಳು ತನ್ನ ನೀರವ, ನೀರಸವಾದ ಒಂಟಿ ಜೀವನವನ್ನು ನಡೆಸಬೇಕಾಗಿತ್ತು. 'ದೇವರೇ ನಾನು ಪತಿಯನ್ನು ಬೇಗ ಸೇರುವಂತೆ ಮಾಡು' ಎಂದು ಅವಳ ಪ್ರಾರ್ಥನೆ ನಿರಾತಂಕವಾಗಿ ಸಾಗಿತ್ತು.

ಒಂದೊಂದು ದಿನ ಹಳೆಯ ಸವಿದಿನಗಳೆಲ್ಲಾ ನೆನಪಿಗೆ ಬಂದು, ಅವಳ ಮನಸ್ಸು ವ್ಯಗ್ರವಾಗುತ್ತಿತ್ತು. ತೀರ ಸಂಕಟವಾದಾಗ ಸರೂ, ಅಡುಗೆ ಮನೆಗೆ ಹೋಗಿ, ಮಾಧವನ ಫೋಟೋ ಕೆಳಗೆ ಕೂತು ತನ್ನ ಮನಸ್ಸಿನ ದುಗುಡವನ್ನೆಲ್ಲಾ ಹೇಳಿಕೊಂಡು ಗೋಳೋ ಎಂದು ಅತ್ತು, ಕಣ್ಣೀರಿನ ಕಾಲುವೆ ಹರಿಸಿದ ಮೇಲೆ ಮನಸ್ಸು ಒಂದು ಹಿಡಿತಕ್ಕೆ ಬರುತ್ತಿತ್ತು. ನಂತರ ರಾಮನಾಮವನ್ನು ಜಪ ಮಾಡುತ್ತಾ ಎಷ್ಟೋ ಹೊತ್ತು ಕೂತುಕೊಂಡರೆ, ಆಗ ಮನಸ್ಸು ನಿರಾಳವಾಗಿ ಯಾವುದೊಂದು ಯೋಚನೆಯೂ ಇಲ್ಲದಂತೆ ನಿಚ್ಚಳವಾಗುತ್ತಿತ್ತು. ಮನಸ್ಸು ಹೀಗೆ ಶಾಂತವಾದ ಬಳಿಕ ಸರೂ ಬಂದು ಮಲಗುತ್ತಿದ್ದಳು. ಹೊಸ ಚೈತನ್ಯವನ್ನು ಅವಳಲ್ಲಿ ತುಂಬಿ, ಬೆಳಗಿನೊಡನೆ ಬರುವ ಜೀವನಯುದ್ಧಕ್ಕೆ ಆವಳನ್ನು ಅಣಿಗೊಳಿಸಲಿಕ್ಕೆಂದೋ ಏನೋ ನಿದ್ರಾದೇವತೆ ಅವಳ ಪರಿಮಿನ್ನ ದೇಹವನ್ನು ಆವರಿಸುತ್ತಿದ್ದಳು.

ಸರೂವಿನ ಅವಿಶ್ರಾಂತವಾದ ಶ್ರಮದಿಂದ ಒಂದುವರೆ ತಿಂಗಳೊಳಗಾಗಿ ಬಟ್ಟೆ ಎಲ್ಲಾ ಪೂರ್ತಿಯಾಗಿ ಹೊಲಿದು ತಯಾರಾಯಿತು. ದೊಡ್ಡ ಹುಡುಗರಿಗೆ ಬಟ್ಟೆಯನ್ನು ಅವರೇ ಮನೆಯಿಂದ ಕೊಂಡುಕೊಂಡು ಹೊಲಿಸಿಕೊಳ್ಳು

ವಂತೆ ತಿಳಿಸಿದ್ದಳು. ಅಂತೆಯೇ ಅವರೆಲ್ಲಾ ತಾಯಿ-ತಂದೆಯರನ್ನು ಪೀಡಿಸಿ ಕಾಡಿಸಿ, ಬಟ್ಟೆಯನ್ನು ಹೊಲಿಸಿಕೊಂಡಿದ್ದರು.

"ಆ ಯವ್ವಾ ಮಾಡೋದು ಒಂದೊಂದಲ್ಲಾ, ಇಲ್ಲದ ಪೇಷನ್ ಹೇಳಿ ಕೊಡುತ್ತಾಳೆ" ಎಂದು ಅವರ ತಾಯಿಯರ ಕೈಲಿ ಸರೂ ಅನ್ನಿಸಿಕೊಂಡೂ ಆಗಿತ್ತು. ಆದರೆ ಅವಳು, ಯಾವುದೊಂದಕ್ಕೂ ಹೆಚ್ಚು ಗಮನವನ್ನೇ ಕೊಡುತ್ತಿರಲಿಲ್ಲ.

ಅಂದು ದಿನಕ್ಕಿಂತ ಮುಂಚಿತವಾಗಿಯೇ ಬೆಲ್ ಹೊಡೆದಳು. ಬೆಲ್ ಕೇಳಿದ ಕೂಡಲೇ ಹುಡುಗರೆಲ್ಲಾ ಓಡಿಬಂದರು. ಸರೂ ಒಬ್ಬೊಬ್ಬರನ್ನಾಗಿ ಕರೆದು, ತಾನೇ ಅವರಿಗೆ ಷರಟು, ಚಡ್ಡಿ ಎಲ್ಲಾ ತೊಡಿಸಿದಳು. ಪ್ರತಿಯೊಬ್ಬನಿಗೂ ಬಟ್ಟೆ ತೊಡಿಸುವುದು ಅರ್ಧ ಗಂಟೆಯ ಕಾಲವೇ ಆಗಿತ್ತು. ಅವರವರ ಎತ್ತರಕ್ಕೆ ತಕ್ಕಂತೆ, ಕಲಿಯುವ ಯೋಗ್ಯತೆಗನುಸಾರವಾಗಿ ಅವರನ್ನು ಸಾಲು ನಿಲ್ಲಿಸಿದ್ದಳು. ಎಲ್ಲರೂ ಒಂದೇ ಬಗೆಯ ಉಡುಪಿನಲ್ಲಿ, ಹರ್ಷಯುಕ್ತರಾಗಿ ನಿಂತಿರುವುದನ್ನು ನೋಡಿ ಸರೂ ಉಬ್ಬಿಹೋದಳು. ಅವರೆಲ್ಲರ ಆನಂದ ಸಂತೋಷವನ್ನು ನೋಡಿ ಅವಳಿಗೂ ಅವರ್ಣನೀಯವಾದ ಆನಂದ ಉಂಟಾಯಿತು. ವಿಜಯನೂ ಅದೇ ಉಡುಪಿನಲ್ಲಿಯೇ ಎಲ್ಲರಿಗಿಂತ ಮುಂದೆ ನಿಂತು ಕಂಗೊಳಿಸುತ್ತಿದ್ದ. ಸರೂ ಪ್ರಾರ್ಥನೆಯನ್ನು ಹೇಳಿಕೊಟ್ಟಳು, ಹುಡುಗರೆಲ್ಲರೂ ಅತ್ಯಾನಂದದಿಂದ, ಹರ್ಷದಿಂದ ಅವಳೊಡನೆ ಧ್ವನಿಗೂಡಿಸಿದರು. ಪ್ರಾರ್ಥನೆ ಮುಗಿದು ಎಲ್ಲರೂ ಎದುರಿನಲ್ಲಿರುವ ರಾಮದೇವರ ಫೋಟೋಕ್ಕೆ ನಮಸ್ಕರಿಸಿ ಕೂತರು. ಸರೂ ಇನ್ನೂ ತನ್ನ ಕನಸಿನ ಲೋಕದಿಂದ ಎಚ್ಚರ ಹೊಂದಿರಲಿಲ್ಲ. ಹುಡುಗರೆಲ್ಲಾ ಸುಮ್ಮನೇ ಅವಳನ್ನು ನೋಡುತ್ತಾ ಕೂತಿದ್ದರು. ಸರೂ ತನ್ನ ಮುಚ್ಚಿದ ಕಣ್ಣನ್ನೂ ತೆರೆದಿರಲಿಲ್ಲ. ಎಷ್ಟು ಹೊತ್ತು ಹಾಗೆಯೇ ಇರುತ್ತಿದ್ದಳೋ ಬಲ್ಲವರಾರು? ಬೀದಿಯ ಬಾಗಿಲಲ್ಲಿಯ ಶಬ್ದದಿಂದ ಅವಳು ಕಣ್ತೆರೆದಳು. ದೇವರಿಗೆ ನಮಸ್ಕರಿಸಿ ಹಿಂತಿರುಗಿ ನೋಡಿದಾಗ ಅವಳಿಗೆ ಕಾಣಿಸಿದ್ದು ಮುರಲಿಯ ಮುಖ. ಸುಬ್ಬರಾಯರೂ ಅವನ ಜೊತೆಗೇ ಬಂದಿದ್ದರು. ಹೀಗೆ ಅನಿರೀಕ್ಷಿತವಾಗಿ ಬಂದ ಮೈದುನನನ್ನು ನೋಡಿ ಅವಳಿಗೆ ಅತ್ಯಾಶ್ಚರ್ಯವಾಯಿತು. ಒಮ್ಮೆಲೆ ಅವಳಿಗೆ ಏಕಕಾಲದಲ್ಲಿ ಸುಖ-ದುಃಖಗಳುಂಟಾದವು. ಅವನನ್ನು ಒಳಕ್ಕೆ ಬಾ ಎಂದು ಕರೆಯಲೂ ಕೂಡಾ, ಸರೂವಿಗೆ ತೋರಲೇ ಇಲ್ಲ. ಸುಬ್ಬರಾಯರೇ ಅವನನ್ನು ಒಳಗೆ ಕರೆತಂದರು.

ಸರೂ ಸಾವರಿಸಿಕೊಂಡು ನುಡಿದಳು. "ಮನೆಯಲ್ಲಿ ಎಲ್ಲರೂ ಆರೋಗ್ಯವೇ ಮುರಲೀ? ಏನಿದು ಏಕಾಏಕಿ ಹೀಗೆ ಬಂದುಬಿಟ್ಟೆ?"

"ಹೀಗೆಯೇ ನಿಮ್ಮನ್ನು ನೋಡಿಕೊಂಡು ಹೋಗೋಣಾ ಎಂತಲೇ ಬಂದೆ ಅತ್ತಿಗೆ, ಎಲ್ಲಿ ವಿಜಯ, ಕಾಣಿಸುವುವೇ ಇಲ್ಲವಲ್ಲಾ?" ಎಂದು ಮುರಲಿ ಸುತ್ತಲೂ ನೋಡಿದ. ಅವನಿಗೆ ಆ ಹುಡುಗರು, ಅವರು ನಿಂತಿರುವ ಆ ರೀತಿ ಎಲ್ಲವೂ ಹೊಸತೆನಿಸಿತು.

"ನನ್ನ ಹೆಸರು ವಿಜಯ ಅಲ್ಲ, ವಿಜಯೇಂದ್ರ ಕುಮಾರ್ ಎಸ್. ಎಮ್ ಎಂದು ಹೇಳುತ್ತಾ ಹುಡುಗರ ಮಧ್ಯದಿಂದ ಮುಂದೆ ಬಂದು ಹೇಳಿದ ವಿಜಯ. ಅವನ ಆ ವಾದಸರಣಿಯನ್ನು ಕೇಳಿ ಮುರಲಿ ಚಕಿತನಾದ.

"ಓಹೋ, ನೀನು ವಿಜಯೇಂದ್ರ ಕುಮಾರನೋ, ಹಾಗಾದರೆ ಸರಿ. ಇಲ್ಲಿ ಬಾ ಮಗೂ." ಮುರಲಿ ಕೈ ನೀಡಿ ಕರೆದ. ವಿಜಯ ಠೀವಿಯಿಂದ ನಡೆದು ಬಂದು ಅವನೆದುರಿಗೆ ನಿಂತು ಮಿಲಟರಿ ನಮಸ್ತೆ ಮಾಡಿದ. ಮುರಲಿ ಅವನನ್ನು ಅನಾಮತ ಎತ್ತಿಕೊಂಡು ಮುದ್ದು ಕೊಟ್ಟ.

"ನೀನು ಮಾಮು ಅವರ ಜೊತೆಯಲ್ಲಿ ಇಲ್ಲಿಯೇ ಮಾತನಾಡುತ್ತಾ ಕೂತಿರು ಮುರಲೀ; ಹುಡುಗರು ಕಾದಿದ್ದಾರೆ, ಅವರಿಗೆ ಪಾಠ ಕಲಿಸಿ ಬರುವೆ." ಎಂದು ಸರೂ ತನ್ನ ಶಿಕ್ಷಣಕ್ಕೆ ತೊಡಗಿದಳು. 'ಹೊಸದಾಗಿ ಬಂದಿರುವ ಈ ಸಾಹೇಬರು ಯಾರು?' ಎಂದುಕೊಂಡು, ಮುರಲಿಯನ್ನೇ ನೋಡುತ್ತಾ, ಕುತೂಹಲದಿಂದ ಕೂತಿದ್ದರು ಹುಡುಗರು. ಸರೂ ಅವರನ್ನು ಆಗಲೇ ಮನೆಗೆ ಕಳಿಸಬಹುದಾಗಿತ್ತು. ಆದರೆ ತನ್ನ ಕೆಲಸಕ್ಕಾಗಿ ಅವರಿಗೆ ಪಾಠ ನಿಲ್ಲಿಸುವುದು ಕರ್ತವ್ಯಕ್ಕೆ ಲೋಪ ತಂದಂತೆ ಎಂದುಕೊಂಡು, ಅವಳು ಹುಡುಗರಿಗೆ ಶಾಲೆಯ ವೇಳೆಯಾಗುವವರೆಗೂ ಹೇಳಿಕೊಟ್ಟು, ನಂತರ ಕಳಿಸಿದಳು. ಹತ್ತುಗಂಟೆಯ ವೇಳೆಗೆ ಬೆಲ್ ಆಯಿತು. ಹುಡುಗರೆಲ್ಲಾ ಒಬ್ಬೊಬ್ಬರಾಗಿ ನಮಸ್ತೇ ಹೇಳಿ ಹೊರಟು ಹೋದರು. ಕಡೆಯ ಹುಡುಗನೂ ಹೋದ ಬಳಿಕ ಸರೂ ಮೈದುನನ ಕಡೆ ತಿರುಗಿದಳು. ಅತ್ತಿಗೆಯ ಶಿಸ್ತು, ಕ್ರಮ, ಕರ್ತವ್ಯದಕ್ಷತೆ ಇವುಗಳನ್ನು ನೋಡಿ ಮುರಲಿ, ಅತ್ತಿಗೆಯನ್ನು ಮನಸ್ಸಿನಲ್ಲಿ ಮನಸಾರೆ ಹೊಗಳಿದ.

ಸರೂ ಒಳಗೆ ಹೋಗಿ, ಅಡುಗೆಯ ತಯಾರಿ ನಡೆಸಿದಳು. ವಿಜಯ ಯಾವ ಸಂಕೋಚವೂ ಇಲ್ಲದೆ ಚಿಕ್ಕಪ್ಪನ ಕೈಲಿ ಹರಟೆ ಹೊಡೆಯುತ್ತಲೇ ಇದ್ದ. ಸರೂ ಎರಡು ಲೋಟಾ ಕಾಫಿ ಮಾಡಿ ಅವರಿಬ್ಬರಿಗೂ ತಂದಿತ್ತಳು.

ಮುರಲಿ, ಬೇಡ ಬೇಡ ಎನ್ನುತ್ತಲೇ ಕಾಫಿ ಕುಡಿದು ಮುಗಿಸಿದ. ಸುಬ್ಬ ರಾಯರು "ನಾನು ಬರುತ್ತೇನೆ ಮಗೂ. ಬಿಡುವಾದರೆ ಸಂಜೆ ಮನೆಗೆ ಬಾ" ಎಂದು ಹೇಳಿ ಹೊರಟು ಹೋದರು.

ಮುರಲಿ ಅಡುಗೆ ಮನೆಗೇ ಹೋಗಿ ಕೂತುಕೊಂಡ. ಹಿಂದೆಯೂ ಅತ್ತಿಗೆಯ ಬಳಿ ಅವನು ಹೀಗೆಯೇ ತಿಂಡಿ ಕಾಫಿ ಕುಡಿಯುತ್ತಿದ್ದ. ಈಗಲೂ ಹಾಗೆಯೇ ಬಂದು ಕುಳಿತಿದ್ದಾನೆ. ಆದರೆ ಅಂದಿನ ಅತ್ತಿಗೆಗೂ ಇಂದಿನ ಅತ್ತಿಗೆಗೂ ಎಷ್ಟು ವ್ಯತ್ಯಾಸ! ಸರೂ ಮನೆಗೆ ಬಂದಾಗ ಇನ್ನೂ ಹದಿನಾರರ ಪ್ರಾಯದ ಹುಡುಗಿ. ಮೈತುಂಬಾ ಆಭರಣಗಳನ್ನು ಧರಿಸಿ, ಸಾಕ್ಷಾತ್ ಲಕ್ಷ್ಮೀಯಂತೆಯೇ ಕಾಣಿಸುತ್ತಿದ್ದ ಅತ್ತಿಗೆ ಈಗ ಬಿಚ್ಚೋಲೆ ಗೌರಮ್ಮನ ಹಾಗೆ ಇರುವುದನ್ನು ನೋಡಿ ಮುರಲಿಗೆ ನಿಜವಾಗಿಯೂ ದುಃಖವಾಯಿತು.

"ಇದೇನು ಮುರಲಿ, ಹೀಗೆ ಬಂದೆ? ಮನೆಯಲ್ಲಿ ಅಮ್ಮ ಎಲ್ಲರೂ ಚೆನ್ನಾಗಿದ್ದಾರೆಯೆ?" ಎಂದಳು ಸರೂ ತರಕಾರಿ ಹೆಚ್ಚುತ್ತಾ.

ಮುರಲಿ ತಾನು ಮದ್ರಾಸಿಗೆ ಹೋಗಿ ಮಾಧವನನ್ನು ನೋಡಿದುದು, ಅದನ್ನು ಕೇಳಿದಾಗಲಿನಿಂದ ತಂದೆಯು ಕಾಹಿಲೆ ಬಿದ್ದುದೂ, ಅವರು ಸರೂವಿ ಗಾಗಿ ಹಂಬಲಿಸುತ್ತಿರುವುದೂ ಎಲ್ಲವನ್ನೂ ವಿವರವಾಗಿ ತಿಳಿಸಿದ. ತನ್ನ ಪತಿಯ ನಡತೆಗಾಗಿ ಮಾವನವರು ಅಷ್ಟು ಬೇಸರ ಪಟ್ಟುಕೊಂಡರಲ್ಲಾ ಎಂದು ಸರೂ ಚಡಪಡಿಸಿದಳು.

"ನೋಡು ಮುರಲಿ, ನಿನ್ನ ಜೊತೆ ಬಂದಿದ್ದರಲ್ಲಾ ಆ ಸುಬ್ಬರಾಯರು, ನನಗೆ ಹಿಂದಿನ ಜನ್ಮದಲ್ಲಿ ತಂದೆಯೇ ಆಗಿದ್ದರೇನೋ. ಈ ಜನ್ಮದಲ್ಲಿಯಂತೂ ಅವರು ನನ್ನ ಪಾಲಿನ ವಿಧಾತರೇ ಆಗಿದ್ದಾರೆ. ಈಗ ನನಗೆ ಯಾವ ತೊಂದ ರೆಯೂ ಇಲ್ಲ. ಇಲ್ಲಿಯ ಮಕ್ಕಳಿಗೆಲ್ಲಾ ಹೇಳಿಕೊಡುವೆ; ಅವರೂ ನನ್ನನ್ನು ತಾಯಿಯಂತೆ ಕಂಡುಕೊಂಡಿದ್ದಾರೆ. ನಾನು ಸೌಖ್ಯವಾಗಿಯೇ ಇದ್ದೇನೆ. ಆದರೆ ಅಲ್ಲಿ ಅವರು ಹೇಗೆ ಇದ್ದಾರೇಯೋ, ಅವರು ಹುಷಾರಾಗಿ ಇರುವರೋ ಇಲ್ಲವೋ ಎಂಬುದು ಕೂಡಾ ನನಗೆ ಗೊತ್ತಾಗುತ್ತಿಲ್ಲ ಮುರಲೀ, ಅದೊಂದು ಕ್ಕಾಗಿ ನನಗೆ ಬಹಳ ಪೇಚಾಟ. ನೀನಾದರೂ ಅವರಿಗೆ ಕಾಗದ ಬರೆದು ಆಗಾಗ್ಗೆ ಅವರ ವಿಷಯ ಕೇಳಿ ತಿಳಿದುಕೊಳ್ಳುತ್ತಿರು. ನೀನು ಹಾಗೆಮಾಡಿದರೆ ಬಹಳ ಪುಣ್ಯ ಬರುತ್ತೆ ಮುರಲೀ ನಿನಗೆ." ಸರೂ ಅಂಗಲಾಚಿದಳು.

"ನಿಮಗೆ ಇನ್ನೂ ಅವನ ಮೇಲಿನ ವ್ಯಾಮೋಹ ತಪ್ಪಲಿಲ್ಲವೇ ಅತ್ತಿಗೆ?

ನಿಮ್ಮನ್ನು ಈ ಗತಿಗೆ ತಂದಆವನನ್ನು ಕಾಣಲು ಹೀಗೆ ತವಕಬಿಡುತ್ತಿರಲ್ಲಾ ಇದಕ್ಕೆ ಏನು ಹೇಳಬೇಕೋ ನನಗೆ ಗೊತ್ತಾಗುವುದಿಲ್ಲ ಅತ್ತಿಗೆ." ಮುರಲಿ ಮಾಧವನ ಬಗ್ಗೆ ತಿರಸ್ಕಾರದಿಂದ ನುಡಿದುದನ್ನು ಸರೂ ಸಹಿಸದೇ ಇರಲಿಲ್ಲ. ಪತಿಯ ನಿಂದೆಯನ್ನು ಯಾರ ಬಾಯಿಂದಲೂ ಅವಳು ಕೇಳಲು ತಯಾರಿರ ಲಿಲ್ಲ. ಮುರಲಿ ಅಷ್ಟು ಕೀಳಾಗಿ ತನ್ನ ಪತಿಯನ್ನು ಕಂಡಿದ್ದಕ್ಕೆ ಅವಳಿಗೆ ಕೆಡಕು ಎನಿಸಿತು.

"ನೀನೂ ಎಂದಿಗೂ ಅವರನ್ನು ಹಾಗೆನ್ನಬೇಡ, ಮುರಲಿ! ಏನೋ ಯಾವ ಗಳಿಗೆಯೋ ಗಂಟೆಯೋ ಅವಳನ್ನು ಅವರು ನೋಡಿದರು, ತೀರಿತು. ಅವಳಿಗಾಗಿ ಅವರು ಏನು ಮಾಡಲೂ ತಯಾರಾಗಿದ್ದಾರೆ. ನಾನಾಗಿಯೇ ಅವರಿಗೆ ಅವಳ ಪರಿಚಯವನ್ನೂ, ಮದುವೆಯನ್ನೂ ಮಾಡಿಕೊಟ್ಟೆ ತಿಳಿಯಿತೆ? ಈಗ ನಿಜವಾಗಿಯೂ ಅವರು ಅವಳ ಜೊತೆ ಸುಖವಾಗಿರಬೇಕು. ಎಲ್ಲಿಯಾದರೂ ಸರಿ. ಅವರು ಸುಖವಾಗಿದ್ದರೆ ಸಾಕು. ಅದನ್ನೇ ನಾನೂ ಬಯಸುವುದು." ಸರೂ ಈ ಪರಿಸ್ಥಿತಿಯಲ್ಲಿಯೂ ಪತಿಯ ಪಕ್ಷ ಹಿಡಿದು ವಾದಿಸಿದಳು. ಮುರಲಿ ತೆಪ್ಪಗಾದ.

ವಿಜಯ ತನಗೆ ಬಂದುದೆಲ್ಲವನ್ನು ಚಿಕ್ಕಪ್ಪನಿಗೆ ಓದಿತೋರಿಸಿದ. ಮುರಲಿ ಅವನ ಜಾಣ್ಮೆಯನ್ನು ನೋಡಿ ಬಹಳವಾಗಿ ಅವನನ್ನು ಮೆಚ್ಚಿಕೊಂಡ.

ಊಟ ಮಾಡುವಾಗ ಮುರಲಿ ಮನೆಯ ಸಮಾಚಾರವನ್ನೆಲ್ಲಾ ತಿಳಿಸಿದ. ಶ್ರೀಕಂಠಯ್ಯ ಸರೂವನ್ನು ನೋಡಲು ಅತ್ಯಂತ ಕಾತುರರಾಗಿದ್ದಾರೆಂದೂ, ಕೂಡ್ಲೆಸರೂ ಮುರಲಿಯ ಜೊತೆಯಲ್ಲಿಯೇ ಬರಬೇಕೆಂದೂ, ಅವನು ತಿಳಿಸಿದಾಗ, ಸರೂ ವಿಧಿಯಿಲ್ಲದೆಯೇ ಒಪ್ಪಿಕೊಳ್ಳಬೇಕಾಗಿತ್ತು. ಈ ಸ್ಥಿತಿಯಲ್ಲಿ ಅತ್ತೆಗೆ ಹೇಗೆ ಮುಖ ತೋರಿಸುವುದು ಎಂಬುದೇ ಅವಳಿಗೆ ಯೋಚನೆಯಾಗಿತ್ತು. ಏನೇ ಆಗಲೀ, ಕಾಹಿಲೆಯಿಂದ ನರಳುತ್ತಿರುವ ಮಾವ ತನಗಾಗಿ ಕಾದಿದ್ದಾರೆ, ಹೋಗದೆ ಇದ್ದರೆ ಹೇಗೆ? ತನ್ನ ಶಾಲೆಯನ್ನು ಮುಚ್ಚಬೇಕಾಗುವುದಲ್ಲಾ, ಎಂದು ಒದ್ದಾಡಿದಳು. ಈಗ ತಾನೇ ಹುಡುಗರಲ್ಲಿ ಕಲಿಯುವ ಆಸೆ ಮೂಡಿದೆ. ಅವರ ತಂದೆ ತಾಯಿಗಳು ಕೂಡಾ ಯಾವ ನಿರ್ಬಂಧವೂ ಇಲ್ಲದೆ ಅವರನ್ನು ಕಳಿಸುತ್ತಿದ್ದಾರೆ. ಈಗ ತಾನೇ ಅವಳ ಕಾರ್ಯ ಒಂದು ಬಗೆಯ ರೂಪುಗೊಳ್ಳುತ್ತಾ ನಡೆದಿದೆ. ಇಂತಹ ಸಂದಿಗ್ಧ ಸಮಯದಲ್ಲಿ ಹೇಗೆ ವರ್ತಿಸಬೇಕೆಂಬುದೇ ಸರೂ ವಿಗೆ ತಿಳಿಯಲಿಲ್ಲ.

ರಾತ್ರಿ ಎಲ್ಲಾ ಯೋಚಿಸಿ ಸರೂ ಒಂದು ನಿರ್ಧಾರಕ್ಕೆ ಬಂದಳು. ಏನೇ ಆಗಲೀ ಶಾಲೆಯನ್ನು ಮುಚ್ಚಲೇಬಾರದು. ತಾನು ಬರುವುದು ಬಹಳ ಬೇಗ ಎಂದರೂ ಎಂಟು ಹತ್ತು ದಿನಗಳಾಗುತ್ತೆ. ಅಲ್ಲಿಯ ವರೆಗೆ ಶಾಲೆಯನ್ನು ಮುಚ್ಚಿದರೆ, ಹುಡುಗರಿಗೆ ಬರುವ ಅಭ್ಯಾಸವೇ ತಪ್ಪಿ ಹೋಗಬಹುದು. ಇಷ್ಟು ದಿನ ಮಾಡಿದ ಯತ್ನವೆಲ್ಲಾ ನೀರಿನಲ್ಲಿ ಮಾಡಿದ ಹೋಮವಂತಾಗುತ್ತೆ ಎಂದೆಲ್ಲಾ ಯೋಚಿಸಿದಳು. ಮಾರನೇ ದಿನ ಹಿರಿಯ ಹುಡುಗ ರಾಮುನನ್ನು ಕರೆದು, ತನ್ನ ಮನೆಯ ಜಗುಲಿಯ ಮೇಲೆಯೇ ಶಾಲೆಯನ್ನು ನಡೆಸಬೇಕೆಂತಲೂ, ಹುಡುಗರಿಗೆಲ್ಲಾ ಹೇಳಿಕೊಡಬೇಕೆಂದೂ ಹೇಳಿ ಸರೂ ಸುಬ್ಬರಾಯರ ಮನೆಗೂ ಹೋಗಿ ತಾನು ಅತ್ತೆಯ ಮನೆಗೆ ಹೋಗಿ ಬರುವುದಾಗಿ ತಿಳಿಸಿ ಬಂದಳು. "ಬೇಗ ಬಾ ಮಗು, ಹೆಚ್ಚು ದಿನ ಅಲ್ಲಿಯೇ ನಿಲ್ಲಬೇಡ. ಈ ನಿನ್ನ ಮಾವ ನಿನಗಾಗಿ ಕಾದಿರುತ್ತಾನೆ ತಿಳಿಯಿತೇ?" ಎಂದರು ಸುಬ್ಬರಾಯರು.

ಸರೂ, ಅತ್ತೆಯ ಮನೆಗೆ ಹೇಗೆ ಹೋಗುವುದು ? ಒಡನೆ ಏನಾಯಿತು, ಎಂದರೆ ಉತ್ತರವನ್ನೇನು ಹೇಳುವುದು? ಎಂದೇ ಯೋಚನೆಯನ್ನು ಮಾಡುತ್ತಿದ್ದಳು. ಅವಳ ಯೋಚನೆಯಲ್ಲಿ ದಾರಿ ಸವೆದುದೇ ಗೊತ್ತಾಗಲಿಲ್ಲ.

ಸರೂ ಮುರಲಿಯೊಡನೆ ಮನೆಗೆ ಕಾಲಿಟ್ಟಾಗ ಎದುರಿಗೆ ಕಾಣಿಸಿದವರು ಜಾನಕೀಬಾಯಿ. ಅವರನ್ನು ಗುರ್ತಿಸುವುದೇ ಕಷ್ಟವಾಯಿತು ಸರೂವಿಗೆ. ಹಿಂದೆ ದರ್ಪದಿಂದ, ತಮ್ಮ ಕಣ್ಣ ನೋಟದಿಂದಲೇ ಸಕಲರನ್ನೂ ಆಳುತ್ತಿದ್ದ ಜಾನಕೀಬಾಯಿ ಇವರೇನೇ ಎಂದು ಆಶ್ಚರ್ಯಹೊಂದಿದಳು ಸರೂ. ಅವರ ಕೋಪ, ತಾಪ, ಸಿಸ್ಟಮ್, ಮ್ಯಾನರ್ಸ್ ಎಲ್ಲಾ ಅಡಗಿ ಹೋಗಿತ್ತು. ಈಗ ಸೌಜನ್ಯವೇ ಮೂರ್ತಿಮತ್ತಾಗಿ ಬಂದಂತೆ ಕಾಣುತ್ತಿದ್ದರು ಜಾನಕೀಬಾಯಿ. ಸರೂ ಬಂದ ಕೂಡಲೇ ಅತ್ತೆಯ ಪಾದಗಳನ್ನು ಹಿಡಿದು ನಮಸ್ಕರಿಸಿದಳು. ನಿರಾಭರಣ ಸುಂದರಿಯಾದ ಸೊಸೆಯನ್ನು ನೋಡಿ ಅವರಿಗೆ ಕರುಳು ಕಿತ್ತು ಬರುವಂತಾಯಿತು. ಮುಕುಂದ ಆನಂದರಿಬ್ಬರೂ ಓಡಿ ಬಂದು "ಅತ್ತಿಗೇ... ಅತ್ತಿಗೇ...!" ಎಂದು ಅವಳನ್ನು ಮುತ್ತಿದರು. ವಿಜಯ ಎಲ್ಲರ ಬಳಿಗೂ ಹೋಗಿ, ಯಾವ ಸಂಕೋಚವೂ ಇಲ್ಲದೆ ಮಾತನಾಡುತ್ತಿದ್ದ. "ನಿಮ್ಮನ್ನು ಈ ಸ್ಥಿತಿಯಲ್ಲಿ ನೋಡುವ ಹಣೆ ಬರಹ ನನಗೆ ಇದ್ದಿತೇ ಸರೂ! ನಾನು ಯಾತಕ್ಕಾಗಿ ಬದುಕಿದ್ದೇನೆಯೋ! ದೇವರೇ, ನನ್ನ ಜೀವನವನ್ನು ಕೊನೆಗಾಣಿಸಬಾರದೇ!" ಎಂದು ಜಾನಕೀಬಾಯಿ ಬಿಕ್ಕಿ ಬಿಕ್ಕಿ ಅತ್ತರು. ಅತ್ತೆಯವರು ತೀರಾ ಅಷ್ಟು ಮೆತ್ತಗಾಗಿರುವರಲ್ಲಾ ಎಂದು

ಸರೂ ದುಃಖಿಸಿದಳು ಶ್ರೀಕಂಠಯ್ಯನವರಿಗೆ ನಿದ್ರೆ ಬಂದಿತ್ತಾದ್ದರಿಂದ, ಸೊಸೆಯ ಆಗಮನ ಅವರಿಗೆ ತಿಳಿಯಲಿಲ್ಲ.

"ಮಗೂ, ವಿಜಯಾ ಬಾಪ್ಪಾ. ನಾನು ಯಾರು ನಿನಗೆ ಗೊತ್ತೇ? ನಿನಗೆ ನಾನು ಅಜ್ಜಯಾಗಬೇಕು ಕಾಣೋ. ಗೊತ್ತಾಯಿತೇ?" ಎಂದು ವಿಜಯನ ನ್ನೆತ್ತಿ ಮುದ್ದಾಡಿದರು. ಮತ್ತು "ನಾರಾಯಣಾ, ಹುಡುಗರಿಗೆಲ್ಲಾ ಕಾಫಿ ತಂದು ಕೊಡು; ಟ್ರೈನಿನಿಂದ ಬಂದು ದಣಿದಿದ್ದಾರೆ" ಎಂದು ಅಡುಗೆಯವನಿಗೆ ಕೂಗಿ ಹೇಳಿ "ನಿಂತೇ ಇದ್ದೀಯಲ್ಲಾ ಕೂತುಕೋ ಸರೂ, ಪ್ರಯಾಣದಿಂದ ನಿನಗೆ ಆಯಾಸವಾಗಿರಬೇಕು." ಎಂದು ಸೊಸೆಯನ್ನುಪಚರಿಸಿದರು. ಅತ್ತೆಯಲ್ಲಿ ಆಗಿರುವ ಈ ಮಾರ್ಪಾಟನ್ನು ನೋಡಿ ಸರೂ ಚಕಿತಳಾದಳು. ತಾನು ಮನೆಗೆ ಬಂದ ಹೊಸದರಲ್ಲಿಯೂ ಅತ್ತೆ ಹೀಗೆಯೇ, ಆತ್ಮೀಯರಂತೆ ನಡೆದುಕೊಂಡಿದ್ದರೆ ಕೆಲಸಕ್ಕೆ ಸೇರಲು ತಾನು ಮಾಧವನಿಗೂ ಹೇಳುತ್ತಿರಲಿಲ್ಲ; ಅವನು ಮದ್ರಾಸಿಗೆ ಹೋಗಬೇಕಾಗುತ್ತಲೂ ಇರಲಿಲ್ಲ; ಲೂಸಿಯ ಸ್ನೇಹವೂ ಆಗುತ್ತಿರಲಿಲ್ಲ; ತಾನು ಹೀಗೆ ಅನಾಥಳಂತೆ ಬಾಳಬೇಕಾದುದೂ ಇರಲಿಲ್ಲ. ಅತ್ತೆಯ ಮನೆಯು ಜೈಲುಖಾನೆ ಎಂಬ ಭಾವನೆ ತನಗೆ ಬರುವಂತೆ ಉಂಟು ಮಾಡದೇ ಅತ್ತೆಯವರು ಈಗಿನಂತೆ ಅಮ್ಮಾ ಅಕ್ಕಾ ಎಂದುಕೊಂಡು, ಸೊಸೆ ಎಂದರೆ ಬರಿಯ ಜೀತದಾಳಲ್ಲ, ಬರಿಯ ಯಂತ್ರದ ಮನುಷ್ಯಳಲ್ಲ, ಅವಳಿಗೂ ಆಸೆ-ಅಕಾಂಕ್ಷೆಗಳೂ ಸುಖ-ದುಃಖಗಳೂ ಕೋಪ ತಾಪಗಳೂ ದ್ವೇಷಾಸೂಯೆಗಳೂ ಇವೆ; ಅವಳೂ ನಮ್ಮಂತೆಯೇ ಇರುವ ಮಾನವ ಪ್ರಾಣಿ, ನಮ್ಮ ಮನೆಯ ವಂಶವನ್ನುದ್ಧಾರಮಾಡುವ ಭಾಗ್ಯದೇವತೆ ಎಂದು ತಿಳಿದು ವರ್ತಿಸಿದ್ದರೆ, ಎಷ್ಟು ಚೆನ್ನಾಗಿರುತ್ತಿತು? ಈಗಿನ ಯಾವುದೊಂದು ಅನರ್ಥವೂ ನಡೆಯುತ್ತಲಿರಲಿಲ್ಲ. ತನ್ನ ಪತಿಯ ನಡತೆಗಾಗಿ ಮಾವನವರು ಅಷ್ಟು ನೊಂದುಕೊಳ್ಳಬೇಕಾದ ಪ್ರಸಂಗವೇ ಇರುತ್ತಿರಲಿಲ್ಲ. ಹಾಗೆ ಇದ್ದರೆ ಎಷ್ಟು ಚೆನ್ನಾಗುತ್ತಿತ್ತು? ಮನೆಯು ಸಗ್ಗದ ಬೀಡಾಗುತ್ತಿತ್ತು. ಈ ಅತ್ತೆ-ಸೊಸೆಯರ ನಡುವೆ ಒಂದು ತಿಳುವಳಿಕೆ ಇಲ್ಲದೆ ಮನೆಯ ಸಂಸಾರದಲ್ಲಿ ಎಷ್ಟೊಂದು ತೊಡಕು ತೊಂದರೆಗಳಾಗುತ್ತವೆ. ಅತ್ತೆ-ಸೊಸೆಯರ ನಡುವೆ, ತಾಯಿ-ಮಗಳ ವಾತ್ಸಲ್ಯ, ಪ್ರೀತಿ ಕರುಣೆ ಇವುಗಳಿದ್ದರೆ ಮನೆ ನಂದಗೋಕುಲವೇ ಆಗುವುದರಲ್ಲಿ ಸಂಶಯವೇ ಇಲ್ಲ. ಆದರೆ ಹಾಗೆ ಇಲ್ಲ, ಇರುವುದಿಲ್ಲ, ಇದೇ ಚಮತ್ಕಾರ ಈ ಪ್ರಪಂಚದಲ್ಲಿ; ಎಂದು ಸರೂ ಯೋಚನೆಯಲ್ಲಿ ಮುಳುಗಿದ್ದಳು. ನಾರಾಯಣ

ಕಾಫಿ ತಂದು ಇಟ್ಟಿದ್ದೂ ಅವಳ ಗಮನಕ್ಕೆ ಬಂದಿರಲಿಲ್ಲ ಅವಳು ಹಾಗೆಯೇ ಮೈಮರೆತಿದ್ದಳು.

"ಕಾಫಿ ಆರಿಹೋಗುತ್ತೆ ತೆಗೆದುಕೋ ಸರೂ ಎಷ್ಟು ಯೋಚಿಸಿದರೂ ಏನೂ ಫಲವಿಲ್ಲ ತಿಳಿಯಿತೇ? ಕಾಫಿ ಕುಡಿದು, ಸ್ವಲ್ಪ ಹಾಗೇ ಸುಧಾರಿಸಿಕೋ. ನಾನು ನಾರಾಯಣನಿಗೆ ಅಡುಗೆ ಹೇಳಿ ಬರುತ್ತೇನೆ." ಜಾನಕೀಬಾಯಿ ಎದ್ದು ಒಳಕ್ಕೆ ಹೋದರು.

ವಿಜಯನ ಗದ್ದಲದಿಂದ ಶ್ರೀಕಂಠಯ್ಯನವರಿಗೆ ಎಚ್ಚರವಾಯಿತು. ವಿಜಯನ ಮಾತುಗಳು ದೂರದಿಂದ ಅಲಿಅಲಿಯಾಗಿ ಕೇಳಿಬರುತ್ತಿದ್ದವು. ಮೊಮ್ಮಗನ ಧ್ವನಿಯನ್ನು ಗುರುತಿಸುವುದು ಅವರಿಗೆ ಕಷ್ಟವೇನೂ ಆಗಲಿಲ್ಲ. ಅಲ್ಲಿಂದಲೇ ಕೂಗಿದರು 'ವಿಜಯಾ.........!' ಎಂದು. ತಮ್ಮ ಬಲವನ್ನೆಲ್ಲಾ ಉಪಯೋಗಿಸಿ ಕೂಗಿದ್ದರಿಂದ ಗಂಟಲಿನ ನರವೆಲ್ಲಾ ಎಳೆದು, ಕೆಮ್ಮಲು ಬಂದಿತು. ಹಾಗೆ ಕೆಮ್ಮುತ್ತಲೇ ಇರುವಾಗ ನಾಲ್ಕು ವರ್ಷದ ವಿಜಯ ಅವರ ಮಂಚದ ಬಳಿಯಲ್ಲಿ ಬಂದು ನಿಂತ. "ಏನು ಅಜ್ಜಾ, ಕೂಗಿದೆಯಾ ನನ್ನನ್ನು? ನಾನು ಈಗ ಎಲ್ಲಿಂದ ಬಂದೆ ಗೊತ್ತೆ? ಶಾಂತಿಗ್ರಾಮದಿಂದ. ನೋಡು ಅಜ್ಜಾ, ದಾರಿಯಲ್ಲಿ ಎಷ್ಟು ಮರ ಇತ್ತು ಗೊತ್ತೇ? ಅಲ್ಲಿಯೇ ಮರದ ಮೇಲೆ ಹುಲಿ ಕೂತಿತ್ತು. ನಾನು ದೊಣ್ಣೆಯಿಂದ ಹೊಡೆದೆ. ಅದು ಏನು ಮಾಡಿತು ಗೊತ್ತೇ ಅಜ್ಜಾ? ಅಳುತ್ತಾ ಅಳುತ್ತಾ ಹೊರಟು ಹೋಯಿತು. ನಾನು ಮುರಲೀ ಜೊತೆಯಲ್ಲಿ ಓಡಿ ಓಡಿ ಬಂದು ಬಿಟ್ಟೆ." ವಿಜಯ ತನ್ನ ಪುರಾಣವನ್ನೆಲ್ಲಾ ಶುರು ಮಾಡಿದ. ಅವನ ಮಾತು ಕೇಳಿ ಅವರಿಗೆ ನಗು ಬಂದಿತು.

"ಏ ವಿಜಯಾ, ಗಟ್ಟಿಯಾಗಿ ಮಾತನಾಡಬೇಡ, ಮೆಲ್ಲನೆ ಹೇಳು. ಅವರಿಗೆ ಹುಷಾರಿಲ್ಲ" ಎಂದಳು ಸರೂ, ಅವನ ಹಿಂದೆಯೇ ಬರುತ್ತಾ.

"ನೀನು ಯಾವಾಗ ಬಂದೆ ಮಗೂ? ಚೆನ್ನಾಗಿದ್ದೀಯಾ? ಕಡೆಗೂ ಈ ಸಾಯೋ ಮುದುಕನ್ನ ನೋಡೋದಕ್ಕೆ ಮನಸ್ಸು ಮಾಡಿ ಇಲ್ಲಿಯ ವರೆಗೆ ಬಂದೆ ಯಲ್ಲಾ ಅದೊಂದು ದೊಡ್ಡ ಪುಣ್ಯ! ನಿನ್ನನ್ನು ಬಾ ಎಂದು ಕರೆಯಲು ನನಗೆ ಮುಖವಿಲ್ಲ ಸರೂ. ಮನೆಯ ಹಿರಿಯ ಮಗನಾಗಿ, ನನ್ನ ಮಗನಾಗಿ, ನನ್ನಂಥಾ ಶ್ರೋತ್ರೀಯನ ಮಗನಾಗಿ ಈ ಗತಿಗೆ ಬಂದನಲ್ಲಾ ಎಂದು ನನಗೆ ಬಹಳ ದುಃಖವಾಗುತ್ತದೆ ಸರೂ! ಮನೆಯ ಭಾಗ್ಯಲಕ್ಷ್ಮೀ ನೀನು. ನಿನ್ನನ್ನು ಈ ರೀತಿ, ದಿಕ್ಕಿಲ್ಲದ ಪರದೇಶಿಯಂತೆ ಮಾಡಿದನಲ್ಲಾ ಆ ಮಾಧವ! ಮಾಧವ

ಹೀಗಾಗುತ್ತಾನೆಂದು ನಾನು ಕನಸಿನಲ್ಲಿಯೂ ತಿಳಿದಿರಲಿಲ್ಲ ಮಗೂ. ಹಾಗೆ ಏನಾದರೂ ಸ್ವಲ್ಪ ಸಂಶಯವೇ ಬಂದಿದ್ದರೆ ಅವನಿಗೆ ನಾನು ಮದುವೆಯನ್ನೇ ಮಾಡುತ್ತಿರಲಿಲ್ಲ. ಆದರೆ ಅವನು ಎಲ್ಲರಂತೆ ಅಲ್ಲ, ಅವನು ಬಹಳ ದೃಢಮನಸ್ಸಿನವನು. ಎಂದು ನಾನು ತಿಳಿದಿದ್ದೆ ಸರೂ. ಆದರೆ ಈಗ ನನ್ನ ನಿರ್ಧಾರವೆಲ್ಲವೂ ಗಾಳಿಯ ಪಾಲಾಗಿದೆ. ನನ್ನ ಅಂತ್ಯಕರ್ಮಗಳನ್ನು ಮಾಡುವವರಾರು? ಹಿರಿಯ ಮಗನ ಕೈಲಿ ಮಾಡಿಸಿಕೊಳ್ಳುವಂತಹ ಪುಣ್ಯ ನನ್ನ ಹಣೆಯಲ್ಲಿ ಬರೆದಿಲ್ಲ. ಅದಕ್ಕೆ ಯಾರೇನು ಮಾಡುವುದು? ನಾನು ಕಾರ್ಖಾನೆಯನ್ನು ಮಾರದೇ ಇದ್ದಿದ್ದರೆ, ಅವನೂ ಕೆಲಸಕ್ಕೆ ಮದ್ರಾಸಿಗೆ ಹೋಗುತ್ತಲಿರಲಿಲ್ಲವೇನೋ; ಅದರಿಂದಾಗಿ ಈ ಎಲ್ಲಾ ಅನಾಹುತಗಳೂ ನಡೆಯುತ್ತಲಿರಲಿಲ್ಲವೇನೋ, ಎಂದು ಈಗ ಅನ್ನಿಸುತ್ತದೆ. ನಡೆದುದು ನಡೆದು ಹೋಯಿತು; ಹಿಂದಿನದನ್ನು ಸರಿಪಡಿಸಲು ಎಂದಿಗೂ ಸಾಧ್ಯವಿಲ್ಲ. "ಹೀಗೆ ಎದುರಿಗೆ ಬಾ ಸರೂ. ಒಮ್ಮೆ ನನ್ನ ಮನೆಯ ಹಿರಿಯ ಸೊಸೆ, ಮನೆಯ ಭಾಗ್ಯಲಕ್ಷ್ಮಿಯನ್ನು ಕಣ್ಣಾರೆ ನೋಡುವೆ ಬಾ ಮಗೂ." ಶ್ರೀಕಂಠಯ್ಯ ಕಳಕಳಿಯಿಂದ ನುಡಿದರು.

ಮಾವನವರ ಮಾತು ಕೇಳಿ ಸರೂವಿನ ಕಣ್ಣೀರು ಧಾರೆಯಾಗಿ ಹರಿಯಿತು. ತಲೆ ಬಗ್ಗಿಸಿಕೊಂಡೇ ಅವರ ಸಮೀಪಕ್ಕೆ ಬಂದಳು ಸರೂ. ಶ್ರೀಕಂಠಯ್ಯನವರಿಗೆ ಬಲಭಾಗದ ತಲೆಯನ್ನು ಕೂಡ ತಿರುಗಿಸಲು ಸಾಧ್ಯವಿರಲಿಲ್ಲ. ಅದರಿಂದ ಅವರು ಕತ್ತು ತಿರುಗಿಸಿ ಸರೂವನ್ನು ನೋಡುವ ಸ್ಥಿತಿಯಲಿರಲಿಲ್ಲ. "ಈ ಕಡೆ ಬಾರಮ್ಮಾ, ನನಗೆ ತಿರುಗಿ ನೋಡಲು ಸಾಧ್ಯವಿಲ್ಲ" ಎಂದರು ಶ್ರೀಕಂಠಯ್ಯ. ಸರೂ ಎಡಪಾರ್ಶ್ವಕ್ಕೆ ಹೋಗಿ ನಿಂತಳು. ಕಂಬನಿಗಳು ಗಲ್ಲದವರೆಗೂ ಬರುತ್ತಿದ್ದವು. ಮಾವನವರು ನೋಡಿಯಾರೆಂಬ ಭಯದಿಂದ ಬೇಗನೆ ಕಣ್ಣೊರಸಿಕೊಂಡಳು ಸರೂ. ದುಃಖದ ಬೇಗೆಯಲ್ಲಿ ಬೇಯುತ್ತಿದ್ದರೂ ಅವಳ ಮುಖದಲ್ಲಿ ಅಪೂರ್ವವಾದ ಕಳೆ ಎದ್ದು ಕಾಣುತ್ತಿತ್ತು. ತನ್ನ ಸಂಯಮದ ಶಕ್ತಿಯಿಂದ ಸರೂ ಅದನ್ನು ಗಳಿಸಿಕೊಂಡಿದ್ದಳು.

ಶ್ರೀಕಂಠಯ್ಯ ಸೊಸೆಯನ್ನು ಆಪಾದಮಸ್ತಕದವರೆಗೂ ನೋಡಿದರು. ಶಕ್ತಿಹೀನ ಹಸ್ತದಿಂದ ಅವಳ ತಲೆಯನ್ನು ನೇವರಿಸುತ್ತಾ ಹೇಳಿದರು: "ಈ ನಿರ್ಭಾಗ್ಯನ ಮನೆ ಸೇರಿ, ನೀನು ಬಹಳ ಕಷ್ಟಪಟ್ಟೆ ಮಗೂ! ನಿನ್ನ ಕಣ್ಣೀರು ಒಂದು ಹನಿಯಾದರೂ ಈ ಮನೆಯಲ್ಲಿ ಬಿದ್ದಲ್ಲಿ, ಅದರ ಪರಿಣಾಮ ಒಳ್ಳೆಯದಲ್ಲ ಎಂಬುದು ನಿನಗೆ ತಿಳಿದಿದೆಯೆ? ನೀನು ದುಃಖಿಸಬೇಡ, ಸಮಾಧಾನ

ದಿಂದಿರು ಎಂದು ಯಾವ ಬಾಯಲ್ಲಿ ನಾನು ಹೇಳಲಿ? ಕಣ್ಣೆದುರಿಗೇ ಅವನು ಮಾಡಿದ ಪಾಪ ಇರುವಾಗ, ನಿನ್ನನ್ನು ಅಳಬೇಡ ಎಂದು ಯಾವ ರೀತಿಯಲ್ಲಿ ಹೇಳಲಿ? ದೇವರಲ್ಲಿ ನಂಬಿಕೆಯನ್ನಿಡು ಸರೂ. ಅವನೊಬ್ಬ ಎಂದೆಂದಿಗೂ ತನ್ನ ಮಕ್ಕಳನ್ನು ಕೈ ಬಿಡಲಾರ.'' ದುಃಖಾತಿರೇಕದಿಂದ ಅವರಿಗೆ ಮಾತುಗಳೇ ಹೊರಡದಾದುವು. ಹೃದಯವೇ ಬಿರಿದು ಹೋಗುವುದೇನೋ ಎಂಬಂತೆ, ಅವರ ಹೃದಯದ ಶಬ್ದ ಸರೂವಿಗೂ ಕೇಳಿಬರುತ್ತಿತ್ತು.

"ನಾನು ಯಾವುದಕ್ಕೂ ದುಃಖಿಸುವುದಿಲ್ಲ ಮಾವ. ಈ ಬಡವಳನ್ನು ನಿಮ್ಮ ಸೊಸೆಯನ್ನಾಗಿ ಮಾಡಿಕೊಂಡು, ನಿಮ್ಮ ಅಪಾರವಾದ ಕರುಣೆಯಿಂದಲೇ ನನ್ನನ್ನು ಮುಂದಕ್ಕೆ ತಂದಿರಿ. ನೀವು ನನ್ನ ಭಾಗದ ದೇವರು. ನಿಮ್ಮನ್ನು ನಾನು ಎಂದೆಂದಿಗೂ ಅನ್ನಲಾರೆ. ಅವರ ವಿಷಯ: ನಡೆಯುವ ಮನುಷ್ಯ ಎಡವದೇ ಮಲಗಿದ ಮನುಷ್ಯ ಎಡಹುವರೇ? ಏನೋ ಅವರಿಗೂ ಹಿಂದಿನ ಜನ್ಮದ ಋಣಾನುಬಂಧವಿತ್ತೆಂದು ತೋರುತ್ತೆ, ಅವಳು ದೊರಕಿದಳು. ಅದಕ್ಕೆ ಹೊಣೆ ಯಾರು? ಈಗ ಅವರು ಅವಳ ಜೊತೆಯಲ್ಲಿ ಅತ್ಯಂತ ಸುಖದಿಂದರ ಬೇಕು. ಅದೇ ಸಾಕು. ಅವರೇನು ನನ್ನನ್ನು ಮನೆಬಿಟ್ಟು ಓಡಿಸಲಿಲ್ಲ. ನಾನಾ ಗಿಯೇ ವಿಜಯನಿಗಾಗಿ, ಅವನನ್ನು ಒಳ್ಳೆಯ ಹುಡುಗನನ್ನಾಗಿ ಬೆಳೆಸಬೇಕೆಂಬ ಚಪಲದಿಂದ ಬಂದಿರುವೆ. ಅವನ ಜವಾಬ್ದಾರಿ ಕಳೆದ ಮೇಲೆ, ನಾನು ನಿಜ ವಾಗಿಯೂ ಅವರ ಬಳಿಗೇ ಹೋಗುವೆ. ಎಂದಿದ್ದರೂ ಅವರು ನನ್ನ ಸ್ವಾಮಿ; ನಾನು ಅವರ ದಾಸಿ. ಏನೋ ವಿಷಮ ಗಳಿಗೆಯಲ್ಲಿ ಅವರನ್ನು ಅಗಲಿದ್ದೇನೆ. ಕಾಲ ಬಂದರೆ ಅವರನ್ನು ನಾನು ಸೇರುವೆ. ನಾನು ನಮ್ಮ ಹಳ್ಳಿಯಲ್ಲೀಗ ನೆಮ್ಮದಿಯಿಂದಿದ್ದೇನೆ. ನನ್ನ ವಿಷಯ ನೀವಾರೂ ಯೋಚಿಸಬೇಡಿ" ಒಂದು ದಿನವೂ ಮಾವನವರ ಕೈಲಿ ಇಷ್ಟು ಮಾತನಾಡದಿದ್ದ ಸರೂ ಈಗ ಉದ್ವೇಗ ಗೊಂಡು ಮಾತನಾಡಿದ್ದಳು. ಕೆಲವು ನಿಮಿಷಗಳನಂತರ ಮಾವನವರ ಕೈಲಿ ನಾನು ಹೇಗೆ ಇದನ್ನೆಲ್ಲಾ ಹೇಳಿದೆ ಎಂದು ತನಗೆ ತಾನೇ ಚಕಿತಳಾದಳು.

"ನೀನು ಪುಣ್ಯವಂತೆ ಕಣೇ ತಾಯೀ, ನಿನ್ನ ಹೊಟ್ಟೆ ತಣ್ಣಗಿರಲಿ. ನಿನ್ನಂತಹ ಸೊಸೆಯನ್ನು ಪಡೆದಿರುವ ನಾನೇ ಪುಣ್ಯವಂತ ಸರೂ. ಸರೂ, ನೀನು ನಮ್ಮ ಮನೆ ದೇವತೆ, ಸರೂ ಸರೂ........" ಎಂದು ಶ್ರೀಕಂಠಯ್ಯ ಪ್ರಲಾಪಿಸಿ ದರು. ಅವರು ಅಷ್ಟು ಗಟ್ಟಿಯಾಗಿ ಮಾತನಾಡಿಯೇ ಇರಲಿಲ್ಲ. ಈ ರೋಗ ಬಂದಂದಿನಿಂದ ಅವರ ಧ್ವನಿ ಇನ್ನೂ ಕ್ಷೀಣವಾಗಿತ್ತು. ಇಂದು ಅವರ ಧ್ವನಿ

ಕೇಳಿ ಮುರಲಿ ಜಾನಕೀಬಾಯಿ ಇಬ್ಬರೂ ಆಶ್ಚರ್ಯದಿಂದ ಓಡಿಬಂದರು. ಮುರಲಿ ಬಂದುದನ್ನು ನೋಡಿದೊಡನೆಯೇ ಶ್ರೀಕಂಠಯ್ಯ ಅವನನ್ನು ಸಮೀಪಕ್ಕೆ ಕರೆದು "ಈ ನಿನ್ನ ಅತ್ತಿಗೆ, ನನ್ನ ಮನೆಯ ಭಾಗ್ಯಲಕ್ಷ್ಮಿಯನ್ನು ನಿನ್ನ ಕೈಗೇ ಒಪ್ಪಿಸಿ ಹೋಗುತ್ತೇನೆ ಮುರಲೀ. ಈ ಮನೆಯಲ್ಲಿ ಇರುವ ಹಿರಿಯವನೆಂದರೆ ನೀನೊಬ್ಬನೇ. ಏನೇ ಆಗಲಿ ಅವಳನ್ನು ನೀನು ಕೈಬಿಡದೆ, ನಿನ್ನ ಜೀವವಿರುವ ತನಕ ಕಾಪಾಡುವೆಯಾ ? ಸತ್ಯವಾಗಿ ಹೇಳು ಮುರಲೀ. ನಾನು ಹೇಳಿದ ಹಾಗೆ ನಡೆಯುವೆಯಾ ?" ಎಂದು ನುಡಿದರು.

ತಂದೆ ಯಾಕೆ ಈ ರೀತಿ ಹೇಳುತ್ತಿದ್ದಾರೆಂಬುದೇ ಮುರಲಿಗೆ ತಿಳಿಯ ಲಿಲ್ಲ. ಅವನಿಗೆ ದಿಗ್ಭ್ರಮೆಯಾಗಿತ್ತು. "ನೀವು ಹೇಳಿದಂತೆ ಖಂಡಿತ ನಡೆದು ಕೊಳ್ಳುತ್ತೇನೆ. ನನ್ನಲ್ಲಿ ನಂಬಿಕೆ ಇಡಿರಿ." ಮುರಲಿ ತಂದೆಗೆ ಉತ್ತರಿಸಿದ.

"ಹಾಗಾದರ ಭಾಷೆ ಕೊಡು; ನಿನ್ನ ಜೀವವಿರುವ ತನಕ ಅತ್ತಿಗೆಯನ್ನು ಕೈಬಿಡುವುದಿಲ್ಲ ಎಂದು." ಶ್ರೀಕಂಠಯ್ಯ ಮಗನ ಕೈಲಿ ಆಣೆ ಇಡಿಸಿ ವಚನ ತೆಗೆದುಕೊಂಡರು. ಅವರಿಗೆ ದೊಡ್ಡ ಹೊರೆಯನ್ನಿಳಿಸಿದಂತಾಯಿತು. ಅದೇ ಗೆಲುವಿನಿಂದ ಅವರು ನಿದ್ರೆ ಹೋದರು. ಆ ವೇಳೆಗೆ ರಾತ್ರಿ ಬಹಳವಾಗಿದ್ದ ರಿಂದ ಎಲ್ಲರೂ ಊಟದ ಶಾಸ್ತ್ರ ಮಾಡಿ ಮಲಗಿದರು. ಪ್ರಯಾಣದಿಂದ ಆಯಾಸಹೊಂದಿದ ಸರೂವಿಗೆ ಮಲಗಿದೊಡನೆಯೇ ನಿದ್ರೆ ಬಂದಿತು.

ಬೆಳಗ್ಗೆ ಬಹಳ ಹೊತ್ತಾದರೂ ಶ್ರೀಕಂಠಯ್ಯನವರು ಎದ್ದೇ ಇರಲಿಲ್ಲ. ಎಂದಿನಂತೆ ಜಾನಕೀಬಾಯಿ, ಕಾಫಿಯನ್ನು ತೆಗೆದುಕೊಂಡು ಪತಿಗೆ ಕುಡಿಸಲು ಮಂಚದ ಬಳಿಗೆ ಬಂದು ನೋಡಿದವರೇ ಚಿಟ್ಟನೆ ಚೀರಿದರು. ಕಾಫಿಯ ಲೋಟಾ ಕೆಳಗೆ ಬಿದ್ದು ಕಾಫಿಯೆಲ್ಲಾ ಸೀರೆಯ ಮೇಲೆ ಚೆಲ್ಲಿತು. ಅವರ ಕೂಗನ್ನು ಕೇಳಿ ಎಲ್ಲರೂ ಓಡಿಯೇ ಬಂದರು. ಬಂದರೆ ನೋಡುವುದೇನು ? ಶ್ರೀಕಂಠಯ್ಯ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದ್ದರು. ತಮ್ಮ ಜೀವಿತದ ಕಡೆಯ ಕೆಲಸವನ್ನೂ ನೆರವೇರಿಸಿ, ಅದೇ ನೆಮ್ಮದಿಯಿಂದಲೇ ತಮ್ಮ ಜೀವನಯಾತ್ರೆಯನ್ನು ಮುಗಿಸಿದ್ದರು. ಅವರ ಮುಖದ ಮೇಲೆ ತೃಪ್ತಿ ಸು ಕಳೆ ಲಾಸ್ಯವಾಡುತ್ತಿತ್ತು. ತುಟಿಯಲ್ಲಿ ನಗುವಿನ ಗೆರೆ ಕಾಣಿಸುತ್ತಿದ್ದಿತು. ಕಣ್ಣುಗಳು ಅರೆತೆರೆದಿದ್ದುವು. ಒಂದು ಕ್ಷಣಮಾತ್ರದಲ್ಲಿ ಎಲ್ಲರಿಗೂ ತಿಳಿಯಿತು ಅವರು ಗತಿಸಿದ್ದಾರೆಂದು. ಜಾನಕೀಬಾಯಿ ಜ್ಞಾನ ತಪ್ಪಿ ಅಲ್ಲಿಯೇ ಬಿದ್ದರು. ...ನಂದ ಗಟ್ಟಿಯಾದ ಧ್ವನಿಯಲ್ಲಿ ಅಳಲು ಶುರುಮಾಡಿದ. ಮನೆಯವರೆಲ್ಲಾ

ಶೋಕಸಾಗರದಲ್ಲಿ ಮುಳುಗಿದರು.

ಮಾಧವ, ಅಶೋಕ, ಮೋಹನ ಇವರಿಗೆಲ್ಲಾ ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಟ್ಟು ಬಂದ ಮುರಲಿ. ಮನೆಯಲ್ಲಿಯ ಹಿರಿಯ ಗಂಡುಹುಡುಗ ಎಂದರೆ ಅವನೇ ಆಗಿದ್ದ. ಅವರೆಲ್ಲಾ ಬರುವ ತನಕ ಯಾವ ಕೆಲಸವನ್ನು ಮಾಡಬಾರ ದೆಂದು ಸುಮ್ಮನೇ ಇದ್ದ ಮುರಲಿ. ತಂದೆಯ ಮರಣವಾರ್ತೆ ತಿಳಿದೊಡನೆಯೇ ಮೋಹನ, ಕೂಡಲೇ ಪ್ಲೇನಿನಲ್ಲಿ ಧಾವಿಸಿ ಬಂದ. ಅಶೋಕ ರೈಲಿನಲ್ಲಿ ರಾತ್ರಿಯ ಗಾಡಿಗೆ ಬಂದ ಮಾಧವನ ಪತ್ತೆಯೇ ಇಲ್ಲ. ಯಾವ ಅಂತ್ಯಕ್ರಿಯೆ ಗಳನ್ನು ಮಾಡಲಾಗದಿದ್ದರೂ ಕೊನೆಯ ಬಾರಿ ತಂದೆಯ ಮುಖ ನೋಡಲೀ ಎಂದು ತಮ್ಮಂದಿರಿಗೆಲ್ಲ ಆಸೆ. ಕಡೆಗೆ ಮುರಲಿಯೇ ಹೋಗಿ ಅವನ ಕಂಪನಿಯ ಯಜಮಾನ ಅನಂತಸಿಂಗರವರಿಗೆ 'ಟ್ರಂಕ್‌ಕಾಃಲ್' ಮಾಡಿ, ತಂದೆಯ ಮರಣವನ್ನು ತಿಳಿಸಿ, ಮಾಧವನನ್ನು ಕೂಡಲೇ ಕಳಿಸಬೇಕೆಂದೂ ಹೇಳಿದ. ಆದರೆ ಮಾಧವ ಕೆಲಸಕ್ಕೆ ಬರದೇ ರಜೆಯ ಮೇಲಿದ್ದಾನೆಂದು ಉತ್ತರ ಬಂತು. ಮನೆಯ ಅಡ್ರೆಸ್ಸಿಗೇ ಟೆಲಿಗ್ರಾಂ ಮಾಡಿ ಬಂದ, ಬೆಳಗ್ಗೆ ಪ್ಲೇನಿನಲ್ಲಿ ಬರಬಹು ದೆಂದು.

ರಾತ್ರಿ ಕಳೆದು ಬೆಳಗಾಯಿತು. 'ಏರ್ ಸ್ಟೇಷನ್'ಗೆ ಹೋಗಿ ನೋಡಿ ಕೊಂಡು ಬಂದಿದ್ದೂ ಆಯ್ತು. ಮಾದವನ ಸುಳಿವೇ ಇಲ್ಲ. ಶ್ರೀಕಂಠಯ್ಯ ಗತಿಸಿ ಸರಿಯಾಗಿ ಒಂದು ದಿನವೇ ಆಗಿತ್ತು. ಇನ್ನು ಹೆಚ್ಚುಕಾಲ ವಿಳಂಬ ಮಾಡ ಬಾರದು. ಹಾಗೆ ಮನೆಯಲ್ಲಿ ಶವವನ್ನು ಇಟ್ಟುಕೊಳ್ಳಬಾರದು, ಅದು ಅಮಂಗಲ ಎಂದು ಬಂದವರೆಲ್ಲಾ ಹೇಳಿದರು. ಸರಿ, ಅವನು ವಿಧಿಯಿಲ್ಲದೆಯೇ ಮಾಧವನ ಆಶೆ ತೊರೆದು ಅವರವರೇ ದಿನಕರ್ಮಗಳನ್ನು ಮಾಡಿ ಮುಗಿಸಿ ದರು. ತಂದೆಯ ಶವವನ್ನು ಕೂಡಾ ನೋಡಲು ಬರಲಿಲ್ಲವಲ್ಲಾ ಎಂದು ನರೂ ಬಹಳ ದುಃಖಗೊಂಡಳು. ಜೊತೆಗೆ ಅವಳಿಗೆ ಭಯವೂ ಆಯಿತು, ಅವರು ಹುಷಾರಾಗಿದ್ದಾರೆ ತಾನೆ? ಇಲ್ಲದೆ ಅವರಿಗೂ ಏನಾದರೂ ಆಗಿಬಿಟ್ಟರೆ....? ಎಂದೆಲ್ಲಾ ಯೋಚಿಸಿ ನರೂ ಥರಥರನೆ ನಡುಗಿದಳು.

ಎಲ್ಲಾ ಕೆಲಸವನ್ನೂ ಮುಗಿಸಿ, ಅಶೋಕ ಮೋಹನರು, ದುಃಖದಿಂದ ಭಾರವಾದ ಹೃದಯದೊಡನೆ ತಮ್ಮ ತಮ್ಮ ಊರುಗಳಿಗೆ ತೆರಳಿದರು. ತಾಯಿಗೆ ಕೊನೆಗಾಲಕ್ಕೆ ಈ ವೈಧವ್ಯ ಪ್ರಾಪ್ತವಾಯಿತಲ್ಲಾ ಎಂದು ಅವರು ಬಹಳವಾಗಿ ವ್ಯಥೆಗೊಂಡರು.

ಜಾನಕೀಬಾಯಿ ಕೇವಲ ಹತ್ತೇ ದಿನಗಳಲ್ಲಿ ಪೂರ್ತಿಯಾಗಿ ಇಳಿದು ಹೋದರು. ತಂದೆಯ ಮರಣದ ವಿನಹ ಬೇರೆ ಯಾವ ಒಂದು ಚಿಕ್ಕಪುಟ್ಟ ಸಾವನ್ನೂ ನೋಡದ ಜಾನಕೀಬಾಯಿ, ಪತಿಯ ಮರಣದಿಂದ ಕುಗ್ಗಿ ಹೋದರು. ಈಗಲೀಗ ನಿಜವಾಗಿಯೂ ಅವರು ಜೀವತ್‌ಶವದಂತಾಗಿದ್ದರು.

ಸರೂ, ತನ್ನನ್ನು ಅಷ್ಟರ ಮಟ್ಟಿಗೆ ಪ್ರೀತಿಯಿಂದ ಕಾಣುತ್ತಿದ್ದ ಮಾವನರು ಗತಿಸಿದುದಕ್ಕಾಗಿ ಬಹಳ ಅತ್ತಳು. ತನ್ನ ತಂದೆಯೇ ಹೋದಷ್ಟು ದುಃಖ ವಾಯಿತು ಅವಳಿಗೆ.

ಬಂದು ಮುರಲಿ ಹೇಳಿದ "ಅತ್ತಿಗೇ, ನಾನು ತಂದೆಯ ಕೈಲಿ ವಚನ ಕೊಟ್ಟಿರುವೆ ನಿಮ್ಮನ್ನು ಸಲಹುವೆನೆಂದು. ನೀವು ಯಾಕೆ ಆ ಹಳ್ಳಿಗೆ ಹೋಗ ಬೇಕು? ಇಲ್ಲಿಯೇ ಇದ್ದುಬಿಡಿರಿ. ಹೇಗಿದ್ದರೂ ಅಮ್ಮನಿಗೆ ಜೊತೆಗೆ ಯಾರೂ ಇಲ್ಲ. ಅವಳಿಗೆ ಸಮಾಧಾನ ಹೇಳುವವರು ಯಾರು?"

"ಆ ನನ್ನ ಹಳ್ಳಿಯನ್ನು ನಾನೆಂದಿಗೂ ಬಿಡಲಾರೆ ಮುರಲೀ. ದಿಕ್ಕಿಲ್ಲದೇ ಪರದೇಸಿಯಂತೆ ಅಲೆಯುವ ಕಾಲ ಬಂದಾಗ ಅಲ್ಲಿಯ ಜನ ನನಗೆ ನಿಲ್ಲಲು ನೆರಳು ತೋರಿಸಿದರು. ಈಗ ನಾನು ಅವರನ್ನು ತೊರೆದು ಹೇಗೆ ಬರಲಿ ಮುರಲೀ? ನಿನಗೆ ಸಹಾಯಮಾಡುವ ಅಭಿಲಾಷೆ ಇದ್ದರೆ, ವಿಜಯ ಮುಂದಕ್ಕೆ ಓದಬೇಕಾಗಿ ಬಂದಾಗ, ನಿನ್ನ ಇಷ್ಟ ಬಂದಂತೆ ಮಾಡು. ನಾನು ಬೇಡವೆನ್ನುವು ದಿಲ್ಲ. ಆದರೆ ನಾನು ಆ ಹಳ್ಳಿಯನ್ನು ಬಿಟ್ಟು ಕದಲಲಾರೆ ಮುರಲೀ. ಕ್ಷಮಿಸು. ಅಮ್ಮನವರ ಜೊತೆಯಲ್ಲಿದ್ದು ಅವರ ಕಷ್ಟಸುಖಗಳಲ್ಲಿ ಭಾಗಿಯಾಗಿರಬೇಕೆಂದು ನನಗೂ ಆಸೆ ಇದೆ. ಆದರೆ ವಿಧಿ ಇಲ್ಲ. ನಾನು ಅಲ್ಲಿಗೆ ಹೋಗಲೇಬೇಕು. ನನಗಾಗಿ ಹುಡುಗರು ಕಾದಿರುತ್ತಾರೆ." ಎಂದು ಮುರಲಿಗೆ ಹೇಳಿ ಜಾನಕೀ ಬಾಯಿಯರ ಹತ್ತಿರ ಹೋಗಿ "ನನ್ನನ್ನು ಕಳಿಸಿರಿ ಅಮ್ಮ, ನಾನು ಹೋಗಿ ಬರುವೆ. ಈ ಹತಭಾಗ್ಯಳನ್ನು—ಅಂಥಾ ದೇವರಂಥಾ ಮಾವನವರನ್ನು ಉಳಿಸಿಕೊಳ್ಳಲಾರದ ಈ ಸರೂವನ್ನು—ಕಳಿಸಿಕೊಡಿ ಅಮ್ಮಾ. ನಾನು ಬಾರದೆ ಇದ್ದಿದ್ದರೆ ಅವರು ಇನ್ನೂ ಕೆಲವು ದಿನ ಇರುತ್ತಿದ್ದರೋ ಏನೋ! ನಾನೊಬ್ಬಳು ದುರ್ದೈವಿ! ಅವರನ್ನು ಇಟ್ಟುಕೊಳ್ಳುವ ಪುಣ್ಯವನ್ನೂ ಪಡೆದು ಬಂದಿಲ್ಲ!" ಸರೂ ಕಂಬನಿದುಂಬಿ ಹೇಳಿದಳು.

"ಯಾರಿಗೆ ಯಾರೂ ಹೊಣೆಯಲ್ಲ ಸರೂ. ಅವರ ಸಾವಿಗೂ ನಿನ್ನ ಬರು ವಿಕೆಗೂ ಏನು ಸಂಬಂಧ? ಎಲ್ಲಾ ವಿಧಿಲಿಖಿತದಂತೆ ನಡೆದೇ ತೀರುತ್ತೆ. ಮನುಷ್ಯ

ಏನು ಬೇಕಾದರೂ ಗೆಲ್ಲಬಹುದು ನೋಡು, ಆದರೆ ಈ ವಿಧಿ, ಇದೊಂದನ್ನು ಜಯಿಸಲು ಯಾವ ವಿಜ್ಞಾನಿಗೂ ಸಾಧ್ಯವೇ ಇಲ್ಲ ನೋಡು. ನೀನು ಒಳ್ಳೆಯ ಸತ್ಕಾರ್ಯದಲ್ಲಿ ತೊಡಗಿರುವೆ; ನಿನ್ನನ್ನು ಅಡ್ಡಿಪಡಿಸುವುದಿಲ್ಲ. ನೀನು ಹೋಗಿ ನಿನ್ನ ಹಳ್ಳಿಯಲ್ಲಿ ನಿನ್ನ ಉದ್ಯಮವನ್ನು ನಡೆಸಿ ಜಯಶೀಲಳಾಗು ಸರೂ. ನಿನ್ನ ಪತಿಯ ಬಳಿ ನೀನು ಜಾಗ್ರತೆ ಸೇರುವಂತಾಗಲೀ ಅದಕ್ಕಿಂತ ಹೆಚ್ಚಿಗೆ ನಾನು ಏನೂ ಹೇಳಲಾರೆ "ಎಂದು ಹೇಳುತ್ತಿರುವಾಗಲೇ ಜಾನಕೀಬಾಯಿಯವರ ಕಂಠ ಬಿಗಿದು ಬಂತು. ಸರೂ ಮೌನಳಾಗಿ ನಿಂತಿದ್ದಳು.

ಅಲ್ಲಿಯ ಪೂರ್ತಿ ಕೆಲಸಗಳೆಲ್ಲಾ ಮುಗಿದ ಮೇಲೆ ಸರೂ ವಿಜಯನೊಡನೆ ಹೊರಟಳು. ಮುರಲಿ ನಿಲ್ದಾಣದ ವರೆಗೆ ಬಂದು, ಬಸ್ಸಲ್ಲಿ ಅವರನ್ನು ಕೂಡಿಸಿ ಮನೆಗೆ ಬಂದ. ವಿಜಯನನ್ನು ಬರಿಕೈಯಲ್ಲಿ ಕಳಿಸಲಾರದೆ ನೂರು ರೂಪಾಯಿ ಗಳನ್ನು ಪರ್ಸಿನಲ್ಲಿಟ್ಟು ಅದನ್ನು ಅತ್ತಿಗೆಗೆ 'ವಿಜಯನಿಗೆ ಏನಾದರೂ ಬಟ್ಟೆ ಹೊಲಿಸಿರಿ' ಎಂದು ಹೇಳಿ ಕೊಟ್ಟು ಬಂದಿದ್ದ. ಮುರಲಿ ಕೊಟ್ಟ ಹಣವೆಷ್ಟು ಎಂಬುದು ಸರೂವಿಗೆ ತಿಳಿಯದು. ಅವಳು ತನ್ನ ಮನೆಯನ್ನು ಸೇರಿ ಹಣವನ್ನು ಲೆಕ್ಕ ಮಾಡಿದಾಗಲೇ ಗೊತ್ತಾದುದು.

ಎಂದಿನಂತೆ ಸರೂ ತನ್ನ ಶಾಲೆಯ ಕೆಲಸಕ್ಕೆ ತೊಡಗಿದಳು. ರಾಮು ಅವಳ ಆಜ್ಞೆಯನ್ನು ಅಕ್ಷರಶಃ ಪಾಲಿಸಿದ್ದನು. ಹುಡುಗರು ಶಾಲೆಗೆ ಬರುವ ಅಭ್ಯಾಸವನ್ನೇನೂ ಮರೆತಿರಲಿಲ್ಲ. ಸರೂ ಅವರ ನಡತೆಯನ್ನು ಬಹಳವಾಗಿ ಮೆಚ್ಚಿಕೊಂಡಳು.

ಮಾಧವ ತನ್ನ ತಂದೆಯ ಅಂತಿಮ ದರ್ಶನಕ್ಕೂ ಬಾರದೆ ಇದ್ದುದಕ್ಕಾಗಿ, ಇಲ್ಲಿ ಎಲ್ಲರೂ ಪೇಚಾಡಿಕೊಂಡರಷ್ಟೆ? ಮಾಧವ ಬಾರದಿದ್ದುದಕ್ಕಾಗಿ ಪ್ರಬಲ ವಾದ ಕಾರಣವೇ ಇದ್ದಿತು. ಅವನಿಗೆ ಇದು ವರೆಗೂ ತಂದೆ ತೀರಿದ ವಾರ್ತೆ ಕಿವಿಗೆ ಬಿದ್ದಿರಲಿಲ್ಲ.

ಮುರಲಿ ಮೊದಲ ಬಾರಿ ಕಳಿಸಿದ ಟೆಲಿಗ್ರಾಂ ಮನೆಗೇ ಬಂದಿತ್ತು. ಆಗ ಮಾಧವ ಮನೆಯಲ್ಲಿರದೆ ಆಫೀಸಿನಲ್ಲಿದ್ದ. ಲೂಸಿ ಓದಿ ನೋಡಿಕೊಂಡಳು

ಅದರಲ್ಲಿ ಅವನ ತಂದೆ ತೀರಿದ ಸಮಾಚಾರವಿತ್ತು. ಹೇಗಿದ್ದರೂ ತಂದೆ ತೀರಿ ಹೋಗಿದ್ದಾರೆ, ಅಲ್ಲಿ ಅವನು ಹೋದರೂ ಅವರ ಜಾತಿಗೇನೂ ಸೇರುವ ಹಾಗಿಲ್ಲ. ಅಲ್ಲಿಗೆ ಹೋದ ಮೇಲೆ ಅವರು ಮಾಧವನ ಮನಸ್ಸನ್ನು ತಿರುಗಿಸಿ ಬಿಟ್ಟರೆ? ಮಾಧವನನ್ನು ಇಲ್ಲಿಗೆ ಕಳಿಸದೆ ಇದ್ದರೆ? ಮುರಲಿ ಆ ದಿನ ಬಂದಿದ್ದ ವನು ನನ್ನ ಎದುರಿಗೇ ಎಷ್ಟು ಮಾತನಾಡಿದ! ಅಲ್ಲಿಗೆ ಹೋದ ಮೇಲೆ ಅವ ನನ್ನು ಹಿಂದಕ್ಕೆ ಕಳಿಸುತ್ತಾರೋ ಇಲ್ಲವೋ? ಮಾಧವ ಹೋಗಿ ಮಾಡುವು ದಾದರೂ ಏನು? ಕಡೆಯ ಬಾರಿ ತಂದೆಯ ಮುಖ ನೋಡಬಹುದು ಅಷ್ಟೇ, ಇನ್ನೇನು ಇಲ್ಲ. ಆದರಿಂದ ಮಾಧವನಿಗೆ ಈ ವಿಷಯ ತಿಳಿಸದಿರುವುದೇ ವಾಸಿ ಎಂದುಕೊಂಡು ಲೂಸೀ ಟೆಲಿಗ್ರಾಂನ್ನು ಮುಚ್ಚಿಟ್ಟಳು. ಮಾಧವ ತಲೆನೋವು ಎಂದು ಮಧ್ಯಾಹ್ನಕ್ಕೆ ಮನೆಗೆ ಬಂದರೂ ಲೂಸಿ ಅವನಿಗೆ ಯಾವ ಸಮಾಚಾರ ವನ್ನೂ ತಿಳಿಸಲಿಲ್ಲ.

ಮುರಲಿ ಕಳಿಸಿದ 'ಟ್ರಂಕ್ ಕಾಲ್'ನಲ್ಲಿ ಅನಂತಸಿಂಗ್ 'ಮಾಧವ ಮಧ್ಯಾ ಹ್ನಕ್ಕೇ ರಜೆ ಪಡೆದು ಹೋದನೆಂ'ದೂ ತಿಳಿಸಿದರು. ಆದರೂ ಮಾಧವನಿಗೆ ವಿಷಯ ತಿಳಿಸಲು ಆಳನ್ನು ಅವನ ಮನೆಗೇ ಕಳಿಸಿಕೊಟ್ಟರು. ಅವನು ಬಂದಾಗ ರಾತ್ರಿ ಎಂಟರ ಮೇಲಾಗಿತ್ತು. ಮಾಧವ ತಲೆನೋವೆಂದು ಮಲಗಿದ್ದ. ಮನೆಗೆ ಬಂದ ಆಳನ್ನು ವಿಚಾರಿಸಿದವಳು ಲೂಸಿಯೇ. ಈಗಲೂ ಮಾಧವನಿಗೆ ಸಮಾ ಚಾರ ತಿಳಿಯಗೊಡಲೇ ಇಲ್ಲ.

"ಯಾರು ಬಂದಿದ್ದವರು ಲೂಸಿ?" ಎಂದು ಕೇಳಿದ್ದಕ್ಕೆ, "ಫಿಲೋಮಿನಾ ಹೇಳಿಕಳಿಸಿದ್ದಾಳೆ. ನಾಳೆ ಅವಳ ಮನೆಗೆ ನಾವು ಹೋಗಬೇಕಂತೆ" ಎಂದು ಮಾತು ಮುಗಿಸಿದ್ದಳು.

ಮಾಧವ ಮಾರನೆಯ ದಿನ ರಜೆ ಪಡೆದು, ಫಿಲೋಮಿನಾಳ ಮನೆಗೇ ಹೋಗಿದ್ದ. ಲೂಸಿ ತಾನು ಮಾಡಿರುವ ಕೆಲಸವನ್ನು ಆಂಟೀಗೆ ತಿಳಿಸಲಾರದೆ ತಿಳಿಸಿದಾಗ ಅವಳು ಲೂಸಿಯ ನಡತೆಗಾಗಿ ಬಹಳ ಖೇದಗೊಂಡಳು. 'ನೀನು ಈ ರೀತಿ ಮಾಡಬಾರದು ಲೂಸಿ, ಇದು ಒಳ್ಳೆಯದಲ್ಲ. ಈಗಲೂ ಕಾಲ ಮೀರಿ ಹೋಗಿಲ್ಲ, ತಿಳಿಸಿ ಬಿಡು ಪಾಪ. ಅವರ ತಂದೆಯನ್ನು ಅವರು ನೋಡಲೇ ಬೇಡವೆ?" ಫಿಲೋಮಿನಾ ನೊಂದು ನುಡಿದಳು.

"ನಿನ್ನ ದಮ್ಮಯ್ಯ ಆಂಟೀ, ಇದೊಂದು ದಿನ ಸುಮ್ಮನಿದ್ದುಬಿಡು. ನಾನು ಈ ರೀತಿ ಮಾಡಿದೆ ಅಂದರೆ, ಅವರಿಗೆ ನನ್ನ ಮೇಲೆ ಎಷ್ಟು ಕೋಪ

ಬರಲಿಕ್ಕಿಲ್ಲ! ಅನಂತರ ನನ್ನ ಗತಿ ಏನು? ನಿನ್ನ ಕಾಲಿಗೆ ಬೀಳುವೆ ಅಂಟೀ ಸುಮ್ಮನಿದ್ದುಬಿಡು" ಲೂಸಿ ಅಂಗಲಾಚಿದಳು. ಎಷ್ಟೆಂದರೂ ಲೂಸಿ ತನ್ನ ಅಕ್ಕನ ಮಗಳೇ ಅಲ್ಲವೆ? ಅವಳ ಬಾಳನ್ನು ಹದಗೆಡಿಸುವುದೇ? ಎಂದುಕೊಂಡು ಫಿಲೋಮಿನಾ ಸುಮ್ಮನಾದಳು. ಯಾವ ವಿಷಯವನ್ನೂ ತಿಳಿಯದ ಮಾಧವ ಎಂದಿನಂತೆ ಲೂಸಿಯ ಜೊತೆ ಮಾತುಕತೆಯಾಡುತ್ತಲೇ ದಿನವನ್ನು ಕಳೆದ.

ಮಾಧವನಿಗೆ ತಂದೆಯ ಮರಣವಾರ್ತೆ ತಿಳಿದುದು ಎಂಟು ದಿನಗಳ ಮೇಲೆ. ಅದೂ ಅನಂತಸಿಂಗ್‌ರವರ ಮೂಲಕವೇ. ಲೂಸಿಯೂ ಸಕಾಲಕ್ಕೆ ತಮಗೆ ಸುದ್ದಿಯು ದೊರೆಯದಿದ್ದುದಕ್ಕಾಗಿ ಬಹಳವಾಗಿ ಬೂಟಾಟಿಕೆಯಿಂದ ಪೇಚಾಡಿದಳು. ಅವನಿಗಿಂತ ಹೆಚ್ಚಾಗಿ ತಾನೇ ದುಃಖವನ್ನು ನಟಿಸಿ, ಗೊಳೋ ಎಂದು ಅತ್ತಳು. 'ನೋಡಿದೆಯಾ ಲೂಸಿಗೆ ನನ್ನ ತಂದೆಯಲ್ಲೂ ಕೂಡಾ ಎಷ್ಟು ಗೌರವ' ಎಂದುಕೊಂಡ ಮಾಧವ. ಹೇಗಿದ್ದರೂ ಕಾಲ ಮೀರಿ ಹೋಯಿತು. ಅಲ್ಲಿಗೆ ಹೋಗಿ ಮಾಡುವುದಾದರೂ ಏನು ಅಂದುಕೊಂಡು ಬೆಂಗಳೂರಿಗೆ ಹೋಗುವ ಸುದ್ದಿಯನ್ನೇ ಬಿಟ್ಟುಬಿಟ್ಟ. ಅನೇಕ ದಿನಗಳ ಮೇಲೆ ಮುರಲಿಗೆ ಕಾಗದ ಒಂದನ್ನು ಬರೆದು ತಾನು ಬರಲಾರದಿದ್ದುದಕ್ಕೆ ಪೇಚಾಡಿಕೊಂಡು ಬರೆದಿದ್ದ. ಅವನ ಕಾಗದ ನೋಡಿ ಜಾನಕೀಬಾಯಿಯವರಿಗೆ ದಾರುಣವಾದ ದುಃಖವುಂಟಾಯಿತು.

ಲೂಸಿ ಮೊದಲಿನಿಂದಲೂ ಮಾಧವನನ್ನು ವಂಚಿಸುತ್ತಲೇ ನಡೆದಿದ್ದಳು. ಸರೂ ಒಬ್ಬಳು ಈಗ ಮನೆಯಲ್ಲಿಲ್ಲವಾದ್ದರಿಂದ, ಲೂಸಿಯ ಸ್ವಾತಂತ್ರ್ಯ ಹೆಚ್ಚಿದ್ದಿತು. ಮಾಧವ ಈಗ ಪೂರ್ತಿಯಾಗಿ ಅವಳ ಕೈಗೊಂಬೆಯಂತಾದ. ಅವನಿಗೆ ದಿನಕ್ರಮೇಣ ಕುಡಿತವನ್ನೂ ಕಲಿಸಿದ್ದಳು. ಮಾಧವನಿಗೆ ರಾತ್ರಿಯಾಯಿತೆಂದರೆ ಸರಿ, ಅಸಾಧ್ಯವಾದ ತಲೆನೋವು, ಗಂಟಲೊಣಗುವುದು ಪ್ರಾರಂಭವಾಗಿತ್ತು. ಆ ನೋವನ್ನೆಲ್ಲಾ ಮರೆಯುವುದಕ್ಕಾಗಿ ಮದಿರೆಗೇ ಶರಣು ಹೋಗುತ್ತಿದ್ದ.

ಎಂದಾದರೊಂದು ದಿನ ಅವನಿಗೆ ಸರೂವಿನ ನೆನಪು ಬಂದು ವ್ಯಗ್ರನಾಗುತ್ತಿದ್ದ. ಇದನ್ನು ಅವನ ಮುಖದಿಂದಲೇ ತಿಳಿಯುತ್ತಿದ್ದ ಲೂಸಿ ಕೂಡಲೇ ಅವನ ಮನಸ್ಸು ಬದಲಾಯಿಸುವಂತೆ ಏನಾದರೊಂದು ನಾಟಕ ಮಾಡುತ್ತಿದ್ದಳು. ಅವಳಿಗೆ ಪಿಯಾನು ನುಡಿಸಲು ಬರುತ್ತಿತ್ತು. ತನ್ನ ಮಧುರ ಕಂಠದಿಂದ ಹಾಡನ್ನು ಹೇಳಿ ಅವನ ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿದ್ದಳು.

ಕೆಲವೇ ನಿಮಿಷಗಳೊಳಗಾಗಿ ಮಾಧವ ಮನದ ಚಿಂತೆಯನ್ನು ಮರೆತುಬಿಡು ತ್ತಿದ್ದ. ಮೊದ ಮೊದಲು ಸರೂವಿನ ನೆನಪು ಆಗಾಗ್ಗೆ ಬಂದು ಅವನನ್ನು ಕಾಡಿಸುತ್ತಿದ್ದಿತು. ಆದರೆ ದಿನಕ್ರಮೇಣ ಅವಳ ನೆನಪೂ ದೂರವಾಗುತ್ತಾ ಮಸಕಾಗುತ್ತಾ ಬಂದು ಕಡೆಗೆ ಅವಳನ್ನು ಮರೆತೇಬಿಡುವನೇನೋ ಎನ್ನು ವಷ್ಟರ ಮಟ್ಟಿಗೆ, ಅವಳ ನೆನಪು ದೂರವಾಗುತ್ತಾ ಬಂತು.

ಲೂಸಿ ತನ್ನ ಹೊಲಸು ಜೀವನವನ್ನೆಂದಿಗೂ ಬಿಡಲಾರದವಳಾಗಿದ್ದಳು. ತೆರೆಯಮರೆಯಲ್ಲಿ ಅವನಿಗೆ ದ್ರೋಹ ನಡೆಸಿಯೇ ಇದ್ದಳು. ಏನೇ ಆಗಲೀ ಮಾಧವ ಲೂಸಿಯನ್ನು ಸಂಶಯದೃಷ್ಟಿಯಿಂದ ಒಂದು ಸಲವೂ ನೋಡಿದವನೇ ಅಲ್ಲ.

ಹೀಗೆ ಎಷ್ಟೋ ದಿನಗಳು ಕಳೆದುವು. ಲೂಸಿಯ ಗೆಳೆಯರ ನಡುವೆ ಶಂಕರನೊಬ್ಬನು ಪ್ರವೇಶಿಸದಿದ್ದರೆ, ಎಲ್ಲವೂ ಸರಿಯಾಗಿಯೇ ಸಾಗಬಹು ದಾಗಿತ್ತು. ಆದರೆ ಅವನೊಬ್ಬನ ಆಗಮನದಿಂದ, ಲೂಸಿಯ ಜೀವನವೇ ಬದ ಲಾಯಿಸಿತು. ಅವನ ಬರುವಿಕೆ ಇಲ್ಲದಿದ್ದರೆ, ಮಾಧವ ಸರೂವನ್ನು ಸೇರು ತ್ತಿದ್ದನೋ ಇಲ್ಲವೋ?

ಸರೂವಿನ ಶಾಲೆ ಈಗ ಅವಳ ಮನೆಯಲ್ಲಿ ನಡೆಯುತ್ತಿಲ್ಲ. ಮನೆಗೆ ಸಮೀಪವಾಗಿಯೇ ದೊಡ್ಡದೊಂದು ಕಟ್ಟಡ ಕಟ್ಟಲ್ಪಟ್ಟಿದೆ. ಅದೇ ಈಗ ಪಾಠ ಶಾಲೆ. ಆಗ ಸರೂವಿನ ಕೈಲಿ ಕಲಿಯುತ್ತಿದ್ದ ಹುಡುಗರೆಲ್ಲಾ ಈಗ ಲೋವರ್ ಸೆಕೆಂಡರಿ ಪರೀಕ್ಷೆಗೆ ಕೂತಿದ್ದಾರೆ. ಈ ಸಲ ಪರೀಕ್ಷೆಗೆ ಕಟ್ಟಿರುವವರು ಮೂವತ್ತು ಹುಡುಗರು. ಇನ್ನು ಉಳಿದವರು ಇನ್ನೂ ಒಂದೆರಡು ವರ್ಷವಾದರೂ ಬೇಕಾ ಗಿತ್ತು. ಪರೀಕ್ಷೆಗೆ ಕಟ್ಟಲು ಫೀಜು ಕೊಡಲಾರದೇ ಅಸಹಾಯರಾಗಿದ್ದ ಹುಡು ಗರ ಹಣವನ್ನು ತಾನೇ ಕಟ್ಟಿದ್ದಳು. ಪರೀಕ್ಷೆಯೂ ಮುಗಿದಿತ್ತು. ಎಲ್ಲರೂ ಫಲಿತಾಂಶಕ್ಕಾಗಿ ಎದುರು ನೋಡುತ್ತಿದ್ದರು.

ಶಾಂತಿಗ್ರಾಮದ ಜನರೆಲ್ಲರೂ ಸರೂವನ್ನು ಅತ್ಯಂತ ಗೌರವದಿಂದ ಕಾಣು ತ್ತಿದ್ದರು. ಅವಳ ಮಾತು ಎಂದರೆ ವೇದವಾಕ್ಯದಂತೆ ಭಾವಿಸುತ್ತಿದ್ದರು. ಹಿಂದೆ

ಅವಳನ್ನು ಅಣಕವಾಡಿ, ಜರಿದ ಜನವೇ ಈಗ ಅವಳನ್ನು ದೇವತೆಯಂತೆ ಕಾಣು ತ್ತಾರೆ. ಇಂತಹ ಸ್ಥಾನವನ್ನು ಗಳಿಸಲು ಸರೂ ಪಟ್ಟ ಕಷ್ಟವೇನೂ ಕಡಮೆ ಯಾಗಿರಲಿಲ್ಲ.

ಕೇವಲ ಅವಳು ಬಂದ ವರ್ಷದೊಳಗಾಗಿ ಅವಳ ಬಳಿಯಲ್ಲಿದ್ದ ಹಣ ವೆಲ್ಲಾ ಖರ್ಚಾಗಿ ಹೋಗಿತ್ತು. ಸ್ಕೂಲು, ಬೋರ್ಡು, ಹುಡುಗರಿಗೆ ಬಟ್ಟೆ, ಚಿತ್ರಪಠ, ಓದುವ ಪುಸ್ತಕ, ಬರೆಯುವ ಸ್ಲೇಟು ಎಂದು ಅದಕ್ಕೇ ಬಹಳ ಪಾಲು ಖರ್ಚು ಮಾಡಿದ್ದಳು. ಮುರಲಿ ಹಣವನ್ನು ಕಳಿಸಿದಾಗ 'ಈಗ ಹಣದ ಅವಶ್ಯ ಕತೆಯೇನೂ ನನಗಿಲ್ಲ. ಬೇಕಾದಾಗ ನಾನೇ ಕೇಳಿ ತೆಗೆದುಕೊಳ್ಳುವೆ' ಎಂದು ಮುರಲಿಗೆ ಕಾಗದ ಬರೆದಿದ್ದಳು. ಅದರಿಂದ ಮುರಲಿಯೂ ಹೆಚ್ಚಿನ ಬಲವಂತ ಮಾಡದೇ ಸುಮ್ಮನಾಗಿದ್ದ.

ಒಂದು ದಿನ ಹೀಗೆಯೇ ಸಂಜೆ ಸರೂ ವಿಜಯನಿಗೆ ಪಾಠ ಹೇಳಿ ಕೊಡುತ್ತಾ ಕೂತಿದ್ದಳು. ಬೀದಿಯಲ್ಲಿ ಜನರ ಕೂಗಾಟ ಕೇಳಿಸಿತು. ಜನ ರೆಲ್ಲಾ ಒಂದು ಮನೆಯ ಮುಂದೆ ಬಂದು ಸೇರುತ್ತಿದ್ದರು. ಕುತೂಹಲಗೊಂಡವ ಳಾಗಿ ಸರೂ ವಿಜಯನನ್ನು ಮನೆಯಲ್ಲಿಯೇ ಇರುವಂತೆ ಹೇಳಿ ಗುಂಪು ನೆರೆ ದಿದ್ದ ಜಾಗಕ್ಕೆ ಧಾವಿಸಿದಳು. ಹುಡುಗನೊಬ್ಬನಿಗೆ ಸನ್ನಿ ಬಂದಿತ್ತು. ಹೊಟ್ಟೆಯು ಮೇಲು ವರೆಗೂ ಉಬ್ಬರಿಸಿ ಬಂದಿತ್ತು. ಕೈಕಾಲುಗಳೆಲ್ಲಾ ಎಳೆಯುತ್ತಿದ್ದುವು. ಕಣ್ಣುಗಳು ಅರೆ ತೆಗೆದಿದ್ದುವು. ಅವನಿಗೆ ಪ್ರಜ್ಞೆಯೇ ಇರಲಿಲ್ಲ. ಇನ್ನು ಸ್ವಲ್ಪದ ರಲ್ಲಿ ಅವನು ಹಲ್ಲು ಕಚ್ಚುತ್ತಿದ್ದ. ಸರೂ ಬಂದೊಡನೆಯೇ ಎಲ್ಲರೂ ಅವಳಿಗೆ ದಾರಿ ಮಾಡಿಕೊಟ್ಟರು. ಹುಡುಗನನ್ನು ನೋಡಿದ ಕೂಡಲೇ ಅವಳಿಗೆ ಅವನಿಗೆ ಏನಾಗಿದೆ ಎಂಬುದು ತಿಳಿದಿತ್ತು. ತನ್ನ ಅತ್ತೆ ರಂಗಮ್ಮನವರ ಕೈಯಿಂದ ಅನೇಕ ಬಗೆಯ ಔಷಧಿ, ಕಷಾಯಗಳನ್ನೆಲ್ಲ ಕಲಿತಿದ್ದುದು ಈ ವೇಳೆಗೆ ಉಪಯೋಗಕ್ಕೆ ಬಂದಿತು. ಸರೂ ಕೂಡಲೇ ಆ ಹುಡುಗನನ್ನು ತನ್ನ ಮನೆಗೆ ಸಾಗಿಸಿದಳು. ಅವನು ಹಲ್ಲು ಕಚ್ಚದಂತೆ ಚಮಚ ಒಂದನ್ನು ಬಟ್ಟೆ ಸುತ್ತಿ ಬಾಯೊಳಗಿಟ್ಟಳು. ಕೂಡಲೇ ಗ್ಲಿಸರಿನ್ ಸಿರಂಜನ್ನು ಹಾಕಿದ ಮೇಲೆ, ಮಗುವಿಗೆ ಚೆನ್ನಾಗಿ ಕಾಲ ಪ್ರವೃತ್ತಿಯಾಗಿ ಹೊಟ್ಟೆಯುಬ್ಬರ ಕಡಮೆಯಾಯಿತು. ನಂತರ ಬಳೆ ಕಾಯಿಸಿ ಎರಡು ಮೂರು ಚಿಟಕೆ ಇಟ್ಟ ಮೇಲೆ ಮಗು ಕಣ್ದೆರೆದ. ಆ ಹುಡುಗನ ತಾಯಿ ಇದಾವುದೋ ಭೂತದ ಕಾಟವಿರಬೇಕು, ಮಗು ಹೀಗೆ ಆಗಿದೆ, ಹುಷಾರಾದರೆ ತೋಟದ ಭೂತರಾಯನಿಗೆ ಪೂಜೆ ಮಾಡಿಸುತ್ತೇನೆ; ಬಲಿ ಕೊಡುತ್ತೇನೆಂದು

ಎಲ್ಲಾ ಹರಕೆ ಹೊತ್ತಳು. ಆದರೆ ಕೇವಲ ಅರ್ಧಗಂಟೆಯೊಳಗಾಗಿ ಹುಡುಗ ಸರೂವಿನ ಕೈವಾಡದಿಂದ ಎಚ್ಚರವಾದ್ದು ನೋಡಿ, ಅಲ್ಲಿಯವರಿಗೆಲ್ಲಾ ಬಹಳ ಆಶ್ಚರ್ಯವಾಯಿತು. "ನನ್ನ ಮಗೂನ್ನ ಉಳಿಸಿದೆಯಾ ನನ್ನ ತಾಯೀ! ನಿನ ಪಾದಕ್ಕೆ ಬೀಳುತ್ತೇನೆ" ಎಂದು ಅವನ ತಾಯಿ ಸರೂವಿನ ಪಾದಕ್ಕೇ ಬಿದ್ದಳು.

ಅಂದಿನಿಂದ ಸರೂ ಒಬ್ಬ ವೈದ್ಯಳಾದಳು. ಹುಡುಗರಿಗೆ ಯಾವ ಕೆಮ್ಮು, ನೆಗಡಿಯಾಗಲೀ, ಗಾಯವಾಗಲೀ ಸರೂವಿನ ಬಳಿಗೇ ಓಡಿ ಬರುತ್ತಿದ್ದರು. ಅವರ ಅಲ್ಪಸ್ವಲ್ಪ ಚಿಕಿತ್ಸೆಗಾಗಿ, ಸರೂ, ಲಿಂಟ್ ಕಾಟನ್, ಬ್ಯಾಂಡೇಜು ಬಟ್ಟೆ, ಟಿಂಕ್ಚರ್, ಆರ್ನಿರಾಯಲ್, ಯೂಕಿಲಿಪ್ಟಸ್ ಆಯಲ್, ಭೇದಿಗಾಗಿ ಕ್ಯಾಸ್ಟರ್ ಆಯಿಲ್, ಎಲ್ಲಾ ತಂದು ಮನೆಯಲ್ಲಿಟ್ಟುಕೊಳ್ಳಬೇಕಾಯಿತು. ಹೀಗಾಗಿ ಸರೂ ಶಿಕ್ಷಿಕೆಯ ಜೊತೆಗೆ ವೈದ್ಯಳೂ ಆಗಬೇಕಾಯಿತು. ಅವಳ ಮಾತಿಗಾಗಿ ಹುಡುಗರೆಲ್ಲಾ ಏನು ಬೇಕಾದರೂ ಮಾಡಲು ಸಿದ್ಧರಿದ್ದರು. ಅವಳಿಗಾಗಿ ತಮ್ಮ ಜೀವವನ್ನೇ ಕೊಡಲೂ ಹಿಂತೆಗೆಯುತ್ತಿರಲಿಲ್ಲ. ಅಷ್ಟು ಅಲ್ಪಕಾಲದಲ್ಲಿಯೇ ಸರೂ ತನ್ನದೇ ಆದ ವಿಶಿಷ್ಟಸ್ಥಾನವೊಂದನ್ನು ಕಲ್ಪಿಸಿಕೊಂಡಿದ್ದಳು.

ಈಗ ಅವಳು ತನ್ನ ಸಂಸಾರ ನಿರ್ವಹಣೆಗೆ ಏನೂ ತೊಂದರೆಪಡಬೇಕಾಗಿರಲಿಲ್ಲ. ಅವಳ ಪ್ರತಿಯೊಬ್ಬ ಹುಡುಗನೂ ತನ್ನ ಕೈಲಾದ ಸಹಾಯ ಮಾಡುತ್ತಿದ್ದ. ಮನೆಯಲ್ಲಿ ಹಸು-ಕರು ಇಟ್ಟುಕೊಂಡಿರುವವರು, ಹಾಲು ಮೊಸರನ್ನು ತಂದು ಕೊಡುತ್ತಿದ್ದರು. ರೈತರ ಹುಡುಗರು ತಮ್ಮ ಭೂಮಿಯಲ್ಲಿ ಬೆಳೆದ ದವಸ ಧಾನ್ಯಗಳನ್ನು ಕೊಡುತ್ತಿದ್ದರು. ಅವಳ ಗುಣಕ್ಕೆ ಮನಸೋತ ಪಟೇಲ ಅವಳಿಗೆ ವರ್ಷಕ್ಕೆ ಬೇಕಾಗುವಷ್ಟು ಭತ್ತವನ್ನು ತಂದು ಅವಳ ಮನೆಯನ್ನು ತುಂಬುತ್ತಿದ್ದ. ಅಕ್ಕಿಯಿಂದ ಹಿಡಿದು, ಉಪ್ಪಿನ ವರೆಗೂ ಯಾವ ಪದಾರ್ಥವನ್ನೂ ಅವಳು ಕೊಳ್ಳಬೇಕಾಗಿರಲಿಲ್ಲ. ಸರೂ ಅವರ ಕಾಣಿಕೆಗಳನ್ನು ತೆಗೆದುಕೊಳ್ಳಲು ನಿರಾಕರಿಸಿದರೂ ಅವರು ಬಿಡಲೇ ಇಲ್ಲ. "ನಮ್ಮ ಹುಡುಗರಿಗೆ ವಿದ್ಯೆ ಕಲಿಸಿ ಜಾಣರನ್ನಾಗಿ ಮಾಡಿದ ನೀವು ನಮ್ಮ ಗುರುಗಳು. ನಿಮಗೆ ನಾವು ಕೊಡುವುದು ಯಾವ ಬೆಲೆ? ಇದನ್ನು ನೀವು ತೆಗೆದುಕೊಳ್ಳಲೇಬೇಕು" ಎಂದು ಸಾಮಾನುಗಳನ್ನು ತಂದು ಸುರಿದು ಹೋಗುತ್ತಿದ್ದರು. ಅವರ ಪ್ರೀತಿ, ಆದರಗಳಿಗೊಳಗಾಗಿ ಸರೂ ವಿಧಿಯಿಲ್ಲದೆಯೇ ತೆಗೆದುಕೊಳ್ಳಬೇಕಾಯಿತು.

ಸರೂ ತನ್ನ ಕೆಲಸವನ್ನು ಬರಿಯ ಶಾಲೆಯಲ್ಲಿಯೇ ಮುಗಿಸಲಿಲ್ಲ. ಊರಿನ ಗಂಡಸರು ಹೆಂಗಸರು ಆದಿಯಾಗಿ ಎಲ್ಲರೂ ಅವಳ ಮಾತನ್ನು ಕೇಳುತ್ತಿದ್ದರು.

ಮನೆಯನ್ನು ಚೊಕ್ಕಟವಾಗಿಡಬೇಕು, ಬೀದಿಯಲ್ಲಿ ನೀರು ಸರಾಗವಾಗಿ ಹರಿದು ಹೋಗುವಂತೆ ಚರಂಡಿಗಳನ್ನು ತೆಗೆಯಬೇಕು, ತಿಪ್ಪೆಗುಂಡಿಗಳನ್ನು ಊರ ಹೊರಗೆ–ಸಾಗಿಸಬೇಕು ಅದರಿಂದ ಅರ್ಧ ಕಾಹಿಲೆ ಕಡಿಮೆಯಾಗುತ್ತೆ–ಎಂದು ಎಲ್ಲಾ ವಿವರಿಸಿ ಹೇಳಿದಳು. ಬೆಳೆಯನ್ನು, ಸಸಿ ನಾಟಿ ಹಾಕಿದ ಮೇಲೆ ಅದು ಕೊಯ್ಲಿಗೆ ಬರುವ ವಗೆಗೂ ಯಾವ ಹೆಚ್ಚಿನ ಕೆಲಸವೂ ಇರಲಿಲ್ಲ ಅವರಿಗೆ. ಆದರಿಂದ ಆ ಕಾಲವನ್ನು ನಿಮ್ಮ ಹಳ್ಳಿಯ ಉದ್ಧಾರಕ್ಕಾಗಿ ವಿನಿಯೋಗಿಸಿ ಎಂದು ಹೇಳಿದ ಸರೂವಿನ ಮಾತನ್ನು ಎಲ್ಲರೂ ಅಕ್ಷರಶಃ ಪಾಲಿಸಿದರು.

ದನಕರುಗಳನ್ನು ಮನೆಯಲ್ಲಿ ಕಟ್ಟುವುದು ಬಹಳ ಅನಾರೋಗ್ಯವೆಂದು ತಿಳಿದ ಮೇಲೆ ಊರ ಹೊರಗೆ ಅಂದರೆ ಮನೆಗಳಿಗಿಂತ ಸ್ವಲ್ಪ ದೂರದಲ್ಲಿ ದೊಡ್ಡದೊಂದು ಗೋಶಾಲೆಯನ್ನು ಎಲ್ಲರೂ ಸೇರಿಯೇ ಕಟ್ಟಿದರು. ಆ ಹಳ್ಳಿಯ ಪ್ರತಿಯೊಂದು ದನಕರು, ಎಮ್ಮೆ ಎಲ್ಲಾ ಸಾಕು ಪ್ರಾಣಿಗಳೂ ಅಲ್ಲಿಯೇ ಕಟ್ಟಲ್ಪಡುತ್ತಿದ್ದುವು. ಅವುಗಳ ಕಾವಲಿಗಾಗಿ ಸರದಿಯಂತೆ ದಿನಕ್ಕೆ ಇಬ್ಬರು ಮಲಗುತ್ತಿದ್ದರು. ಹೀಗೆಯೇ ಬೇರೆ ಬೇರೆಯಾಗಿ ಕುರಿ, ಮೇಕೆಗಳ ಕುಪ್ಪವೂ ತಯಾರಾಯಿತು.

ಅಲ್ಲಿಯೇ ಸುಮಾರು ದೂರದಲ್ಲಿ ತಿಪ್ಪೆಗಾಗಿ ದೊಡ್ಡದೊಂದು ಗುಂಡಿಯನ್ನೂ ಅಗಿಯಲಾಯಿತು. ಪ್ರತಿಯೊಬ್ಬರೂ ಮನೆಯ ಕಸ, ಬೂದಿ ಇವುಗಳನ್ನು ಅಲ್ಲಿಗೇ ತೆಗೆದುಕೊಂಡು ಹೋಗಿ ಹಾಕಬೇಕೆಂದೂ, ವರ್ಷವಾದ ಮೇಲೆ ಅದನ್ನು ಎಲ್ಲರ ಜಮೀನುಗಳಿಗೂ ಸಾಗಿಸುವುದೆಂದೂ ತೀರ್ಮಾನವಾಯಿತು. ಪ್ರತಿ ಬೆಳಿಗ್ಗೆ ಅವರವರ ಮನೆಯ ಮುಂದೆ ಅವರವರ ಹಸುವೋ ಎಮ್ಮೆಯೋ ಕರೆದು ತರುತ್ತಾರೆ. ಅದಕ್ಕೆ ತಿಂಡಿ ಹಾಕಿ,ಹಾಲು ಕರೆದುಕೊಂಡಾದ ಮೇಲೆ ಪುನಃ ಬಿಟ್ಟು ಬಿಡುತ್ತಾರೆ. ಶಾಲೆ ಮುಗಿದ ಮೇಲೆ ಹಿರಿಯ ಹುಡುಗರು ಅವುಗಳನ್ನೆಲ್ಲಾ ಅಟ್ಟಿಕೊಂಡು ಹೋಗಿ ದನ ಕಾಯುತ್ತಾರೆ. ಅದೂ ಕೂಡಾ ಸರದಿಯ ಮೇಲೆ, ಒಂದು ದಿನಕ್ಕೆ ನಾಲ್ಕು ಜನ ಹೋಗಬೇಕು. ಒಂದು ಗುಂಪು ಆದ ಮೇಲೆ ಇನ್ನೊಂದು ಒಟ್ಟಾಗಿಯೇ ಹುಲ್ಲು, ಸೌದೆಯನ್ನು ತಂದು ರಾಸಿ ಹಾಕುತ್ತಾರೆ. ಅವರವರಿಗೆ ಬೇಕಾದಷ್ಟು ಅವರವರು ತೆಗೆದುಕೊಂಡು ಉಪಯೋಗಿಸುತ್ತಾರೆ. ಪ್ರತಿಯೊಬ್ಬನೂ ಎಲ್ಲರಿಗಾಗಿ ದುಡಿಯಲೇಬೇಕು.

ಉಳುವ ಕಾಲ ಬಂದರೂ ಅಷ್ಟೇ. ಊರಿನವರೆಲ್ಲರೂ ತಮ್ಮ ತಮ್ಮ ಎತ್ತು, ನೇಗಿಲುಗಳೊಡನೆ ಹೋಗಿ ಉಳಬೇಕು. ನನ್ನದು ತನ್ನದು ಎನ್ನುವ

ಭಾವನೆಯೇ ಇರಲಿಲ್ಲ. ಎಲ್ಲರೂ, ಎಲ್ಲರ ಹೊಲವನ್ನೂ ಉಳಬೇಕು, ನಾಟಿ ಹಾಕಬೇಕು, ಕೊಯ್ಯಬೇಕು, ಕಾಳು ಬಡಿಬೇಕು ಎಲ್ಲವನ್ನೂ ಮಾಡಬೇಕು. ಒಬ್ಬೊಬ್ಬರಿಗೆ ಹೆಚ್ಚು ಭೂಮಿ ಇರುತ್ತೆ, ಕೆಲವರಿಗೆ ಸ್ವಲ್ಪವಿರುತ್ತೆ. ಅದರಿಂದ ಅವರ ಜಮೀನಿನಲ್ಲಿ ಬೆಳೆದ ಬೆಳೆ ಅವರದ್ದು ಎಂದು ತೀರ್ಮಾನಿಸಿದಳು ಸರೂ. ಅದರಲ್ಲಿಯೂ ಎಲ್ಲರದ್ದನ್ನೂ ಸೇರಿಸಿ ಎಲ್ಲರೂ ಸಮನಾಗಿ ಹಂಚಿಕೊಳ್ಳಬಹುದಿತ್ತು. ಆದರೆ ಅದು ಅನೇಕರಿಗೆ ಅಸಮಾಧಾನವನ್ನುಂಟುಮಾಡುತ್ತಾದ್ದರಿಂದ ಅಷ್ಟರ ಮಟ್ಟಿಗೆ ನಾವು ಮುಂದುವರೆಯುವುದು ಬೇಡ ಎಂದು ಯೋಚಿಸಿ, ಆ ರೀತಿ ನಿರ್ಧರಿಸಿದಳು.

ರಸ್ತೆಯಲ್ಲಿ ಯಾರೂ ಹೇಸಿಗೆ ಮಾಡಬಾರದು, ಕಸ ಹಾಕಬಾರದು ಎಂಬ ನಿಯಮವಿದ್ದದ್ದರಿಂದ, ರಸ್ತೆಗಳು ಯಾವದೊಂದು ಕೊಳಕೂ ಇಲ್ಲದೇ ಚೊಕ್ಕಟವಾಗಿಯೇ ಇರುತ್ತಿದ್ದುವು. ಚಿಕ್ಕಪುಟ್ಟ ಹುಡಗರು ಕೂಡಾ "ನೋಡಂ ಬೈತಾರೆ ರಸ್ತೆಯಲ್ಲಿ ಕೂತು ಹೇಸಿಗೆ ಮಾಡಿದರೆ" ಎಂದುಕೊಂಡು ದೂರ ಹೋಗಿ ಕೂಡುತ್ತಿದ್ದರು. ರಸ್ತೆಯ ಎರಡು ಕಡೆಗಳಲ್ಲೂ ಚರಂಡಿಯನ್ನು ಕಟ್ಟಲಾಗಿತ್ತು. ಮಳೆಯ ನೀರು ಹರಿದು ಹೋಗುವಂತೆ ಆಮದರಿಂದ ನೀರು ಅಲ್ಲಲ್ಲಿ ನಿಂತು ಕೊಳೆತು,ಸೊಳ್ಳೆಗಳ ಉತ್ಪತ್ತಿಗೆ ಕಾರಣವಾಗುವುದು ತಪ್ಪಿತು. ಸೊಳ್ಳೆಯ ಕಾಟ ಕಡಮೆಯಾದಂದಿನಿಂದ, ರೋಗವೂ ಕಡಿಮೆಯಾಗುತ್ತಾ ಬಂದಿತು. ಪ್ರತಿಯೊಬ್ಬರೂ ತಪ್ಪದೇ ಕ್ವಿನಿಯನ್ ಗುಳಿಗೆಯನ್ನು ವಾರಕ್ಕೆ ೨ಗ್ರೇನ್‌ಗಳಷ್ಟು ಸೇವಿಸಲು ಶುರು ಮಾಡಿದಂದಿನಿಂದ, ಅವರ ಕಾಹಿಲೆಯು ಗುಣವಾಗಿ ಮುಖದಲ್ಲಿ ಆರೋಗ್ಯದ ಕಳೆ ಉಕ್ಕುತ್ತಿತ್ತು.

ಆ ಊರಿನಲ್ಲಿ ಯಾವದೊಂದೂ ಅಂಗಡಿಯೇ ಇಲ್ಲವಾದ್ದರಿಂದ, ಪ್ರತಿಯೊಂದು ಸಾಮಾನಿಗೂ ರಾಮನಾಥಪುರಕ್ಕೇ ಹೋಗಬೇಕಾಯಿತು. ಸರೂವಿನ ಸಲಹೆಯಂತೆ ರೈತರ ಕೋ-ಆಪರೇಟಿವ್ ಸೊಸೈಟಿಯೊಂದು ತೆರೆಯಲ್ಪಟ್ಟಿತು. ಜನರು ತಮ್ಮ ಉಳಿತಾಯದ ಹಣವನ್ನು ಸುರಕ್ಷಿತವಾಗಿಡುವುದಕ್ಕೂ, ಸಮಯ ಬಂದಾಗ ಸಾಲ ತೆಗೆದುಕೊಳ್ಳಲೂ ಅನುಕೂಲವಾಯ್ತು. ಇದರಿಂದ ಸಾಲಗಾರರ ಕೈಕೆಳಗೆ ಬಿದ್ದು ನರಳಬೇಕಾಗಿರಲಿಲ್ಲ. ಓದು ಬರೆಹ ತಿಳಿದವರಲ್ಲಿ ಒಬ್ಬ ಸೊಸೈಟಿಯ ಮೇಲ್ವಿಚಾರಕನಾದ. ಪ್ರತಿ ತಿಂಗಳೂ ಮೀಟಿಂಗು ನಡೆಸಿ ಖರ್ಚು, ಜಮಾ, ಉಳಿತಾಯ ಎಲ್ಲವನ್ನೂ ಜನರಿಗೆ ತಿಳಿಸಬೇಕಾಗಿತ್ತು. ಅದಕ್ಕಾಗಿ ಅವನಿಗೆ ಪ್ರತಿ ತಿಂಗಳೂ ಸಂಬಳವು ಬರುತ್ತಿತ್ತು.

ಈ ಊರು ನಮ್ಮದು, ಇದನ್ನು ಮುಂದಕ್ಕೆ ಬೆಳೆಯುವಂತೆ ಮಾಡಲು ನಾವು ಹೆಣಗಬೇಕು; ಇಲ್ಲಿಯ ನಾವೆಲ್ಲರೂ ಅಣ್ಣತಮ್ಮಂದಿರು, ನಾವುಗಳು ಪರಸ್ಪರ ಹೊಡೆದಾಡಬಾರದು, ಇಲ್ಲಿಯ ನಾವುಗಳೆಲ್ಲರೂ ಒಂದೇ ಎಂಬ ಭಾವನೆಯನು ಸರೂ ಉಂಟುಮಾಡಿದ್ದಳು.

ಯಾವ ರಾಜಕಾರಣಪಟುಗಳೂ, ಯಾವ ಗ್ರಾಮೋದ್ಧಾರ ಸಂಸ್ಥೆಯೂ ಮಾಡದ ಕೆಲಸವನ್ನು, ಪರಿಣಾಮವನ್ನು ಸರೂ ಕೆಲವೇ ವರ್ಷಗಳಲ್ಲಿ ಸಾಧ್ಯ ಗೊಳಿಸಿದ್ದಳು. ಶಾಂತಿಗ್ರಾಮ ಸುತ್ತಮುತ್ತಲಿನ ಹಳ್ಳಿಗಳಿಗೆಲ್ಲಾ ಮಾದರಿಯ ಗ್ರಾಮವಾಯಿತು. ರಸ್ತೆಯಲ್ಲಿ ಹುಡುಕಿದರೂ ಕಸ ಸಿಗುತ್ತಿರಲಿಲ್ಲ. ಬೀದಿ ಎಲ್ಲಾ ಚೊಕ್ಕಟವಾಗಿರುತ್ತಿದ್ದವು. ಸರೂವಿನ ಆಜ್ಞೆಯ ಮೇಲೆ ಎಲ್ಲರೂ ಕೆರೆಯ ನೀರನ್ನು ಕುಡಿಯುವುದು ಬಿಟ್ಟು ಊರ ಹೊರಗೆ ಸಮೀಪವಾಗಿರುವ ಭಾವಿಯ ನೀರನ್ನೇ ಉಪಯೋಗಿಸುತ್ತಿದ್ದರು. ಶಾಂತಿಗ್ರಾಮವು ನಿರ್ಮಲತೆಗೆ, ಶುಚಿತ್ವಕೆ ಅಲ್ಲಿಯ ಜನರ ಐಕ್ಯತೆಗೆ ಹೆಸರಾಯಿತು.

ಹಿಂದೊಮ್ಮೆ ಅಮಲ್ದಾರರು ಕಾರಣಾಂತರದಿಂದ ಅಲ್ಲಿಗೆ ಬಂದಾಗ ಆ ಊರನ್ನು ನೋಡಿ ಅತ್ಯಂತ ಆಶ್ಚರ್ಯಾನ್ವಿತರಾದರು. ಅದು ಅಷ್ಟರ ಮಟ್ಟಿಗೆ ಮುಂದುವರಿಯಲು ಕಾರಣರಾರೆಂದು ವಿಚಾರಿಸಿಕೊಂಡು ಸರೂವಿನ ಮನೆಗೇ ಬಂದು, ಅವಳನ್ನು ಬಾಯಿತುಂಬಾ ಹೊಗಳಿದರು.

ಅವಳ ಸತ್ಕಾರ್ಯಕ್ಕಾಗಿ ಅವಳನ್ನು ಗೌರವಿಸುವಂತೆ ಒಂದು ಸತ್ಕಾರ ವನ್ನೇರ್ಪಡಿಸಬೇಕೆಂದು ಅವರು ತಮ್ಮ ಅಭಿಪ್ರಾಯವನ್ನು ತಿಳಿಸಿದಾಗ ಸರೂ ಹೇಳಿದಳು: "ನಾನು ಯಾವ ಮಹತ್ಕಾರ್ಯ ಮಾಡಿದೆ ಎಂದು ಸಭೆ, ಸತ್ಕಾರ ಕೂಟ ಎಂದು ಮಾಡಹೋಗುವಿರಿ? ನನ್ನ ಕರ್ತವ್ಯ ನಾನು ಮಾಡಿದ್ದೇನೆ ಅಷ್ಟೇ. ಅದಕ್ಕೆಲ್ಲಾ ಖರ್ಚುಮಾಡುವ ಹಣವನ್ನು ಈ ಹಳ್ಳಿಯ ಕಾರ್ಯಕ್ಕಾ ಗಿಯೇ ವಿನಿಯೋಗಿಸಿ. ಅದಕ್ಕಿಂತ ಹೆಚ್ಚಿನ ಸಂತೋಷ ನನಗೆ ಬೇರೊಂದಿಲ್ಲ." ಸರೂ ತನ್ನ ಮನೋವೈಶಾಲ್ಯತೆಯನ್ನು ತೋರಿಸಿಕೊಂಡಳು.

ಸರೂ ಶಾಂತಿಗ್ರಾಮಕ್ಕೆ ಬಂದು ನೆಲಸಿ ಏಳು ವರ್ಷಗಳೇ ಆಗಿದೆ. ಅವಳಿ ಗೀಗ ಯಾವ ಕೊರತೆಯೂ ಇಲ್ಲ. ಅವಳ ಮಾತು ಹೊರಬೀಳುವುದೇ ತಡ ಅದನ್ನು ನಡೆಸಲು, ಹಳ್ಳಿಯ ಜನರೆಲ್ಲರೂ ಕಂಕಣಬದ್ಧರಾಗಿದ್ದರು. ಅವಳಿಗೆ ಸಕಲ ಸೌಕರ್ಯಗಳೂ ಇದ್ದುವು. ಎಂದಿನಂತೆ ಸುಬ್ಬರಾಯರು, ಅವಳಲ್ಲಿಗೆ ಬಂದು ಹೋಗಿ ಮಾಡುತ್ತಲೇ ಇದ್ದರು. ಈಗ ಅವರ ಇನ್ನೊಬ್ಬ ಮಗಳಿಗೂ

ಮದುವೆಯಾಗಿ, ಅತ್ತೆಯ ಮನೆಗೆ ಹೋಗಿದ್ದಾಳೆ. ಹಿರಿಯ ಮಗನಿಗೆ ಅಲ್ಲೇ ಕೆಲಸ ದೊರೆತು, ಪ್ರತಿ ತಿಂಗಳೂ ತಂದೆಗೆ ಹಣವನ್ನು ಕಳಿಸುತ್ತಿದ್ದ. ಸುಬ್ಬ ರಾಯರ ತಾಯಿ ತೀರಿಕೊಂಡಿದ್ದರು. ಹುಡುಗರೆಲ್ಲರ ವಿದ್ಯಾಭ್ಯಾಸವೂ ಮುಗಿ ದಿತ್ತು. ಅವರೂ ಈಗ ನೆಮ್ಮದಿಯಾಗಿದ್ದರು. ತಮ್ಮ ಕಣ್ಣೆದುರಿಗೇ ತಮ್ಮ ವರೂ ಅಷ್ಟು ಬಗೆಯಲ್ಲಿ ಹಳ್ಳಿಯ ಉದ್ಧಾರವನ್ನು ಮಾಡಿದ್ದು ನೋಡಿ, ಅವರಿಗೆ ಅತ್ಯಂತ ಸಂತೋಷವಾಗುತ್ತಿತ್ತು. ಸರೂ-ಸುಬ್ಬರಾಯರ ಅಮರ ಬಾಂಧವ್ಯದ ನಡುವೆ ಯಾವ ಒಡಕೂ ಉಂಟಾಗಲಿಲ್ಲ.

ವಿಜಯನೀಗ ಹತ್ತು ವರ್ಷದ ಹುಡುಗನಾಗಿದ್ದಾನೆ. ಈ ಸಲ ಅವನು ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ಮೊದಲ ತರಗತಿಯಲ್ಲೇ ತೇರ್ಗಡೆ ಯಾಗಿದ್ದ. ಅವನು ಬೇರೆ ಯಾವ ಸ್ಕೂಲಿಗೂ ಸೇರಲೇ ಇಲ್ಲ. ತನ್ನ ತಾಯಿಯ ಶಾಲೆಯಲ್ಲಿಯೇ ಕಲಿತಿದ್ದ. ಅವನ ಜೊತೆಗೆ ಇಪ್ಪತ್ತು ಹುಡುಗರು ಪಾಸಾಗಿ ದ್ದರು. ಇಲ್ಲಿಯ ವರೆಗೂ ಅವರ ವಿದ್ಯೆ ಯಾವದೊಂದು ತೊಂದರೆಯೂ ಇಲ್ಲದೇ ಸುಸೂತ್ರವಾಗಿ ಸಾಗಿತ್ತು. ಇನ್ನು ಮುಂದೆ ಹೈಸ್ಕೂಲು ಸೇರಿಸಬೇಕು. ಹಾಗೆ ಓದಬೇಕಾದರೆ ಸಮೀಪದಲ್ಲಿರುವ ಕೋಣನೂರಿಗೇ ಹೋಗಿ ಓದಬೇಕು. ಅಲ್ಲಿಗಲ್ಲಿಗೆ ಹತ್ತು-ಹನ್ನೆರಡು ಮೈಲಿಗಳ ಅಂತರ. ಪ್ರತಿ ದಿನವೂ ಅಷ್ಟು ದೂರ ನಡೆದು ಹೋಗಿ ಬರಲು ಸಾಧ್ಯವೇ ಇರಲಿಲ್ಲ. ಅಲ್ಲಿಯೇ ಇರಲಿ ಎಂದರೆ, ಅಲ್ಲಿ ಹಾಸ್ಟೆಲು ಎಲ್ಲಿಂದ ಬರಬೇಕು ? ಹುಡುಗರನ್ನಂತೂ ಓದಿಸಿಯೇ ತೀರಬೇಕು. ಇಲ್ಲಿಗೇ ನಿಲ್ಲಿಸುವ ಹಾಗಿಲ್ಲ. ಹಾಗೆ ನಿಲ್ಲಿಸಿದರೆ, ಇದು ವರೆಗೆ ಮಾಡಿದ ಪ್ರಯತ್ನ ವೆಲ್ಲಾ ವ್ಯರ್ಥವಾಗುತ್ತೆ. ಅದರಿಂದ ಸರೂ ಊರಿನ ಎಲ್ಲಾ ಹಿರಿಯರನ್ನೂ ಕರೆಸಿ, ಅವರೆದುರಿಗೆ ಈಗ ಬಂದಿರುವ ಸಮಸ್ಯೆಯನ್ನು ತಿಳಿಸಿದಳು. ಒಬ್ಬೊ ಬ್ಬರು ಒಂದೊಂದು ಬಗೆಯಲ್ಲಿ ಹೇಳಿದರು. ಪ್ರತಿದಿನ ಗಾಡಿಯಲ್ಲಿಯೇ ಹೋಗಿ ಬರಲಿ ಎಂದರು ಕೆಲವರು. ಅಷ್ಟು ಜನ ಹುಡುಗರಿಗೂ ಏನಿಲ್ಲೆಂದರೂ ಎರಡು ಗಾಡಿಗಳಾದರೂ ಬೇಕು. ಒಂದೇ ಸಮನಾಗಿ ಹೋಗಿ ಬರುವುದೆಂದರೆ ಸಾಧ್ಯ ವಾಗದ ಮಾತು. ದಿನವೆಲ್ಲಾ ಚರ್ಚೆ ನಡೆದು, ಕಡೆಗೆ ಕೋಣನೂರಿನಲ್ಲಿಯೇ ಹುಡುಗರನ್ನಿಟ್ಟು ಓದಿಸಬೇಕೆಂದೂ, ಅವರ ಊಟ ತಿಂಡಿಗಳನ್ನು ಮಾಡಿ ಕೊಡಲು ಅಲ್ಲಿಯೇ ಮನೆಯೊಂದನ್ನು ಗೊತ್ತುಮಾಡಿ, ಅದರ ಮೇಲ್ವಿಚಾರಣೆಗೆ ಯಾರಾದರೂ ಒಬ್ಬರು ಇರಬೇಕೆಂದೂ ತೀರ್ಮಾನವಾಯಿತು.

"ನಿಮ್ಮನ್ನು ಬಿಟ್ಟು, ಅಲ್ಲಿಗೆ ಹೋಗಿ ಹುಡುಗರನ್ನು ನೋಡಿಕೊಳ್ಳಲು

ಯಾರೂ ಸರಿಯಾದವರು ಇಲ್ಲಮ್ಮ, ನೀವೇ ಹೋಗಿ ಬಿಡಿ. ನಿಮಗೆ ಬೇಕಾದ ಅನುಕೂಲಗಳನ್ನೆಲ್ಲಾ ನಾವು ಮಾಡಿಕೊಡುತ್ತೇವೆ" ಎಂದು ಎಲ್ಲರೂ ಹೇಳಿದ ನಂತರ ಸರೂ ವಿಧಿ ಇಲ್ಲದೆ ಒಪ್ಪಿಕೊಳ್ಳಬೇಕಾಯಿತು. ಆದರೆ ಇಲ್ಲಿಯ ಶಾಲೆಯನ್ನು ನೋಡಿಕೊಳ್ಳುವವರಾರು? ಕಡೆಗೆ ಸುಬ್ಬರಾಯರ ಕೊನೆಯ ಮಗ ಮೆಟ್ರಿಕ್ ಪಾಸು ಮಾಡಿ ಮನೆಯಲ್ಲಿಯೇ ಉಳಿದಿದ್ದವನು ಶಾಲೆಯನ್ನು ನೋಡಿಕೊಳ್ಳಬೇಕೆಂದೂ ಗೊತ್ತಾಯಿತು.

ಕೋಣನೂರಿನಲ್ಲಿ ಮನೆ ಸಿಗುವುದೇನೂ ಕಷ್ಟವಾಗಿರಲಿಲ್ಲ. ಸರೂ ತನ್ನ ಹುಡುಗರೊಂದಿಗೆ ಹೋಗಿ ಅಲ್ಲಿಯೇ ನೆಲಸಿದಳು. ಪ್ರತಿ ತಿಂಗಳೂ ಊರಿನ ಹಿರಿಯರು ಗಾಡಿಯಲ್ಲಿ ಸಾಮಾನು ತಂದು ಕೊಡುತ್ತಿದ್ದರು. ಆಯಾ ಹುಡುಗರ ತಂದೆಯವರು ಪ್ರತಿ ತಿಂಗಳೂ ತಪ್ಪದೇ ಫೀಸು ಕೊಡುತ್ತಾ ಬಂದರು. ಸರೂವಿನ ಬಗ್ಗೆ ಅವರಿಗೆ ಲೇಶಮಾತ್ರವೂ ಅಪನಂಬಿಕೆ ಇರಲಿಲ್ಲ. ತಮ್ಮ ಭವಿತವ್ಯವನ್ನೆಲ್ಲಾ ಅವಳ ಕೈಗೇ ಅರ್ಪಿಸಿದ್ದರು.

ವಿಜಯ ಪ್ರತಿಯೊಂದರಲ್ಲೂ ತಾಯಿಯ ಪ್ರತಿಬಿಂಬದಂತಿದ್ದ. ತಾಯಿಯ ಕಷ್ಟಸಹಿಷ್ಣುತೆ, ಪರೋಪಕಾರಬುದ್ಧಿ, ಸಹನೆ ಇವುಗಳೆಲ್ಲಾ ಅವನಿಗೆ ರಕ್ತಗತವಾಗಿ ಬಂದ ಗುಣಗಳಾಗಿದ್ದುವು. ಬುದ್ಧಿಯೂ ಬಲು ತೀಕ್ಷ್ಣವಾಗಿತ್ತು. ಯಾವ ಕ್ಲಿಷ್ಟವಾದ ಗಣಿತವನ್ನೇ ಆಗಲೀ ಅವನು ನಿಮಿಷಮಾತ್ರದಲ್ಲಿ ಮಾಡುತ್ತಿದ್ದ. ಲೆಕ್ಕವೆಂದರೆ ಅವನಿಗೆ ನೀರು ಕುಡಿದಷ್ಟು ಸುಲಭವಾಗಿತ್ತು. ಲೆಕ್ಕದಲ್ಲಿ ಅವನು ನೂರಕ್ಕೆ, ನೂರು ನಂಬರನ್ನು ತೆಗೆಯುತ್ತಿದ್ದ. ಸ್ಕೂಲಿನ ಉಪಾಧ್ಯಾಯರೂ ಕೂಡಾ ಅವನ ಬುದ್ಧಿಶಕ್ತಿಗೆ ಬೆರಗಾಗುತ್ತಿದ್ದರು.

ತಂದೆಯ ನೆನಪು ವಿಜಯನಿಗೆ ಸರಿಯಾಗಿರಲೇ ಇಲ್ಲ. ಅವನು ತಂದೆಯಿಂದ ಅಗಲಿ ಬಂದಾಗ ಅವನಿಗೆ ಕೇವಲ ಮೂರೂವರೆ ವರ್ಷ. ಆದರೂ ಅವನು ತಂದೆಯ ಆ ಏಟುಗಳನ್ನು ಇನ್ನೂ ಮರೆತಿರಲಿಲ್ಲ.

ಅಡುಗೆ ಮನೆಯಲ್ಲಿದ್ದ ಮಾಧವನ ಫೋಟೋವನ್ನು ನೋಡಿದ ಕೂಡಲೇ ತನ್ನ ತಂದೆಯದೇ ಆ ಫೋಟೋ ಎಂದು ಗುರುತಿಸಲಾಗದಿದ್ದರೂ ಅವನಿಗೊಂದು ಬಗೆಯ, ಆತ್ಮೀಯತೆ ಬರುತ್ತಿತ್ತು. ತಾಯಿಯ ಹೇಳಿಕೆಯಿಂದ ಅದು ತನ್ನ ತಂದೆಯದೇ ಎಂದು ತಿಳಿದಾಗ ಇಂತಹ ಸೌಮ್ಯಮೂರ್ತಿಯಾಗಿರುವ ತನ್ನ ತಂದೆ, ತನ್ನನ್ನು ಅಷ್ಟು ಹೊಡೆಯುವುದು ಸಾಧ್ಯವೇ, ಎಂದು ಸಾಶಂಕನಾಗುತ್ತಿದ್ದ.

ವಿಜಯ ಆಗಾಗ್ಗೆ ತಾಯನ್ನು ಕೇಳುತ್ತಿದ್ದ: "ಅಮ್ಮಾ, ಅಣ್ಣ ಈಗ ಎಲ್ಲಿದ್ದಾರೆ? ಅವನ ಬಳಿಗೆ ಹೋಗುವುದು ಬೇಡವೆ?"

"ನೀನು ವಿದ್ಯೆ ಕಲಿತು ದೊಡ್ಡವನಾಗಿ, ಕೆಲಸ ಮಾಡಿಕೋ. ಆಮೇಲೆ ನಾವೆಲ್ಲರೂ ಅವರ ಬಳಿಗೇ ಹೋಗೋಣ. ಅಲ್ಲಿಯವರೆಗೆ ನಾವು ಇಲ್ಲಿಯೇ ಇರಬೇಕು ಮಗೂ, ತಿಳಿಯಿತೆ? " ಸರೂ ಶಾಂತಚಿತ್ತಳಾಗಿ, ಅವನಿಗೆ ಉತ್ತರ ಕೊಡುವಳು.

"ಈಗ ನಮ್ಮ ಅಜ್ಜನ ಮಗ ಅವರ ತಂದೆಯ ಬಳಿಯಲ್ಲಿಯೇ ಇಲ್ಲವೇ? ಅವನೇನೂ ಕೆಲಸಮಾಡಿಕೊಂಡಿಲ್ಲವಲ್ಲ. ನಾನೇಕೆ ಅಣ್ಣನ ಬಳಿಗೆ ಹೋಗಬಾರದು?" ವಿಜಯ ಮರು ಸವಾಲು ಹಾಕುತ್ತಿದ್ದ.

"ನೋಡು ಮಗು, ನಿನಗೆ ಇನ್ನೊಬ್ಬ ಚಿಕ್ಕಮ್ಮ ಬಂದಿದ್ದಾಳೆ. ನೀನು ಅವಳನ್ನು ಪ್ರೀತಿಸುವುದಿಲ್ಲ, ಏನಾದರೂ ಅವಳಿಗೆ ತೊಂದರೆ ಕೊಡುತ್ತೀಯೆ. ಅದಕ್ಕೇ ನಿನ್ನ ತಂದೆಯವರು ನಿನ್ನನ್ನು ಹೊಡೆಯುತ್ತಿದ್ದರು. ನೀನು ಒಳ್ಳೆಯವನಾಗುವ ವರೆಗೂ ಅಲ್ಲಿಗೆ ಹೋಗಬಾರದೆಂದು ಹೇಳಿದ್ದಾರೆ ತಿಳಿಯಿತೆ?"

"ಇಲ್ಲಮ್ಮಾ ನಾನು ಯಾರ ತಂಟೆಗೂ ಹೋಗುವುದಿಲ್ಲ. ನೀನು ಹೇಳಿದ ಹಾಗೆ ಕೇಳುತ್ತೇನೆ. ಅಣ್ಣನ ಬಳಿಗೆ ಹೋಗೋಣ, ಬಾಮ್ಮಾ" ವಿಜಯ ನಿರ್ಮಲವಾದ, ಶುದ್ಧವಾದ ಅಂತಃಕರಣದಿಂದ ಹೇಳುತ್ತಿದ್ದ. ಅವನ ಮಾತು ಕೇಳಿ ಸರೂವಿನ ನಿರಾಶೆಯಲ್ಲಿಯೂ ಕೂಡಾ ಆಶಾಕಿರಣವು ಉಂಟಾಗುತ್ತಿತ್ತು.

ಸರೂ, ಮಾಧವನ ವಿಷಯವನ್ನೆಲ್ಲಾ ಸಂಪೂರ್ಣವಾಗಿ ಅವನಿಗೆ ಹೇಳುತ್ತಿದ್ದಳು. ತಾನು ಅಲ್ಲಿಂದ ಬರುವುದಕ್ಕೆ ಕಾರಣ, ತನ್ನ ಕಷ್ಟ, ಸುಖ ಎಲ್ಲವನ್ನೂ ಹೇಳಿ ಕಣ್ಣೀರು ಸುರಿಸುತ್ತಿದ್ದಳು. ವಿಜಯ ಕಣ್ಣೀರು ನೋಡಿ ಸಹಿಸಲಾರದವನಾಗಿದ್ದ. ತಂದೆಯು ಮಾಡಿದುದು ಎಂತಹ ಅಪರಾಧ ಎಂಬುದು ಅವನ ಎಳೆಯ ಮನಸ್ಸಿಗೂ ಗೊತ್ತಾಗಿತ್ತು. ತಂದೆ ಎಂತಹ ಕ್ರೂರಿ, ತಾಯಿಯನ್ನು ಹೀಗೆ ನರಳಿಸುವನಲ್ಲಾ, ಎಂದು ಅವನಿಗೆ ತಂದೆಯ ಮೇಲೆ ಅಪರೋಕ್ಷವಾಗಿ ಕ್ರೋಧ ಉಂಟಾಗಿತ್ತು.

"ಆ ಅಣ್ಣನಿಗಾಗಿ ನೀನೇಕೆ ಅಳುವೆ, ಸುಮ್ಮನಿರು ಅಮ್ಮ. ನಾನು ದೊಡ್ಡ ಕೆಲಸ ಮಾಡಿಕೊಂಡು, ಮನೆ ಕಟ್ಟಿಸಿ ಅದರೊಳಗೆ ನಿನ್ನನ್ನು ಸುಖವಾಗಿಡುವೆ ಸುಮ್ಮನಿರು ಅಮ್ಮ. ಅಣ್ಣ ನಮಗೆ ಬೇಡವೇ ಬೇಡ" ಎಂದು ವಿಜಯ ತಾಯಿಯ ಕಣ್ಣೀರು ಒರಸುತ್ತಿದ್ದ.

"ಹಾಗೆನ್ನಬಾರದು ಮಗೂ, ನೀನಿನ್ನೂ ಪ್ರಪಂಚದ ನೀತಿ, ನಿಯಮ ವನ್ನರಿಯದವ. ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಬ್ಬ ಮಾನವನೂ ಒಬ್ಬಂಟಿಗನಾಗಿರಲಾರ. ಅವನು ಸಂಘಜೀವಿ. ಹೆಂಗಸೇ ಆಗಲೀ, ಗಂಡಸಾಗಲೀ ತನ್ನ ಕಷ್ಟಸುಖಗಳಲ್ಲಿ ಭಾಗಿಯಾಗಲು ಇನ್ನೊಂದು ಜೀವದ ಆಸರೆ ಇಲ್ಲದೆ ಬದುಕಲಾರ. ಗಂಡ-ಹೆಂಡತಿಯೆಂದರೆ, ಕಡೆಯ ವರೆಗೂ ಜೊತೆಯಾಗಿ ಬಾಳಬೇಕು. ಒಬ್ಬರನ್ನು ಬಿಟ್ಟು ಒಬ್ಬರು ಬೇರೆಯಾಗಿ ಬದುಕುವುದು, ನಮ್ಮ ಸಮಾಜದಲ್ಲಿ ಸಾಧ್ಯವೇ ಇಲ್ಲ. ನನ್ನ ತಾಯಿ ನನಗೆ ಹೇಳುತ್ತಿದ್ದಂತೆ ನಾನೂ ನಿನಗೆ ಒಂದು ಮಾತನ್ನು ಹೇಳುವೆ ನೀನು ನಡೆಸುವೆಯಾ?"

"ನೀನು ಏನೇ ಹೇಳಿದರೂ ನಾನು ಇಲ್ಲ ಅನ್ನುವುದಿಲ್ಲ ಅಮ್ಮ. ನಿನಗಾಗಿ ನಾನು ಏನು ಬೇಕಾದರೂ ಮಾಡುವೆ." ವಿಜಯ ತಾಯಿಯಲ್ಲಿಯ ವಿಶ್ವಾಸ ದಿಂದ ನುಡಿದ.

"ನೋಡು ಮಗು, ಗಂಡ ಹೆಂಡಿರಾಗುವುದು ಅವರವರ ಋಣಾನು ಬಂಧವಿದ್ದಂತೆ ಆಗುತ್ತೆ. ಅದಕ್ಕೆ ಯಾರೂ ಹೊಣೆಗಾರರಲ್ಲ. ಈಗ ನಾಳೆ ನೀನು ದೊಡ್ಡವನಾದ ಮೇಲೆ ನಿನಗೂ ಮದುವೆಯಾಗಿ ಹೆಂಡತಿಯೊಬ್ಬಳು ಬರುತ್ತಾಳೆ. ಅವಳು ಕುರೂಪಿಯೇ ಆಗಲೀ, ಕೆಟ್ಟವಳೇ ಆಗಲೀ, ಜಗಳ ಗಂಟಿಯೇ ಆಗಲೀ, ರೋಗಗ್ರಸ್ತಳೇ ಆಗಲೀ, ಅವಳನ್ನು ಕಡೆಯ ವರೆಗೂ ಕೈ ಬಿಡದೆ ಸಾಧ್ಯವಾದಷ್ಟು ಅವಳಿಗೆ ನೋವನ್ನುಂಟುಮಾಡದೆ, ಸಂತೋಷ ವಾಗಿಟ್ಟಿರಲು ಪ್ರಯತ್ನಿಸಬೇಕು ತಿಳಿಯಿತೆ? ಈ ಒಂದು ವಿಷಯದಲ್ಲಿ ನಿಮ್ಮ ತಂದೆಯವರು ದಾರಿ ತಪ್ಪಿದರು. ನಾನು ನನ್ನ ಕರ್ತವ್ಯವನ್ನು ಮಾಡಿರುವೆ ಎಂದು ತಿಳಿಯುತ್ತೇನೆ. ನೀನೂ ನಿನ್ನ ತಂದೆಯ ಹಾದಿಯನ್ನೇ ಹಿಡಿಯದೆ, ನಿನ್ನ ತಾಯಿಯಂತೆ ಕರ್ತವ್ಯದಕ್ಷನಾಗಿರಬೇಕು.

"ಇನ್ನೊಂದು ಮಾತು ಮಗೂ. ದೇವರು ನಿನಗೆ ಮುಂದೆ, ಐಶ್ವರ್ಯ ವನ್ನು ಕೊಡಬಹುದು. ನೀನು ದೊಡ್ಡ ಪದವೀಧರನಾಗಿ ಮೆರೆಯಬಹುದು ಆದರೂ ನಿನ್ನ ಸಿರಿವಂತಿಕೆಯಲ್ಲಿಯೂ ಮುಂಚೆ ನೀನು ಎಂತಹ ಸ್ಥಿತಿಯಲ್ಲಿ ಬೆಳೆದೆ, ಬಡವರ ಕಷ್ಟವೆಂದರೇನು ಎಂಬುದನ್ನು ಮರೆಯಬೇಡ. ಎಲ್ಲರಲ್ಲಿಯೂ ದಯಾಳುವಾಗಿ ವರ್ತಿಸು. ನೀನು ಹಾಗೆ ನಡೆದೆಯಾದರೆ, ನಾನು ಧನ್ಯೆ. ಅಂತಹ ಕಾಲ ಬೇಗನೆ ಬರಲೆಂದು ನಾನು ದೇವರಲ್ಲಿ ಬೇಡುವೆ." ಸರೂ ಹೇಳುತ್ತಾ ಹೇಳುತ್ತಾ ವಿಜಯನನ್ನಪ್ಪಿದಳು. ವಿಜಯ ತಾಯಿಯ ಮಡಲಲ್ಲಿ ಮುಖ

ಮರೆಸಿಕೊಂಡ. ಅವನ ಭವಿಷ್ಯದ ಬೆಳಕನ್ನೇ ನಂಬಿ ಅದರ ಬರವಿಗಾಗಿ ಸರೂ ಶಬರಿಯಂತೆ ಕಾದು ಕುಳಿತಳು. ತಾಯಿಯ ಅಂತಃಕರಣದ ಆ ಮಾತುಗಳು ವಿಜಯನ ಮೇಲೆ ಪರಿಣಾಮವನ್ನುಂಟುಮಾಡದಿರಲಿಲ್ಲ. ಏನೇ ಆಗಲೀ ತಾಯಿಯನ್ನು ಅಳಿಸಬಾರದು, ಅವಳು ಹೇಳಿದಂತೆ ಕೇಳಬೇಕು ಎನ್ನುವ ಭಾವನೆ ಅವನಲ್ಲಿ ಮೂಡಿತ್ತು. ತಾಯಿ-ಮಕ್ಕಳ ನಿಷ್ಕಳಂಕವಾದ, ನಿರ್ಮಲವಾದ, ಮೇರೆಯೇ ಇಲ್ಲದ ಪ್ರೇಮಕ್ಕೆ ಅವರ ಬಡತನ, ಕಷ್ಟ-ಸುಖಗಳು ಯಾವ ಅಡ್ಡಿಯನ್ನೂ ಮಾಡಲಿಲ್ಲ. ಮುರಲಿ ಆಗಾಗ್ಗೆ ಹಣವನ್ನು ಕಳಿಸುತ್ತಲೇ ಇದ್ದ. ಮಾವನವರ ಅಂತಿಮ ಅಪೇಕ್ಷೆಯನ್ನು ನೆರವೇರಿಸುವುದಕ್ಕೆ ಅವಳು ತಲೆ ಬಾಗಿ, ಮುರಲಿಯ ಹಣವನ್ನು ಸ್ವೀಕರಿಸುತ್ತಿದ್ದಳು. ಈ ಏಳು ವರ್ಷಗಳ ಅಂತರದಲ್ಲಿ, ಮೋಹನ, ಮುರಲಿ, ಮುಕುಂದರ ಮದುವೆಗಳೂ ಆಗಿವೆ. ಸರೂ ಯಾವ ಮದುವೆಗೂ ಹೋಗಿರಲಿಲ್ಲ. ವಿಜಯ ಇನ್ನೂ ಚಿಕ್ಕ ಹುಡುಗನಾದ್ದರಿಂದ ಅವನನ್ನೊಬ್ಬನನ್ನೇ ಕಳಿಸುವುದೂ ಸಾಧ್ಯವಾಗಿರಲಿಲ್ಲ. ಸರೂ ಬರಿಯ ಕಾಗದದಿಂದಲೇ ತನ್ನ ಆಶೀರ್ವಾದವನ್ನು ತಿಳಿಸಿದ್ದಳು.

ಮುರಲಿ ತನ್ನ ಮದುವೆಗೆ ಸ್ವತಃ ಬಂದು ಅತ್ತಿಗೆಯನ್ನು ಕರೆದ. ಆದರೆ ಸರೂವಿನ ಉತ್ತರ ಒಂದೇ: "ಅವರ ಜೊತೆಯಲ್ಲಲ್ಲದೆ, ನಾನು ಒಬ್ಬಳೇ ಎಲ್ಲಿಗೂ ಈ ಮನೆಯಿಂದ ಕದಲುವಂತಿಲ್ಲ" ಎಂದು. ಹತಾಶನಾದ ಮುರಲಿ ಹಾಗೆಯೇ ಹಿಂತಿರುಗಬೇಕಾಯಿತು. ಸರೂ ಅಷ್ಟೊಂದು ವ್ರತನಿಷ್ಠ ಜೀವನವನ್ನೇ ನಡೆಸಿದ್ದಳು. ಮುರಲಿ ಆ ಜೀವನಕ್ಕೆ ಸೋಲಬೇಕಾಯಿತು.

ರೂಪಾ ಅತ್ತೆಯ ಮನೆಗೆ, ಸರೂ ಹೇಳಿದ್ದಂತೆ ಗಂಡುಮಗುವನ್ನೆತ್ತಿಕೊಂಡೇ ಬಂದಳು. ಬಂದೊಡನೆ ಸರೂಳ ವಿಷಯವನ್ನು ಕೇಳಿ ತಿಳಿದು, ಗೊಳೋ ಎಂದು ಅತ್ತಳು. ತಾನಿಲ್ಲದ ಕೆಲವೇ ದಿನಗಳಲ್ಲಿ ತನ್ನ ಪತಿಯೂ ಕೂಡಾ, ಮಾಧವನಂತೆ ಲೂಸಿಯ ದಾಸನಾಗಿರುವುದನ್ನು ಕಂಡು, ರೂಪಾ ನಡುಗಿದಳು. ಅತ್ತೆಯವರೂ ಈಗ ಅವಳ ಹಿತ್ತೈಷಿಣಿಯೇ ಆಗಿದ್ದಂತೆ ತೋರಿತು. ರೂಪಾ ಅದಕ್ಕೆಂದೇ ಅತ್ತೆಗೆ ಕೂತಾಗ, ನಿಂತಾಗಲೆಲ್ಲಾ ಹೇಳಿ ಹೇಳಿ ಆ

ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋಗುವಂತೆ ಮಾಡಿದಳು. ತಾಯಿಯ ಮಾತಿಗೆ ಎದುರಾಡದೆ ಹೀರಾಲಾಲನೂ ಒಪ್ಪಿಕೊಂಡು ಬೇರೆಯ ಕಡೆ ಹೋಗ ಬೇಕಾಯಿತು.

ಹೀಗಾಗಿ ಲೂಸಿಯ ಸ್ನೇಹಿತರಲ್ಲೊಬ್ಬನಾದ ಹೀರಾಲಾಲನೂ ಅವಳ ಕೈಬಿಟ್ಟು ಹೋದ. ಅವಳಿಗೆ ಹೀರಾಲಾಲನ ಜೊತೆ ಬಹಳ ಹರ್ಷದಾಯಕ ವಾಗಿದ್ದಿತು. ಅವನು ಎಂದಾದರೂ ತಿಂಗಳಿಗೊಮ್ಮೆ, ಮನೆಯವರ ಕಣ್ಣು ತಪ್ಪಿಸಿ ಲೂಸಿಯೆಡೆಗೆ ಬರುತ್ತಿದ್ದ. ಆದರೂ ಅವನು ದೂರ ಹೋದುದಕ್ಕೆ ಲೂಸಿ ಬಹಳವಾಗಿ ಪೇಚಾಡಿದಳು. ಲೂಸಿ ಈ ಸ್ಥಿತಿಯಲ್ಲಿರುವಾಗಲೇ, ಹೀರಾ ಲಾಲ ಬಿಟ್ಟಿದ್ದ ಮನೆಗೆ ಶಂಕರ ಬಂದ. ಮನೆಯಲ್ಲಿ ಅವನ ತಾಯಿ ಮತ್ತು ಅವನು ಇಬ್ಬರೇ. ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು ತಾಯಿಯ ಮಾತನ್ನು ಕೇಳದೆ, ಬೀದಿ ಬೀದಿ ಅಲೆದು ಪೋಲಿಯಾಗಿದ್ದ. ಕುಡಿತ, ಇಸ್ಪೀಟು, ಜೂಜು ಎಲ್ಲಾ ತರಹೆಯಲ್ಲಿಯೂ ಅವನು ಮೊದಲನೆಯವನಾಗಿದ್ದ. ಬಂದ ಕೆಲವು ದಿನಗಳೊಳಗಾಗಿಯೇ ಲೂಸಿ-ಶಂಕರರ ಪರಿಚಯವಾಯ್ತು. ಲೂಸಿಗೆ ತಕ್ಕ ಮನುಷ್ಯನೇ ಆಗಿದ್ದ ಶಂಕರ. ಅವಳ ಕೀಳು ದರ್ಜೆಯ ಮನೋಭಾವನೆ ಗಳಿಗೆ ಅವನು ಅವಳನ್ನು ಹೊಂದಿಕೊಂಡಿದ್ದ. ಲೂಸಿಶಂಕರನ ಅಡಿಯಾಳಾ ದಳು. ಅವನಿಗೆ ಕೆಲಸವಿಲ್ಲ ಬೊಗಸೆ ಇಲ್ಲ. ತಂದೆಯು ಗಳಿಸಿದ ಆಸ್ತಿಯು ಸಾಕಷ್ಟು ಇತ್ತು. ಕೋಡಂಬಾಕುಂನಲ್ಲಿ ಇದ್ದ ಪುಟ್ಟದೊಂದು ಮನೆಯನ್ನು ಮಾರಿ,ಅದರ ಹಣವನ್ನುಕೆಲವೇ ತಿಂಗಳುಗಳೊಳಗಾಗಿ ನೀರುಪಾಲು ಮಾಡಿದ್ದ. ತಾಯಿ ಎಷ್ಟು ವಿಧದಲ್ಲಿ ಹೇಳಿದರೂ, ಅವನು ಕಿವಿಯ ಮೇಲೇ ಹಾಕಿಕೊಳ್ಳು ತ್ತಿರಲಿಲ್ಲ. ಕೈಲಿದ್ದ ಹಣವೂ ಬರಿದಾಗಿ ಹೊಟ್ಟೆಗೇ ಇಲ್ಲದಂತಾದಾಗ, ವಿಧಿ ಇಲ್ಲದೇ ಯಾವುದೋ ಮಿಲ್ ಒಂದರಲ್ಲಿ ಕೆಲಸಕ್ಕೆ ಸೇರಿದ. ಅವನಿಗೆ ಬರು ತ್ತಿದ್ದ ಸಂಬಳದ ಹಣದಲ್ಲಿ ಒಂದು ಕಾಸಿನ ಮುಖವಾದರೂ ತಾಯಿಯು ನೋಡಿದುದೇ ಇಲ್ಲ. ಶಂಕರನ ಸ್ಥಿತಿ ಈ ರೀತಿಯಲ್ಲಿರುವಾಗಲೇ ಲೂಸಿಯ ಪರಿಚಯ ಅವನಿಗಾದ್ದು.

ಶಂಕರನ ಗೆಳೆತನವಾದಂದಿನಿಂದ ಲೂಸಿ ಅವನ ಕೈಗೊಂಬೆಯಾದಳು. ಅವನ ಪ್ರತಿಯೊಂದು ಬೇಕು ಬೇಡಗಳಿಗೆಲ್ಲಾ ಲೂಸಿಯೇ ಹೊಣೆಗಾತಿಯಾಗಿ ದ್ದಳು. ಹರಕಲು ಶರಾಯಿ, ಕೋಟು ತೊಡುತ್ತಿದ್ದ ಶಂಕರನಿಗೆ ಲೂಸಿ ತಾನಾ ಗಿಯೇ ಶರಾಯಿ ಷರಟುಗಳನ್ನು ಹೊಲಿಸಿದಳು. ಅವನ ಸಿಗರೇಟಿಗೆ, ಕುಡಿ

ತಕ್ಕೆ ಎಲ್ಲಕ್ಕೂ ಲೂಸಿಯ ಹಣವೇ ಖರ್ಚಾಗುತ್ತಿತ್ತು. ಅವನ ಸ್ನೇಹಕ್ಕಾಗಿ ಲೂಸಿ ಏನು ಬೇಕಾದರೂ ಮಾಡಲು ಸಿದ್ಧಳಾಗಿದ್ದಳು.

ಮಾಧವ ಎಂದಿನಂತೆ ಲೂಸಿಯಲ್ಲಿಯೇ ಅನುರಕ್ತನಾಗಿದ್ದ. ಲೂಸಿ ಅವನಿಗೆ ಯಾವ ಸಂಶಯವೂ ಬಾರದಂತೆ ಜಾಗರೂಕಳಾಗಿ ನಡೆದುಕೊಳ್ಳುತ್ತಿದ್ದಳು. ಅವನ ಹಿಂದೆ ಬೇಕಾದಷ್ಟು ಸ್ವೇಚ್ಛೆಯಾಗಿದ್ದರೂ, ಅವನ ಎದುರಿಗೆ ಏನೂ ತಿಳಿಯದವಳಂತೆ ನಟಿಸುತ್ತಿದ್ದಳು. ಮಾಧವ ಇದಾವುದೂ ತಿಳಿಯದೆ ತನ್ನ ಕೆಲಸದಲ್ಲಿಯೇ ತೊಡಗಿದ್ದ.

ರಾತ್ರಿ ಒಂಭತ್ತರ ಸಮಯವಾಗಿತ್ತು. ಶಂಕರ ಬಾಗಿಲು ತಟ್ಟಿದ. ಅವನಿಗಾಗಿಯೇ ಕಾದು ಕುಳಿತ ಲೂಸಿ, ಕೂಡಲೇ ಬಾಗಿಲು ತೆರೆದಳು. ಶಂಕರ ಒಳಗೆ ಬಂದು ಅಲ್ಲಿಯೇ ಕುರ್ಚಿಯ ಮೇಲೆ ದೊಪ್ಪೆಂದು ಕುಕ್ಕರಿಸಿದ. ಲೂಸಿ ಅವನ ಸಮೀಪವಾಗಿಯೇ ಕೂತಳು.

"ಎಲ್ಲಿ ನಿನ್ನ ಪತಿರಾಯರು ನಿದ್ರೆಮಾಡುತ್ತಿದ್ದಾರೆಯೇ?"ಶಂಕರ ಸಿಗರೇಟು ಹೊತ್ತಿಸಿ ಕೇಳಿದ.

"ಶ್ ಶ್, ಗಟ್ಟಿಯಾಗಿ ಮಾತನಾಡಬೇಡ.ಅವರಿಗೆ ಎಚ್ಚರವಾದರೆ, ಒಳ್ಳೆಯದಾಗಲಿಕ್ಕಿಲ್ಲ. ಮೆತ್ತಗೆ ಮಾತನಾಡು." ಲೂಸಿ ರೂಮಿನ ಬಾಗಿಲು ಹಾಕಿಕೊಂಡು ಬಂದಳು, ನಿದ್ರಿಸುತ್ತಿರುವ ಮಾಧವನಿಗೆ ತಮ್ಮ ಮಾತಿನಿಂದ ಎಚ್ಚರವಾಗಬಾರದೆಂದು.

"ಈ ಭಯ, ಈ ಗುಟ್ಟು, ಹೆದರಿಕೆ ನನಗೂ ಸಾಕಾಗಿ ಹೋಯ್ತು ಲೂಸಿ. ಮನದಣಿಯುವಂತೆ ಎಂದೂ ಮಾತನಾಡಲಿಕ್ಕೇ ಅವಕಾಶವಿಲ್ಲ. ಈ ರೀತಿ ಬಂಧನ ಸಾಕು ಲೂಸೀ. ನಾವಿಬ್ಬರೇ ಎಲ್ಲಿಗಾದರೂ ಹೋಗುವಾ ಬಾ."

"ನಾನೇನೋ ನಿನ್ನ ಜೊತೆ ಬರಬಹುದು, ಆದರೆ ನಮ್ಮ ಹೊಟ್ಟೆಯ ಪಾಡಿಗೇನು ಮಾಡುವುದು? ನೀನೇನೂ ಕೆಲಸ ಮಾಡುವ ಆಸಾಮಿಯಲ್ಲ. ನಾನು ಕೆಲಸಕ್ಕೆ ಸೇರಬಹುದು, ಆದರೆ ನನಗೆ ಬರುವ ಸಂಬಳದಲ್ಲಿ ಈ ನಮ್ಮಿಬ್ಬರ ಜೀವನ ನಡೆಸಲು ಸಾಧ್ಯವೇ? ಏನಿಲ್ಲಾ ಅಂದರೂ ನಿನಗೊಬ್ಬನಿಗೇ ಬೇಕು ಒಂದು ಡಬ್ಬಾ ಸಿಗರೇಟು, ದಿನಕ್ಕೆ. ಇಂತಹ ಪರಿಸ್ಥಿತಿಗೊಳಗಾದ ನಾವು ಹೇಗೆ ಮುಂದುವರಿಯುವುದು? ಇದಕ್ಕೆ ಪರಿಹಾರ ನೀನೇ ಹೇಳಿಬಿಡು."

"ನಾನು ಹೇಳಿದಂತೆ ಕೇಳುವಿಯಾದರೆ, ಎಲ್ಲವೂ ಸಾಧ್ಯ. ನಾನು ಹೇಳಿದಂತೆ ನಡೆಯುವೆಯಾ ?"

"ಹೂಂ, ಏನು ಹೇಳು ನೋಡೋಣಾ."

"ನೋಡೋಣ, ಮಾಡೋಣ ಎನ್ನುವ ಪ್ರಶ್ನೆಯೇ ಇರಬಾರದು. ನಿನ್ನ ಗಂಡನ ಬಳಿ ಎಷ್ಟೋ ಕಡಿಮೆಯೆಂದರೂ ಹತ್ತುಸಾವಿರ ರೂಪಾಯಿಗಳಾದರೂ ಇವೆಯೆಂದು ನೀನೇ ಹೇಳಿದ್ದೀಯೆ. ಅದನ್ನು ಹೇಗಾದರೂ ಮಾಡಿ ತೆಗೆದು ಕೊಳ್ಳೋದು. ಬೇರೆ ಯಾವ ಊರಿಗಾದರೂ ಹೋಗೋದು. ಏನು ಹೇಳುವೆ ಲೂಸೀ?" ಶಂಕರ ಕಣ್ಣು ಮಿಟುಕಿಸಿ ಕೇಳಿದ. ಅವನ ಮಾತು ಕೇಳಿ ಲೂಸಿ ಕ್ಷಣ ಕಾಲ ದಿಂಗ್ಮೂಢಳಾದಳು. ಯಾವದೊಂದು ಮಾತೂ ಅವಳ ಬಾಯಿಂದ ಹೊರಬೀಳಲಿಲ್ಲ. ಶಂಕರ ಪುನಃ ಕೇಳಿದ: "ಯೋಚಿಸು ಲೂಸೀ, ಇದೊಂದು ಸುಸಂಧಿ. ಹಣವೂ ದೊರೆಯುತ್ತೆ, ಇಲ್ಲಿಯ ನಿರ್ಬಂಧವೂ ತಪ್ಪಿ ಹೋಗುತ್ತೆ. ಏನು ಹೇಳುವೆ?"

"ಇಲ್ಲ ಶಂಕರ, ನಾನು ಅವರನ್ನು ಇದುವರೆಗೂ ವಂಚಿಸಿದ್ದೇನೆ. ಆದರೆ ಅವರ ಹಣವನ್ನೂ ಅಪಹರಿಸಿ ಕಳ್ಳಿಯಂತೆ ಹೋಗಲು ನನಗೆ ಮನಸ್ಸಿಲ್ಲಾ ಶಂಕರ. ದಯವಿಟ್ಟು ಕ್ಷಮಿಸು. ಇದೊಂದನ್ನು ಬಿಟ್ಟು ಬೇರೆ ಏನು ಹೇಳಿದರೂ ನಾನು ಮಾಡುವೆ." ಲೂಸಿ ಅಂಗಲಾಚಿ ಬೇಡಿಕೊಂಡಳು.

"ಎಷ್ಟೆಂದರೂ ನಿನಗೆ ನಿನ್ನ ಮಾಧವನೇ ಹೆಚ್ಚು. ನಿನ್ನನ್ನು ನಂಬಿಕೊಂಡು ಕುಳಿತ ನಾನು ಕೆಟ್ಟೆ ಅಷ್ಟೆ. ಹಾಗೇ ಆಗಲೀ, ನಾನು ಬರುವೆ ಲೂಸೀ. ಗುಡ್ ಬೈ." ಶಂಕರ ಹೊರಟು ನಿಂತ.

ಶಂಕರ, ತನ್ನ ಪ್ರಾಣಪ್ರಿಯನಾದ ಶಂಕರ ತನ್ನನ್ನು ತ್ಯಜಿಸಿ ಹೋಗುತ್ತಾನೆಂದು ತಿಳಿದ ಲೂಸಿ ಅಪಾರ ದುಃಖಕ್ಕೀಡಾದಳು. ಅವಳ ಮನಸ್ಸಿನಲ್ಲಿ ದೊಡ್ಡ ಹೋರಾಟವೇ ನಡೆಯಿತು. ಒಂದು ಕಡೆ ನ್ಯಾಯವಾಗಿ ಮದುವೆಯಾದ ಗಂಡ. ಇನ್ನೊಂದೆಡೆ ತಾನಾಗಿ ಮನ ಒಲಿದಿರುವ ಶಂಕರ. ಇವರಿಬ್ಬರಲ್ಲಿ ಯಾರನ್ನು ಸೇರಲಿ ಎಂದು ಯೋಚಿಸಿ ತೊಳಲಿದಳು ಲೂಸಿ. ದೀರ್ಘಕಾಲ ಯೋಚನೆಯನ್ನು ಮಾಡಿ ಕಡೆಗೆ ಲೂಸಿ ಹೇಳಿದಳು: "ಆಗಲೀ ಶಂಕರ್, ನೀನು ಹೇಳಿದಂತೆ ಮಾಡುವೆ. ನನ್ನ ಕೈ ಬಿಡಬೇಡ." ಬಾಗಿಲೆಡೆಗೆ ಹೊರಟಿದ್ದ ಶಂಕರನನ್ನು ತಡೆದು ಹೇಳಿದಳು ಲೂಸಿ.

"ಯೂ ಆರ್ ವೆರಿ ಗುಡ್, ಮೈ ಸ್ವೀಟ್!" ಶಂಕರ ಅವಳ ಬಳಿಸಾರಿದ

ವಾರವೆಲ್ಲಾ ದುಡಿದು ದಣಿದ ಮಾಧವ, ಭಾನುವಾರ ಬೆಳಗ್ಗೆ ಎಚ್ಚರ ಗೊಂಡಾಗ ಗಂಟೆ ಎಂಟರ ಮೇಲಾಗಿತ್ತು. ಮನೆ ಎಲ್ಲಾ ಒಂದು ಬಗೆಯದಾಗಿ ಕಾಣಬಂತು ಮಾಧವನಿಗೆ. ಲೂಸಿಯ ಮಾತಾಗಲೀ, ನಗುವಾಗಲೀ ಯಾವುದೂ ಕೇಳಿಸಲಿಲ್ಲ. ಅವನ ಹೃದಯ ಯಾವುದೋ ಅಮಂಗಳವನು ಸೂಚಿಸುವಂತೆ ಜೋರಾಗಿ ಡವಗುಟ್ಟುತ್ತಿತ್ತು. ರೂಮಿನ ತುಂಬಾ ಇದ್ದ ಅವಳ ಬಟ್ಟೆಬರೆ, ಪೆಟ್ಟಿಗೆ, ಟಾಯ್‌ಲೆಟ್, ಯಾವುದೂ ಕಾಣಬರಲಿಲ್ಲ. ಮಾಧವ ಅಧೀರನಾಗಿ ಗಟ್ಟಿಯಾಗಿಯೇ ಕೂಗಿದ. “ಲೂಸೀ....ಲೂಸೀ....”. ಅವನ ಕರೆಗೆ ಓಗೊಟ್ಟು ಬಳುಕುತ್ತಾ, ನಲಿಯುತ್ತಾ ಬರುವ ಲೂಸಿಯ ಬದಲು ಅಡುಗೆಯವ, ಬಂದು ಕೈಗೆ ಕಾಗದವೊಂದನ್ನಿತ್ತು, ಒಳಗೆ ತೆರಳಿದ. ಆತುರಾತುರ ದಿಂದ ಅದನ್ನು ಬಿಚ್ಚಿ ನೋಡಿದ ಮಾಧವ. ಲೂಸಿ ಬರೆದ ಕಾಗದವಾಗಿತ್ತು.

ಡಿಯರ್,

ನಾನು ನಿಮ್ಮನ್ನಗಲಿ ದೂರ ಹೋಗುತ್ತೇನೆ. ನೀವು ನನಗಾಗಿ ಹುಡು ಕಲು ಯಾವ ಪ್ರಯತ್ನವನ್ನೂ ಮಾಡಬೇಡಿರಿ. ನಿಮ್ಮಲ್ಲಿಯ ಅಪಾರ ದಯೆ, ನಿರ್ಮಲವಾದ ಪ್ರೇಮಕ್ಕೆ ನಾನು ಯೋಗ್ಯಳಲ್ಲ. ನಾನು ನಿಮ್ಮ ಸುಂದರವಾದ ಸಂಸಾರವನ್ನು ಹಾಳು ಮಾಡಿದೆ. ನಾನೊಬ್ಬಳು ಕುಲಟೆ ಜಾರಿಣಿ, ಪತಿತೆ! ನನ್ನ ಮನಸ್ಸು ಚಂಚಲವಾದ್ದು. ಆಗ ನೀವು ಬೇಕೆನಿಸಿತು, ನಿಮ್ಮ ಬಳಿಗೆ ಬಂದೆ; ನಾನು ಯೋಚಿಸಿದ್ದಕ್ಕಿಂತ, ನೂರುಪಾಲು, ಕೋಟಿಪಾಲು ಹೆಚ್ಚಿಗೆ ನೀವು ನನ್ನನ್ನು ಪ್ರೀತಿಸಿದಿರಿ. ಆದರೆ ಅದಕ್ಕೆ ನಾನು ಅರ್ಹಳಲ್ಲ. ನನ್ನ ಹುಟ್ಟುಗುಣವನ್ನು ನಾನು ಬಿಡಲಾರೆ ಕ್ಷಮಿಸಿರಿ.

ಇತಿ ನಿಮ್ಮ

—ಲೂಸಿ

ಮಾಧವ ತನ್ನ ಕಣ್ಣುಗಳನ್ನೇ ನಂಬಲಾರದವನಾದ. ಹತ್ತು ಬಾರಿ ಓದಿದರೂ ಅದೇ ಅಕ್ಷರಗಳು, ಅದೇ ಹೃದಯಭೇದಕವಾದ ವಾರ್ತೆ! ತನ್ನ ಲೂಸಿಯೊಬ್ಬಳು ಜಾರಿಣಿ! ತನ್ನ ಲೂಸಿ ವೇಶ್ಯೆ! ಇದು ನಿಜವೇ? ಇದು ಸತ್ಯವೆ? ಹೌದು, ಇದು ಲೂಸಿಯದೇ ಕೈಬರೆಹ. ಅದು ಸತ್ಯ. ಅದನ್ನಿಲ್ಲಾ ಎನಲು ಸಾಧ್ಯವಿಲ್ಲ. ಹಾಗಾದರೆ ಲೂಸಿ ತನ್ನನ್ನು ಕಡೆಗೂ ತೊರೆದು ಹೋದಳೇ? ಮಾಧವನ ತಲೆ ತಿರುಗಲಾರಂಭಿಸಿತು. ಎಲ್ಲಿ ನೋಡಿದಲ್ಲಿ

ಲೂಸಿಯ ರೂಪವೇ ಕಾಣುತ್ತಿತ್ತು. ಹತ್ತು ರೀತಿಗಳಲ್ಲಿ ಬಂದು ಅವನನ್ನು ಅಪಹಾಸ್ಯ ಮಾಡಿದಂತಾಯಿತು. ಕಣ್ಣು ಬಿಟ್ಟರೆ ಲೂಸಿಯ ಮೂರ್ತಿ ಬಿಟ್ಟು ಬೇರೆ ಏನೂ ಕಾಣಿಸಲೇ ಇಲ್ಲ. ವಿಚಾರದ ಒತ್ತಡದಿಂದ ಅವನ ತಲೆಯ ನರಗಳೆಲ್ಲಾ ಉಬ್ಬಿದುವು. ತಲೆ ಸಿಡಿದು ಹೋಗುವುದೋ ಎನ್ನುವ ಮಟ್ಟಿಗೆ ನರಗಳು ಮಿಡಿಯುತ್ತಿದ್ದುವು. ಅವನ ಪರಿತಾಪ ವರ್ಣನಾತೀತವಾಗಿತ್ತು.

ಅಡುಗೆಯವ ಕಾಫಿ ತಂದು ಮಾಧವನ ಕೈಗಿತ್ತ. ಅದನ್ನು ಒಂದೇ ಗುಟಕಿಗೆ ಕುಡಿದು ಮುಗಿಸಿದ ಮಾಧವ. ನಂತರ ಅವನಿಗೆ ಸ್ವಲ್ಪ ಚೇತನ ಬಂದಂತಾಗಿತ್ತು. ಅಡುಗೆಯವನನ್ನು ಏನಾದರೂ ಗೊತ್ತಿದ್ದರೆ ತಿಳಿಸಲು ಕೇಳಿದ. ಅವನೂ ತನಗೆ ಗೊತ್ತಿರುವ ಮಟ್ಟಿಗೆ ಲೂಸಿಯ ಪೂರ್ವಚರಿತೆಯನ್ನೆಲ್ಲಾ ಹೇಳಿದ. ಅವಳು ಪಕ್ಕದ ಮನೆಯ ಶಂಕರಪ್ಪನೊಡನೆ ನಿನ್ನೆ ರಾತ್ರಿಯೇ ಹೊರಟು ಹೋದಳೆಂದೂ, ಕಾಗದವನ್ನು ಮಾಧವನಿಗೆ ತಲುಪಿಸುವಂತೆ ಹೇಳಿ ತನ್ನ ಕೈಯಲ್ಲಿ ಕೊಟ್ಟು ಹೋಗಿದ್ದಳೆಂದೂ ವಿವರಿಸಿ ಕೊನೆಗೆ "ನಾನೂ ಆಗಾಗ್ಗೆ ನಿಮಗೆ ಸ್ವಲ್ಪ ಸುಳುವು ಹೇಳುತ್ತಲೇ ಇದ್ದೆ ಸ್ವಾಮಿ. ಆದರೆ ನೀವಾವುದಕ್ಕೂ ಗಮನವನ್ನೇ ಕೊಡುತ್ತಲಿರಲಿಲ್ಲ. ಅವಳು ಸಂಸಾರಸ್ಥ ಹೆಂಗಸಿನ ಹಾಗೆ ಕಾಣುತ್ತಾಳೆಯೇ? ಅವಳ ಜಾತಿಯೇ ಬೇರೆ; ಆ ಹೊಲಸು ಹೆಂಗಸಿಗಾಗಿ ನೀವೇಕೆ ಪೇಚಾಡುವಿರಿ ಸ್ವಾಮಿ? ಪೀಡೆ ಪರಿಹಾರವಾಯಿತು ಎಂದುಕೊಳ್ಳಿ." ಎಂದು ಲೂಸಿಯ ಎದುರಿಗೆ ನಿಲ್ಲಲೂ ಕೂಡಾ ನಡುಗುತ್ತಿದ್ದವ, ಈಗ ಎಲ್ಲಿಲ್ಲದ ಪೌರುಷದಿಂದ ಹೇಳಿದ.

ಮಾಧವ ತಲೆಯ ಮೇಲೆ ಕೈ ಹೊತ್ತು ಕುಳಿತ. ತನ್ನ ಲೂಸಿ ಇಂಥವಳು ಎಂದು ಅವನು ಕನಸುಮನಸ್ಸಿನಲ್ಲಿಯೂ ಎಣಿಸಿರಲಿಲ್ಲ. ಲೂಸಿ ತನ್ನನ್ನು ಮೊದಲಿನಿಂದಲೂ ವಂಚಿಸುತ್ತಿದ್ದಳೆಯೇ? ಇದು ನಿಜವೆ? ಯಾರಾದರೂ ಅವಳ ಮೇಲಿನ ದ್ವೇಷಕ್ಕೆ ಹೀಗೆ ಸುಳ್ಳು ಸುಳ್ಳು ಬರೆದಿರಬಹುದೇ ಎಂದರೆ, ಆ ಅನುಮಾನವನ್ನು ಪುಷ್ಟೀಕರಿಸಲು ಲೂಸಿಯೂ ಇಲ್ಲ; ಅವಳದೆನ್ನುವ ಯಾವ ಸಾಮಾನು ಕೂಡಾ ಇಲ್ಲ. ಪಕ್ಕದ ಮನೆಯ ಶಂಕರನ ವೃದ್ಧ ತಾಯಿಯನ್ನು ಕೇಳಿದ್ದಕ್ಕೆ, ಶಂಕರ ಯಾವುದೋ ಊರಿಗೆ ಹೋಗಿರುವುದಾಗಿ ತಿಳಿಯಬಂತು. ಇನ್ನು ಅನುಮಾನವೆಲ್ಲಿ? ನಿಜವಾಗಿಯೂ ಲೂಸಿ, ಶಂಕರನೊಡನೆ ಓಡಿಹೋಗಿದ್ದಾಳೆ. ಅಂತಹ ನೀಚ ಜಾತಿಯ, ಅಂತಹ ಕುಲಟೆ ಲೂಸಿಗಾಗಿ ನಾನು ಏನೇನು ಮಾಡಿದೆ? ಜಾತಿ, ಕುಲಗೋತ್ರ, ನೀತಿ, ಎಲ್ಲವನ್ನೂ ಬಿಟ್ಟುಬಿಟ್ಟೆ!

ನನ್ನ ದುರ್ಗಡತೆಯಿಂದಾಗಿಯಲ್ಲವೇ ತಂದೆಯ ಮರಣ ಸಂಬಂಧಿಸಿದ್ದು? ನಿನ್ನಲ್ಲಿ ಅವರು ಎಂತಹ ಉದಾತ್ತ ಸ್ವಪ್ನವನ್ನು ಕಂಡಿದ್ದರು! ಈ ಲೂಸಿಯಿಂದಾಗಿ ಎಲ್ಲವನ್ನೂ ನಿರ್ಮೂಲಗೊಳಿಸಿ, ಸರೂವನ್ನೂ ಮನೆಯಿಂದ ಓಡಿಸಿ, ತಂದೆಯನ್ನೂ ಕಳೆದುಕೊಂಡು, ಜಾತಿಭೃಷ್ಟ-ನೀತಿಭೃಷ್ಟನಾಗಿ ಬಾಳುವ ಸ್ಥಿತಿ ನನಗೆ ಬಂದಿತಲ್ಲಾ! ಅಯ್ಯೋ, ನನ್ನ ಸರೂ! ನನ್ನನ್ನೇ ನಂಬಿದ ಆ ನಿರ್ಮಲ ಸರೂಳನ್ನು ಅನಾಥಳಂತೆ, ಹಸುಗೂಸು ವಿಜಯನೊಡನೆ ಮನೆ ಬಿಟ್ಟು ಕಳಿಸಿದೆಯಲ್ಲಾ! ಅಯ್ಯೋ ಪಾಪಿ, ಮಾಧವಾ! ನಿನಗಿನ್ನೇನು ಗತಿ? ನಿನಗಿನ್ನೆಲ್ಲಿ ಸಮಾಧಾನ? ಪಾಪ ಮಗೂ ವಿಜಯ....ವಿಜಯ....ಎಂತಹ ಮುದ್ದಾದ ಮಗು! ಅವನನ್ನು ಈ ಒರಟು ಕೈಗಳಿಂದ ಮೈ ಮುರಿಯುವಂತೆ ಹೊಡೆದೆಯಲ್ಲಾ ಪಾಪಿ ಮಾಧವಾ! ಈ ಕೈಗಳನ್ನು ಕತ್ತರಿಸಿಕೊಂಡು ಬಿಡಲೇ, ಎನ್ನುತಾ ಮಾಧವ ಕೈಗಳನ್ನು ನೆಲಕ್ಕೆ ಅಪ್ಪಳಿಸಿದ ನೆಲಕ್ಕೆ ತಗುಲಿದ ರಭಸಕ್ಕೆ ಕೈಗಳು ನೋವಾದುವು "ಹೌದು ಈ ಕೈಗಳಿಗೆ ಇನ್ನೂ ಶಿಕ್ಷೆ ಮಾಡಬೇಕು. ಇದೇ ಕೈಗಳಿಂದ ಕೋಮಲನಾದ ಮಗುವನ್ನು ಹೊಡೆದಾಗ ಆ ಮುದ್ದು ಮಗುವಿಗೆ, ಎಷ್ಟು ಭಾದೆಯಾಗಿರಲಿಕ್ಕಿಲ್ಲ? ಅದರಿಂದ ಈಗ ನೀನು ಅನುಭವಿಸು" ಮಾಧವ ಮತ್ತೆ ಕೈಗಳನ್ನು ನೆಲಕ್ಕೆ ಗುದ್ದತೊಡಗಿದ.

"ನನ್ನ ಬುದ್ಧಿ ಎಲ್ಲಾ ಏನಾಗಿತ್ತು? ಅದಕ್ಕೆ ಯಾವ ಮಂಕು ಬಡಿದಿತ್ತು? ಮೊದಲ ಬಾರಿ ಲೂಸಿಯನ್ನು ನೋಡಿದ ಕೂಡಲೇ. "ಅವಳು ಜಾರಿಣಿ, ವೇಶ್ಯೆ ನೀನು ಅವಳನ್ನು ನಂಬಬೇಡ" ಎಂದು ಹೇಳಲು ಏನು ಬಂದಿತ್ತು ಆ ಬುದ್ಧಿಗೆ....? ಹೌದು ಸರೂ ಹೇಳುತ್ತಿದ್ದಳು: 'ಲೂಸಿಯ ನಡತೆ ಚೆನ್ನಾಗಿಲ್ಲ; ಅವಳನ್ನು ಅಂಕೆಯಲ್ಲಿಟ್ಟುಕೊಳ್ಳಿ" ಎಂದು. ಆಗ ನಾನೇ ಅವಳ ಮಾತನ್ನು ಪರಿಹಾಸ್ಯ ಮಾಡಿದ್ದೆ. ಈಗ ಅವಳ ಮಾತಿನ ಸತ್ಯಾಂಶ ತಿಳಿಯುತ್ತಿದೆ. ಆ ಲೂಸಿಯ, ಆ ಚಂಡಾಲಿನಿಯ ಗುಣ ನನಗೆ ಮೊದಲೇ ತಿಳಿಯುವಂತೆ ಮಾಡಲು ಈ ಬುದ್ಧಿ ಈ ಮೊಂಡಬುದ್ಧಿಗೇನು ಬಂದಿತ್ತು ಕೇಡು?" ಮಾಧವ ತಲೆ ಚಚ್ಚಿಕೊಂಡ.

ಮಾಧವನಿಗೆ ಬುದ್ಧಿಭ್ರಮಣೆಯಾದಂತಾಗಿತ್ತು. ಅವನ ಆಗಿನ ಭಯಂಕರ ರೂಪನ್ನು ನೋಡಲಾರದೇ ನರಸಪ್ಪ ಮೆಲ್ಲಗೆ ಅಲ್ಲಿಂದ ಜಾರಿಕೊಂಡ. ಮಾಧವ ದಿನವಿಡೀ ಯೋಚನೆಯಲ್ಲಿಯೇ ಕಳೆದ. ಅವನಿಗೆ ಯಾವುದರ ಮೇಲೆಯೂ ಗಮನವಿರಲಿಲ್ಲ. ರೂಮಿನ ಸುತ್ತಲೂ ತಿರುಗಾಡುತ್ತಾ, ತನ್ನಲ್ಲಿ ತಾನೇ

ಮಾತನಾಡಿಕೊಳ್ಳುವುದೂ ಮಾಡುತ್ತಿದ್ದ. ಆಗಾಗ ತಲೆ ಚಚ್ಚಿಕೊಳ್ಳುವುದು, ಕೈ ಹಿಸುಕಿಕೊಳ್ಳುವುದು ಅವನ ಶತಪಥದೊಂದಿಗೇ ಆಗುತ್ತಿದ್ದುವು. ಹೊರಗೆ ಹೋಗಿದ್ದ ನರಸಪ್ಪ ತಿರುಗಿ ಬಂದು ಊಟಕ್ಕೆ ಕರೆದಾಗ ತನಗೆ ಬೇಕಿಲ್ಲವೆಂದು ಹೇಳಿದ.

ಲೂಸಿಯೂ ತಾನೂ ಜೊತೆಯಾಗಿ ಕೂತುಕೊಂಡು, ಬೆಂಗಳೂರಲ್ಲಿ ತೆಗೆಸಿದ ಫೋಟೋ ಎದರಿಗೇ ಕಾಣಿಸಿತು. ರೋಷದಿಂದ ಸಮೀಪದಲ್ಲಿದ್ದ ಕೋಲನ್ನು ಬೀಸಿ ಅದಕ್ಕೆ ಒಗೆದ. ಫೋಟೋ ಗಾಜುಸಹಿತವಾಗಿ ಕೆಳಗೆ ಬಿದ್ದು ಚೂರು ಚೂರಾಯಿತು. ಲೂಸಿ ಉಪಯೋಗಿಸುತ್ತಿದ್ದ ಕನ್ನಡಿಯ ಗತಿಯೂ ಅದೇ ಆಯಿತು. ಲೂಸಿಯ ಯಾವುದೇ ಸಾಮಾನು ಕಂಡರೂ, ಲೂಸಿಯನ್ನು ನೋಡಿದಷ್ಟೇ ದ್ವೇಷಭಾವನೆಯಿಂದ ಅದನ್ನು ನಿರ್ಮೂಲ ಗೊಳಿಸಹತ್ತಿದ್ದ. ಇದೇ ಹೊತ್ತಿನಲ್ಲಿ ಲೂಸಿಯೇ ಒಂದು ವೇಳೆ ಎದುರಿಗೆ ಬಂದಿದ್ದರೆ ಅವಳನ್ನು ಏನು ಮಾಡುತ್ತಿದ್ದನೋ ?

"ನನ್ನ ಲೂಸಿ, ನನ್ನ ಪ್ರಾಣಕ್ಕಿಂತ ಹೆಚ್ಚು ಎಂದು ಭಾವಿಸಿ ಅವಳ ದಾಸಾನುದಾಸನಾಗಿ ಅವಳು ಹೇಳಿದಂತೆ ಕುಣಿದು, ನನ್ನ ಸರ್ವಸ್ವವನ್ನೂ, ನನ್ನ ಜೀವವನ್ನೂ ಅವಳಿಗೇ ಅರ್ಪಿಸಿದ್ದೆನಲ್ಲಾ ! ಅಂತಹ ಲೂಸಿ ನನಗೆ ಈ ರೀತಿ ದ್ರೋಹಮಾಡಿದಳೇ ? ಒಂದು ಸ್ವಲ್ಪವೂ, ಸಂಶಯಕ್ಕೆ ಆಸ್ಪದ ಬರ ದಂತೆ ಎಷ್ಟು ಚತುರಳಾಗಿ ನಡೆದುಕೊಳ್ಳುತ್ತಿದ್ದಳು ! ಅವಳ ಆ ತೀಕ್ಷ್ಣ ನೋಟಕ್ಕೆ, ಕಪಟ ಪ್ರೇಮಕ್ಕೆ ಮರುಳಾಗಿ, ಸರೂಳನ್ನು ತ್ಯಜಿಸಿದೆನಲ್ಲಾ ಎಂದು ಮಾಧವ ವಿಲಪಿಸಿದ. ಭೂಮಿಯೇ ತಲಕೆಳಗಾಗಬಹುದು, ಸೂರ್ಯ ಚಂದ್ರರೇ ಅಳಿಯಬಹುದು, ಆದರೆ ನನ್ನ ಲೂಸಿ ಎಂದಿಗೂ ನನ್ನವಳು, ನನ್ನ ಲೂಸಿ ಪವಿತ್ರಳು ಎಂಬ ದೃಢವಾದ ನಂಬಿಕೆಯನ್ನಿಟ್ಟಿದ್ದ ಮಾಧವನಿಗೆ ಲೂಸಿಯ ಈಗಿನ ವರ್ತನೆ ಹೃದಯಭೇದಕವಾಗಿತ್ತು. ಎದ್ದರೆ, ಕೂತರೆ, ನಿಂತರೆ, ಮಲಗಿದರೆ ಮಾಧವನ ಕಣ್ಣೆದುರಿಗೆ ಲೂಸಿಯ ಮೋಹದ ಮುಖ; ಇನ್ನೊಂದೆಡೆ ಸರೂವಿನ, ನಿರ್ಮಲ ವಾದ, ಪ್ರೇಮಭರಿತವಾದ ಮುಖ. ಇವೇ ಕಾಣಬರುತ್ತಿದ್ದುವು. ಬೆಳಗ್ಗಿನ ಕಾಫಿಯ ವಿನಃ ಬೇರಾವುದನ್ನೂ ಅವನು ತೆಗೆದುಕೊಂಡಿರಲಿಲ್ಲ. ಅವನ ಹೃದಯದ ಬೇಗೆ ಸಹಿಸಲಶಕ್ಯವಾಗಿತ್ತು. ಕಣ್ಣುಗಳೆಲ್ಲಾ ಕೆಂಪಾದುವು. ತಲೆ ನೋವು ಅಸಾಧ್ಯವಾಯಿತು. ಮಬ್ಬಿರೆಯ ದೂತಿಯಾಗಿ ರಾತ್ರಿ ಬಂತು. ಮಾಧವನಿಗೆ ಲೂಸಿ ಕಲಿಸಿಕೊಟ್ಟ ಮದ್ಯಪಾನದ ನೆನಪಾಯಿತು. ಹಿಂದು

ಮುಂದು ನೋಡದೆ ಮಾಧವ ಬಾಟಲಿಯನ್ನು ಹೊರತೆಗೆದು ಒಂದೇಟಿಗೆ ಖಾಲಿಮಾಡಿದ. ದಣಿದ ಮನ, ದೇಹಗಳು ಕೆಲವೇ ನಿಮಿಷಗಳೊಳಗಾಗಿ ವಿಶ್ರಾಂತಿಯನ್ನು ಹೊಂದಿದುವು. ಮಾಧವ ಅಲ್ಲಿಯೇ ಮಂಚದ ಮೇಲೆ ಬಿದ್ದು ಕೊಂಡ. ವಿಸ್ಮೃತಿ ಅವನನ್ನಾವರಿಸಿತು.

ಇದೇ ಮನಸ್ಥಿತಿಯಲ್ಲಿಯೇ ಮಾಧವ ಮೂರು ನಾಲ್ಕು ದಿನ ಕಳೆದ. ಮನೆಗೆ ಬರುವುದು, ನರಸಪ್ಪ ಕೊಟ್ಟಿದ್ದನ್ನು ತಿನ್ನುವುದು, ಮಲಗುವುದು. ರಾತ್ರಿಯ ಊಟದ ಹೆಸರೇ ಎತ್ತುತ್ತಿರಲಿಲ್ಲ.

ಮಾಧವ ಬ್ಯಾಂಕಿಗೆ ಕಳಿಸಿಕೊಟ್ಟ 'ಚೆಕ್' ವಾಪಸ್ ಬಂದಿತ್ತು. ಬ್ಯಾಂಕಿನ ಅವನ ಅಕೌಂಟ್‌ನಲ್ಲಿ ಎಲ್ಲಾ ಮುಗಿದು ಹೋಗಿದೆಯೆಂದು ಆಳು ಬಂದು ತಿಳಿಸಿದ. ಮಾಧವ ದಂಗಾದ. ತನ್ನ ಹೆಸರಿನಲ್ಲಿದ್ದುದು ಹನ್ನೆರಡುಸಾವಿರ ರೂಪಾಯಿಗಳು. ತಾನು ನೂರು ರೂಪಾಯಿಗಳಿಗಿಂತ ಹೆಚ್ಚಿಗೆ ಒಂದು ಸಲವೂ ತೆಗೆದಿರಲಿಲ್ಲ. ಹೀಗಿರಲು ಒಮ್ಮೆಲೇ ಅಷ್ಟು ಹಣವೂ ಖರ್ಚಾಗಿದೆ ಎಂದರೆ ನಂಬುವುದಾದರೂ ಹೇಗೆ ? ಮಾಧವ ಗಡಿಬಿಡಿಯಿಂದ ತಾನೇ ಹೋಗಿ ಮ್ಯಾನೇಜರನ್ನು ವಿಚಾರಿಸಿದ. ಆಗ್ಗೆ ಎಂಟು ದಿನಗಳ ಹಿಂದೇ ಲೂಸಿ ಲೀ ಡಿಸೌಜಾ ರವರಿಗೆ ಹನ್ನೆರಡು ಸಾವಿರ ರೂಪಾಯಿಗಳನ್ನು ಕೊಟ್ಟದ್ದಾಗಿತ್ತು. ಮಾಧವನೇ ತನ್ನ ಸಹಿ ಮಾಡಿ ಚೆಕ್ ಬರೆದು ಕೊಟ್ಟಿದ್ದಾನೆ. ಉಳಿದ ಹತ್ತಿಪ್ಪತ್ತು ರೂಪಾಯಿಗಳು ಅವನ ಹೆಸರಿನಲ್ಲಿಯೇ ಇವೆ.

ಲೂಸಿ ಹೋಗುವಾಗ ಬರಿಯ ಕೈಲಿ ಹೋಗದೆ ಹಣದೊಡನೆಯೂ ಹೋಗಿದ್ದಾಳೆಂಬ ಅರಿವುಂಟಾದದ್ದು - ಮಾಧವನಿಗೆ ಈಗ. ಇದು ವರೆಗೂ ಅವನಿಗೆ ಲೂಸಿಯು ಒಳ್ಳೆಯವಳೋ, ಕೆಟ್ಟವಳೋ ಎಂಬುದರ ಬಗ್ಗೆ ಸ್ವಲ್ಪ ಅನುಮಾನವಿತ್ತು. ಈಗ ಅದೂ ನಿಚ್ಚಳವಾದಂತಾಯಿತು. ಮಾಧವನಿಗೆ ಆಫೀಸಿನಲ್ಲಿರಲಾಗಲಿಲ್ಲ. ರಜೆ ಪಡೆದು ಮನೆಗೆ ಬಂದ. ದಿನದಂತೆ ತಿಂಡಿಯನ್ನೂ ತೆಗೆದುಕೊಳ್ಳಲಿಲ್ಲ. ಸುಮ್ಮನೇ ಮಂಚದ ಮೇಲೆ ಕೂತು ಯೋಚಿಸಲಾರಂಭಿಸಿದ,– ತಾನು ಲೂಸಿಯ ಹೆಸರಿಗೆ ಯಾವಾಗ ಚೆಕ್ ಬರೆದುಕೊಟ್ಟೆ ಎಂದು. ಆಗ ಮುಸಕು ಮುಸುಕಾಗಿ ನೆನಪಾಗಲಾರಂಭಿಸಿತು :

ಈಗ್ಗೆ ಸುಮಾರು ಹತ್ತುದಿನಗಳ ಹಿಂದೆ ತಾನು ಆಫೀಸಿನಿಂದ ಬಂದ ಕೂಡಲೆ, ಲೂಸಿ ದಿನಕ್ಕಿಂತ ಹೆಚ್ಚು ನವೀನ ರೀತಿಯಲ್ಲಿ ಸಿಂಗರಿಸಿಕೊಂಡು ತನ್ನನ್ನು ಎದುರುಗೊಂಡಿದ್ದಳು. ತಾನೇ ಹೋಗಿ ಆಮ್ಲೆಟ್, ಕೇಕ್, ಕಾಫಿ

ಎಲ್ಲಾ ತಂದು ತಾನೇ ಸ್ವತಃ ತಿನ್ನಿಸಿದ್ದಳು. ತಾನು ಬೇಡವೆಂದರೂ ಕೇಳದೆಯೇ ಶಾಂಪೆಯಿನ್ ಕುಡಿಸಿದ್ದಳು. ಅಪರ ಸೇವನೆಯಿಂದ ಉಂಟಾದ ಒಂದು ಬಗೆಯ ಉಲ್ಲಾಸದಿಂದಿರುವಾಗಲೇ ಲೂಸಿ ಚೆಕ್‌ಬುಕ್ ತಂದು ತನ್ನ ಮುಂದೆ ಹಿಡಿದು "ಇದೊಂದು ಬ್ಯಾಂಕ್ ಚೆಕ್ ಸಹಿಮಾಡಿ ಕೊಡಿರಿ. ನಾನು ಬೇಕಾದಷ್ಟು ಹಣ ತೆಗೆದುಕೊಳ್ಳುವೆ" ಎಂದು ಹೇಳಿ ಎಂತಹ ಮೋಹದ ನಗೆಯನ್ನು ನಕ್ಕಿದ್ದಳು! ಆಗಿನ ಸಮಯದಲ್ಲಿ ತಾನು ಅವಳು ಏನು ಕೇಳಿದರೂ ಕೊಡುವ ಸ್ಥಿತಿಯಲ್ಲಿದ್ದ. ಆದರಿಂದ ಅವಳು ಹೇಳಿದಂತೆ ಸಹಿ ಮಾಡಿಕೊಟ್ಟಿದ್ದ. ಅದನ್ನವಳು ಉಪಯೋಗಿಸಿಕೊಂಡಿದ್ದಳು.

ಲೂಸಿಯ ಮೇಲೆ ದೂರು ಕೊಡಲೇ ಹಣವನ್ನು ಅಪಹರಿಸಿಕೊಂಡು ಹೋಗಿದ್ದಾಳೆಂದು? ಅವಳು ಮನೆಯನ್ನು ಬಿಟ್ಟು ಬೇರೆ ಯಾವನೋ ಜೊತೆಯಲ್ಲಿ ಹೋಗಿದ್ದಾಳೆಂದು? ಹೀಗೆ ಹಲವು ಬಾರಿಯೋಚಿಸಿದ ಮಾಧವ. ಹಾಗೆ ಮಾಡುವುದರಿಂದ ಒಂದು ಸಮಯ ಲೂಸಿ ಸಿಗಬಹುದು. ಆದರೆ ಹಣವು ಸಿಗುವುದೋ ಇಲ್ಲವೋ? ತಾನಾಗಿ ತಾನು ಎಲ್ಲರೆದುರಿಗೆ ತನ್ನ ಮಾನವನ್ನು ಕಳೆದುಕೊಳ್ಳಬೇಕಾಗುತ್ತೆ. ಲೂಸಿ ಎಂಥವಳು ಎಂದು ಇವರೆಲ್ಲರಿಗೂ ಗೊತ್ತಿದೆ. ಇಂತಹ ಲೂಸಿ ನನ್ನ ಹೆಂಡತಿ ಎಂದು ಹೇಳಿಕೊಂಡರೆ, ಅದರಿಂದ ತನಗೆ ಎಷ್ಟು ಅವಮಾನ! ದುಡ್ಡು ಹೋದರೆ ಹೋಗಲೀ, ಇರುವ ಮಾನವನ್ನು ಕಳೆದುಕೊಳ್ಳಬಾರದೆಂದು, ಆ ವಿಷಯವನ್ನು ತಳ್ಳಿಹಾಕಿದ್ದ. ಲೂಸಿಯನ್ನು ಸಂಪೂರ್ಣವಾಗಿ ಮರೆಯಲು ಪ್ರಯತ್ನ ಮಾಡತೊಡಗಿದ ಮಾಧವ.

ಬರಬರುತ್ತಾ ಮಾಧವನ ಸ್ಥಿತಿ ಕೆಡುತ್ತಾ ಬಂದಿತ್ತು. ನರಸಪ್ಪನನ್ನೂ ಕೆಲಸದಿಂದ ಬಿಡಿಸಿದ್ದ. ಮನೆಯ ಜವಾನನಿಗೂ ಅದೇ ಗತಿಯಾಯಿತು ಅವನ ಹೃದಯವೀಗ ಸರೂವಿಗಾಗಿ ಕಾತರಿಸುತ್ತಿತ್ತು. ಆದರೆ ಅವಳು ಎಲ್ಲಿದ್ದಾಳೆ ಎನ್ನುವುದೇ ಅವನಿಗೆ ತಿಳಿದಿರಲಿಲ್ಲ. ಹೇಗೆ ಹುಡುಕುವುದು? ಅವಳು ಜೀವಸಹಿತ ಇರುವಳೋ ಇಲ್ಲವೋ ಕಂಡವರಾರು? 'ಅಂತೂ ನನ್ನ ಆಯುಷ್ಯದಲ್ಲಿ ಯಾವಾಗಲಾದರೂ ಅವಳನ್ನು ಒಂದು ಸಲ ನೋಡಬೇಕು. ಅವಳಲ್ಲಿ ನನ್ನ ಅಪರಾಧಗಳನ್ನೆಲ್ಲಾ ಹೇಳಿಕೊಂಡು, ಅವಳಿಗೆ ಕ್ಷಮಾಪಣೆ ಕೇಳಬೇಕು' ಎಂದು ಮಾಧವ ಹಂಬಲಿಸಹತ್ತಿದ್ದ.

ಯಾವಾಗಲಾದರೊಮ್ಮೆ ಮುರಲಿ ಕಾಗದ ಬರೆಯುತ್ತಿದ್ದ. ಆದರೆ ಸರೂವಿನ ವಿಷಯವನ್ನೇ ಬರೆಯುತ್ತಲಿರಲಿಲ್ಲ. ಹೀಗಾಗಿ ಸರೂ ಎಲ್ಲಿದ್ದಾಳೆಂಬುದೇ

ತಿಳಿಯದೇ ಮಾಧವ ಒದ್ದಾಡಿದ.

ಈಗ ಮನೆಯಲ್ಲಿ ಮಾಧವನೊಬ್ಬನೇ. ಬೇರೆ ಯಾವ ನರ ಪಿಳ್ಳೆಯೂ ಇಲ್ಲ. ದಿನದಂತೆ ಹತ್ತುಗಂಟೆಗೆ ಆಫೀಸಿಗೆ ಹೋಗುತ್ತಾನೆ. ಮನೆಯಲ್ಲಿ ತಾನೇ ಬರಿಯ ಕಾಫಿಯನ್ನೊಂದು ಕಾಯಿಸಿಕೊಂಡು ಕುಡಿಯುತ್ತಾನೆ. ಅದಕ್ಕಾಗಿ ದಿನಕ್ಕೆ ಒಂದು ಪಾವು ಹಾಲು ವರ್ತನೆ ಮಾಡಿಸ್ಚಾನೆ. ಪುಡಿ, ಸಕ್ಕರೆ, ಇವು ಗಳನ್ನು ಆಫೀಸಿನಿಂದ ಬರುವಾಗ ತಾನೇ ಅಂಗಡಿಯಿಂದ ತರುತ್ತಾನೆ. ಮನೆ ಯಲ್ಲಿ ಅಡುಗೆಯ ಮಾತೇ ಇಲ್ಲ. ಅಲ್ಲಿಯೇ ಕಂಪನಿಯ ಬಳಿಯಲ್ಲಿರುವ ಹೋಟಿಲೊಂದರಲ್ಲಿ ಊಟ. ಸಂಜೆ ಮತ್ತೆ ಯಾವುದಾದರೂ ತಿಂಡಿ ತಿಂದು ಮನೆಗೆ ಬಂದವನೇ ಮಲಗುವುದೇ ಕೆಲಸ. ಎಂದಾದರೂ ಮನಸ್ಸು ಬಂದರೆ 'ಸ್ಟೊವ್'ನ ಮೇಲೆಯೇ ನೀರು ಕಾಯಿಸಿಕೊಂಡು ಸ್ನಾನ ಮಾಡುತ್ತಾನೆ, ಇಲ್ಲವಾದರೆ ಅದೂ ಇಲ್ಲ. ಮನಸ್ಸಿನ ನೋವನ್ನು ಮರೆಯಲು ಈಗ ಅವನಿ ಗಿರುವ ಏಕೈಕ ಮಾತ್ರ ಸಾಧನೆ ಎಂದರೆ ಮದಿರೆ. ಅದನ್ನು ಕುಡಿದು ಮಲಗಿದ ಎಂದರೆ ಬೆಳಗಾಗುವವರೆಗೂ ಎಚ್ಚರವೇ ಆಗುತ್ತಲಿರಲಿಲ್ಲ. ಅವನ ಕುಡಿತ ದಿನೇ ದಿನೇ ಹೆಚ್ಚುಹತ್ತಿತ್ತು. ಹೊಟೆಲ್ ಬಿಲ್, ಅವನ ಪಾಸಿಯಕ್ಕೇ ಖರ್ಚಾ ಗುತ್ತಿತ್ತು. ಅವನಿಗೀಗ ಯಾವದೊಂದು ಆಸೆಯೂ ಇಲ್ಲ. ಅವನ ದೇಹವು ಯಾವ ಸುಖವನ್ನೂ ಬಯುಸುತ್ತಲಿರಲಿಲ್ಲ. ಅವೆಲ್ಲಾ ಲೂಸಿಯೊಂದಿಗೇ ಕೊನೆ ಗೊಂಡಿತ್ತು. ಈಗ ಅವನಲ್ಲಿ ಉಳಿದಿರುವ ಒಂದೇ ಒಂದು ಆಸೆಯೆಂದರೆ ಸರೂ ವನ್ನು ಕಾಣಬೇಕು; ಅವಳಲ್ಲಿ ತನ್ನ ಸರ್ವಾಪರಾಧ ಒಪ್ಪಿಕೊಳ್ಳಬೇಕು ಇಷ್ಟೆ. ಸರೂ ಈಗ ಅವನ ಕಣ್ಣಿಗೆ ಬರಿಯ ಹೆಂಡತಿಯಾಗಿ ಕಾಣುತ್ತಲಿರಲಿಲ್ಲ. ಅವಳೊಬ್ಬ ದೇವಲೋಕದಿಂದಿಳಿದು ಬಂದ ದೇವತೆಯಂತೆಯೇ ತೋರಿದಳು. ತಾನು ಸಾಯುವ ಮುನ್ನ ಒಮ್ಮೆ ಅವಳನ್ನು ಕಾಣಬೇಕು ಎನ್ನುವ ಹಂಬಲ ವೊಂದೇ ಅವನನ್ನು ಇದು ವರೆಗೂ ಜೀವದಿಂದಿರಗೊಟ್ಟಿತ್ತು. ಇಲ್ಲವಾದರೆ ಲೂಸಿಯ ನಿಷ್ಕ್ರಮಣದೊಂದಿಗೇ ಅವನ ಪ್ರಾಣದ ನಿಷ್ಕ್ರಮಣವೂ ಆಗ ಬಹುದಾಗಿತ್ತು. ಸರೂವನ್ನು ಕಾಣಬೇಕೆಂಬ ಪ್ರಬಲವಾದ, ಆಕಾಂಕ್ಷೆ ಅವನ ಆ ಪ್ರಾಣವನ್ನು ಜಗ್ಗಿ ನಿಲ್ಲಿಸಿತ್ತು, ಇಲ್ಲಿಯುವರೆಗೆ ಅವನನ್ನು ಕಾಪಾಡಿತ್ತು.

ಈ ಮನಸ್ಥಿತಿಯಲ್ಲಿರುವಾಗಲೇ ಮಾಧವ ಮುರಲಿಗೊಂದು ಕಾಗದ ಬರೆದು ತನ್ನ ಸಕಲ ಜೀವನಚರಿತ್ರೆಯನ್ನೂ ನಿರೂಪಿಸಿ ಸರೂವಿನ ವಿಷಯ ಅವನಿಗೇ ನಾದರೂ ತಿಳಿದಿದ್ದರೆ ತಿಳಿಸಬೇಕೆಂದೂ ತಾನು ಅವಳಿಗಾಗಿಯೇ ಜೀವದಿಂದುಳಿ

ದಿರುವುದಾಗಿಯೂ ಬರೆದಿದ್ದ. ಮುರಲಿಯ ಉತ್ತರದ ನಿರೀಕ್ಷಣೆಯಲ್ಲಿಯೇ ಈಗ ಮಾಧವ ದಿನಗಳನ್ನು ತಳ್ಳುತ್ತಲಿದ್ದ.

ಸರೂ ತನ್ನ ಕೋಣನೂರಿನ ಬೀಡಾರವನ್ನು ಮುಚ್ಚಿ ಶಾಂತಿಗ್ರಾಮಕ್ಕೇ ತಿರುಗಿ ಬಂದಿದ್ದಳು. ಹುಡುಗರೆಲ್ಲರಿಗೂ ಪರೀಕ್ಷೆಯು ಮುಗಿದು ರಜೆ ಬಂದಿತ್ತು. ಸರೂ ಈ ಬೇಸಿಗೆಯ ರಜದಲ್ಲಿ ಪುನಃ ತನ್ನ ಶಾಲೆಯ ಉಸ್ತುವಾರಿಯನ್ನು ವಶಪಡಿಸಿಕೊಂಡಳು. ಸುಬ್ಬರಾಯರ ಮಗ ತನ್ನ ಕರ್ತವ್ಯವನ್ನು ಸರಿಯಾಗಿಯೇ ಪಾಲಿಸಿದ್ದ. ಹುಡುಗರೆಲ್ಲರೂ ಅವನನ್ನೂ ಗೌರವದಿಂದ ಕಾಣುತ್ತಿದ್ದರು.

ಒಂದು ದಿನ ಸರೂ ಶಾಲೆಯಲ್ಲಿ ಯಾವುದೋ ಒಂದು ಪ್ರಾಣಿಯ ವಿಷಯವಾಗಿ ಕಲಿಸುತ್ತಿದ್ದಳು. ಹುಡುಗರು ಅವಳ ಮಾತನ್ನು ಗಮನವಿಟ್ಟು ಕೇಳುತ್ತಿದ್ದರು. ಅಲ್ಲಿಯ ವಾತಾವರಣ ಆಗ ಗಂಭೀರವಾಗಿತ್ತು. ಅದೇ ಸಮಯಕ್ಕೆ ಸರಿಯಾಗಿ, ಅಂಚೆಯವ ಬಂದು ಸರೂವಿಗೆ ಕಾಗದವನ್ನಿತ್ತು ಹೊರಟು ಹೋದ. ಮೇಲಿನ ಕೈಬರೆಹದಿಂದಲೇ ಅದು ಮುರಲಿಯದೆಂದು ಸರೂವಿಗೆ ಗೊತ್ತಾಯಿತು. ಈಗ ಕಾಗದ ಓದುತ್ತಾ ಕೂತರೆ ಹುಡುಗರ ಆಸಕ್ತಿ ಎಲ್ಲಾ ಕೆಟ್ಟುಹೋಗುತ್ತೆ. ಅವರು ಆಸೆಯಿಂದ ಕೇಳುತ್ತಿದ್ದಾರೆ' ಆದರಿಂದ ಅವರಿಗೆ ಮುಂಚೆ ಪಾಠ ಹೇಳಬೇಕು.' ಎಂದು ಕೊಂಡು, ಅದನ್ನು ಹಾಗೆಯೇ ಸೊಂಟಕ್ಕೆ ಸಿಗಸಿ, ತನ್ನ ಪಾಠವನ್ನು ಮುಂದುವರಿಸಿದಳು. ವೇಳೆಯಾದನಂತರ ಬೆಲ್ ಬಾರಿಸಿತು. ಹುಡುಗರೆಲ್ಲಾ ಒಬ್ಬೊಬ್ಬರಾಗಿನಮಸ್ತೆ ಹೇಳಿ ಹೊರಟುಹೋದರು. ಸರೂ ಶಾಲೆಗೆ ಬೀಗ ಹಾಕಿ ವಿಜಯನೊಡನೆ ಮನೆಗೆ ತೆರಳಿದಳು. ಒಡನೆಯೇ ಕವರ್ ಒಡೆದು ಕಾಗದ ಓದಿದಳು.

ಮುರಲಿ ಕೆಲವೇ ಸಾಲುಗಳಲ್ಲಿ ಪತ್ರ ಬರೆದು ಮುಗಿಸಿದ್ದ. "ಈ ದಿನ ಅಣ್ಣಾನವರಿಂದ ಕಾಗದ ಬಂತು ಇದರೊಡನೆ ಅದನ್ನೂ ಕಳಿಸಿರುವೆ. ಈಗ ಯಾವ ರೀತಿ ಆಚರಿಸಬೇಕೆಂಬುದನ್ನು ನೀವೇ ಯೋಚಿಸಿ. ನಾನು ನಿಮಗೆ ಇದ್ದ ವಿಷಯ ತಿಳಿಸಿದ್ದೇನೆ." ಎಂದಿಷ್ಟೇ ಬರೆದಿದ್ದ.

ಅಷ್ಟು ವರ್ಷಗಳ ದೀರ್ಘಾವಧಿಯಲ್ಲಿ ಪತಿಯ ಕಾಗದವನ್ನು ಅವಳು

ನೋಡಿದುದು ಇದೇ ಮೊದಲು. ನಡುಗುವ ಕೈಗಳಿಂದ ಸರೂ ಕಾಗದವನ್ನು ಬಿಚ್ಚಿ ಓದಿಕೊಂಡಳು ಮಾಧವ ಸ್ಫುಟವಾಗಿ ಮುದ್ದಾಗಿ ಬರೆದಿದ್ದ.

ಕಾಗದವನ್ನು ಓದುಓದುತ್ತಾ ಸರೂವಿನ ಕಣ್ಣುಗಳಲ್ಲಿ ನೀರು ಬಂದಿತು. ತನ್ನ ಪತಿ ಲೂಸಿಯ ವ್ಯಾಮೋಹದಿಂದ ಬಿಡುಗಡೆಯಾಗಲ್ಪಟ್ಟಿದ್ದಕ್ಕೂ, ತನ್ನನ್ನು ನೋಡುವ ಆಸಯನ್ನು ತಿಳಿಸಿದುದಕ್ಕೂ ಅವಳಿಗೆ ಅತ್ಯಾನಂದ ವಾಯ್ತು. ಪತಿ ತನ್ನನ್ನು ಕಾಣಲು ಬಯಸುವನೆಂಬ ಆನಂದದಲ್ಲಿ, ಲೂಸಿಯು ಮಾಡಿದ ದ್ರೋಹ, ಅವಳ ದುರ್ಗುಣ ಇದಾವುದೂ ಅವಳಿಗೆ ನೆನಪಾಗಲಿಲ್ಲ. ಯಾವಾಗ ಪತಿಯನ್ನು ನೋಡೇನು ಎಂಬ ಉತ್ಸಾಹದಿಂದ ಸರೂ ಚಿಕ್ಕ ಹುಡುಗಿಯಂತೆ ಮನೆಯ ತುಂಬಾ ಕುಣಿದಾಡಿದಳು. ವಿಜಯ ತಾಯಿಯ ಈ ವರ್ತನೆಯನ್ನು ನೋಡಿ ಗಾಬರಿಯಾದ, ತಾಯಿ ಹೀಗೇಕೆ ಹುಚ್ಚಳಂತೆ ಕುಣಿಯುತ್ತಿದ್ದಾಳೆ ಎಂದು. ಕೊನೆಗೆ ವಿಜಯನೇ ಕೇಳಿದ: "ಹೀಗೇಕಮ್ಮಾ ಕುಣಿಯುತ್ತಿಯೇ ?"

"ನಿನ್ನ ತಂದೆ ಕಾಗದ ಬರೆದಿದ್ದಾರೆ ಮಗೂ! ಆ ಲೂಸಿ ಹೊರಟುಹೋದ ಳಂತೆ. ನಾವೇ ಅಲ್ಲಿಗೆ ಹೋಗಬೇಕಂತೆ. ನಿನ್ನ ತಂದೆ ನಿನ್ನನ್ನು ಎಷ್ಟು ಮುದ್ದಿಸು ತ್ತಾರೆ ತಿಳಿದೆಯಾ!" ಎಂದು ಹರ್ಷಾತಿರೇಕದಿಂದ ವಿಜಯನನ್ನು ತಬ್ಬಿಕೊಂಡು ಮುದ್ದಾಡಿದಳು. ವಿಜಯ ತಂದೆಯನ್ನು ನೋಡುವೆನೆಂಬ ಸಂತಸದಿಂದ ಅವನೂ ಕುಣಿದಾಡಿದ.

ಸರೂ ವಿಜಯನ ಕೈಹಿಡಿದು ಎಳೆದುಕೊಂಡು ಹೋಗಿ, ಮಾಧವನ ಫೋಟೋಕ್ಕೆ ನಮಸ್ಕರಿಸಿದಳು. ತಾನೂ ಅನನ್ಯ ಭಕ್ತಿಯಿಂದ ಪೂಜೆ ಮಾಡಿ "ಸ್ವಾಮೀ, ಇಂದು ಈ ಸರೂವಿನ ನೆನಪು ಬಂದಿತೇ? ನನ್ನನ್ನು ಎಂದಿನಂತೆ ನಿಮ್ಮ ಸರೂವನ್ನಾಗಿ ಮಾಡಿಕೊಳ್ಳುವಿರಾ ?" ಎಂದು ಹೇಳಿ ಕಣ್ಣೀರು ಸುರಿಸಿದಳು.

ತಾನು ಬರುವ ವರೆಗೆ ಶಾಲೆಯನ್ನು ವಿಜಯನಿಗೇ ನೋಡಿಕೊಳ್ಳಲು ಹೇಳಿ, ಅವನನ್ನು ಸುಬ್ಬರಾಯರ ಮನೆಯಲ್ಲಿಯೇ ಬಿಟ್ಟು, ತಾನು ಪತಿಯನ್ನು ನೋಡಿಕೊಂಡು ಕೆಲವೇ ದಿನಗಳಲ್ಲಿ ಬರುವುದಾಗಿ ತಿಳಿಸಿ, ಮಾರನೆಯ ದಿನವೇ ಸರೂ ಒಬ್ಬಳೇ ಮದ್ರಾಸಿಗೆ ತೆರಳಿದಳು. ಬೆಂಗಳೂರ ವರೆಗೆ ಬಸ್‌ನಲ್ಲಿಯೇ ಹೋಗುವುದು; ನಂತರ ಅಲ್ಲಿಂದ ರೈಲಿನಲ್ಲಿ ಹೋಗುವುದೆಂದು ಗೊತ್ತಾಯಿತು. ಮುರಲಿಯು ಕಳಿಸಿದ್ದ ಹಣದ ಉಪಯೋಗ ಈಗ ಆಯಿತು. ಪತಿಯನ್ನು

ಸೇರುವ ಹುಮ್ಮಸ್ಸಿನಲ್ಲಿ ಸರೂ ನಿದ್ರೆ, ಹಸಿವೆ, ನೀರಡಿಕೆಗಳನ್ನೂ ಮರೆತಳು.

ಸರೂ, ಮಾಧವನ ಮನೆಯನ್ನುಸೇರಿದಾಗ ಗಂಟೆ ಐದೂವರೆಯಾಗಿತ್ತು. ಮಾಧವ ಇನ್ನೂ ತನ್ನ ಸ್ವಪ್ನಲೋಕದಲ್ಲಿಯೇ ಮುಳುಗಿದ್ದ. ಸರೂ ಬಾಗಿಲನ್ನು ದೂಡಿದಳು. ಅದು ತಾನಾಗಿಯೇ ತೆಗೆದುಕೊಂಡಿತು. ಬೀದಿಯ ಬಾಗಿಲಿಗೆ ಚಿಲಕ ಹಾಕುವುದನ್ನೇ ಮರೆತಿದ್ದ ಮಾಧವ. ಯಾವ ತೊಂದರೆಯೂ ಇಲ್ಲದೆ ಸರೂ ಒಳಗೆ ಬಂದಳು. ಕುತೂಹಲದಿಂದ ಸರೂ ರೂಮಿಗೆ ಓಡಿ ಬಂದಳು. ಮಾಧವ ನಿದ್ರಾವಶನಾಗಿದ್ದ. ಅವನನ್ನು ಆಗ ಎಚ್ಚರಗೊಳಿಸಲು ಸಾಧ್ಯವೇ ಇರಲಿಲ್ಲ. ರೂಮಿನ ತುಂಬಾ ಸಿಗರೇಟು ಚೂರುಗಳು, ಕಡ್ಡಿ ತುಂಡುಗಳು ಖಾಲಿಯಾದ ಬಾಟಲಿಗಳು, ಹರಹಿ ಬಿದ್ದು ಮನೆಯನ್ನು ನೋಡಲಾರದಂತೆ ಮಾಡಿದ್ದುವು.

ಸರೂ ಮಾಧವನನ್ನೇ ದಿಟ್ಟಿಸಿ ನೋಡಿದಳು. ಮಾಧವ ಅದೆಷ್ಟು ಬಡಲಾಯಿಸಿ ಹೋಗಿದ್ದ! ಹಣೆಯಲ್ಲೆಲ್ಲಾ ಗೆರೆಗಳು ಮೂಡಿದ್ದುವು. ಕೆನ್ನೆಗಳು ಬತ್ತಿ ಹೋಗಿ, ಮೂಳೆಯೇ ಎದ್ದು ಕಾಣುತ್ತಿತ್ತು. ಕಣ್ಣುಗಳೆಲ್ಲಾ ಆಳಕ್ಕೆ ಹೋಗಿದ್ದುವು. ತನ್ನ ದುರ್ವ್ಯಸನದಿಂದ ಕಂಗಾಲಾಗಿ ಹೋಗಿದ್ದ. ಮಾಧವ ಮುದುಕನಾಗಿ ಹೋಗಿದ್ದ. ಅವನ ಆ ದಾರುಣವಾದ ಸ್ಥಿತಿಯನ್ನು ನೋಡಿ ಸರೂನ ಕಣ್ಣುಗಳೆರಡೂ ನೀರು ತುಂಬಿದುವು. ಪಾಪ, ಎಷ್ಟು ಆಯಾಸಗೊಂಡು ಮಲಗಿದ್ದಾರೋ ಏನೋ, ಸುಖವಾಗಿ ನಿದ್ರಿಸಲಿ ಎಂದುಕೊಂಡು ಅಡುಗೆಯ ಮನೆಗೆ ಹೋದಳು. ಅಲ್ಲಿಯ ಅವ್ಯವಸ್ಥೆಯನ್ನು ನೋಡಲು ಆಗುತ್ತಲೇ ಇರಲಿಲ್ಲ. ಅಲ್ಲಲ್ಲಿಯೇ ಬೂದಿಯ ರಾಶಿ, ಪಾತ್ರೆಗಳ ಅವ್ಯವಸ್ಥೆ, ದೇವರ ಮುಂದಾಸನದ ಮೇಲೆ ಒಂದು ಮಣ ಧೂಳು ಕೂತಿತ್ತು. ಸರೂ ಕೆಲಸಕ್ಕೆ ತೊಡಗಿದಳು. ಪಾತ್ರೆಗಳನ್ನೆಲ್ಲಾ ತೊಳೆದು ಓರಣವಾಗಿಟ್ಟಳು; ಕಸ ಗುಡಿಸಿ ಹೊರಗೆ ಹಾಕಿದಳು; ನೀರು ಒಲೆಗೆ ಉರಿ ಹಾಕಿ, ಬೀದಿಯ ಬಾಗಿಲು ಸಾರಿಸಿ ರಂಗವಲ್ಲಿ ಇಟ್ಟಳು; ಸ್ವಲ್ಪವೂ ಶಬ್ದ ಮಾಡದಂತೆ ಮಾಧವನ ಕೋಣೆಯನ್ನೆಲ್ಲಾ ಚೊಕ್ಕಟವಾಗಿರಿಸಿದಳು; ಸ್ನಾನಮಾಡಿ ದೇವರ ವಿಗ್ರಹಗಳನ್ನೆಲ್ಲಾ ತೊಳೆದು,

ಮಂದಾಸನದ ಧೂಳು ಒರೆಸಿ, ದೇವರನ್ನು ಕೂರಿಸಿದಳು. ದೀಪ ಹಚ್ಚುವಾ ಎಂದರೆ ಎಣ್ಣೆಯಾಗಲೀ, ಹೂಬತ್ತಿ ಮಾಡಲು ಹತ್ತಿಯಾಗಲೀ ಇರಲಿಲ್ಲ. ವಿಧಿ ಇಲ್ಲದೆ ಸರೂ ಬರಿಯ ನಮಸ್ಕಾರ ಮಾಡುವದರಲ್ಲಿಯೇ ತೃಪ್ತಳಾಗಬೇಕಾಯಿತು. ಮನೆಯಲ್ಲಿ ಯಾವುದೊಂದು ಅಡುಗೆಯ ಸಾಮಾನೂ ಇರಲಿಲ್ಲ. ಡಬ್ಬಿಗಳೆಲ್ಲಾ ಖಾಲಿಯಾಗಿದ್ದುವು. ಬರಿಯ ಪುಡಿ, ಸಕ್ಕರೆ ವಿನಃ ಬೇರಾವುದೂ ಇರಲಿಲ್ಲ. ವೆರಂಡಾದಲ್ಲಿದ್ದ ಕಿಟಕಿಯ ಮೂಲಕ, ಅಲ್ಲೇ ಇಟ್ಟಿದ್ದ ಪಾತ್ರೆಯೊಳಗೆ ಹಾಲನ್ನು ಹಾಕಿ ಹೋಗಿದ್ದ ಹಾಲಿನವ. ಸರೂ ಒಲೆ ಹಚ್ಚಿ ಕಾಫಿ ಮಾಡಿದಳು. ಲಕ್ಷಣ ವಾಗಿ ತಲೆ ಬಾಚಿಕೊಂಡು, ಮಡಿ ಸೀರೆಯನ್ನುಟ್ಟು ಮಾಧವನು ಎಚ್ಚರವಾಗು ವುದಕ್ಕೆ ಕಾದು ಕೂತಳು.

ಮಾಧವ ಕೂಗಿಕೊಂಡ "ಸರೂ.........ಸರೂ........"

ಸರೂ ಕೂಡಲೇ ಕಾಫಿಯನ್ನು ಲೋಟಕ್ಕೆ ಹಾಕಿಕೊಂಡು, ಅಡಿಯಿಂದ ಮುಡಿಯ ವರೆಗೂ ಕಂಪಿಸುತ್ತಾ, ನಡುಗುವ ಹೆಜ್ಜೆಗಳನ್ನಿಡುತ್ತಾ ಮಾಧವನ ರೂಮಿಗೆ ಹೋದಳು. ಮಾಧವ ಇನ್ನೂ ನಿದ್ರೆಯಲ್ಲಿಯೇ ಇದ್ದ. ಸ್ವಪ್ನದಲ್ಲಿ ಸರೂವನ್ನು ನೋಡಿದ್ದನೋ ಏನೋ, ಹಾಗೆಯೇ ಅವಳ ಹೆಸರು ಹಿಡಿದು ಕೂಗಿದ. ಅವನ ನಿದ್ರೆ ಇನ್ನೂ ಹರಿದಿರಲಿಲ್ಲ. ಸರೂ ಅವನ ಸಮೀಪವೇ ಕೂತು, ಮೃದುವಾದ ಕೈಗಳಿಂದ ಅವನ ಹಣೆ ಮುಟ್ಟಿದಳು. ಅವಳ ಕೋಮಲವಾದ ಸ್ಪರ್ಶಕ್ಕೆ ಮಾಧವ ತಕ್ಷಣ ಎಚ್ಚರಗೊಂಡ. ಕನಸಿನಲ್ಲಿ ನೋಡಿದ ಸರೂ ನಿಜ ವಾಗಿಯೂ ಎದುರಿಗೇ ಬಂದಿದ್ದಾಳೆ! ತಾನು ಇನ್ನೂ ಸ್ವಪ್ನಾವಸ್ಥೆಯಲ್ಲಿಯೇ ಇರುವನೇನೋ ಎಂದು ಭ್ರಮೆಯಾಯಿತು. ಕಣ್ಣು ಅಗಲವಾಗಿ ತೆರೆದು ನೋಡಿದ. ಹೌದು, ಸರೂ ಪ್ರತ್ಯಕ್ಷವಾಗಿಯೇ ತನ್ನ ಎದುರಿಗೇ ಕೂತಿದ್ದಾಳೆ!

"ನಾನು ಸ್ವಾಮೀ, ನಿಮ್ಮ ಸರೂ. ನಿಮ್ಮ ಬಳಿಗೆ ಬಂದಿರುವೆ. ನನ್ನನ್ನು ಕ್ಷಮಿಸಿ ಧೊರೆ." ಸರೂ ಅವನ ಪಾದಗಳ ಮೇಲೆಯೇ ಬಿದ್ದಳು.

ಮಾಧವನಿಗೀಗ ಪೂರ್ತಿಯಾಗಿ ಎಚ್ಚರವಾಯಿತು. "ಈ ಪಾಪಿಯ ಕಾಲುಗಳನ್ನು ಏಕೆ ಮುಟ್ಟುವೆ ಸರೂ? ತಪ್ಪು ಮಾಡಿದವ ನಾನು. ನಾನೇ ನಿನ್ನಲ್ಲಿ ಕ್ಷಮೆ ಕೇಳಿಕೊಳ್ಳಬೇಕು. ಹಾಗಿರುವಾಗ ನೀನು ನನ್ನ ಪಾದಗಳನ್ನು ಹಿಡಿಯುವುದರ ಅರ್ಥವೇನು?'' ಎಂದು ಮಾಧವ ಸರೂವಿನ ಕೈಹಿಡಿದು ಮೇಲಕ್ಕೆ ಎತ್ತಿದ. ಈರ್ವರ ಕಣ್ಣುಗಳೂ ಕಂಬನಿಯಿಂದ ತೊಯ್ದು ಹೋಗಿ ದ್ದುವು. ಆ ಒಂದು ನೋಟದಿಂದಲೇ ಪರಸ್ಪರರ ವೇದನೆಯನ್ನು ಅರಿತರು.

ಅಷ್ಟು ದೀರ್ಘಾವಧಿಯ ಅಜ್ಞಾತವಾಸದಲ್ಲಿ ಸರೂ ಮಾಧವನನ್ನು ಅಷ್ಟು ಸಮೀಪವಾಗಿ ನೋಡಿದುದು ಇದೇ ಮೊದಲು. ಇಬ್ಬರಸ್ಥಿತಿಯೂ ಒಂದೇ ತೆರ ನಾಗಿತ್ತು. ಪ್ರತಿಯೊಬ್ಬರೂ 'ನಾನು ಮಾಡಿದುದು ತಪ್ಪು. ನಾನು ಹಿಡಿದ ದಾರಿ ಸರಿಯಲ್ಲ' ಎಂದು ಪಶ್ಚಾತ್ತಾಪ ಪಡುತ್ತಿದ್ದರು.

"ನನ್ನನ್ನು ಕ್ಷಮಿಸು; ಸರೂ ನಾನು ಮಹಾ ಪಾತಕಿ, ನಿನ್ನನ್ನು ವೃಥಾ ತೊಂದರೆಗೆ ಗುರಿಮಾಡಿದೆ. ನಿನ್ನನ್ನು ಈ ರೀತಿ ಬಳಲಿಸಿದ್ದಕ್ಕೆ ನನ್ನನ್ನು ಯಾವ ದಂಡನೆಗೆ ಗುರಿ ಮಾಡಿದರೂ ಸರಿಯಾದ ಪ್ರಾಯಶ್ಚಿತ್ತವಾಗುವುದಿಲ್ಲ. ಅಯ್ಯೋ, ಸರೂ!" ಮಾಧವ ನರಳಿದ.

''ಹಾಗೆಲ್ಲಾ ಹೇಳಬೇಡಿರಿ ಸ್ವಾಮಿ. ತಪ್ಪುಮಾಡದ ಮನುಷ್ಯನಾರು? ಹಿಂದೆ ನಡೆದುದನ್ನು ಕುರಿತು ಯೋಚಿಸಿ ಫಲವಿಲ್ಲ. ಇನ್ನು ಮುಂದೆ ಹಾಗಾಗ ದಂತೆ ನಡೆದುಕೊಂಡರಾಯಿತು." ಸರೂ ಎಷ್ಟು ಬಗೆಯಲ್ಲಿ ಸಮಾಧಾನ ಹೇಳಿ ದರೂ ಮಾಧವ ಶಾಂತನಾಗಲಿಲ್ಲ. "ನನಗೆ ನಿಮ್ಮ ಮೇಲೆ ಲೇಶಮಾತ್ರವೂ ಕ್ರೋಧವಿಲ್ಲ ಸ್ವಾಮಿ. ಏನೋ ವಿಷಮ ಗಳಿಗೆಯಲ್ಲಿ ನೀವು ಲೂಸಿಯನ್ನು ನೋಡಿದಿರಿ, ಆಯಿತು. ನಾನು ಆಗಲೇ ಹೇಳಿದ್ದೆ ಅವಳ ನಡತೆ ಸರಿಯಲ್ಲ ಎಂದು. ಅವಳನ್ನು ಅಷ್ಟರ ಮಟ್ಟಿಗೆ ನೀವು ನಂಬಬಾರದಾಗಿತ್ತು. ಈಗಲಾದರೂ ಬನ್ನಿ ನಮ್ಮ ಊರಿಗೆ ಹೋಗುವಾ." ಸರೂ ಕಾಫಿಯ ಲೋಟಾ ಕೈಗಿತ್ತಳು.

ಮಾಧವ ಸರೂವಿನ ಬಗ್ಗೆ ಎಲ್ಲವನ್ನೂ ವಿಚಾರಿಸಿ ತಿಳಿದುಕೊಂಡ. ಸರೂ ಅವನ ಬಗ್ಗೆಯೂ ಕೇಳಿ ತಿಳಿದುಕೊಂಡಳು. ಕಡೆಗೆ ಮಾಧವ ಸರೂವಿನ ಮಾತಿಗೇ ಒಪ್ಪಿಕೊಳ್ಳಬೇಕಾಯಿತು. "ಹೇಗಿದ್ದರೂ ನಮ್ಮದೇ ಮನೆ ಇದೆ. ಹೊಟ್ಟೆಯ ಪಾಡಿಗೆ ಯಾವ ತೊಂದರೆಯೂ ಇಲ್ಲ. ಅಲ್ಲಿಗೇ ಹೋಗೋಣಾ ಬನ್ನಿ. ಈ ಪಟ್ಟಣವಾಸವೇ ಬೇಡ. ಇರುವನೊಬ್ಬ ವಿಜಯನನ್ನು ಕಾಪಾಡಿ ಕೊಳ್ಳಲು ಯಾವ ತೊಂದರೆಯೂ ಇಲ್ಲ. ನನ್ನ ಮಟ್ಟಿಗೆ ಅವನು ಬಹಳ ಯೋಗ್ಯನಂತೆಯೇ ಕಾಣುತ್ತಾನೆ. ಮುಂದಿನ ಭವಿಷ್ಯವನ್ನು ಕುರಿತು ನಾವು ಯೋಚಿಸುವುದು ಸರಿಯಲ್ಲ. ಬನ್ನಿರಿ ಅಲ್ಲಿಗೇ ಹೋಗುವಾ." ಸರೂ ಅನೇಕ ರೀತಿಯಲ್ಲಿ ಹೇಳಿ ಅವನನ್ನೊಪ್ಪಿಸಿದಳು. ಮಾಧವ ಸರೂವಿನ ಸಂದರ್ಶನ ದಿಂದ ಬಹಳವಾಗಿ ಸಂತೋಷಗೊಂಡ. ಕ್ಷಣಮಾತ್ರದಲ್ಲಿ ಮಾಧವ ತನ್ನ ಕಷ್ಟ, ವೇದನೆ, ಯಾತನೆಗಳನ್ನು ಮರೆತ. ಸರೂವಿನೊಡನೆಯೇ ಅಂಗಡಿಗೆ ಹೋಗಿ ಮನೆಗೆ ಬೇಕಾದ ಸಾಮಾನುಗಳನ್ನು ತಂದ. ಸರೂ ಆಫೀಸಿನ ವೇಳೆಗೆ ರುಚಿ

ರುಚಿಯಾಗಿ ಅಡುಗೆ ಮಾಡಿದಳು. ಮಾಧವ ಅವಳ ಕೈಯಿನ ಊಟ ಮಾಡಿ ಅದೆಷ್ಟು ವರ್ಷಗಳಾಗಿದ್ದುವೋ! ಮಾಧವ ತೃಪ್ತಿಯಾಗಿ ಊಟ ಮಾಡಿ, ಕೈ ತೊಳೆದ. ಸರೂ ವೀಡಾ ತಂದು ಕೈಗಿತ್ತಳು. ಮಾಧವ ನಗುತ್ತಾ ಆಫೀಸಿಗೆ ಹೋದ.

ಮಾಧವ ತಾನು ಕೆಲಸವನ್ನು ಬಿಟ್ಟು ಹಳ್ಳಿಗೆ ಹೋಗುವೆನೆಂದಾಗ ಅನಂತ ಸಿಂಗ್ ಚಕಿತರಾದರು. "ಅದೇನು ನೀವು ಈ ರೀತಿ ಒಮ್ಮೆಲೇ ಮನಸ್ಸು ಬದ ಲಾಯಿಸಿರುವಿರಿ? ನಿಮ್ಮ ಲೇಡಿಯನ್ನು ಮರೆಯಲಿಕ್ಕಾಗಿಯೇ?"

"ಆ ಲೂಸಿ ಅವಳ ವಿಷಯ ಅಂದಿಗೇ ಮುಗಿದು ಹೋಯಿತು. ಅವಳು ಎಲ್ಲಿಗೋ ತಲೆ ಮರೆಸಿಕೊಂಡು ಹೋಗಿದ್ದಾಳೆ. ಅವಳನ್ನು ನಂಬಿದ ನಾನು ಕೆಟ್ಟೆ ಅಷ್ಟೇ. ಅವಳು ಹೋದುದೂ ಒಂದು ದೊಡ್ಡ ಉಪಕಾರವೇ ಆಯಿತು. ನನ್ನ ಸರೂ ನನ್ನ ಬಳಿ ಬಂದಳು. ನಾನು ಅವಳು ವಾಸಿಸುವ ಊರಿಗೇ ಹೊಗುತ್ತೇನೆ. ಇಲ್ಲಿಯ ಜೀವನವೇ ಸಾಕಾಗಿ ಹೋಗಿದೆ."

ಅದೇ ದಿನ ಮಾಧವ ತನ್ನ ರಾಜೀನಾಮೆಯನ್ನು ಸಲ್ಲಿಸಿದ. ಅನಂತಸಿಂಗ್ ಅಂತಹ ಕಾರ್ಯಸ್ಥನನ್ನು ಕಳೆದುಕೊಳ್ಳುವುದಕ್ಕೆ ಬಹಳ ಪೇಚಾಡಿದರು. ಅವರು ಅವನನ್ನು ಬಿಟ್ಟುಕೊಡಲು ಸಿದ್ಧರಾಗಿರಲಿಲ್ಲ. ಅವನು ಸಲ್ಲಿಸಿರುವ ಸೇವೆಗೆ, ತೃಪ್ತಿಗೊಂಡು ಸಾವಿರ ರೂಪಾಯಿಗಳ ಚೆಕ್ ಬರೆದು ಅವನ ಕೈಗಿತ್ತು ಹೇಳಿ ದರು: "ಇದು ನಾನು ನಿಮಗೆ ಪ್ರೀತಿಯಿಂದ ಕೊಡುತ್ತಿರುವ ಅಲ್ಪ ಕಾಣಿಕೆ. ನೀವು ಮಾಡಿರುವ ಸೇವೆಗೆ ಇದು ಯಾವ ಬಗೆಯ ಪುರಸ್ಕಾರವೂ ಅಲ್ಲ. ನೀವು ನಮ್ಮನ್ನು ಬಿಟ್ಟು ಹೋಗುವಿರಲ್ಲಾ ಎಂದು ವ್ಯಸನವಾದರೂ, ನಿಮ್ಮ ಸಂಸಾರ ಪುನಃ ಜೊತೆಗೂಡಿದುದು ಬಹಳ ಸಂತೋಷ. ಆ ನಿಮ್ಮ ಲೇಡಿಯನ್ನು ಒಂದು ದುಸ್ವಪ್ನದಂತೆ ಮರೆತು ಬಿಡಿರಿ. ನಿಮ್ಮ ಸಂಸಾರದಲ್ಲಿ ಮುಂದೆ ಯಾವ ತೊಂದ ರೆಯೂ ಬಾರದಂತೆ ದೇವರು ಅನುಗ್ರಹಿಸಲಿ" ಅನಂತಸಿಂಗ್ ಹೃತ್ಪೂರ್ವಕ ವಾಗಿ ಆಶೀರ್ವದಿಸಿದರು. ಮಾಧವ ಅವರ ಕೃತಜ್ಞತೆಯ ಭಾರದಿಂದ ತಲೆ ಬಾಗಿಸಿದ.

ಮಾಧವ ಮಧ್ಯಾಹ್ನವೇ ಮನೆಗೆ ಬಂದ. ಅನಂತಸಿಂಗರ ಉದಾರತೆ ಯನ್ನು ಮನವಾರೆ ಹೊಗಳಿದ. ಸರೂ ಮಾಧವ ಅಷ್ಟು ಬೇಗನೇ ಬಿಡುಗಡೆ ಹೊಂದಿದುದಕ್ಕಾಗಿ, ಸಂತೋಷಗೊಂಡಳು. ಸಂಜೆಯ ಉಪಹಾರ ಮುಗಿಸಿ ಕೊಂಡು ಸರೂವನ್ನು ವಾಕಿಂಗ್ ಕರೆದೊಯ್ದು ಮಾಧವ. ಸರೂ ಹಿಂದಿನ ದಿನ

ಗಳನ್ನು ಜ್ಞಾಪಿಸಿಕೊಂಡು ಕಂಬನಿದುಂಬಿದಳು. ವಿಜಯನಿದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದ ಎಂದು ಅವನಿಗಾಗಿ ತಪಿಸಿದಳು. ಅವರು ಮನೆಗೆ ಬಂದಾಗ ರಾತ್ರಿ ಎಂಟರ ವೇಳೆಯಾಗಿತ್ತು. ಮಾಧವ ತನ್ನ ಪಾನೀಯಕ್ಕಾಗಿ ಕಾತರಿಸಿದ. ಅವನ ಗಂಟಲೊಣಗಿ ಬರುತ್ತಿತ್ತು. ಅಂತರ್ದಾಹ ಸುರುವಾಗಿತ್ತು.

"ಲೂಸಿ, ಹೋಗುವುದು ಹೋದಳು. ಅವಳ ಜೊತೆಯಲ್ಲಿಯೇ ಇವನ್ನೂ ತೆಗೆದುಕೊಂಡು ಹೋಗಲಿಲ್ಲ. ಅವಳು ಹೋದರೂ ಅವಳು ಕಲಿಸಿದ ಈ ದುರ್ಚಾಳಿಯನ್ನು ಬಿಡಲು ಸಾಧ್ಯವೇ ಆಗಿಲ್ಲ ಸರೂ. ಇದು ನನ್ನ ಜೀವಕ್ಕೇ ಅಂಟಿದ ಜಾಡ್ಯ" ಗ್ಲಾಸಿಗೆ ಬಾಟಲಿಯನ್ನು ಬಗ್ಗಿಸುತ್ತಾ ಹೇಳಿದ. ಕಡೆಗೂ ತನ್ನ ಪತಿ ಆ ಕುಡಿತದ ದಾಸನಾಗಿದ್ದನ್ನು ನೋಡಿ ಸರೂ ಖೇದಗೊಂಡಳು. ಅದನ್ನು ಬಿಡುವುದು ಅವನ ಜೀವಿತದಲ್ಲಿಯೇ ಸಾಧ್ಯವಿರಲಿಲ್ಲ. ಅವನ ಮಾತಿಗೆ ಯಾವ ಉತ್ತರವನ್ನೂ ಸರೂ ಹೇಳಲಾರದವಳಾಗಿದ್ದಳು. ಸರೂ ಪತಿಯ ಜೊತೆಯಲ್ಲಿಯೇ ತನ್ನ ಊಟವನ್ನೂ ಮುಗಿಸಿದಳು. ಕೆಲಸ ಮುಗಿಸಿ ಬಾಗಿಲು ಹಾಕಿಕೊಂಡು ಬರುವ ಹೊತ್ತಿಗೆ ಮಾಧವ ಅಮಲಿನಿಂದ ಹಾಗೆಯೇ ಜೂಗರಿಸುತ್ತಾ ಮಲಗಿದ್ದ. ಸರೂ ಅವನಿಗೆ ಸರಿಯಾಗಿ ಹೊದಿಸಿ ತಾನೂ ಮಲಗಿದಳು. ಅವಳು ಬಂದುದನ್ನು ನೋಡಿದೊಡನೆಯೇ ಮಾಧವ ಹಸಿದ ಹುಲಿಯಂತೆ ಅವಳ ಬಳಿಸಾರಿದ. ಸಾವರಿಸಿಕೊಂಡು ಸರೂ ಹೇಳಿದಳು: "ಈ ಸರೂ ಎಂದೆಂದಿಗೂ ನಿಮ್ಮವಳೇ ಸ್ವಾಮೀ. ಆದರೆ ಈಗ ನಾನು ನಿಮ್ಮ ಚರಣದಾಸಿ, ನಿಮ್ಮ ಸೇವೆ ಮಾಡಿಕೊಂಡಿರುವುದೇ ನನ್ನ ಧರ್ಮವೇ ಹೊರತು, ನಿಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸುವ ಸರೂ ಅಲ್ಲ. ಆಗಿನ ಕಾಲ ಕಳೆದು ಹೋಯಿತು. ನಮ್ಮಿಬ್ಬರ ಆ ಸಂಬಂಧ ಅಂದಿಗೇ ಮುಗಿಯಿತು. ಈ ಹತ್ತು ವರ್ಷಗಳ ಅವಧಿಯಲ್ಲಿ ನಾನು ಎಷ್ಟು ಸಂಯಮಶಕ್ತಿಯನ್ನು ಹೊಂದಿರುವೆ ಎಂಬುದು ನಿಮಗೆ ತಿಳಿದಿದೆಯೇ? ಅದರಿಂದ ಮನುಷ್ಯನಿಗೆ ಎಂತಹ ಕಳೆ ಬರುತ್ತದೆ? ಆ ಒಂದು ಶಕ್ತಿಯ ಬಲದಿಂದ ಮಾನವ ಎಷ್ಟು ಕೆಲಸಗಳನ್ನು ಮಾಡಬಹುದೆಂದು ನೀವು ಊಹಿಸಿರುವಿರಾ? ನಾನು ನಿಮ್ಮನ್ನಗಲಿದಾಗ ನನಗೆ ಕೇವಲ ಇಪ್ಪತ್ತುಮೂರು ವರ್ಷಗಳು. ಅದೇನು ಮುದುಕಿಯಾಗುವ ವಯಸ್ಸಾಗಿರಲಿಲ್ಲ. ಪ್ರಕೃತಿನಿಯಮದಂತೆ ನನಗೂ ಅನೇಕ ಬಗೆಯ ಆಸೆ-ಆಕಾಂಕ್ಷೆಗಳಿದ್ದುವು. ನಿಮ್ಮ ಸಹವಾಸವನ್ನೂ ನಾನು ನನ್ನ ಮನಃಪೂರ್ವಕವಾಗಿಯೇ ಬಯಸುತ್ತಿದ್ದೆ. ಆದರೆ ವಿಧಿ ನನ್ನ ಹಣೆಯಲ್ಲಿ ಯಾವ ತರಹದ ಸುಖವನ್ನೂ ಬರೆಯಲಿಲ್ಲ. ತಾರುಣ್ಯದ

ಪರಮಾವಧಿಯೇ ನಾನು ಒಬ್ಬಂಟಿಗಳಾಗಿ, ಯಾರ ಆಸರೆಯೂ ಇಲ್ಲದೆ, ಯಾವ ಪಾಪವನ್ನೂ ಅರಿಯದ ಹಸುಳೆ ವಿಜಯನನ್ನೂ ಕಟ್ಟಿಕೊಂಡು, ಉಕ್ಕಿ ಬರುತ್ತಿದ್ದ ಪ್ರಬಲವಾದ ಆಸೆಯನ್ನೂ ಅದುಮಿಕೊಂಡು, ಸಹನೆಯಿಂದಲೇ ಇಲ್ಲಿಯವರೆಗೂ ನಾನು ಬಾಳಿರಬೇಕಾದರೆ ನನ್ನ ಮನದ ವೇದನೆ ಎಷ್ಟಿರಬಹುದೆಂಬುದನ್ನು ನೀವು ತಿಳಿದಿರುವಿರಾ? ನನ್ನ ಎಲ್ಲಾ ಬಯಕೆಗಳು ಅಂದೇ ಬತ್ತಿ ಹೋದುವು. ನಿಮ್ಮನ್ನು ಸೇರಬೇಕು, ವಿಜಯನನ್ನು ಬೆಳೆಸಬೇಕು ಎಂಬುವೇ ನನ್ನ ಆಸೆಯಾಗಿತ್ತು. ಅದರಲ್ಲಿ ಒಂದು ಈಗ ನೆರವೇರಿದೆ. ಇನ್ನೊಂದಕ್ಕಾಗಿ ಭವಿಷ್ಯವನ್ನು ಎದುರು ನೋಡಬೇಕು. ನಿಮಗೂ ಇನ್ನೇನು ವಯಸ್ಸಾಗುತ್ತಾ ಬಂತು, ಇನ್ನೇಕೆ ಈ ಹಂಬಲ, ಅವನ್ನು ತ್ಯಜಿಸಿರಿ. ನಮ್ಮ ಮಗು ವಿಜಯನ ಸಂಸಾರ ನೋಡಿ ಸಂತೋಷಪಡೋಣಾ. ನಾವಾಗಿ ಅನುಭವಿಸುವುದಕ್ಕಿಂತ ಇತರರ ಸುಖವನ್ನು ನೋಡಿ ಸಂತೋಷಪಡುವುದು ಹೆಚ್ಚಿನದು. ಇಂದಿನಿಂದ ನಾನು ನಿಮ್ಮ ಕೈಹಿಡಿದ ಪತ್ನಿಯೇ ಆದರೂ ಸಖಿಯೆಂದೇ ತಿಳಿಯಿರಿ. ದಾಂಪತ್ಯ ಜೀವನದ ಪೂರ್ಣ ಸಫಲತೆ ಇರುವುದು ಸಖ್ಯತ್ವದಲ್ಲೆ. ಆದುದರಿಂದ ಮನ್ನಿಸಿ." ಸರೂ ಗದ್ಗದಿತಳಾಗಿ ಕೇಳಿಕೊಂಡಳು. ಒಂದು ಬಗೆಯಲ್ಲಲ್ಲ ಹತ್ತು ಬಗೆಯಲ್ಲಿ ಅವನಿಗೆ ಹೇಳಿ ಅವನನ್ನು ಒಪ್ಪಿಸಬೇಕಾದರೆ ಸರೂಗೆ ಸಾಕುಬೇಕಾಯಿತು.

"ನೀನು ಧನ್ಯೆ ಸರೂ! ನಿನ್ನ ಬೆಲೆಯನ್ನು ನಾನು ಅರಿಯಲಿಲ್ಲ. ಅದಕ್ಕಾಗಿ ಕ್ಷಮಿಸು. ನೀನೇ ಹೇಳಿದಂತೆ ಈವತ್ತಿನಿಂದ ನಾನು ಸಖ, ನೀನು ಸಖಿ. ಒಪ್ಪಿದೆ. ಆಯಿತೋ?" ಮಾಧವ ಕೊನೆಯಲ್ಲಿ ಸಮ್ಮತಿಸಿದ ನಂತರ ಸರೂ ಶಾಂತಳಾಗಿ ನಿದ್ರಿಸಿದಳು.

ತರಕಾರಿ ಹೆಚ್ಚುತ್ತಾ ಕೂತಿದ್ದ ಜಾನಕೀಬಾಯಿ, ಮಾಧವ, ಸರೂ ಇವರನ್ನು ನೋಡಿ ವಿಸ್ಮಿತರಾದರು. ತಮ್ಮ ಕಣ್ಣುಗಳನ್ನೇ ನಂಬಲಾಗಲಿಲ್ಲ ಅವರಿಗೆ.

ಮಾಧವ ತಂದೆಯ ಮರಣದ ಬಳಿಕ ತಾಯಿಯನ್ನು ನೋಡಿಯೇ ಇರಲಿಲ್ಲವಾದ್ದರಿಂದ, ತಾಯಿಯ ವೈಧವ್ಯದ ವೇಷವನ್ನು ನೋಡಿ ಅವನಿಗೆ ಜೀವವೇ ಹೋದಂತಾಯ್ತು. ಅವರನ್ನೂ ನೋಡಲಿಕ್ಕೂ ಆಗದೆ ಮಾಧವ ಮುಖ ಮುಚ್ಚಿ

ಕೊಂಡು ಎಳೆಯ ಹುಡಗನಂತೆ ಗೋಳೋ ಎಂದು ಅತ್ತ. ಜಾನಕೀಬಾಯಿಯೂ ಮಗನ ದುರವಸ್ಥೆಯನ್ನು ನೆನೆದು ಅತ್ತರು.

"ನಿನ್ನನ್ನು ಈ ಗತಿಗೆ ತಂದ ಈ ಪಾಪಿ ಮಗನನ್ನು ನೋಡುವಿಯಾ ಅಮ್ಮಾ? ಅಯ್ಯೋ, ನಾನೆಂತಹ ಅಪರಾಧ ಮಾಡಿದೆ ಅಮ್ಮಾ....ಅಮ್ಮಾ....!" ಮಾಧವ ಪಶ್ಚಾತ್ತಾಪದಿಂದ ತಾಯಿಯ ಎದುರಿಗೆ ವಿಲಪಿಸಿದ.

"ಮಗೂ, ನೀನು ತಪ್ಪಿ ನಡೆದೆ ನಿಜ. ಆದರೆ ಈಗ ಅದಕ್ಕಾಗಿ ಪಶ್ಚಾತ್ತಾಪ ಪಟ್ಟಿರುವೆ. ಪಾಪಪರಿಹಾರಕ್ಕೆ ಪಶ್ಚಾತ್ತಾಪಕ್ಕಿಂತ ಬೇರೊಂದು ಶಿಕ್ಷೆ ಇಲ್ಲ. ನೀನು ಎಂದಿದ್ದರೂ ನನ್ನ ಮಗನೇ. ಹಿಂದಿನದೆಲ್ಲಾ ಮರೆತು ಮುಂದೆ ಸುಖವಾಗಿ ಬಾಳು ಮಗೂ, ವ್ಯಾಕುಲಗೊಳ್ಳಬೇಡ." ಎಂದು ಜಾನಕೀಬಾಯಿ ಮಾಧವನನ್ನು ಸಮಾಧಾನಪಡಿಸಿದರು.

ಸರೂ ಶಾಂತಿಗ್ರಾಮದಲ್ಲಿ ಸಾಧಿಸಿದ ಕಲ್ಯಾಣ ಕಾರ್ಯದ ಯಶಸ್ಸು ಜಾನಕೀಬಾಯಿಯವರ ಕಿವಿ ವರೆಗೂ ಬಂದು ಮುಟ್ಟಿತ್ತು. ಅವಳ ಸಾಹಸಕ್ಕಾಗಿ ಜಾನಕೀಬಾಯಿ, ಅವಳನ್ನು ಹಾಡಿ ಹರಿಸಿದರು. ಜನರ ಅಂತಃಕರಣದಲ್ಲಿ ಅವಳು ಗಳಿಸಿದ ಸ್ಥಾನವನ್ನು ನೆನೆದು, ಜಾನಕೀಬಾಯಿಯವರ ಮನಸ್ಸು ಧನ್ಯ ಭಾವದಲ್ಲಿ ಲೀನವಾಯಿತು. ಅತ್ತಿಗೆಯ ಈ ಸರ್ವೋದಯ ಕಾರ್ಯದ ಮಹತಿಯನ್ನು ಕೇಳಿದ ಆನಂದ ಹೇಳಿದ: "ನೀನು ಈ ಊರಿನಲ್ಲಿಯೇ ಇದ್ದಿದ್ದರೆ ನಿನ್ನನ್ನು ಈ ಸಲ ಕಾರ್ಪೊರೇಶನ್ ಚುನಾವಣೆಗೆ ಸ್ವತಂತ್ರ ಉಮೇದುವಾರಳಾಗಿ ನಿಲ್ಲಿಸುತ್ತಿದ್ದೆ ಅತ್ತಿಗೆ. ಆಗ ನಿನ್ನ ಕೆಲಸಕ್ಕೆ ಇನ್ನೂ ಅನುಕೂಲವಾಗುತ್ತಿತ್ತು."

ಅವನ ಮಾತಿಗೆ ನಕ್ಕು ನುಡಿದಳು ಸರೂ: "ಹೆಂಗಸು ಯಾವಾಗಲೂ ಮನೆಯ ಹೊಸ್ತಿಲೊಳಗೇ ಇರಬೇಕು ಆನಂದ. ಹೊಸ್ತಿಲು ದಾಟಿದಳೆಂದರೆ ಅಲ್ಲಿಗೇ ಮುಗಿಯಿತು ಅವಳ ಅವಸ್ಥೆ. ಪರೋಪಕಾರ ಮಾಡಲು, ಯಾವ ರಾಜಕೀಯವೂ, ಯಾವ ಸಂಘದ ಸದಸ್ಯತ್ವವೂ ಬೇಡ. ಆತ್ಮವಿಶ್ವಾಸ ಬಂದಿದ್ದರೆ ಹೆಂಗಸಾಗಲೀ, ಗಂಡಸಾಗಲೀ, ಮನೆಯ ಹೊಸ್ತಿಲು ಕೂಡಾ ದಾಟದೆ ಇಡೀ ಪ್ರಪಂಚವನ್ನೇ ಆಳಬಹುದು. ತಿಳಿಯಿತೇ? ಹೆಂಗಸರು ರಾಜಕೀಯಕ್ಕೆ ಕೈಹಾಕಲೇ ಕೂಡದು. ಅದರಿಂದ ಅನಿವಾರ್ಯವಾಗಿ ಬೀದಿಗೆ ಬಂದ ಹೆಣ್ಣು, ಒಂದು ಹೋಗಿ ಒಂದು ಮಾಡಬೇಕಾಗುತ್ತದೆ. ಹೆಂಗಸಿನ ಸ್ಥಾನ ಮನೆಯಲ್ಲಿಯೇ ಹೊರತು, ಬೀದಿಯಲ್ಲಲ್ಲಾ. ದೇಶದ ಉದ್ಧಾರ ಮಾಡುವುದಕ್ಕೆಂದು ಅಲೆದಾಡುವುದಕ್ಕಿಂತ, ಹೆಣ್ಣು ತನ್ನ ತನ್ನ ಸಂಸಾರವನ್ನು ವ್ಯವಸ್ಥೆಯಾಗಿಟ್ಟು

ಕೊಂಡು, ತನ್ನಲ್ಲಿ ಹುಟ್ಟಿದ ಮಕ್ಕಳಿಗೆ ತಾಯಾದಂತೆ, ತನ್ನ ಸುತ್ತಲೂ ಇದ್ದ ಮಕ್ಕಳಿಗೂ ತಾಯಾಗಿ, ತನ್ನ ಸಾಧನೆಯ ಸತ್ವವನ್ನೆಲ್ಲ ಬೆಳೆಯುವ ಮಕ್ಕಳಿಗೆ ಪೌಷ್ಟಿಕವಾಗುವಂತೆ ಹಂಚಿಕೊಟ್ಟು, ತನ್ನನ್ನೇ ತನ್ನ ಮಕ್ಕಳಲ್ಲಿ ಬೆಳೆಯಿಸಿ ಕೊಳ್ಳುವ ತೃಪ್ತಜೀವನವನ್ನು ನಡೆಸಿದರೆ ಅದಕ್ಕಿಂತ ಹೆಚ್ಚಿನ ಉನ್ನತ ಕಾರ್ಯ ವಿಲ್ಲ. ಇದನ್ನು ಬಿಟ್ಟು ಬೇರೆ ದೇಶೋದ್ಧಾರವೇನೂ ಇಲ್ಲ, ಆನಂದ ಅಲೆ ದಾಡುವ ಗಂಡಿಗೆ ನೆಲೆಯಾಗಿ ನಿಲ್ಲುವುದು ಹೆಣ್ಣಿನ ಧರ್ಮ. ಹೆಣ್ಣು ಮನೆ ಮಾಡಬೇಕು, ಗಂಡು ಮನೆ ಕಾಯಬೇಕು. ಹೌದೋ ಅಲ್ಲವೋ?"

"ಪರವಾಗಿಲ್ಲ ಅತ್ತಿಗೆ, ನೀನು ಮಾತು ಕೂಡಾ ಚೆನ್ನಾಗಿ ಆಡುತ್ತೀ! ನಿನ್ನ ಮಾತುಗಳನ್ನು ನಮ್ಮ ಹುಡಿಗಿಯರೂ ಕೇಳಿವರೆ ಚೆನ್ನಾಗಿರುತ್ತಿತ್ತು. ನಿನ್ನ ಆಡಳಿತವನ್ನೇ ಅವರೂ ಪಾಲಿಸಿದರೆ, ನಮ್ಮ ದೇಶ ರಾಮರಾಜ್ಯವೇ ಆಗುವು ದರಲ್ಲಿ ಸಂದೇಹವೇ ಇಲ್ಲ ಅತ್ತಿಗೇ. ನೀನು ಎಲೆಯ ಮರೆಗಿರುವ ಕಾಯಂತೆ, ಮನೆಯೊಳಗಿದ್ದೇ ನೀನು ಅಷ್ಟೆಲ್ಲಾ ನಡೆಸಿರುವೆ ಅತ್ತಿಗೆ.ನೀನು ನಿಜವಾಗಿಯೂ ಪುಣ್ಯಶಾಲಿನೀ!" ಆನಂದ ತುಂಬಿದ ಹೃದಯದಿಂದ ನುಡಿದ.

ಎಲ್ಲರೊಡನೆಯೂ ಸಂತೋಷದಿಂದ ಎರಡು ಮೂರು ದಿನ ಕಳೆದು ಮಾಧವ, ಸರೂ ಕೈಕೊಂಡ ಕಾರ್ಯದಲ್ಲಿಯೇ ತಾನೂ ತನ್ನಜೀವನದ ಸಫಲತೆ ಯನ್ನು ಕಂಡುಕೊಂಡರಾಯಿತೆಂದು ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡು, ಅವಳೊಡನೆ ತಾನೂ ಊರಿಗೆ ಹೊರಡಲು ಸಿದ್ಧನಾದ. ಅಲ್ಲಿಯೇ ಇರಲು ಜಾನಕೀಬಾಯಿ ಎಷ್ಟೇ ಬಲವಂತ ಮಾಡಿದರೂ, ಮಾಧವನಾಗಲೀ, ಸರೂ ವಾಗಲೀ ಒಪ್ಪಲೇ ಇಲ್ಲ.

"ನಾನೇ ಮಾಡ ಬೇಕಾದ ಕೆಲಸ ಅಲ್ಲಿ ನನಗಾಗಿ ಕಾದು ಕೂತಿದೆ. ಅದನು ಅಲ್ಲಿಗೇ ಬಿಟ್ಟು ಇಲ್ಲಿಗೆ ಬರುವುದು ಸರಿಯಾದೀತೇ?" ಎಂದು ಅತ್ತೆಯನ್ನು ತನ್ನ ಕಡೆಗೇ ಒಲಿಸಿಕೊಂಡಳು. ಸರಿ, ಊರಿಗೆ ಹೊರಡುವುದೆಂದು ನಿರ್ಧರ ವಾಯಿತು.

ಸರೂ ಮಾಧವರನ್ನು ಬೀಳ್ಕೊಡಲು ಜಾನಕೀಬಾಯಿಯವರೂ ಬಸ್ ನಿಲ್ದಾಣಕ್ಕೆ ಬಂದಿದ್ದರು. ಮದ್ರಾಸಿನಲ್ಲಿದ್ದ ಸಾಮಾನುಗಳನ್ನೆಲ್ಲಾ ಸರೂ ತನ್ನ ಜೊತೆಯಲ್ಲಿಯೇ ತೆಗೆದುಕೊಂಡು ಬಂದಿದ್ದಳು. ಅವನ್ನೆಲ್ಲಾ ಬಸ್ ಮೇಲೆ ಕಾಣಿಸಿ, ಇಬ್ಬರೂ ತಾಯಿಗೆ ಹೋಗಿ ಬರುತ್ತೇವೆಂದು ಹೇಳಿ, ಬಸ್ಸಿನಲ್ಲಿ ಹತ್ತಿ ಕುಳಿತರು. ಜಾನಕೀಬಾಯಿಯವರು ನೀರು ತುಂಬಿದ ಕಣ್ಣುಗಳಿಂದ ಅವರನ್ನೇ

ನೋಡುತ್ತಿರುವಾಗಲೇ ಬಸ್ ಅವರನ್ನು ಮುಂದಕ್ಕೆ ತೆಗೆದುಕೊಂಡು ಹೋಗಿ ಸುಗಮವಾಡಿತು ಕಡೆಗೊಮ್ಮೆ ಮಗ ಸೊಸೆ ಕೂಡಿವರಲ್ಲಾ ಎಂಬ ಸಮಾಧಾನ ಅವರ ಆ ಅಗಲಿಕೆಯ ದುಃಖದ ಭಾರವನ್ನು ಕಡಿಮೆ ಮಾಡಿತು.

ವಿಜಯ ತಾಯಿ-ತಂದೆಯರ ಬರವಿಗಾಗಿ ಚಾತಕಪಕ್ಷಿಯಂತೆ ಕಾದು ಕೊತಿದ್ದ. ಪ್ರತಿ ದಿನ ಊರ ಸಮೀಪದಲ್ಲಿಯೇ ಇರುವ ಅರಳೀ ಮರದ ಬಳಿ ಹೋಗಿ ನೋಡಿ ಬರುವುದೇ ಅವನ ಕೆಲಸವಾಗಿತ್ತು. ತಾಯಿಯನ್ನು ಒಂದು ದಿನವೂ ಬಿಟ್ಟು ಇರದ ಅವನಿಗೆ ಏನನ್ನೋ ಕಳೆದುಕೊಂಡಂತಾಗಿತ್ತು. ಜೀವಕ್ಕೆ ಸಮಾಧಾನವೇ ಇರಲಿಲ್ಲ. ಉಂಡ ಊಟವೂ ಮೈಗೂಡದೆ ಬಾಡಿಹೋಗಿದ್ದ. ಪ್ರತಿ ದಿನ ತಾಯಿಯ ಮಡಿಲಲ್ಲಿಯೇ ತಲೆ ಇಟ್ಟು ಮಲಗುತ್ತಿದ್ದವ ಈಗ ಸುಬ್ಬರಾಯರ ಬಳಿ ದೂರವಾಗಿ ಮಲಗುವದೆಂದರೆ ಅವನಿಗೆ ನಿದ್ದೆಯೇ ಬರುತ್ತಿರಲಿಲ್ಲ. ತಾಯಿಯ ಕೈಯೂಟದ ವಿನಃ ಅವನಿಗೆ ಬೇರಾವುದೂ ರುಚಿಸುತ್ತಲೇ ಇರಲಿಲ್ಲ. ಎಂಟು ದಿನಗಳೊಳಗಾಗಿ ದೇಹ ಒಣಗಿ ಹೋಯಿತು. ತಾಯಿಯ ವಾತ್ಸಲ್ಯದಿಂದ ಬೆಳೆದ ವಿಜಯ, ಅದೀಗ ತಪ್ಪಿ ಹೋಗಲು, ವಿಲಿವಿಲಿ ಒದ್ದಾಡಿದ.

ಬೆಳಗ್ಗೆ ಒಂಬತ್ತರ ಸಮಯ ವಿಜಯ ಹುಡುಗರಿಗೆ ಲೆಕ್ಕ ಹೇಳಿಕೊಡುತ್ತಿದ್ದ. ಆಗ ಅಕಸ್ಮಾತ್ ಕಿಟಕಿಯೊಳಗಿಂದ ಹೊರಗೆ ನೋಡಿದ. ತನ್ನ ತಾಯಿ ಮತ್ತು ಒಬ್ಬ ಗಂಡಸು ಬರುತ್ತಿದ್ದುದು ದೂರದಿಂದಲೇ ಕಂಡಿತು. ತಾಯಿಯ ಬಳಿ ಒಂದೇ ನಗೆತಕ್ಕೆ ಹಾರಿ ಹೋಗಿಬಿಡಲೇ ಎನ್ನಿಸಿತು. ಆದರೆ ತಾನು ಹಾಗೆ ಪಾಠ ಹೇಳಿಕೊಡುವ ಸಮಯದಲ್ಲಿ, ಅರ್ಧಕ್ಕೆ ಬಂದರೆ ತಾಯಿ ಏನನುವಳೋ ಏನೋ? ಶಾಲೆ ಮುಗಿದ ಮೇಲೆಯೇ ಹೋಗಿ ನೋಡಿಕೊಂಡು ಬರೋಣವೆಂದುಕೊಂಡು ತನ್ನಲ್ಲಿ ಉಕ್ಕಿ ಬರುತ್ತಿದ್ದ ಆತುರ, ಆಶೆಗಳನ್ನು ಅದುಮಿಕೊಂಡು ವಿಜಯ ಲೆಕ್ಕ ಹೇಳುವ ತನ್ನ ಕಾರ್ಯದಲ್ಲಿಯೇ ತೊಡಗಿದ. ಅವನ ಲಕ್ಷ್ಯವೆಲ್ಲಾ ಗಡಿಯಾರದ ಮೇಲೆಯೇ ಇದ್ದಿತು. ಹತ್ತುಗಂಟೆಯಾದ ಕೂಡಲೇ ಬೆಲ್ ಬಾರಿಸಿ, ಅವಸರವಸರದಿಂದ ಬಾಗಿಲಿಗೆ ಬೀಗ ಹಾಕಿ,ಒಂ ದೆ

ನೆಗತಕ್ಕೆ ಮನೆಯು ಬಳೆನಾರಿದ. ಮನೆಯೊಳಕ್ಕೆ ಬಂದವನೇ ಅಲ್ಲಿಯೇ ಕೂತಿರುವ ತಂದೆಯನ್ನೂ ಗಮನಿಸದೆ ತಾಯಿಯ ಬಳಿಗೋಡಿದ. ಸರೂ ಅವನನ್ನಪ್ಪಿ ಮುದ್ದಿಟ್ಟಳು. ಮಾಧವ ತಾಯಿ ಮಕ್ಕಳ ಆ ನಿರ್ಮಲ ಪ್ರೇಮವನ್ನು ದೂರದಿಂದಲೇ ನೋಡುತ್ತಾ ಕುಳಿತಿದ್ದ.

"ಹೋಗಮ್ಮಾ, ಎರಡೇ ದಿನಕ್ಕೆ? ಬರುತ್ತೇನೆಂದು ಹೇಳಿ ಎಂಟು ದಿನ ಮಾಡಿದ್ದೀಯಾ ? ಯಾಕೆ ಸುಳ್ಳು ಹೇಳಿದೆ? ನೀನೇ ಹೇಳುತ್ತೀ, ಸುಳ್ಳು ಹೇಳಬಾರದೂ ಅಂತ. ಈಗ ನೀನೇ ಹೇಳಿದರೆ ಪರವಾಗಿಲ್ಲವೊ?" ವಿಜಯ ತಾಯಿಗೇ ಪ್ರಶ್ನೆ ಹಾಕಿದ.

"ಬರುತ್ತೇನೆಂದು ಹೇಳಿದ್ದೆ ನಿಜ. ಆದರೆ ಮದ್ರಾಸಿನಿಂದ ಇಲ್ಲಿಗೆ ಬರಬೇಕಾದರೆ ಎಷ್ಟು ಕಷ್ಟ ಗೊತ್ತೇ ? ಅದಿರಲಿ, ಅಣ್ಣ ಬಂದಿದ್ದಾರೆ; ಅವರನ್ನು ಮಾತನಾಡಿಸುವುದಿಲ್ಲವೇ? ಹೋಗು ಅವರಿಗೆ ನಮಸ್ಕರಿಸು" ಸರೂ ವಿಜಯನ ಮುಖವನ್ನು ಮೇಲಕ್ಕೆ ಎತ್ತಿದಳು ವಿಜಯ ನಾಚಿಕೆಯಿಂದ ತಲೆ ಬಗ್ಗಿಸಿಕೊಂಡೇ ಬಂದು ಮಾಧವನ ಕಾಲುಗಳಿಗೆ ನಮಸ್ಕರಿಸಿದ. ಪುನಃ ತಾಯಿಯ ಬಳಿಗೇ ಹೋಗಬೇಕೆಂದು ತಿರುಗಿದಾಗ ಮಾಧವ ಅವನ ಕೈ ಹಿಡಿದು ತನ್ನ ಬಳಿಗೆಳೆದುಕೊಂಡ. "ನನ್ನನ್ನು ಮರೆತೇಬಿಟ್ಟಿರುವೆಯಾ ವಿಜಯಾ ? ಆಗ ಇದೇ ಕೈಗಳಿಂದ ನಿನ್ನನ್ನು ಹೊಡೆಯುತ್ತಿದ್ದೆ; ಈಗ ಅದೇ ಕೈಗಳಿಂದ ನಿನ್ನನ್ನು ಮುದ್ದಿಸುವೆ ಬಾ ಮಗೂ!" ಎಂದು ಅವನನ್ನು ಬಾಚಿ ತಬ್ಬಿಕೊಂಡು ಭುಜದ ಮೇಲೆ ಕೂರಿಸಿಕೊಂಡು ಮನೆಯಲ್ಲೆಲ್ಲಾ ತಿರುಗಾಡಿದ. ಲೆಕ್ಕವಿಲ್ಲದಷ್ಟು ಬಾರಿ ಅವನನ್ನು ಅಪ್ಪಿ ಮುದ್ದಿಟ್ಟ. ವಿಜಯ ತಂದೆಯ ವಾತ್ಸಲ್ಯದಿಂದ ಗೆಲುವಾದ. ಅವನ ಕೊರತೆಯೂ ತುಂಬಿ ಬಂತು. ವಿಫಲಮುಖವಾಗಿದ್ದ ಸರೂವಿನ ಬಾಳು ಸಫಲಜೀವನದ ಪೂರ್ಣತೆಯ ಕಡೆಗೆ ಮುಖ ಹೊರಳಿಸಿತು. ಈವರೆಗೆ ಬರಿದಾಗಿದ್ದ ಅವಳ ಜೀವನ-ಕುಂಭ ಮಾಧವನ ಕಾಮರಹಿತ ಪ್ರೇಮ ಜಲದಿಂದ ಈಗ ತುಂಬಿತು.

ಮಾಧವ ಬಂದ ದಿನದಿಂದಲೇ ಸರೂವಿನ ಕಾರ್ಯದಲ್ಲಿ ನೆರವಾಗ ಹತ್ತಿದ. ವಿಜಯನ ಮೂಲಕ ಮಾಧವ ಬಂದಿರುವ ಸುದ್ದಿ ಎಲ್ಲರಿಗೂ ತಿಳಿಯಿತು. 'ಸರಸಮ್ಮನ ಯಜಮಾನರು ಬಂದಿದ್ದಾರೆ' ಎಂದುಕೊಂಡು ಹೆಂಗಸರು ಗಂಡಸರು ಎಲ್ಲರೂ ಕುತೂಹಲದಿಂದ ಮಾಧವನನ್ನು ನೋಡಲು ಬಂದರು. ಸರೂವಿನ ಮನೆ ಊರ ಜನರಿಂದ ತುಂಬಿಹೋಯಿತು. ಅವರ ಇಂಗಿತ

ವನ್ನು ತಿಳಿದ ಸರೂ-ಮಾಧವನನ್ನು ಹೊರಗಡೆ ಕರೆತಂದಳು. ಎಲ್ಲರೂ ಮಾಧವನಿಗೆ ಕೈಮುಗಿದರು. ಅವನ ವೇಷಭೂಷಣ ನೋಡಿ ಅವನೊಬ್ಬ ಸಾಹೇಬನಾಗಿರಬೇಕೆಂದು ಕೆಲವರು ಭಾವಿಸಿ ಅವನೊಡನೆ ಅಂಜಂಜಿ ನಡೆದುಕೊಳ್ಳ ಹತ್ತಿದರು. ಆದರೆ ಮಾಧವ ಅವರೆಲ್ಲರೊಡನೆಯೂ ನಿರಭಿಮಾನದ ಸಲುಗೆಯಿಂದ ಆತ್ಮೀಯ ಭಾವನೆಯಿಂದ ಹಿತದ ಮಾತನಾಡಿ ಅವರನ್ನು ಕಳಿಸಿಕೊಟ್ಟ. ಸುಬ್ಬರಾಯರೂ ಕೂಡ ಸ್ವತಃ ಬಂದು ಮಾಧವನೊಡನೆ ಗೌರವದ ಮಾತನಾಡಿ, ಕ್ಷೇಮಸಮಾಚಾರ ವಿಚಾರಿಸಿಕೊಂಡು ಹೋದರು.

ಸರೂ ಕೈಕೊಂಡ ಕಾರ್ಯದಲ್ಲಿಯೇ ಸಹಭಾಗಿಯಾಗಬೇಕೆಂದು ಮಾಧವ ಅವಳ ಜೊತೆ ತಾನೂ ಶಿಕ್ಷಕನಾದ. ನಿಪ್ರೆಯಲ್ಲಿಯ ಯಾವುದೋ ಹಳವಂಡಿನಂತೆ ಮಾಧವನ ಗತಜೀವನದ ನೆನಪು ಮಸುಕಾಗಿ ಹೋಗಿತ್ತು. ಇಬ್ಬರೂ ಸಖ-ಸಖಿಯರಾಗಿ ಹೊಸ ಜೀವನದ ಹೊಸ್ತಿಲ ಮೇಲೆ ನಿಂತಿದ್ದರು. ಸರೂ ಕಂಡ ಜೀವನದ ಕನಸು, ಅವಳ ಕಣ್ಣೆದುರಿಗೇ ಕಣಸಾಗುವುದಿತ್ತು. ಮಾಧವ-ಸರೂ ಆ ಕಣಸಿನ ದೃಷ್ಟಾರರಾಗಿದ್ದರು. ಅವರ ಈ ಫಲಪ್ರಾಪ್ತಿಗೆ ಶಾಂತಿಗ್ರಾಮದ ಆ ರಮ್ಯಸುಂದರ ನಿಸರ್ಗ, ಅದಕ್ಕನುಗುಣವಾಗಿರುವ ಅಲ್ಲಿಯ ಜನದ ನಿರ್ಮಲ ಭಾವದ ಮುಗ್ಧ ಮನಸ್ಸು ಸಾರ್ಥಕವಾಗಿದ್ದುವು.

ಮಾಧವನ ಮನಸ್ಸನ್ನು ತನ್ನ ಕಡೆ ತಿರುಗಿಸಿಕೊಳ್ಳುವುದರಲ್ಲಿ ಸರೂ ಬಹುಮಟ್ಟಿಗೆ ಯಶಸ್ಸನ್ನು ಪಡೆದಿದ್ದಳು. ಆದರೆ 'ಪೂರ್ವಜನ್ಮದ ಸಂಸ್ಕಾರವೋ ಏನೋ ಎನ್ನುವಂತೆ ಅವನಲ್ಲಿ ಉಳಿದಿದ್ದ ಆ ಮದ್ಯಪಾನವನ್ನು ಬಿಡಿಸುವುದಾಗಲಿಲ್ಲ ಅವಳಿಂದ. ಮಾಧವನಿಗೂ ಅದರ ಪೈಶಾಚಿಕ ಹಿಡಿತದಿಂದ ಬಿಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಇಷ್ಟಾದರೂ ಅವರ ಆದರ್ಶಸಾಧನೆಯ ಜೀವನ ಮಾರ್ಗದಲ್ಲಿ ಅದೇನೂ ತೊಡಕಾಗಿ ಉಳಿಯಲಿಲ್ಲ.

ಸರೂ ವಿಜಯನ ಕಣ್ಣಿಗೆ ಅವರ ಕುರುಹುಗಳೊಂದೂ ಬೀಳದಂತೆ ಸಾಕಷ್ಟು ಎಚ್ಚರಿಕೆ ವಹಿಸಿದ್ದರೂ, ಇದು ಹೇಗೋ ವಿಜಯ ಕಂಡು ಹಿಡಿದಿದ್ದ, ತನ್ನ ತಂದೆ ಮಲಗುವಾಗ ಪ್ರತಿ ದಿನ ಏನನ್ನೋ ಕುಡಿಯುತ್ತಾರೆಂದು. ಕೊನೆಗೆ ಒಂದು ದಿನ ತಾಯಿಯನ್ನು ವಿಜಯ ಕೇಳಿಯೇಬಿಟ್ಟ: “ಅಮ್ಮಾ, ಅಣ್ಣಾ ಪ್ರತಿ ದಿನ ರಾತ್ರಿ ಏನು ಕುಡಿಯುತ್ತಾನೆ?” ಎಂದು. ಅವನ ನೇರವಾದ ಈ ಪ್ರಶ್ನೆಗೆ ಸರೂ ಏನೆಂದು ಉತ್ತರಿಸಬೇಕು? ಅವನ ಮನಸ್ಸಿನಲ್ಲಿ ಯಾವ ಬಗೆಯ ದುಷ್ಟ ಭಾವನೆಯೂ ಉಂಟಾಗದಂತೆ ಸರೂ ನಿಜವಾದ ಸಂಗತಿಯನ್ನೇ ಹೇಳಿದಳು.

"ಅವರಿಗೆ ಅದೊಂದು ವ್ಯಸನ ಅಂಟಿಕೊಂಡಿದೆ ವಿಜಯಾ. ಕುಡಿಯದೆ ಅವರಿಗೆ ಸಮಾಧಾನವಿರುವುದಿಲ್ಲ. ಏನೋ ಅವರದ್ದು ಆ ರೀತಿ ಆಗಿಹೋಯಿತು. ನೀನು ಸರಿಯಾಗಿರಬೇಕು ಕಂಡೆಯಾ?" ಸರೂವಿನ ಮಾತೂ ನೇರವಾಗಿತ್ತು. ಅವರ ಶುದ್ಧ ಪ್ರೇಮ ಆ ಮಾತಿನ ವಾಹಕವಾಗಿ ಅದನ್ನು ನೇರವಾಗಿ ಅಂತಃಕರಣಕ್ಕೇ ಒಯ್ದು ಮುಟ್ಟಿಸಿತು; ಅಲ್ಲಿ ಅದು ನೆಲೆಯಾಗಿ ನಿಲ್ಲುವುದಕ್ಕೆ ಅನುವು ಮಾಡಿ ಕೊಟ್ಟಿತು.

ರಜೆಯು ಮುಗಿದು ಪುನಃ ಶಾಲೆಯು ತೆರೆಯಿತು. ಸರೂ ಈಗ ಕೋಣ ನೂರಿನ ಬಿಡಾರಕ್ಕೆ ಹೋಗಲು ಸಾಧ್ಯವಿರಲಿಲ್ಲ. ಅವಳಿಗೀಗ ತನ್ನ ಪತಿಯ ರಕ್ಷಣೆ, ಅವನ ಪೋಷಣೆ, ಇವೇ ಮುಖ್ಯವಾಗಿದ್ದುವು. ಸರೂ ತನ್ನ ಅಭಿ ಪ್ರಾಯವನ್ನು ತಿಳಿಸಿದಾಗ ಊರಿನ ಪಟೇಲ "ನೀವೇನು ಯೋಚಿಸಬೇಡಿ, ಸುಮ್ಮನಿರಿ ಅಮ್ಮಾ, ನಾನು ಅದಕ್ಕೆಲ್ಲಾ ಏರ್ಪಾಡು ಮಾಡುವೆ" ಎಂದು ಅವನೇ ಜವಾಬ್ದಾರಿಯನ್ನು ಹೊತ್ತುಕೊಂಡ. ಅವನೇ ಕೋಣನೂರಿಗೆ ಹೋಗಿ ಅಲ್ಲಿಯ ಹೊಸ್ಟೆಲಿನಲ್ಲಿಯೇ ಹುಡುಗರ ಊಟ, ತಿಂಡಿಗಳಿಗೆ ಗೊತ್ತುಮಾಡಿದ. ಮಲಗಲು ತನ್ನೊಬ್ಬ ನೆಂಟರ ಮನೆ ಕೊಡಿಸಿದ. ಹೀಗೆ ಸರೂವಿನ ಮೇಲಿದ್ದ ಭಾರ ಕಡಿಮೆ ಮಾಡಿದ. ಇತ್ತ ಸರೂ-ಮಾಧವರ ಶಿಕ್ಷಣದ ಕಾರ್ಯವೂ ನಿರಾತಂಕವಾಗಿ ಸಾಗಿತ್ತು. ವಿಜಯನೂ ಕೋಣನೂರಿಗೇ ತೆರಳಿದ್ದರಿಂದ ಮಾಧವ ಸರೂ ಇಬ್ಬರೇ ಇಬ್ಬರಾ ದರು ಮನೆಯಲ್ಲಿ. ವಾರಕ್ಕೆ ಒಂದು ಸಲ ವಿಜಯ ಮನೆಗೆ ಬಂದು, ಭಾನು ವಾರದ ದಿನ ತಾಯಿಯ ಜೊತೆಯಲ್ಲಿಯೇ ಮಲಗಿ ತೃಪ್ತನಾಗಿ ಮಾರನೇ ದಿನವೇ ಸ್ಕೂಲಿಗೆ ತೆರಳುತ್ತಿದ್ದ.

ಸರೂ-ಮಾಧವರ ನಿರಾಡಂಬರ ಜೀವನ ಶಾಂತಿಗ್ರಾಮದಲ್ಲಿ ಯಾವ

ಏರಿಳಿತಗಳೂ ಇಲ್ಲದೆ, ಆಘಾತ-ಪ್ರತ್ಯಾಘಾತಗಳೂ ಇಲ್ಲದೆ ಸಮತಲದ ಮೇಲೆ ತುಂಬಿ ಹರಿಯುವ ಒಂದು ಮಹಾ ನದಿಯ ಪ್ರಶಾಂತ ಪ್ರವಾಹದಂತೆ ಗಂಭೀರ ವಾಗಿ ಸಾಗಿತ್ತು.

ಆಗೀಗ ಒಂದೆರಡು ಸಲ ಪೂರ್ವಾನುರಾಗದ ಗಾಳಿ ಬಂದು ಸ್ಪರ್ಶಿಸಿ ದಾಗ ಭಾವೋದ್ರೇಕದ ತೆರೆಗಳೆದ್ದುದೂ ಉಂಟು. ಸರೂವಿನ ಸಂಯಮ ಬಂದು ಆ ಹೊತ್ತಿಗೆ ರಕ್ಷೆ ಕೊಟ್ಟುದುದೂ ಉಂಟು.

ಸರೂ ಎಂದಿನಂತೆ ತನ್ನ ತಂದೆ ಗೋವಿಂದರಾಯರಿಗೆ ಪತ್ರಗಳನ್ನು ಬರೆ ಯುತ್ತಲೇ ಇದ್ದಳು. ಇತ್ತಣೆಸ ಸುದ್ದಿ ಎಲ್ಲವನ್ನೂ ತಿಳಿಸುತ್ತಿದ್ದಳು. ಆದರೆ ಗೋವಿಂದರಾಯರಿಂದ ಮಾತ್ರ ಉತ್ತರಗಳೇ ಬಂದಿರಲಿಲ್ಲ. ಸರೂವಿಗೆ ಅದೇಕೊ ತಂದೆಯ ಮುಖ ಮೇಲಿಂದ ಮೇಲೆ ಕಣ್ಣೆದುರಿಗೆ ಬಂದು ನಿಂತಂತಾಗುತ್ತಿತ್ತು. ಅವನನ್ನೊಮ್ಮೆ ನೋಡಬೇಕೆಂಬ ಬಯಕೆ ಅವಳ ಅಂತರಾಳದಲ್ಲಿ ಬೆಳೆಯ ಹತ್ತಿತ್ತು. ಆದರೆ ಅವನನ್ನು ನೋಡುವುದು ಸಾಧ್ಯವೇ?

ವಿಜಯ ಇಲ್ಲಿಯ ಶಿಕ್ಷಣವನ್ನೆಲ್ಲ ಮುಗಿಸಿ, ಬೆಂಗಳೂರಲ್ಲಿ ತನ್ನ ಅಜ್ಜಿಯ ಮನೆಯಲ್ಲಿಯೆ ಹೆಚ್ಚಿನ ಶಿಕ್ಷಣಕ್ಕಾಗಿ ನಿಂತಿದ್ದನು. ತಂದೆಗೆ ಕೊಟ್ಟ ವಚನ ದಂತೆ ಮುರಲಿ ಅವನ ಶಿಕ್ಷಣದ ವೆಚ್ಚವನ್ನೆಲ್ಲಾ ವಹಿಸಿಕೊಂಡಿದ್ದನು.

ಸರೂ-ಮಾಧವರು ಶಾಂತಿಗ್ರಾಮದ ಮಕ್ಕಳ ಜೀವನದಲ್ಲಿ ಬೆರೆತು, ಅವರ ಮನಸ್ಸನ್ನು ತಿದ್ದಿ, ಅವರನ್ನು ಸುಸಂಸ್ಕೃತರನ್ನಾಗಿ ಮಾಡುವ ಕಾರ್ಯದಲ್ಲಿ ತಮ್ಮ ಎಲ್ಲ ಹೊತ್ತನ್ನೂ ಬುದ್ಧಿಶಕ್ತಿಯನ್ನೂ ಹಾಕುತ್ತಿದ್ದರು.

ಲೂಸಿಯೊಡನೆ ತಾನು ಕಳೆದ ಜೀವನ ಸಂಪೂರ್ಣವಾಗಿ ಮರೆಯಾಗಿ ಹೋಗಿದ್ದರೂ ಮಾಧವನ ಮನಸ್ಸಿನಲ್ಲಿ ಮಾತ್ರ ಆಗೀಗ ಒಂದು ಪ್ರಶ್ನೆ ಅವಳ ಆ ಸ್ವೈರಜೀವನದ ಬಗ್ಗೆ ತಲೆಯೆತ್ತಿ ನಿಲ್ಲುತ್ತಿತ್ತು. ಸಮರ್ಪಕ ಉತ್ತರ ಸಿಗದ್ದ ಕ್ಕಾಗಿ ಮಿಡುಕುತ್ತಿತ್ತು.

ಒಂದು ದಿನ ಯಾವುದೊ ಕಾರಣದಿಂದಾಗಿ ಮಾಧವ ಸರೂವಿನ ಟ್ರಂಕನ್ನು ತೆಗೆದು ನೋಡುತ್ತಿರುವಾಗ ಫೋಟೊ ಒಂದು ಕಾಣಿಸಿತು. ನೋಡಿದ. ತಾನು, ಲೂಸಿ ಇಬ್ಬರೂ ತಡಸಲನ್ನು ನೋಡುತ್ತ ನಿಂತಿರುವ ಫೋಟೋ ಅದು. ನೆನ ಪಿಗೆ ಬಂತು ಮಾಧವನಿಗೆ, ತಾನೇ ಅದನ್ನು ಸರೂವಿಗೆ ಕಳಿಸಿಕೊಟ್ಟದ್ದು ಎಂದು. ಕೈಯಲ್ಲಿ ತೆಗೆದುಕೊಂಡು ನೋಡಿದ. ಉಸಿರ್ಗರೆದು ತಿರುಗಿ ಒಗೆದ. ಆಗ ಲೂಸಿಯ ವಿಳಾಸವಿದ್ದ ಕವ್ಹರೊಂದು ಕಣ್ಣಿಗೆ ಬಿತ್ತು. ತಾನೇ ಬರೆದ ಪತ

ಇರಬಹುದೆಂದು ಎತ್ತಿಕೊಂಡು, ತೆರೆದು ನೋಡಿದ. ತನ್ನದಾಗಿರದೆ ಧರ್ಮಾಧಿಕಾರಿಯೊಬ್ಬ ಬಿಶಪ್ ಲೂಸಿಗೆ ಬರೆದ ಪತ್ರ ಅದು. ಕುತೂಹಲದಿಂದ ಓದಿದ:

ದೇವಮಾನಿತ ಲೂಸೀ,

ನೀನು ಮಾಡುತ್ತಿರುವ ಕಾರ್ಯ-ಸತ್ಕಾರ್ಯ, ದೇವಕಾರ್ಯ. ನೀನು ಕೊಡುತ್ತಿರುವ ದೇಹ ಕಾಮುಕ್ಕಾಗಿ ಅಲ್ಲ; ಧರ್ಮಕ್ಕಾಗಿ. ಅದು ದೊಡ್ಡ ತ್ಯಾಗ. ನೀನು ಈ ಭಾವನೆಯಿಂದಲೇ ಈ ಕಾರ್ಯದಲ್ಲಿ ತೊಡಗಬೇಕು. ಮಾಧವನನ್ನು ಬಿಡುವಾಗಿನ ನಿನ್ನ ಮನಸ್ಸಿನ ವೇದನೆಯನ್ನು ನೀನು ಒಳ್ಳೆ ಮಾರ್ಮಿಕವಾಗಿ ಬರೆದು ತಿಳಿಸಿದ್ದೀ. ಆದರೆ ನಿನ್ನ ತೃಪ್ತಿಗಾಗಿ ನೀನು ಅವನನ್ನೇ ನಂಬಿ ಇದ್ದುಬಿಟ್ಟರ, ಮುಂದೆ ನಮ್ಮ ಧರ್ಮದ ಗತಿ ಏನು? ನೀನು ನಡೆಸುತ್ತಿದ್ದುದು ಕಾಮಜೀವನವಲ್ಲ ಲೂಸೀ, ಧರ್ಮಜೀವನ. ಅಜ್ಞಾನದ ಅಂಧಕಾರದಲ್ಲಿ ಬಿದ್ದಿರುವ ಅದೆಷ್ಟು ಜೀವಗಳನ್ನು ನೀನು ಕ್ರಿಶ್ಚಿಯನ್ ಧರ್ಮಕ್ಕೆ ತಂದು ಅವರಿಗೆ ಬೆಳಕು ತೋರಿಸಿ, ಸುಖಶಾಂತಿ ಪಡೆಯುವಂತೆ ಮಾಡಿದೆ! ನೀನೇ ಧನ್ಯೆ! ನೀನು ಮಾಡುತ್ತಿರುವುದು ಸೇವೆ, ದೇವರ ಸೇವೆ.

ನೀನು ಎತ್ತಿದ ಹಣದ ಪ್ರಶ್ನೆ ಮುಖ್ಯವಲ್ಲ ಲೂಸೀ. ಮಾಧವನ ಧರ್ಮಾಂತರದ ಬಗ್ಗೆ ಕಳಿಸಿದ ನಿನ್ನ ಧರ್ಮದತ್ತಿಯನ್ನು ಹಾಗೆ ತಿರುಗಿ ಬಿಡಬೇಡ. ಸ್ವೀಕರಿಸು. ಪರಲೋಕದ ತಂದೆ ಕೋಪಿಸಿಕೊಳ್ಳಬಹುದು. ಉಳಿದೆಲ್ಲರಿಕಿಂತಲೂ ನೀನು ಆ ತಂದೆಯ ಪ್ರೀತಿಪಾತ್ರಳಾಗಿರುವೆ. ನಿನ್ನ ಕಾರ್ಯ ಮುಂದೆ ನಡೆಸು. 'ತಂದೆ ಬೆಳಕನ್ನೀಯಲಿ.'

ನಿನ್ನ
—ಹೆರ್ರ್ಯಾಶ್

ಪತ್ರ ಓದಿ ಮುಗಿಸಿದೊಡನೆ ಮಾಧವನಿಗೆ ಏನೋ ಒಂದು ಹೊಳೆಯಿತು. ಅಡುಗೆ ಮನೆಯಲ್ಲಿದ್ದ ಸರೂವನ್ನು ಕರೆದ. ಸರೂ ಬಂದಳು. ಪತ್ರ ಅವಳಿಗೆ ತೋರಿಸಿದ. ಸರೂ ಓದಿಕೊಂಡು "ಏನು?" ಎಂದು ಕಣ್ಸನ್ನೆಯಿಂದ ಪ್ರಶ್ನಿಸಿದಳು

"ಧರ್ಮಪ್ರಸಾರದ ಈ ರೀತಿ ನೋಡಿದೆಯಾ?"

"ನೋಡಿದೆ. ಇದೂ ಒಂದು ಆಕರ್ಷಣೆ. ಒಂದು ಕಾಲಕ್ಕೆ ಒತ್ತಾಯದಿಂದ ಮಾಡಿದರು, ಮಾಂಸ ತಿನ್ನಿಸಿ. ಈಗ ಹೀಗೆ. ನಡೆದಿದೆ. ಧರ್ಮವೇ ಅನರ್ಥಕ್ಕೆ ಕಾರಣವಾದರೆ ಏನು ಮಾಡುವುದು? ಸಂಖ್ಯಾಬಲದಿಂದ ಧರ್ಮ

ಬೆಳೆಯುತ್ತೆ ಎಂದು ನಂಬಿದವರ ಪಾಡೇ ಹೀಗೆ. ಹಾಗೆ ಇದ್ದರೆ ನಮ್ಮ ಧರ್ಮ ಇಷ್ಟುತ್ತಿಗ ಹೇಳಹೆಸರಿಲ್ಲದೆ ಹೋಗಬೇಕಾಗಿತ್ತು. ಆದರೆ ಹೋಗಿಲ್ಲ. ಹೋಗಲಿ, ಇದೇನು ಈ ಹೊತ್ತು ಹೀಗೆಲ್ಲಾ ನನ್ನ ಟ್ರಂಕು ತೆಗೆದು ನೋಡುತಾ ಕುಳಿತಿದ್ದೀರಿ! ಹಿಂದಿನದನ್ನು ನೆನೆದು ಹಿತ್ತಲದಲ್ಲಿ ಅತ್ತರಂತೆ. ಏಳಿ, ಊಟದ ಹೊತ್ತಾಯಿತು." ಸರೂ ಒಳಕ್ಕೆ ಹೋದಳು. ಮಾಧವ ಟ್ರಂಕಿನಲ್ಲಿ ಎಲ್ಲವನ್ನೂ ಹಾಕಿ ಬಾಯಿ ಮುಚ್ಚಿದಂತೆ, ತನ್ನ ಮನಸ್ಸಿನ ಬಾಗಿಲನ್ನೂ ಮುಚ್ಚಿಕೊಂಡು ಊಟಕ್ಕೆ ಹೊರಟುಹೋದ.

ಊಟಕ್ಕೆ ಕುಳಿತಾಗ ಮಾಧವ ಕೇಳಿದ: "ಇದೇನು ಸರೂ, ಇಂದು ಹಬ್ಬದಡಿಗೆಯನ್ನೇ ಮಾಡಿದ್ದೀಯಲ್ಲಾ? ಏನು ಇಂದು?"

"ಎಲ್ಲಾ ಮರೆತುಹೋಯಿತೂ ಅಂತ ಕಾಣುತ್ತೆ! ಈ ಹೊತ್ತು ವಿಜಯನ ಹುಟ್ಟಿದ ದಿನ ಅಲ್ಲವೆ?"

"ಓಹೋ, ಹೀಗೇನೂ! ಎಷ್ಟು ವರ್ಷ ಆಯಿತು?"

"ಇಪ್ಪತ್ತೆರಡು ಪ್ರಾರಂಭವಾಯಿತು. ಅವನ ಅಜ್ಜಿ ಅವನ ಕಕ್ಕ ಅಲ್ಲಿ ಅವನಿಗೆ ಏನೂ ಕಡಿಮೆಯಾಗದಂತೆ ಇಟ್ಟಿದ್ದಾರೆ. ಆದರೂ ಇದು ನಮಗೆ ನೆನಪಿಗೆ. ಐ.ಸಿ.ಎಸ್. ಪರೀಕ್ಷೆಗೆ ನಿಮ್ಮ ಹುಡುಗ ಕೂಡಬಹುದೆಂದು ನೀವು ನೆನೆಸಿದ್ದಿರಾ?"

"ನಾನು ಯಾವುದನ್ನೂ ನೆನೆಸಿರಲಿಲ್ಲ. ಅಲ್ಲ ಸರೂ, ಎಲ್ಲಾ ನಾವು ನೆನೆಸಿದಂತೇ, ಬಯಸಿದಂತೇ ಆಗುತ್ತವೆಯೇನು? ಹಾಗಾದರೆ ಮನುಷ್ಯ ಮನುಷ್ಯನೇಕೆ? ಅವನೂ ದೇವರೇ. ಹೋಗಲಿ, ಆ ಐ.ಸಿ.ಎಸ್‌ದ ಪರಿಣಾಮವೂ ಇಷ್ಟರಲ್ಲೇ ಹೊರಬರಬಹುದು. ಎಂದು ಕಾಣುತ್ತೆ ಈಗ ಹೇಗೋ ಅಭ್ಯಾಸದ ಭಾರ ಇಲ್ಲದೆ ಇದ್ದಾನೆ. ಒಂದು ಪತ್ರ ಬರೆದು ಬಿಡು ಸರೂ, ಇಲ್ಲಿಗೆ ಬಂದು ಹೋಗಲು."

"ಯಾಕೆ, ನೀವೇ ಬರೆದುಬಿಡಿ."

"ನಾನು ಬರೆದರೆ ಬರುತ್ತಾನೋ ಇಲ್ಲವೊ? ನಿನ್ನ ಮಗನಲ್ಲವೇ ಅವನೂ."

"ಅದಕ್ಕೇಕಿಷ್ಟು ನ್ಯಾಯ. ನನ್ನ ಮಗನೇ ಆಗಲಿ, ನಾನೇ ಬರೆಯುತ್ತೇನೆ. ಆಯಿತೇ?"

"ಇದು ಸರಿಯಾದ ಮಾತು." ಊಟ ಮುಗಿಸಿ ಕೈತೊಳೆಯಲೆದ್ದ ಮಾಧವ.

ಮಾಧವ ಶಾಂತಿಗ್ರಾಮಕ್ಕೆ ಬಂದಾಗ ಅವನಿಗೆ ಗುರುತು ಸಿಕ್ಕುವಷ್ಟು ಅದು ಬದಲಾಗಿತ್ತು. ನಲ್ಲಿ ಬಂದು ನೀರಿನ ಸೌಕರ್ಯ ಹೆಚ್ಚಿತ್ತು. ಲೋಕಲ್ ಫಂಡ ಆಸ್ಪತ್ರೆಗೊಂದು ಹೊಸ ಕಟ್ಟಡವೇ ನಿರ್ಮಾಣವಾಗಿ ಊರಿನ ಆರೋಗ್ಯ ಚಿಕಿತ್ಸೆಗೆ ಅನುಕೂಲವಾಗಿತ್ತು. ಸರೂವಿನ ಹಳೆಯ ಪಾಠಶಾಲೆ ಈಗ ಸಿಮೆಂಟ್ ಕಟ್ಟಡವಾಗಿ ರೂಪ ಬದಲಾಯಿಸಿತ್ತು. ಅದರ ಸುಣ್ಣ ಬಣ್ಣ ಕೂಡ ಒಳ್ಳೇ ಅಭಿರುಚಿಯನ್ನು ವ್ಯಕ್ತಪಡಿಸುತ್ತಿತ್ತು. ಒಳಗಿನ 'ಫರ್ನಿಚರ್' ಕೂಡ ಹುಡುಗರಿಗೆ ಆಕರ್ಷಕವಾಗಿದ್ದುವು. ಹಳೆಯ ಶಾಲೆಯ ಎದುರಿಗಿದ್ದ ದಿನ್ನಿ ಕೊರಕಲು ಹೋಗಿ ಒಂದೇ ಸಮನಾಗಿ ಸಮತಲವಾಗಿ ಮಾರ್ಪಟ್ಟು ಹುಡುಗರ ಆಟಕ್ಕಾಗಿ ಅಣಿಗೊಂಡಿತ್ತು. ಮೂರು ನಾಲ್ಕು ಒಳ್ಳೆಯ ಅಂಗಡಿಗಳೂ ತಲೆಯೆತ್ತಿದ್ದುವು. ಊರ ರಸ್ತೆಗಳು ವಿಶಾಲವಾಗಿದ್ದುವು; ಅಸ್ತವ್ಯಸ್ತವಾಗಿದ್ದ ಮನೆಗಳು ಸಾಲಾಗಿ ರಸ್ತೆಯುಗುಂಟ ನಿಂತಿದ್ದುವು. ಶಿರೀಷ, ಸಂಪಿಗೆ ಮೊದಲಾದ ಗಿಡಗಳೂ ರಸ್ತೆಗೆ ನೆರಳು ಕೊಡುತ್ತ ಬೆಳೆದು ನಿಂತಿದ್ದುವು. ವಿದ್ಯುಚ್ಛಕ್ತಿಯ ಬೆಳಕು ಅಲ್ಲಿಯ ರಾತ್ರಿಯನ್ನೂ ಓಡಿಸಿತ್ತು. ಶಾಂತಿಗ್ರಾಮದ ಪ್ರತಿಯೊಂದು ಚರಾಚರ ವಸ್ತುವಿನ ಹಿಂದೆಯೂ ಸರೂವಿನ ಕೈ ಕೆಲಸ ಮಾಡಿದ್ದು ಕಾಣದೆ ಇರುತ್ತಿರಲಿಲ್ಲ. ಸರೂ ಆ ಊರಿನ ದೈವವಾಗಿದ್ದಳು; ಆ ಊರಿನ ತಾಯಿಯಾಗಿದ್ದಳು. ಸೃಷ್ಟಿನಿರ್ಮಾಣ ಕಾರ್ಯದಲ್ಲಿ ಬ್ರಹ್ಮ ತೋರಿಸಿದ ಕೌಶಲ್ಯವನ್ನೇ ಸರೂ ಆ ಶಾಂತಿಗ್ರಾಮವನ್ನು ಇಡೀಕಿಡಿಯಾಗಿ ತನ್ನ ಕಲ್ಪನೆಗೇ ರೂಪ ಕೊಟ್ಟಂತೆ ರೂಪಿಸುವಲ್ಲಿ ಬ್ರಹ್ಮಕೌಶಲ್ಯವನ್ನೇ ತೋರಿದ್ದಳು. ಅವಳು ತನ್ನಲ್ಲಿ ತಾನು ಕಲ್ಪಿಸಿಕೊಂಡಿದ್ದ ಒಂದು ಮಧುರಜೀವನದ ಪ್ರತೀಕವಾಗಿಯೇ ಶಾಂತಿಗ್ರಾಮ, ಶಾಂತಿಯ ಅಸ್ತಿವಾರದ ಮೇಲೇ ಭಾರ ಹಾಕಿ, ಭವ್ಯವಾಗಿ ರೂಪುಗೊಂಡು ಬೆಳೆದು ನಿಂತಿತ್ತು.

ವಿಜಯ ಬಸ್ ನಿಲ್ದಾಣದಿಂದ ಮನೆಗೆ ಬಂದು ಮುಟ್ಟುವ ಅವಕಾಶದಲ್ಲಿಯೇ ಅವನಿಗೆ ತನ್ನ ತಾಯಿ ಸಾಧಿಸಿದ ಈ ಅದ್ಭುತ ಸಿದ್ಧಿಯು ಪರಿಚಯವಾಯಿತು. ತನ್ನೊಳಗೆ ತಾನೇ ಇಂತಹ ತಾಯಿಯನ್ನು ಪಡೆದದ್ದಕ್ಕಾಗಿ ಧನ್ಯನೆಂದುಕೊಂಡ ವಿಜಯ.

ವಿಜಯ ಮನೆಗೆ ಬಂದಾಗ, ತಂದೆ-ತಾಯಿ ಇಬ್ಬರೇ ಇರದೆ ಇನ್ನೂ ಹೆಚ್ಚು ಜನ ಇರುವಂತೆ ಕಂಡಿತು. ವಿಜಯ ಹೊಸ್ತಿಲೊಳಗೆ ಕಾಲಿಡುವುದಕ್ಕೇ ಎದುರಾದವಳು ಒಬ್ಬ ಹೊಸ ಹುಡುಗಿ. ವಿಜಯ ಕಣ್ಣೆತ್ತಿ ನೋಡಿದ. ರೂಪ

ವತಿ ಎಂಬೆನಿಸಿತು ಅವನಿಗೆ. ಏನೂ ಮಾತನಾಡದೆ ಹಾಗೇ ಒಳಗೆ ಹೋದ. ತಾಯಿಯ ಜೊತೆ ಮಾತನಾಡುತ್ತ ಒಬ್ಬರು ತೀರ ಮುದುಕರು, ಒಬ್ಬರು ಸಾಧಾರಣ ತನ್ನ ತಂದೆಯ ವಯಸ್ಸಿನವರು ಹೀಗೆ ಇಬ್ಬರೂ ಅಪರಿಚಿತರು ಕುಳಿತಿದ್ದರು. ಮಾಧವ ಮನೆಯಲ್ಲಿರಲಿಲ್ಲ. ವಿಜಯ ನೇರವಾಗಿ ತಾಯಿಯ ಹತ್ತಿರ ಹೋಗಿ ಅವಳಿಗೆ ನಮಸ್ಕಾರ ಮಾಡಿದ. ಸರೂ ಎದ್ದು ಅವನನ್ನು "ಬಾ ವಿಜಯಾ, ಬಂದೆಯಾ." ಎಂದು ಹತ್ತಿರ ಕುಳ್ಳಿರಿಸಿಕೊಂಡು "ವಿಜಯಾ, ನಾನು ನಾಗಪ್ಪನವರು ಅಂತ ಆಗಾಗ್ಗೆ ಹೇಳುತ್ತಿದ್ದೆನಲ್ಲಾ—ನನ್ನ ತಂದೆಯ ಆಪ್ತ ಮಿತ್ರರು ಎಂದು—ಅವರೇ ಇವರು. ಇವರು ನಾಗಪ್ಪನವರ ಮಗ. ನಿನಗೆ ಇವರ ಮಗಳನ್ನು ಕೊಡಬೇಕೂ ಅಂತ ಬಂದಿದ್ದಾರೆ. ಏನು ಹೇಳುವೆ?" ಸರೂ ನೇರವಾಗಿ ಮುಚ್ಚುಮರೆಯಿಲ್ಲದೆ ಮಗನನ್ನು ಕೇಳಿಯೇಬಿಟ್ಟಳು. ವಿಜಯನ ಮುಖ ನಾಚಿಕೆಯಿಂದ ಕೆಂಪಾಯಿತು. 'ನಾನು ಬೆಂಗಳೂರಿನಲ್ಲಿ ನೋಡಿದ ಅದೇ ಹುಡಿಗೆ ಇವಳು!' ಎಂದುಕೊಂಡು ತಾನು ಮನಸ್ಸಿನಲ್ಲಿ ಒಪ್ಪಿದ ಕನ್ಯೆಯೇ ತನ್ನನ್ನು ಮದುವೆ ಮಾಡಿಕೊಳ್ಳಲು ಬರುವಂತೆ ಮಾಡಿದ ದೈವಾನುಕೂಲಕ್ಕೆ ನಮೋ ಎಂದು, ತಾಯಿಗೆ ತನ್ನ ಸಮ್ಮತಿಯನ್ನು ಸೂಚಿಸಿದ.

ಸಮ್ಮತಿಯನ್ನು ಸೂಚಿಸುವುದೊಂದೇ ತಡ, ಮದುವೆಯ ಮುಂದಿನ ಕಾರ್ಯವೆಲ್ಲ ನಿಶ್ಚಿತವಾಯಿತು. ಒಂದೆರಡು ದಿನ ನಿಂತು ನಿಶ್ಚಯದ ಕಾರ್ಯ ಮುಗಿಸಿಕೊಂಡೇ ಹೋಗಲು ನಾಗಪ್ಪನವರಿಗೆ ತಿಳಿಸಿದಳು ಸರೂ. ಅವರೂ ಒಪ್ಪಿಕೊಂಡರು. ಮುರಲಿ, ಜಾನಕೀಬಾಯರಿಗೆ ಕೂಡಲೆ ಹೊರಟು ಬರಲು ತಿಳಿಸಿದರು. ಅವರೂ ಬಂದರು. ಎಲ್ಲಾ ಮಾತುಕತೆಯಾಗಿ ಮದುವೆ ಬೆಂಗಳೂರಿನಲ್ಲಿಯೇ ಎಂದು ಗೊತ್ತುಮಾಡಿಕೊಂಡು ನಾಗಪ್ಪನವರು ಮಗ, ಮೊಮ್ಮಗಳ ಸಮೇತ ಊರಿಗೆ ಹೊರಟುಹೋದರು.

ಜಾನಕೀಬಾಯಿಯವರಿಗೆ ಎಲ್ಲಾ ತಿಳಿಸಿ ಮುರಲಿಗೇ ನಾಂದಿ ಇಟ್ಟುಕೊಳ್ಳುವಂತೆ ಹೇಳಿ ಒಪ್ಪಿಸಿದಳು ಸರೂ. ತಮ್ಮ ಈ ಧರ್ಮಸೂಕ್ಷ್ಮವನ್ನು ನಾಗಪ್ಪನವರೆದುರಿಗೂ ಸರೂ ತಿಳಿಸದೆ ಇರಲಿಲ್ಲ. ಮದುವೆಗೆ ತಾನು ಒಪ್ಪುವ ಮೊದಲು ಅವರ ಖಂಡಿತವಾದ ಅಭಿಪ್ರಾಯನ್ನು ಈ ಧರ್ಮಾಂತರದ ಬಗ್ಗೆ ತಿಳಿದುಕೊಂಡೇ ಮದುವೆಯ ಮಾತು ಮುಂದುವರಿಯಲು ಅವಕಾಶ ಕೊಟ್ಟಿದ್ದಳು. ನಾಗಪ್ಪನವರೂ ಎಲ್ಲಾ ವಿವೇಚಿಸಿ, ಚಿಕ್ಕಪ್ಪನಾದ ಮುರಲಿಯನ್ನೇ ಧಾರೆಯೆರಿಸಿಕೊಳ್ಳಲು ಸೂಚಿಸಿದ್ದರು. ಈ ಎಲ್ಲ ಪ್ರಸಂಗಗಳಲ್ಲಿಯೂ ಸರೂ

ವಿನ ಅಂತರಂಗದಲ್ಲಿ ಏಳುತ್ತಿದ್ದ ಹೊಯ್ದಾಟವನ್ನೆಲ್ಲಾ ಅದುಮಿ ಹಿಡಿದ ಅಪಳ ಆ ಸಂಯಮಶಕ್ತಿ ಅವಳಿಗೆ ಲಭಿಸಿದ್ದು, ಜೀವನದ ಕಷ್ಟವನ್ನೆಲ್ಲಾ ಸುಖವಾಗಿ ಮಾರ್ಪಡಿಸಿಕೊಳ್ಳಬೇಕೆಂಬ ಹಂಬಲದಿಂದ, ತಾಳ್ಮೆಯಿಂದ ಅವಳು ಸಾಧಿಸಿದ ಜೀವನವ್ರತದ ಫಲವಾಗಿ.

ನಾಗಪ್ಪ ತಿರುಗಿ ಊರಿಗೆ ಹೋಗುವ ಮೊದಲು ಸರೂವಿನಿಂದ ಗೋವಿಂದ ರಾಯರ ವಿಳಾಸ ತಿಳಿದುಕೊಂಡು ತಾವೇ ಒಂದು ಪತ್ರ ಬರೆದು ಹಾಕಿಹೋಗಿದ್ದರು. ಸರೂ ಹೇಳಿದ್ದಳು: "ಅವರೇನು ತಿರುಗಿ ಊರಿಗೆ ಬರಲಿಕ್ಕಿಲ್ಲ. ಉತ್ತರವನ್ನಾದರೂ ಬರೆಯುತ್ತಾರೊ ಇಲ್ಲವೊ" ಎಂದು. "ನನ್ನ ಪತ್ರಕ್ಕೆ ಉತ್ತರ ಎಂದರೆ ಅವನೇ ಬರುತ್ತಾನೆ ನೋಡುತ್ತಿರು." ನಾಗಪ್ಪ ಧೈರ್ಯದಿಂದ ಉತ್ತರ ಕೊಟ್ಟದ್ದಕ್ಕೆ ಸರೂ "ಹಾಗೆ ಆದರೆ ನಿಮ್ಮ ಬಾಯಲ್ಲಿ ಸಕ್ಕರೆ ಹಾಕುತ್ತೇನೆ." ಎಂದಿದ್ದಳು.

ಧರ್ಮಾಂತರ ಹೊಂದಿದ ಮಾಧವನ ಮನಸ್ಸಿನಲ್ಲಿಯ ನೋವನ್ನರಿತ ಸರೂ, ಆ ವಿಷಯ ಬಂದಾಗಲೆಲ್ಲ ಬಹಳ ಚಾಣಾಕ್ಷತೆಯಿಂದ ನಡೆದುಕೊಳ್ಳುತ್ತಿದ್ದಳು. ಮಗನ ಮದುವೆಗೆ ತಾವು ಹೋಗುವ ವಿಚಾರ ಬಂದಾಗ, ಮಾಧವ ಯಾವ ಶಾಸ್ತ್ರಾಚಾರಗಳಲ್ಲಿಯೂ ಬಹಿಷ್ಕೃತನೆಂಬದನ್ನರಿತ ಸರೂ, ಮದುವೆಗೆ ತಾವು ಹೋಗದೇ ಇರುವುದೇ ಒಳ್ಳೆಯದೆಂದು ಸೂಚಿಸಿದಳು. ಮಾಧವನಿಗೂ ಇದು ಒಪ್ಪಿಗೆಯಾಯಿತು.

ಯಾರು ಬಂದು ಎಷ್ಟೇ ಹೇಳಿದರೂ ಸರೂ-ಮಾಧವರು ವಿಚಲಿತರಾಗಲಿಲ್ಲ, ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ. ವಿಜಯನೇ ಬಂದು, ಕಣ್ಣೀರು ತೆಗೆದು ತಾಯಿಯನ್ನು ಬೇಡಿಕೊಂಡಾಗ ಮಾತ್ರ, ಸರೂವಿಗೆ ಒಂದು ಕ್ಷಣ ಹೋಗಿಬಿಡಲೇ ಎನ್ನಿಸಿತ್ತು. ಮರುಕ್ಷಣವೇ ಆ ಭಾವೋದ್ರೇಕವನ್ನು ಸಂಯಮಿಸಿ "ಮಗೂ, ಸುಮ್ಮನೆ ಹಟ ಹಿಡಿಯಬೇಡ. ನೀವೇ ಹೇಗೂ ಇಲ್ಲಿಗೇ ಬರುತ್ತೀರಿ. ಆಗ ನನ್ನ ಕಣ್ಣಿನ ಪ್ರೀತಿ ತೀರಿಸಿಕೊಳ್ಳುತ್ತೇನೆ. ಈಗ ಹೋಗಿ ಬಾ." ಎಂದು ಮೃದುವಾಗಿ ಹೇಳಿ ಮದುವೆಗೆ ತಮ್ಮನ್ನು ಬಿಟ್ಟು ಹೋಗಲು ವಿಜಯನನ್ನು ಒಪ್ಪಿಸಿದ್ದಳು.

ಹೆಚ್ಚು ಆಡಂಬರವಿಲ್ಲದೆ ಶುಭಮುಹೂರ್ತದಲ್ಲಿ ವಿಜಯ ಹೇಮಾ ಇವರ ಮದುವೆ ನಡೆಯಿತು. ಮುರಲಿಯೇ ಮುಂದಾಗಿ ನಿಂತು ಎಲ್ಲವನ್ನೂ ನೋಡಿಕೊಂಡ. ಮದುವೆ ಎಲ್ಲಾ ಸರಾಗವಾಗಿ ಮುಗಿಯಿತು. ಏನೂ ವಿಶೇಷ ನಡೆಯ

ಲಿಲ್ಲ ಎಂದರೂ, ಒಂದು ವಿಶೇಷ ನಡೆಯಿತು ಮದುವೆಯಲ್ಲಿ. ಎಲ್ಲಾ ಸಿದ್ಧ ವಾಗಿ, ಇನ್ನೇನು ಅಕ್ಷತಾ ಬೀಳುವ ಹೊತ್ತಿಗೆ ಯಾರೋ ಒಬ್ಬರು ಮುದುಕರು ತೀರ ಹಣ್ಣಾದವರು ಹೊರಗಿನಿಂದ "ನಾಗಪ್ಪನವರು ಇದ್ದಾರೆಯೇ?" ಎಂದು ಕೂಗಿದರು. ಜನರ ಗದ್ದಲದಲ್ಲಿದ್ದ ನಾಗಪ್ಪನವರ ವರೆಗೂ ಹೇಗೋ ಈ ಕರೆ ಹೋಗಿ ಮುಟ್ಟಿತು. ಯಾರೆಂದು ಈ ಮುದುಕ ಹೊರಗೆ ಬಂದು ನೋಡಿದ. ಒಂದೇಟಿಗೆ ಗುರುತು ಸಿಕ್ಕಲಿಲ್ಲ. "ಯಾರು ತಾವು?" ಎನ್ನುತ್ತ ಹತ್ತಿರ ಹೋಗಿ ನೋಡಲಾಗಿ ಗುರುತು ಸಿಕ್ಕಿತು. ಮೈಮೇಲಿನ ಎಚ್ಚರವಿಲ್ಲದೇ ಒಮ್ಮೆಲೆ ತೆಕ್ಕೆ ಬಿದ್ದು "ಗೋವಿಂದೂ... !"ಎಂದು ಕೂಗಿದ. ಒಳಗೆ ಅದೇ ಹೊತ್ತಿಗೆ 'ಸುಮೂ ಹೂರ್ತೆ ಸಾವಧಾನಾ" ಮಂತ್ರಘೋಷ ನಡೆದಿತ್ತು. ಹೆಚ್ಚಿನ ಮಾತಾಡದೆ ಹಾಗೇ ರಟ್ಟೆ ಹಿಡಿದು ಒಳಗೆ ಜಗ್ಗಿಕೊಂಡೇ ಹೋಗಿ, ಜನರನ್ನೆಲ್ಲಾ ಸರಿಸಿ, ವಧೂವರರ ಮುಂದೆ ಈ ಮುದಕನನ್ನು ಆ ಮುದುಕ ಒಯ್ದು ನಿಲ್ಲಿಸಿದ. "ಮಗೂ, ವಿಜಯಾ ನಿನ್ನ ಅಜ್ಜ ಬಂದಿದ್ದಾರೆ ನೋಡು!" ಎಂದು ಅಕ್ಷತಾ ಹಾಕಿಸಿದ ಅವರ ತಲೆಯ ಮೇಲೆ. ವಿಜಯ-ಹೇಮಾ ಇಬ್ಬರೂ ಮುದುಕನನ್ನು ಕಣ್ಣೆತ್ತಿ ನೋಡಿದರು. ಕಣ್ಣಿಂದಲೇ ನಮಸ್ಕಾರ ಸೂಚಿಸಿದರು. ನೆರೆದವರಿ ಗೆಲ್ಲಾ ಒಂದು ಕುತೂಹಲ ಈ ಯೋಗಾಯೋಗಕ್ಕಾಗಿ. "ಯಾರು ಈ ಮುದುಕ?" ಎಂದು ಕೇಳಿದರೊಬ್ಬರು. "ಇಷ್ಟು ದಿನ ಎಲ್ಲಿದ್ದರು?" ಎಂದರಿ ನ್ನೊಬ್ಬರು. ಅಲ್ಲಿದಲ್ಲಿಯೇ ಉತ್ತರ ಕೊಡುವವರೂ ಕೊಟ್ಟರು. ಕೆಲಹೊತ್ತು ಮಾತುಗಳು ಅಲ್ಲಿಯ ಗಾಳಿಯ ಮೇಲೆ ಅಲೆದಾಡಿ ಮುಂದೆ ಮರೆಯಾದುವು. ನೆರೆದ ಜನವೂ ಆದರಾತಿಥ್ಯ ಸ್ವೀಕರಿಸಿ ಹೊರಟುಹೋಯಿತು.

ಸೂರಪ್ಪ—ನಾಗಪ್ಪನವರ ಮಗ—ಅಂತಹ ಒಳ್ಳೆಯ ಸ್ಥಿತಿಯಲ್ಲಿರಲಿಲ್ಲ ವಾದ್ದರಿಂದ ಮದುವೆಯ ಜೊತೆಯಲ್ಲಿಯೇ ನಿಷೇಕದ ಶಾಸ್ತ್ರವನ್ನೂ ಆಗಲೇ ಮಾಡಿ ಮುಗಿಸಿದರು. ಮರದಂಡಲ ತೀರಿಸಿಕೊಂಡು ಮಗಳು-ಅಳಿಯ ಇಬ್ಬರೂ ಕೂಡಿಯೇ ಊರಿಗೆ ಹೊರಟರು.

ನಾಗಪ್ಪ ಎಷ್ಟೇ ಇಟ್ಟುಕೊಳ್ಳಲು ಪ್ರಯತ್ನಿಸಿದರೂ ಗೋವಿಂದರಾಯರು ನವದಂಪತಿಗಳೊಟ್ಟಿಗೇ ಶಾಂತಿಗ್ರಾಮಕ್ಕೆ ಹೊರಟರು. ಸರೂವನ್ನು ಕಾಣಲು ಅವರ ಜೀವ ಅಷ್ಟು ತವಕಪಡುತ್ತಿತ್ತು.

ಮನೆದುಂಬಿಸಲು ಸೊಸೆ ಬರುತ್ತಾಳೆಂದು ಸರೂ ಮನೆಯ ಬಾಗಿಲಗೆ ಬಂದರೆ, ಮನವನ್ನೂ ತುಂಬಿಸುವ ತನ್ನ ತಂದೆ ಗೋವಿಂದರಾಯರ ಮುಪ್ಪಿನ

ಶರೀರ ಅವರೊಡನಿದ್ದುದನ್ನು ನೋಡಿ, ಸರೂ ತನ್ನ ಕಣ್ಣುಗಳನ್ನೇ ತಾನು ನಂಬಲಾರದವಳಾದಳು. ಸೊಸೆಗೆ ಮಗನಿಗೆ ಕದಲಾರತಿ ಮಾಡಲು ಬಂದ ಮುತ್ತೈದೆಯರನ್ನೂ ಸರಿಸಿ ಮುಂದೆ ಹೋಗಿ ಗೋವಿಂದರಾಯರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಗೋವಿಂದರಾಯರು ಅವಳನ್ನು ಹಿಡಿದೆತ್ತಿದರು. ಇಬ್ಬರ ಕಣ್ಣಲ್ಲಿಯೂ ನೀರೂರಿತ್ತು. ಮಾತಿಗಿಂತಲೂ ಮೌನವೇ ಈಗ ಅವರ ಅಂತರ್ಗತಭಾವನೆಗಳನ್ನು ಒಬ್ಬರಿಗೊಬ್ಬರಿಗೆ ಒಪ್ಪು ಮುಟ್ಟಿಸಿತು.

ಗೋವಿಂದರಾಯರನ್ನು ಒಳಕ್ಕೆ ಮೊದಲು ಕಳುಹಿಸಿಕೊಟ್ಟು, ಮಗ ಸೊಸೆಯರನ್ನು ಬಾಗಿಲಲ್ಲಿಯ ಮುತ್ತೈದೆಯರಿಂದ ಕದಲಾರತಿ ಮಾಡಿಸಿ, ತೆಂಗಿನಕಾಯಿ ನಿವಾಳಿಸಿ ತೆಗೆದು ಒಳಕ್ಕೆ ಕರೆದುಕೊಂಡಳು ಸರೂ.

ಸೊಸೆಗೆ ತನ್ನ ಎಲ್ಲಾ ಆಭರಣಗಳನ್ನಿಟ್ಟು ಮನೆತುಂಬಿಸಿಕೊಂಡಳು ಸರೂ. ಊರಿನ ಮುತ್ತೈದೆಯರನ್ನೆಲ್ಲಾ ಕರೆಸಿದ್ದಳು ಇಬ್ಬರನ್ನೂ ಹಸೆಯ ಮೇಲೆ ಕೂಡಿಸಿ ಆರತಿ ಮಾಡಿಸಿದಳು. ಉರಟಣೆಮಾಡಿಸಿದಳು. ಮನೆತುಂಬ ಎಲ್ಲದಕ್ಕೂ ತಾನೇ ಓಡಾಡಿದಳು. ಸಣ್ಣ ಪ್ರಮಾಣದಲ್ಲಿ ಒಂದು ಮದುವೆ ಮಾಡಿದಷ್ಟೇ ವೈಭವದಿಂದ ಮಾಡಿ ತನ್ನ ಕಣ್ಣ ಪ್ರೀತಿ ತೀರಿಸಿಕೊಂಡಳು ಸರೂ. ಎಷ್ಟು ದುಡಿದರೂ ಅಂದು ಅವಳಿಗೆ ಸಾಕೆನಿಸಲಿಲ್ಲ. ಅದೇ ಪ್ರಾಯಕ್ಕೆ ಬಂದಿದ್ದ ವಿಜಯ, ತಂದೆಯ ಎತ್ತರವನ್ನೂ ತಾಯಿಯ ರೂಪವನ್ನೂ ಪಡೆದಿದ್ದ. ಸರೂವಿನ ಮನೋವೈಶಾಲ್ಯ, ಮಾಧವನ ಬುದ್ಧಿಶಕ್ತಿ ಎರಡೂ ರಕ್ತಗತವಾಗಿ ಬಂದು ಅವನಲ್ಲಿ ಕೂಡಿದ್ದವು. ರತಿ-ಮನ್ಮಥರಂತೆ ಹಸೆಯ ಮೇಲೆ ಕುಳಿತ ನವದಂಪತಿಗಳನ್ನು ನೋಡಿ ಸರೂ ಹಿರಿಹಿರಿ ಹಿಗ್ಗಿದಳು. ಸರಸಮ್ಮನ ಸೊಸೆ ನೋಡಬೇಕೆಂದು ಊರಿನವರೆಲ್ಲಾ ಅವಳ ಮನೆಗೇ ಬಂದು ಮುತ್ತಿದರು. ಅವರೆಲ್ಲರನ್ನೂ ಕರೆದು, ಒಳಗೆ ಕೂಡಿಸಿ ಅವರಿಗೂ ಕಾಯಿ ವೀಳ್ಯ ಕೊಟ್ಟು ಕಳಿಸಿದಳು. ಮಾಧವ ಈ ಗದ್ದಲವನ್ನೆಲ್ಲಾ ನೋಡಿ ಯಾವುದೊಂದು ಮಾತೂ ಆಡದೇ ತನ್ನೊಳಗೇ ತಾನು ಆನಂದಪಡುತ್ತಿದ್ದ. ಸರೂ ಕರೆದಾ ಅಷ್ಟು ಹೋಗುವುದು, ಹೇಳಿದಷ್ಟು ಮಾಡುವುದು; ತನ್ನ ರೂಮಿನೊಳಕ್ಕೆ ಬಂದು ಕುಳಿತುಕೊಳ್ಳುವುದು. ಬೇಕಾದಾಗ ಗೋವಿಂದರಾಯರೊಡನೆ ಅಷ್ಟು ಯಾವಪಾದರೊಂದು ಅಧ್ಯಾತ್ಮವಿಷಯದ ಮೇಲೆ ಮಾತನಾಡುತ್ತ ಹೊತ್ತು ಕಳೆಯುವುದು. ಇದು ಈ ಎರಡು ಮೂರುದಿನಗಳ ಸಾಧಾರಣ

ಕಾರ್ಯ ಕ್ರಮವೇ ಆಗಿತ್ತು ಮಾಧವನದು.

ಸರೂ ಒಂದು ದಿನ ಬೀಗರನ್ನು ಪಂಚಪಕ್ವಾನ್ನ ಮಾಡಿಸಿ ಪರಾಮರ್ಶಿಸಿದಳು. ಒಂದು ದಿನ ಊರಿಗೇ ಔತಣ ಮಾಡಿಸಿ ಎಲ್ಲರನ್ನೂ ತೃಪ್ತಪಡಿಸಿದಳು.

ಮೂರನೆಯ ದಿನ ಸೂರಪ್ಪ ತನ್ನ ಜನವನ್ನೆಲ್ಲಾ ಕರೆದುಕೊಂಡು ತಿರುಗಿ ಊರಿಗೆ ಹೊರಟಾಗ ಹೇಮಾ ತನ್ನ ಕರುಳು ಜಗ್ಗಿದಂತಾಗಿ ವಿಚಿತ್ರ ವೇದನೆಯಿಂದ ಸಂಕಟಪಟ್ಟಳು. ಕಣ್ಣಲ್ಲಿ ನೀರು ಸುರಿಸಿದಳು. ಸರೂ ಅವಳನ್ನು ನೋಡಿ ತಾನು ಅತ್ತೆಯ ಮನೆಗೆ ಮೊದಲ ಬಾರಿ ಹೋದಾಗಿನ ದೃಶ್ಯ ನೆನವಾಗಿ ಕಂಬನಿದುಂಬಿದಳು. ಆದರೂ "ನೀನು ಯಾವ ರೀತಿಯಲ್ಲಿಯೂ ಹೆದರಿಕೊಳ್ಳಬೇಡ ಹೇಮಾ. ನೀನು ಈ ಮನೆಯ ಗೃಹದೇವತೆ, ನೊಸೆಯಲ್ಲ. ಅತ್ತೆಯೆಂದರೆ ಅವಳೂ ನಿನ್ನ ಹಾಗೆಯೇ ಒಬ್ಬ ಮಾನವ ಜೀವಿ ಎಂದು ತಿಳಿ. ನನಗಾಗಿ ನೀನು ಹೆದರಬೇಕಿಲ್ಲ. ಊರಿಗೆ ಹೋಗುವವರನ್ನು ಅಳುತ್ತಾ ಬೀಳ್ಕೊಡುತ್ತಾರೆಯೇ? ಹುಚ್ಚು ಹುಡುಗಿ ನೀನು! ನಗನಗುತ್ತಾ ನಿನ್ನ ತಂದೆಯವರನ್ನು ಕಳಿಸಿಕೊಡು." ಎಂದು ಹೇಮಾನ ಕಣ್ಣೀರು ಒರೆಸಿ ಮೈದಡವಿ ಹೇಳಿದಳು.

ತಂದೆ ಸೂರಪ್ಪ, ಸರೂವಿನ ಮಾತು ಕೇಳಿ ಪ್ರಸನ್ನರಾದರು."ನಿಮ್ಮಂತಹ ಅತ್ತೆಯವರಿದ್ದರೆ ಮನೆ ರಣರಂಗವಾಗದೆ ನಂದನವಾದೀತು. ನಿಮ್ಮ ಧರ್ಮವೇ ಮಳೆ ಬೆಳೆ ತಂದೀತು. ಆಗಲಿ ನಾವು ಇನ್ನು ಹೋಗಿ ಬರುವೆವಮ್ಮಾ" ಎಂದು ಹೇಳಿ ಹೇಮಾನ ತಲೆ ನೇವರಿಸುತ್ತಾ ನುಡಿದರು. "ಇಂತಹ ಅತ್ತೆ ನಿನಗೆ ದೊರಕಿರುವುದು ನಿನ್ನ ಸುಕೃತ, ಹೇಮಾ. ಅವರು ಅತ್ತೆಯಲ್ಲ, ನಿನ್ನ ತಾಯಿ ತಿಳಿಯಿತೇ? ಅವರ ಮನನೋಯದಂತೆ ನಡೆದುಕೋ. ನಾನು ಬರುವೆ." ಎಂದು ಹೇಳಿ ಸೂರಪ್ಪ ಹೊರಟು ಹೋದರು. ವಿಜಯ ಹೇಮಾ, ಅವರನ್ನು ಬಸ್‌ನಲ್ಲಿ ಕೂಡಿಸಿ, ಅವರು ಹೋದ ಮೇಲೆ ಮನೆಗೆ ಬಂದರು. ತಂದೆಯನ್ನು ಅಗಲಿದ ದುಃಖದಿಂದ ಹೇಮಾ ಮಂಕಾದಳು.

ತನ್ನ ತಂದೆ, ಮತ್ತು ಮಾಧವ ಮನೆಯಲ್ಲಿಲ್ಲದ್ದನ್ನು ನೋಡಿ ಸರೂ ಹೇಳಿದಳು: "ಎಂದು ವಿಜಯಾ ನೀನು 'ಹನಿಮೂನ್' ಹೋಗುವುದು? ಹೇಗಿದ್ದರೂ ನಿನ್ನ ರಿಸಲ್ಟ್ ಬರುವುದು ಇನ್ನೂ ತಿಂಗಳಿದೆ. ಅಲ್ಲಿಯ ವರೆಗೆ ಮನೆಯಲ್ಲಿ ಕೂತು ಮಾಡುವುದೇನು? ಹೇಮಾ ಮಂಕಾಗಿದ್ದಾಳೆ. ಅವಳನು ಎಲ್ಲಿಗಾದರೂ ಕರೆದುಕೊಂಡು ಹೋಗು. ಅವಳ ಮನಸ್ಸು ಬದಲಾಯಿಸಲಿ."೩

"ಓಹೋ, ಇದೇನಮ್ಮಾ ನೀನು ಯುರೋಪಿಯನ್ನರ ಹಾಗೆ ಹನಿ-ಮೂನ್ ಎಲ್ಲಾ ಶುರುಮಾಡಿದ್ದೀಯಲ್ಲಾ ?" ವಿಜಯ ನಗುತ್ತಾ ಕೇಳಿದ.

"ಅದು ಯಾವ ಸಿಸ್ಟಮ್ ಆದರೂ ಆಗಲೀ ನೀನು ಹೋಗಿ ಬಾ ಹಾಗೆಲ್ಲಾ ನನಗೆ ಅತ್ತೆಯ ಮನೆಗೆ ಬಂದ ಹೊಸದರಲ್ಲಿ ಆಸೆ ಇತ್ತು ವಿಜಯ. ಅವರೊಡನೆ ವಾಕಿಂಗ್, ಸಿನೇಮಾ, ಪಿಕ್‌ನಿಕ್ ಎಲ್ಲಾ ಹೋಗಬೇಕೆಂಬ ಆಶೆ ಪ್ರಬಲವಾಗಿತ್ತು. ಆದರೆ ಅದೊಂದೂ ಸಾಧ್ಯವಾಗಲಿಲ್ಲ. ನನ್ನ ಮನದ ಬಯಕೆಗಳನ್ನೆಲ್ಲಾ ಹೃದಯದೊಳಗೆ ಹುದುಗಿಟ್ಟುಕೊಂಡು, ಗಾಣದೆತ್ತಿನಂತೆ ಅತ್ತೆಯ ಮನೆಯಲ್ಲಿ ದುಡಿಯುವುದು ಎಂತಹ ಕಷ್ಟಕರವಾದ ವಿಷಯ ಎಂಬು ದನ್ನು ನಾನು ಅನುಭವಿಸಿ ತಿಳಿದಿದ್ದೇನೆ ವಿಜಯ. ಮದುವೆಯಾದ ಗಂಡ ಹೆಂಡಿರೆಂದರೆ ಅವರು ಯಾವಾಗಲೂ ಉಲ್ಲಾಸವಾಗಿ ನಗುನಗುತ್ತಾ ಇರ ಬೇಕು. ತಿಳಿಯಿತೇ ? ಪಾಪ ಆ ಹುಡುಗಿಗೆ ಎಷ್ಟು ಆಸೆ ಇದೆಯೋ ಏನೋ ? ನೀನು ಅವಳನ್ನು ಬೇಸರ ಪಡುವಂತೆ ಮಾಡಬಾರದು, ಅವಳೂ ನಿನಗೆ ವ್ಯಾಕುಲವಾಗುವಂತೆ ಮಾಡಬಾರದು. ಹಾಗೆ ಒಬ್ಬರಿಗೊಬ್ಬರು ಅನುಸರಿಸಿ ಕೊಂಡು ಹೋದರೇನೇ ದಾಂಪತ್ಯಜೀವನ ಸುಖದಾಯಕವಾಗಿರುತ್ತೆ."

"ನನಗೊಂದೂ ಗೊತ್ತಿಲ್ಲಾ ಅಮ್ಮಾ, ನೀನು ಹೇಳೊ ಹಾಗೆ ಕೇಳೋ ದೊಂದೇ ನನಗೆ ಗೊತ್ತಿರುವುದು" ವಿಜಯ ಮಗುವಿನಂತೆ ಉತ್ತರಿಸಿದ.

ಸರೂ ಅರ್ಥಗರ್ಭಿತವಾಗಿ ನಕ್ಕಳು ಮಾತ್ರ. ಉತ್ತರವನ್ನೇನೂ ಕೊಡ ಲಿಲ್ಲ. ಎದ್ದು ಹೋಗಿ ಒಳಗಿನಿಂದ ಒಂದಿಷ್ಟು ಹಣ ತಂದು ಕೈಯಲ್ಲಿಟ್ಟಳು.

ತಾಯಿಯು ಕೊಟ್ಟ ಹಣ ತೆಗೆದುಕೊಂಡು ವಿಜಯ ಪತ್ನಿಯೊಡನೆ 'ಮಧುಚಂದ್ರಕ್ಕೆ' ಹೊರಟ. ನೀಲಗಿರಿ, ನಂದಿ, ಶಿವನ ಸಮುದ್ರ, ಶ್ರೀರಂಗ ಪಟ್ಟಣ, ಕನ್ನಂಬಾಡಿ, ಜೋಗ್, ಹಂಪೆ, ಹಳೆಯಬೀಡು, ಬೇಲೂರು, ಉಡುಪಿ, ಎಲ್ಲಾ ಊರುಗಳನ್ನೂ ನೋಡಿಕೊಂಡು ಬರಬೇಕಾದರೆ ಒಂದು ತಿಂಗಳವೇ ಹೋಯಿತು. ಈ ಸಹಪ್ರವಾಸದಿಂದ ಸಹಾನುಭವದಿಂದ ದಂಪತಿ ಗಳಲ್ಲಿ ಹೊಂದಿಕೆಯುಂಟಾಯಿತು. ಪರಸ್ಪರರಲ್ಲಿ ಅನುರಾಗ ಬೆಳೆಯಿತು. ಒಬ್ಬ ರೊಬ್ಬರನ್ನು ಅರಿತು ನಡೆಯಹತ್ತಿದರು. ಹೇಮಾ ಪತಿಯ ಇಂಗಿತವನ್ನು ಅವನ ಕಣ್ಣುಗಳಿಂದಲೇ ಗ್ರಹಿಸುತ್ತಿದ್ದಳು. ವಿಜಯ ಪತ್ನಿಯ ಮನೋಭಾವ ವನ್ನು ಅವಳ ಮುಖ ನೋಡಿಯೇ ತಿಳಿದುಕೊಳ್ಳುತ್ತಿದ್ದ. ಒಬ್ಬರಿಗೊಬ್ಬರು ವ್ಯಸನವಾಗದ ರೀತಿಯಲ್ಲಿ ನಡೆಯುತ್ತಿದ್ದರು.

ವಿಜಯ ಪತ್ನಿಯೊಡನೆ ತನ್ನ ಮಧುಚಂದ್ರ ಪ್ರವಾಸವನ್ನು ಮುಗಿಸಿಕೊಂಡು ಊರಿಗೆ ಬರುವ ವೇಳೆಗೆ ಸುಖ-ದುಃಖದ ಸುದ್ದಿಗಳೆರಡು ಅವನಿಗಾಗಿ ಕಾದಿದ್ದುವು. ಐ.ಸಿ.ಎಸ್. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದರ ಜೊತೆಗೇ ರಾಜಮಹೇಂದ್ರಿಗೆ ಅಸಿಸ್ಟೆಂಟ ಕಲೆಕ್ಟರನನ್ನಾಗಿ ನೇಮಕ ಮಾಡಿರುವ ಆರ್ಡರೂ ಬಂದಿತ್ತು. ಈ ಸುಖದ ಬೆನ್ನು ಹತ್ತಿಯೇ ಅಜ್ಜ ಗೋವಿಂದರಾಯರ ಮರಣವಾರ್ತೆಯೂ ನಿಂತಿತ್ತು. ಹಣ್ಣಾದ ಎಲೆ ಗಿಡದಿಂದ ಉದುರುವಂತೆ ಗೋವಿಂದರಾಯರು ಉದುರಿದ್ದರು. ಯಾವ ಜಡ್ಡು-ಜಾಪತ್ರೆಗಳೂ ಇರಲಿಲ್ಲ. ನಿತ್ಯದಂತೆ ರಾತ್ರಿ ಭಜನೆಗೆ ಕುಳಿತಾಗ ಒಮ್ಮೆಲೆ ಭಜನೆ ನಿಲ್ಲಿಸಿ ಸರೂವನ್ನು ಕೂಗಿದರು. ಸರೂ ಬರುವಷ್ಟರಲ್ಲಿ ಮಾತೇ ಹೋಗಿತ್ತು. ಸನ್ನೆಯಿಂದ ಅವಳಿಗೆ ಹತ್ತಿರ ಕುಳಿತುಕೊಳ್ಳಲು ತಿಳಿಸಿದರು. ಸರೂ ಹತ್ತಿರ ಕುಳಿತು ತಲೆ ಹಿಡಿದಳು. ತೊಡೆಯ ಮೇಲೆ ಅದನ್ನು ಇಟ್ಟುಕೊಳ್ಳುವಂತೆ ಕೈ ಮಾಡಿದರು. ತೊಡೆಯ ಮೇಲಿಟ್ಟುಕೊಂಡಳು.'ನಾರಾಯಣ' ಎಂದು ಪ್ರಾಣ ಬಿಟ್ಟರು. 'ನನ್ನ ಜೀವನ ಇಂದಿಗೆ ಸಫಲವಾಯಿತು.' ಎನ್ನುವ ಆತ್ಮತೃಪ್ತಿಯಿಂದಲೇ ಪ್ರಾಣ ಬಿಟ್ಟಿರುವಂತೆ ಮುಖ ಶಾಂತವಾಗಿತ್ತು. ಸರೂ ಮಾಧವ ನಿಂತುಕೊಂಡು ಅಂತ್ಯಕ್ರಿಯೆಗಳನ್ನೆಲ್ಲಾ ಮಾಡಿಸಿದರು. ವಿಜಯ ಆಗ ಇರಬೇಕಾಗಿತ್ತು ಎಂದು ಎಲ್ಲರೂ ಮಿಡುಕಿದರು. ಆ ಋಣಾನುಬಂಧ ಅವನ ಪಾಲಿಗಿರಲಿಲ್ಲ.

ಊರಿಂದ ಬಂದ ವಿಜಯ ಹೇಮಾ ಅವರಿಗೆ ಸರೂ ಎರಡೂ ಸುದ್ದಿಗಳನ್ನು ತಿಳಿಸಿದಳು. ಅವಳು ತುಂಬಿಕೊಂಡಿದ್ದ ದುಃಖವೇ ಒಡೆದು ಹೊರಬರುತ್ತಿರುವಾಗ ಅವಳ ಬಿಕ್ಕುಗಳು ಮಾತಿಗೆ ಅಡ್ಡಾಗಿದ್ದವು. ವಿಜಯ ಹೇಮಾ ಇಬ್ಬರೂ ತಾಯಿಯ ದುಃಖದಲ್ಲಿ ಪಾಲುಗಾರರಾದರು. ಮಾಧವ ಬಂದು ಎಲ್ಲರನ್ನೂ ಸಮಾಧಾನ ಮಾಡಿ ಮುಂದಿನ ಕಾರ್ಯಕ್ಕೆ ತೊಡಗುವಂತೆ ಮಾಡಿದ.

ದಿನ ಉರುಳಿದಂತೆ ದುಃಖದ ಆವೇಗವೂ ಕಡಿಮೆಯಾಯಿತು. ಸರೂ ಮಾಧವರು ಇಂತಹ ಪ್ರಸಂಗದಲ್ಲಿಯೂ ತಮ್ಮ ಶಾಲೆಯ ಪಾಠವನ್ನು ತಪ್ಪಿಸಿರಲಿಲ್ಲ. ಸರೂವಿನ ಜೀವಿತದ ಆಕಾಂಕ್ಷೆಗಳೆಲ್ಲ ಒಂದು ರೀತಿಯಿಂದ ಈಗ ಕೈಗೂಡಿದ್ದವು. ಅಸಿಧಾರಾವ್ರತದಂತೆ ಎಷ್ಟೇ ಕಠಿಣವಾಗಿದ್ದರೂ, ಪತಿಯನ್ನು ಅವನು ಧರ್ಮಾಂತರ ಹೊಂದಿದ್ದರೂ ಅವನನ್ನು ತಿರುಗಿ ಪಡೆದು ಅವನೊಟ್ಟಿಗೆ

ಇರುವುದು ಸಾಧ್ಯವಾಯಿತು. ಮಗ ಬುದ್ಧಿಶಾಲಿಯಾಗಬೇಕು; ಉಚ್ಚ ಶಿಕ್ಷ
ಪಡೆಯಬೇಕು ಎನ್ನುವುದೂ ಸಫಲವಾಯಿತು. ತಂದೆಯನ್ನು ಸಾಯು
ಮೊದಲೊಮ್ಮೆ ಕಾಣಬೇಕೆಂಬದೂ ಕೈಗೂಡಿತು. ಶಾಂತಿಗ್ರಾಮ ತಾನಿಟ
ಕೊಂಡ ಆದರ್ಶದ ಪ್ರತೀಕವಾಗಿಯೇ ಬೆಳೆದು ನಿಂತಿತು. ಪ್ರತಿವರ್ಷವ
ಮೂವತ್ತು ನಾಲ್ವತ್ತು ಹುಡುಗರು ಲೋವರ ಸೆಕಂಡರಿಯನ್ನು ಸರೂವಿ
ಶಿಕ್ಷಣದಿಂದಲೇ ಪಾಸಾಗುತ್ತಿದ್ದಾರೆ. ಹೈಸ್ಕೂಲಿನ ಹುಡುಗರಿಗೆಂದು ಕ
ನೂರಲ್ಲಿ ಹಾಸ್ಟೆಲೊಂದು ತಯಾರಾಗಿದೆ. ಸರೂವಿನ ಉದಾತ್ತ ಭಾವನೆಗಳನ
ಹೊಂದಿದ ಹುಡುಗರನೇಕರು ಸುತ್ತುಮುತ್ತಲಿನ ಹಳ್ಳಿಗೇ ಹೋಗಿ ಅಲ್ಲಿಯೆ
ನೆಲಸಿ ಸರೂವಿನ ಪ್ರತಿನಿಧಿಗಳಂತೆ ಅಲ್ಲಿಯ ಶಿಕ್ಷಣ, ಗ್ರಾಮೋದ್ಧಾರದ ಕಾಯ
ಗಳನ್ನು ಕೈಕೊಂಡಿದ್ದಾರೆ. ಯಾರ ಬಾಯಲ್ಲಿ ನೋಡಿದರೂ ಸರೂವಿನ ಮಾತೆ
ಆಗಿತ್ತು. ಅವಳು ಹಾಕಿದ ಬೀಜ ಈಗ ವೃಕ್ಷವಾಗಿ ಬೆಳೆದು ಹೂವು ಹಣ್ಣ
ಗಳಿಂದ ತುಂಬಿತ್ತು.

ಹೇಮಾ ಅತ್ತೆಯನ್ನು ತಾಯಿಗಿಂತ ಹೆಚ್ಚು ಎಂದು ತಿಳಿದಿದ್ದಳು
ಯಾವ ಕೆಲಸ ಮಾಡಹೋದರೂ ಸರೂ ಅವಳನ್ನು ಮಾಡಲು ಬಿಡುತ್ತಲೆ
ಇರಲಿಲ್ಲ. "ಮುಂದೆ ಮಾಡುವುದು ಇದ್ದೇ ಇದೆ. ಈಗಿಲಿಂದೇನು, ಇದೆಷ್ಟ
ಕೆಲಸ, ನಾನು ಮಾಡುವೆ" ಎಂದು ತಾನೇ ಮುಂದಾಗಿ ಮಾಡುತ್ತಿದ್ದಳು.

"ಸುಮ್ಮನೇ ಕೂತಿರಲು ಬೇಜಾರು ಅಮ್ಮ. ಕೆಲಸವಿಲ್ಲದೇ ಇದ್ದ
ಹೊತ್ತು ಕಳೆಯುವುದು ಹೇಗೆ?" ಎಂದು ಹೇಮಾ ಗೋಳಿಟ್ಟಳು.

"ಬೇಜಾರು ಯಾಕೆ? ವಿಜಯನಿಲ್ಲವೇ ನಿನ್ನ ಜೊತೆಗೆ? ಅವನಿರುವಾ
ನಿನಗೇತರ ಬೇಸರ? ಹೋಗು ಅವನು ನಿನಗಾಗಿ ಕಾದಿದ್ದಾನೆ." ಸರೂ ನಗ
ನಗುತ್ತಾ ಸೊಸೆಯನ್ನು ಹಾಸ್ಯಮಾಡುವಳು. ಹೇಮಾ ಮುಖವೆಲ್ಲಾ ಕೆಂಪಾಗಿ
ಕೊಂಡು ಸುಮ್ಮನೇ ಕೂಡುವಳು. ಒಗೆದು ತಂದ ತನ್ನ ಮತ್ತು ಪತಿಯ
ಬಟ್ಟೆಗಳನ್ನು ಮಡಿಸಿಡುವುದು, ಎಂಜಲು ಗೋಮಯಮಾಡುವುದು ಇಷ್ಟೆ
ಹೇಮಾನ ಕೆಲಸ. ಸರೂ ಸೊಸೆಯನ್ನು ಎಷ್ಟರ ಮಟ್ಟಿಗೆ ಪ್ರೀತಿಸುತ್ತಿದ್ದಳೊ

ಅಷ್ಟೇ ಹೇಮಾ ಅತ್ತೆಯನ್ನೂ ಪ್ರೀತಿಸುತ್ತಿದ್ದಳು. ಅವರಿಬ್ಬರ ನಡುವೆ ತಾಯಿ ಮಗಳ ಸಂಬಂಧವಿದ್ದಿತು ಹೆಣ್ಣುಮಕ್ಕಳನ್ನೇ ಕಾಣದ ಸರೂ, ಸೊಸೆಯನ್ನು ಮಗಳಂತೆಯೇ ತಿಳಿದು ಮಗಳ ಸುಖವನ್ನೂ ಹೊಂದಿದಳು.

ಹೇಮಾ ಅತ್ತೆಯ ವಾತ್ಸಲ್ಯ, ಆರೈಕೆಗಳಿಂದ ಇನ್ನೂ ಪುಷ್ಟಳಾಗಿ ಬೆಳೆದಳು. ಮೈಕೈತುಂಬಿಕೊಂಡ ಹೇಮಾ, ದೃಷ್ಟಿ ತಗಲುವುದೇನೋ ಎಂಬಂತಾದಳು. ಸರೂ ತನ್ನ ದೃಷ್ಟಿಯೇ ತಾಕದಿರಲೆಂದು ದೇವರ ದೀಪದ ಕಾಡಿಗೆ ತಂದು ಎರಡೂ ಗಲ್ಲದ ಮೇಲಿಟ್ಟಳು. ಗೇಲಿಮಾಡಲು ವಿಜಯನಿಗೆ ಅದೇ ಸಾಕಾಯಿತು. ಅವಳನ್ನು ಕಾಡಿದ್ದೂ ಕಾಡಿದ್ದೇ.

"ನೋಡು ಅಮ್ಮಾ ನಿನ್ನ ಸೊಸೆ ಹೀಗೆ ಮಾಡಿದಳು, ಸರಿಯೇ?" ಎಂದು ಮಾಧವ, "ನನ್ನದೇನೂ ತಪ್ಪಿಲ್ಲ ಅಮ್ಮಾ, ನಾನೇನು ಮಾಡಬೇಕಾಗಿತ್ತು ನೀವೇ ಹೇಳಿ?" ಎಂದು ಹೇಮಾ, ಹೀಗೆ ಗಂಡಹೆಂಡಿರಿಬ್ಬರೂ ಪ್ರತಿ ದಿನ ತಮ್ಮತಾಯಿಯ ಹತ್ತಿರ ದೂರು ಹೇಳಿಕೊಳ್ಳುತ್ತಿದ್ದರು. ಸರೂ ಏನಾದರೊಂದು ತೀರ್ಪು ಕೊಟ್ಟು ಇಬ್ಬರನ್ನೂ ಸರಿಮಾಡಬೇಕು. ವಿಜಯ ಹೇಮಾಳನ್ನು ನೋಡಿ ಗಟ್ಟಿಯಾಗಿ ನಕ್ಕರೆ, ಹೇಮಾ ಓರೆ ನೋಟದಲ್ಲೇ ವಿಜಯನನ್ನು ನೋಡಿ ಮುಗುಳ್ನಗೆಯಿಂದ ಉತ್ತರಿಸುತ್ತಾಳೆ. ಇಬ್ಬರ ಜಗಳವೂ ಗಂಧ ತೀಡಿದಂತೆ ಪ್ರೀತಿ-ಪರಿಮಳವನ್ನೇ ಹೆಚ್ಚಿಸುತ್ತಿತ್ತು. ಅವರಿಬ್ಬರ ಈ ಚೆಲ್ಲಾಟವನ್ನು, ಸರಸ ಸಲ್ಲಾಪವನ್ನು ನೋಡಿ ಸರೂ ಮಾಧವರು ತಮ್ಮ ಆ ದಿನಗಳನ್ನು ಚಿತ್ರಿಸಿಕೊಂಡು ಮನದೊಳಗೇ ಸಂತೋಷಿಸುತ್ತಾರೆ ಹೃದಯ ತುಂಬಿ ಬಂದಾಗ "ದೇವರೆ, ಈ ಮಕ್ಕಳನ್ನು ಕೊನೆಯವರೆಗೂ ಇದೇ ರೀತಿ ಸಂತೋಷವಾಗಿರುವಂತೆ ಇಡು ಸ್ವಾಮಿ!" ಎಂದು ಇಬ್ಬರೂ ಬೇಡಿಕೊಳ್ಳುತ್ತಾರೆ.

ತನ್ನ ಮಗ ಅಷ್ಟು ಬೇಗನೇ ಪ್ರವೃದ್ಧಿಮಾನಕ್ಕೆ ಬಂದುದು ನೋಡಿ ಮಾಧವನಿಗೂ ಹೊಟ್ಟೆ ಹಿಡಿಸಲಾರದಷ್ಟು ಸಂತೋಷವಾಗಿತ್ತು. ವಿಜಯನ ಅಂಗಸೌಷ್ಠವವನ್ನೂ ಬುದ್ಧಿವೈಶಾಲ್ಯವನ್ನೂ ನೋಡಿ, ಅವನಿಗೆ ತೃಪ್ತಿಯುಂಟಾಗಿತ್ತು. ವಿಜಯನ ದಾಂಪತ್ಯಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸಿದ ಮಾಧವ, ತಾನು ಸರೂವನ್ನು ಇದೇ ರೀತಿಯಲ್ಲಿಟ್ಟುಕೊಂಡು ಒಂದು ದಿನವೂ ಸಂತೋಷಪಡಿಸಲಿಲ್ಲವಲ್ಲಾ, ಪಾಪ ಅವಳಿಗೆಷ್ಟು ನೋವು ಕೊಟ್ಟೆನಲ್ಲಾ ಎಂದು ಪಶ್ಚಾತ್ತಾಪದಿಂದ ಪರಿತಪಿಸಿದ. 'ಏನಾದರಾಗಲೀ ನನ್ನ ಬಾಳ್ವೆ ಆಗಿಹೋಯಿತು. ಸಧ್ಯ ವಿಜಯ ನನ್ನ ಹಾದಿಯನ್ನೇ ತುಳಿಯದಿದ್ದರೆ ಸಾಕು;

ಆ ಮುಗ್ಧ ಹೇಮಾನ ಗತಿಯೂ ಕೂಡಾ ಸರೂವಿನಂತಾಗಬಾರದು' ಎಂದು ಕೊಂಡು ಮಾಧವ ಆ ಸತ್‌ಶಕ್ತಿಗೆ ಪ್ರಾರ್ಥನೆ ಸಲ್ಲಿಸಿದ.

ಸರೂ ಮಗನ ಪಯಣಕ್ಕೆ ಸಿದ್ಧತೆ ಮಾಡತೊಡಗಿದಳು ಹೊಸ ಸಂಸಾರಕ್ಕೆ ಬೇಕಾಗುವ ಸಾಮಾನನ್ನೆಲ್ಲಾ ಅಚ್ಚುಕಟ್ಟಾಗಿ ಜೋಡಿಸಿ ಪೆಟ್ಟಿಗೆಗೆ ಪ್ಯಾಕ್ ಮಾಡಿದಳು. ಹೋದೊಡನೆಯೇ ಪಾಪ, ಹೇಮಾನಿಗೆ ತೊಂದರ ಯಾಗಬಾರದೆಂದು ಮೆಣಸಿನಪುಡಿ, ಚಟ್ನಿಪುಡಿ ಮೊದಲಾಗಿ ಎಲ್ಲಾ ಬಗೆಯ ಪುಡಿಗಳನ್ನೂ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಇತರ ಸಾಮಾನುಗಳನ್ನೂ ಸಿದ್ಧಗೊಳಿಸಿದಳು. ತಿಂಡಿ ತಿನಸುಗಳಿಗೆ ದೊಡ್ಡದೊಂದು ಚೌಕಾಯಿ ಪೆಟ್ಟಿಗೆಯೇ ಬೇಕಾಯಿತು. ಸರೂ ಬಿಡುವಿಲ್ಲದೆ, ಹಗಲಿರುಳೆನ್ನದೆ ದುಡಿದು ಎಲ್ಲಾ ಬಗೆಯ ಪಾತ್ರೆಗಳೂ ಸಾಮಾನುಗಳೂ ಎಲ್ಲವನ್ನೂ ಸಿದ್ಧಪಡಿಸಿದಳು.

ಸರೂ ಮಾಧವರೂ ತನ್ನ ಜೊತೆಗೇ ಬಂದು ಅಲ್ಲಿಯೇ ಇರಬೇಕೆಂದು ವಿಜಯ ಒಂದೇ ಸಮನೇ ಗಂಟುಬಿದ್ದಿದ್ದ. ಹೇಮಾ ಅತ್ತೆಯನ್ನು ಬಿಟ್ಟು ಹೋಗುವುದು ತನ್ನಿಂದಾಗದೆಂದು ಒಂದೇ ಸಮನಾಗಿ ಅಳುತ್ತಿದ್ದಳು. ಯಾರು ಏನು ಹೇಳಿದರೂ ಸರೂವಿನದು ಒಂದೇ ಮಾತು : "ನಾನು ಈ ಮನೆಯನ್ನು ಬಿಟ್ಟು ಎಲ್ಲಿಗೂ ಬರಲಾರೆ" ಎಂದು.

"ಹೋಗಲೀ, ನೀನಾದರೂ ಬಾ ಅಣ್ಣಾ; ಸ್ವಲ್ಪ ದಿನವಿದ್ದು ಬರುವಿಯಂತೆ. ಅದು ನಿನ್ನ ಮನೆಯಲ್ಲವೇ ? ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲವೆ ? ನಾನೇನು ಪರಕೀಯನೇ? ನಿನ್ನ ಕಾಲಿಗೆ ಬೀಳುವೆ, ನೀನಾದರೂ ಬಾ ಅಣ್ಣಾ. ಅಮ್ಮಾ ಅಂತೂ ಹೇಳಿದರೆ ಕೇಳುವುದೇ ಇಲ್ಲ.'' ವಿಜಯ ಮಾಧವನಿಗೆ ಅಂಗಲಾಚಿ ಬೇಡಿಕೊಂಡ.

''ನಿನ್ನ ತಾಯಿಯನ್ನು ಇಲ್ಲಿ ಒಬ್ಬಳನ್ನೇ ಬಿಟ್ಟು ಹೇಗೆ ಬರಲೀ ಮಗೂ, ನನಗೂ ವಯಸ್ಸಾಗುತ್ತಾ ಬಂತು. ಇನ್ನೇನು ಹೆಚ್ಚಿನ ದಿನ ಇರುವುದಿಲ್ಲ. ನನ? ಬಾಳೂ ಮುಗಿಯುತ್ತಾ ಬಂದಿತೆಂದು ಕಾಣುತ್ತೆ. ನನ್ನ ದುರ್ವ್ಯಸನಗಳಿಂದಾಗಿ ನಾನು ಅರ್ಧ ಹಣ್ಣಾಗಿದ್ದೇನೆ. ನಿನ್ನ ತಾಯಿ ನನ್ನಲ್ಲಿಯೇ ಜೀವ ಇಟ್ಟುಕೊಂಡಿದ್ದಾಳೆ. ಅಲ್ಲಿ ಏನಾದರೂ ಹೆಚ್ಚುಕಡಮೆಯಾಗಿ ನಾನೇನಾದರೂ ಆದರೆ, ನಿನ್ನ ತಾಯಿಯ ಗತಿ ಏನು? ಹಿಂದೆ ನಾನು ತಪ್ಪು ಮಾಡಿದೆ ವಿಜಯ. ಆದಕ್ಕಾಗಿ ಈಗ ಎಷ್ಟು ಪರಿತಪಿಸುತ್ತಿದ್ದೇನೆ ಬಲ್ಲೆಯಾ? ನನ್ನ ಜೀವವಿರುವ ವರೆಗೆ ಸರೂವನ್ನು ಬಿಟ್ಟು ನಾನೆಲ್ಲಿಗೂ ಬರಲಾರೆ. ಅವಳು ಬಂದರೆ ನಾನೂ ಜೊತೆಗೆ

ಬರುವೆ, ಇಲ್ಲವಾದರೆ ಇಲ್ಲ. ನನ್ನ ಆಗುಹೋಗುಗಳೆಲ್ಲವೂ ಅವಳಲ್ಲಿಯೇ ಅಡಗಿದೆ. ಅವಳನ್ನಗಲಿ ನಾನು ಕ್ಷಣ ಕಾಲವೂ ಜೀವಿಸಲಾರೆ ತಿಳಿಯಿತೆ?

ಇನ್ನೊಂದು ಮಾತು ವಿಜಯ. ಪರಸ್ತ್ರೀ ಎಂದರೆ ಹಾವಿನಂತೆ ತಿಳಿ. ಅವರಿಂದ ಸಾಧ್ಯವಾದಷ್ಟು ದೂರದಲ್ಲಿರು. ಅದರ ಕಹಿಯನ್ನು ನಾನು ಉಂಡಿ ದ್ದೇನೆಂದೇ ಹೇಳುತ್ತಿದ್ದೇನೆ. ಹೇಮಾತನ್ನು ಸರಿಯಾಗಿ ನೋಡಿಕೋ ಮಗೂ. ಅವಳಿನ್ನೂ ಹುಡಿಗಿ. ಅವಳನ್ನು ಕಾಪಾಡುವ ಭಾರ ನಿನ್ನದು. ಎಂದೆಂದಿಗೂ ಅವಳನ್ನು ನೋಯಿಸಬೇಡ. ಅವಳನ್ನು ಕೈ ಬಿಡಬೇಡ. ನಿನ್ನ ಮನ ನಿನ್ನ ಕೈಹಿಡಿತದಲ್ಲಿರಲಿ. ನೂರು ವರ್ಷಕಾಲ ದೀರ್ಘಾಯುವಾಗಿ ಬಾಳು ಮಗೂ! ಈ ನಿನ್ನ ಪಾಪಿ ತಂದೆ ಆಶೀರ್ವದಿಸುತ್ತಾನೆ." ಮಾಧವ ವಿಜಯನನ್ನಪ್ಪಿ ಕೊಂಡು ಕಣ್ಣೀರು ಸುರಿಸಿದ.

''ವಿಜಯ ಆಸೆಯಿಂದ ತಾಯ ಬಳಿಗೋಡಿದ. ಸರೂ ಅಡುಗೆ ಮಾಡು ತ್ತಿದ್ದಳು "ಅಮ್ಮಾ, ನೀನು ಬರುವುದಿಲ್ಲವೇ ಅಮ್ಮಾ? ನೀನು ಬಂದರೆ ಅಣ್ಣಾ ಬರುತ್ತಾರಂತೆ. ನೀನು ಒಲ್ಲೆ ಎನಬೇಡ. ಬಾಮ್ಮಾ." ವಿಜಯ ತಾಯಿಯನ್ನು ಬಗೆಬಗೆಯಲ್ಲಿ ಕೇಳಿಕೊಂಡ.

"ವಿಜೂ, ಸುಮ್ಮನೆ ಇಲ್ಲದ ಕಳವಳಕ್ಕೆ ಒಳಗಾಡಬೇಡ. ನನ್ನ ಮಾತು ಕೇಳು. ಈ ಊರನ್ನು ಬಿಟ್ಟು ಬರುವುದು ಸಾಧ್ಯವೇ ಇಲ್ಲ ಮಗೂ. ಕಷ್ಟಕಾಲ ದಲ್ಲಿ. ಅನಾಥಳಾಗಿದ್ದ ನನಗೆ ಈ ಊರಿನವರು ಆಸರೆ ಕೊಟ್ಟು, ಮಗಳಂತೆ ಕಾಪಾಡಿದರು. ಇಲ್ಲಿಯ ಶಾಲೆಗೆ ಇನ್ನೂ ನಮ್ಮ ಅಗತ್ಯ ಇದೆ. ಪ್ರತಿ ವರ್ಷವೂ ಹೊಸಹೊಸದಾಗಿ ಹುಡುಗರು ಬರುತ್ತಲೇ ಇದ್ದಾರೆ. ಅವರಿಗೆಲ್ಲಾ ಕಲಿಸ ಬೇಡವೇ? ಇಲ್ಲಿ ನನ್ನ ಕೆಲಸವಿನ್ನೂ ಮುಗಿದಿಲ್ಲ ವಿಜಯಾ. ಅದು ಮುಗಿದರೆ ನಾನಾಗಿಯೇ ನಿನ್ನ ಬಳಿ ಬರುತ್ತೇನೆ.

ಒಂದು ಭಾಗದಲ್ಲಿ ನನ್ನ ಬಯಕೆಗಳೆಲ್ಲವೂ ಕೈಗೂಡಿದುವು. ನನ್ನ ಸ್ವಾಮಿ ನನಗೆ ದೊರೆತರು. ನನ್ನ ಮಗು ಬೆಳೆದು ಸಂಸಾರಿಯಾದ. ಅವನು ಲೋಭಿ ಯಾಗದೆ, ಉದಾರನಾಗಿ ಬಡವರಿಗೆ ಸಹಾಯ ಮಾಡಿಯಾನೆಂಬ ನಂಬಿಕೆ ಇದೆ ನನಗೆ. ನೋಡು ಮಗೂ, ಬಡತನ ಸಿರಿತನ ದೇವರು ಕೊಡುತ್ತಾನೆ; ಆದರೆ ಒಳ್ಳೆಯದು, ಕೆಟ್ಟದ್ದು ಮಾನವನ ಕೈಲಿಯೇ ಇದೆ. ನೀನು ದಯಾ ವಂತನಾಗಿರಬೇಕು ಮಗೂ. ಸಿರಿ ಬಂದಿತೆಂದು ಮೆರೆಯಬೇಡ; ಆ ಸ್ಥಿತಿಗೆ

ನೀನು ಬರುವ ಮುಂಚೆ, ನೀನು ಕೂಡಾ ಯಾವ ಗತಿಯಲ್ಲಿದ್ದೆ ಎಂಬುದನ್ನು ಮರೆಯದೆ ಬಡವರ ಕಷ್ಟವೇನೆಂಬುದನ್ನು ತಿಳಿದ ನೀನು, ಯಾವ ರೀತಿಯಲ್ಲಿ ನಡೆಯಬೇಕೆಂದು ತಿಳಿದು, ಅದರಂತೆ ನಡಿ. ನಿನ್ನ ಕರ್ತವ್ಯವನ್ನು ನಡೆಸಿ, ನೀನು ದೀರ್ಘ ನಿದ್ರೆಯಲ್ಲಿ ಮಲಗಿದಾಗ, ನಿನ್ನ ದೇಹದ ಮೇಲೆ ಸಾವಿರಾರು ಜನರ ಕಂಬನಿಯು ಬೀಳುವಂತೆ ಆಗಬೇಕು ತಿಳಿಯಿತೆ? ಹಾಗೆ ಅವರ ಪ್ರೀತಿ, ವಿಶ್ವಾಸಗಳನ್ನು ಗಳಿಸು ಮಗೂ. ಈ ಶುಭ ದಿನದಲ್ಲಿ ತಾಯಿ ಕೆಟ್ಟ ಮಾತು ನುಡಿಯುತ್ತಾಳೆಂದು ಬೇಸರಪಡಬೇಡ. ಹಣ್ಣಾದ ಎಲೆಗಳು ನಾವು. ಯಾವ ಸಣ್ಣ ಗಾಳಿಗೂ ಉದುರಬಹುದು. ಆದರೂ ನನ್ನ ಆಯುಷ್ಯದಲ್ಲಿ ಅವರೊಂದಿಗೆ ಒಂದಲ್ಲ ಒಂದು ದಿನ ನಿನ್ನ ಮನೆಗೆ ಬರುವೆ ಆಯಿತೇ?"

ವಿಜಯನಿಗೆ ಆ ಅಗಲಿಕೆಯ ದುಃಖ ಸಹಿಸಲಸಾಧ್ಯವಾಯಿತು. ಮುಖ ಮುಚ್ಚಿಕೊಂಡು ಅತ್ತೇಬಿಟ್ಟ. ತನ್ನನ್ನು ಇದು ವರೆಗೂ ತಾಯ್ತನದ ರಕ್ಷೆ ಕೊಟ್ಟು ಬೆಳೆಸಿದವಳನ್ನು ಆಗಲಿ ತಾನೊಬ್ಬನೇ ದೂರ ಹೋಗುವುದೆಂದರೆ ವಿಜಯನಿಗೆ ಕರುಳು ಕಿತ್ತಿ ಬಂದಷ್ಟು ವೇದನೆಯಾಯಿತು. ಸರೂ ಮಗನನ್ನು ಎಳೆಯ ಮಗುವಿನಂತೆ ಸಂತೈಸಿದಳು. ಯಾವುದೋ ಕಾರ್ಯಕ್ಕಾಗಿ ಬಂದ ಹೇಮಾ, ತಾಯಿ ಮಕ್ಕಳ ಆ ದೃಶ್ಯವನ್ನು ನೋಡಿ, ಕಂಬನಿ ತಂದುಕೊಂಡು ಹಾಗೆಯೇ ಹೊರಟುಹೋದಳು.

ಕಡೆಗೆ ಹೊರಡುವ ದಿನವೂ ಬಂದೇ ಬಂದಿತು. "ನೀವು ಬಾರದೆ ನಾವಿಬ್ಬರೇ ಹೇಗೆ ಹೋಗುವುದು ಅಮ್ಮ, ಅಲ್ಲಿ ನಾನೊಬ್ಬಳೇ ಹೇಗೆ ಇರಲಿ? ಒಂದು ಸ್ವಲ್ಪ ದಿನಕ್ಕಾದರೂ ಬನ್ನಿ ಅಮ್ಮಾ, ನಿಮ್ಮ ಮಗಳ ಮನೆಗೆ ನೀವು ಬರುವುದಿಲ್ಲವೇ?" ಹೇಮಾ ಅತ್ತೆಯನ್ನು ಮತ್ತೆ ಮತ್ತೆ ಬೇಡಿಕೊಂಡಳು. ಸರೂ ತನ್ನ ನಿರ್ಧಾರದಿಂದ ಕದಲಲಿಲ್ಲ.

ಸರೂ ಮಾಡಿದ ಔತನದ ಅಡುಗೆ ಹಾಗೆಯೇ ಉಳಿದಿತ್ತು. ಒಬ್ಬರಾಗಲೀ ಊಟ ಮಾಡಲಿಲ್ಲ. ವಿಜಯನ ಮುಖದಲ್ಲಿ ಕಳೆಯೇ ಇರಲಿಲ್ಲ. ಹೇಮಾನ ಕಣ್ಣುಗಳು ಅತ್ತು ಅತ್ತು ಕೆಂಪಾಗಿದ್ದುವು. "ನಾಲ್ಕು ವರ್ಷ, ನೀವಿಬ್ಬರೇ ಸ್ವತಂತ್ರರಾಗಿ ಚೆನ್ನಾಗಿ ಬಾಳುವೆ ಮಾಡಿ. ಅನಂತರ ನಾನು ನಿಮ್ಮ ಮನೆಗೆ ಬರುವೆ. ಈಗಲೇ ಅಲ್ಲಿಗೆ ಬಂದು ನಿಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವುದು ನನಗೆ ಬೇಕಿಲ್ಲ ಮಗೂ. ಆಮೇಲೆ ಬರುವೆ." ಎಂದು ಹೇಮಾನನ್ನು ಸಮಾಧಾನಪಡಿಸಬೇಕಾದರೆ ಸರೂಗೆ ಸಾಕುಬೇಕಾಗಿಹೋಯಿತು.

ವಿಜಯ ಊರಿಗೆ ಹೋಗುವವನೆಂದು ತಿಳಿದ ಕೂಡಲೆ, ಊರಿಗೆ ಊರೇ ಬಸ್ ನಿಲ್ದಾಣದಲ್ಲಿ ನೆರೆಯಿತು. ಸರೂವಿನ ಹುಡುಗರೇ ಸಾಮಾನುಗಳನ್ನೆಲ್ಲಾ ಬಸ್‌ಗೆ ತಂದು ಹಾಕಿದರು. ಮನೆಗೆ ಬೀಗ ಹಾಕಿ ಸರೂ-ಮಾಧವರೂ ನಡೆದರು. ವಿಜಯ ಉಕ್ಕಿ ಬರುತ್ತಿದ್ದ ಅಳುವನ್ನು ತಡೆಯಲು ಯತ್ನಿಸುತ್ತಿದ್ದ; ಹೇಮಾ ಒಂದೇ ಸಮನೆ ಅಳುತ್ತಲೇ ಇದ್ದಳು.

"ಹೋಗಿ ಬರ್ತೀರಾ ಬುದ್ಧೀ, ಬರ್ತೀರಾ ಅಮ್ಮಾವ್ರೇ?" ಎಂದು ಎಲ್ಲರೂ ಕೂಗಿಕೊಂಡರು. ಅವರ ವಾತ್ಸಲ್ಯವನ್ನು ನೋಡಿ ವಿಜಯ ಹೇಮಾ ಇವರ ಕಣ್ಣೀರು ಕಟ್ಟೆಯೊಡೆಯಿತು. ಬಸ್ ಹೊರಡುವ ವರೆಗೂ ವಿಜಯ ತಾಯ ಬಳಿಯಲ್ಲೇ ಇದ್ದ. ಕ್ಷಣವೂ ರೆಪ್ಪೆಯೆಲುಗಿಸದೆ, ತಾಯಿಯನ್ನೇ ತನ್ನ ಹೃದಯ ವಲ್ಲಿ ಹುದುಗಿಸಿಕೊಳ್ಳುವವನಂತೆ ನೋಡುತ್ತಿದ್ದ. ಮಾಧವನ ಕಣ್ಣುಗಳೂ ತೇವಗೊಂಡಿದ್ದವು. ವೇಳೆಯಾಯಿತು. ವಿಜಯ ತಾಯಿಗೆ ಬಗ್ಗಿ ನಮಸ್ಕರಿಸಿ ಬಸ್ಸಿನಲ್ಲ ಹತ್ತಿದ. ಆ ದೃಶ್ಯವನ್ನು ನೋಡಿ ನೆರೆದವರೆಲ್ಲರೂ ನಿಟ್ಟುಸಿರು ಬಿಟ್ಟರು. "ಯಾವಾಗ ಬರುವೆ ಅಮ್ಮಾ?" ವಿಜಯ ಕಣ್ಣೊರಸಿಕೊಳ್ಳುತ್ತಾ ಕೇಳಿದ. ಸರೂ ಕಣ್ಣೊರಸಿಕೊಂಡು ಹೇಳಿದಳು:"ನಿನ್ನ ಹೆಂಡತಿಯ ಬಾಣಂತನಕ್ಕೆ ಬರುತ್ತೇನೆ. ಆ ಕಾಲ ಬೇಗನೆ ಬರಲೀ ವಿಜಯಾ." ಸರೂ ಹೇಮಾನ ಕಡೆಗೆ ಅರ್ಥಪೂರ್ಣವಾಗಿ ನೋಡಿ ನಕ್ಕಳು.

"ಹೋಗಿ ಬರುವೆಯಾ ವಿಜಯಾ?" ಮಾಧವ ಗದ್ಗದಿತವಾಗಿ ಹೇಳಿದ. ಕೊನೆಯದಾಗಿ ಬಾಯಲ್ಲಿ ಮಾತು ಹೊರಡದೆ ವಿಜಯ ತಲೆಯಾಡಿಸಿದ ಮಾತ್ರ ಅದಕ್ಕೆ.

"ಇನ್ನೊಮ್ಮೆ ಬರುವಾಗ ಗಂಡುಮಗನನ್ನು ಎತ್ತಿಕೊಂಡು ಬಾ ಹೇಮಾ" ಎಂದು ಬಸ್ಸಿನಲ್ಲಿ ಕುಳಿತ ಸೊಸೆಯ ತಲೆ ನೇವರಿಸಿ ಅವಳ ಕಣ್ಣು ಒರೆಸಿದಳು ಸರೂ.

ಕಂಡಕ್ಟರ್ 'ರೈಟ್' ಅಂದ. ಬಸ್ ಚಲಿಸಿತು.

"ಅತ್ತೆಯವರ ಮನೆಗೂ ಹೋಗಿ ಒಂದು ದಿನವಿದ್ದು ಮುಂದಕ್ಕೆ ಪ್ರಯಾಣ ಬೆಳೆಸು ಮಗೂ. ಅವರೂ ಹೊಸ ಮೊದಲಗಿತ್ತಿಯನ್ನು ನೋಡಬೇಡವೇ?" ಸರೂ ಗಟ್ಟಿಯಾಗಿ ಕೂಗಿ ಹೇಳಿದಳು. ವಿಜಯ ತಲೆಯಲ್ಲಾಡಿಸಿದ. ಕೆಲವೇ ನಿಮಿಷಗಳಲ್ಲಿ ಬಸ್ ಮರೆಯಾಯಿತು.

"ನೀವು ಯಾಕೆ ಹೋಗಲಿಲ್ಲ ಅಮ್ಮಾವ್ರೇ?" ಹೆಂಗುಸೊಬ್ಬಳು ಕೇಳಿದಳು.

"ನೀವೆಲ್ಲಾ ಇಷ್ಟು ಜನ ಮಕ್ಕಳಿರುವಾಗ ಎಲ್ಲರನ್ನೂ ಬಿಟ್ಟು, ಒಬ್ಬ ಮಗನ ಮನೆಗೆ ಹೋಗುವುದು ಹೇಗೆ ನೀನೇ ಹೇಳು ತಾಯಿ?" ಎಂದು ಸರೂ ಉತ್ತರ ಕೊಟ್ಟು ಮಾಧವನೊಡನೆ ಭಾರವಾದ ಹೃದಯದಿಂದ ಮನೆಗೆ ಹಿಂತಿರುಗಿದಳು.

